ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯೆ—೧೫

# ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣಂ

(ಕನ್ನಡ ಅನುವಾದ ಸಹಿತ)

ತೃತೀಯಖಂಡೇ

ಭಾಗ ೧

ಅನುವಾದಕ

**ಆಸ್ಥಾನ ಮಹಾವಿದ್ವಾನ್ ಸಂಕೀಘಟ್ಟಂ ವೆಂಕಟಾಚಾರ್ಯಃ**

ವಿಶ್ರಾಂತ ಸಾಹಿತ್ಯ ಪ್ರಾಧ್ಯಾಪಕ, ಮೈ ಸಂ ಕಾಲೇಜು



ಶ್ರೀ ಶಾರದಾ ಪ್ರೆಸ್, ಮೈಸೂರು.

೧೯೫೩

# ಅವತರಣಿಕೆ.

ಈ ವಿಷ್ಣುಧರ್ಮೋತ್ತರ ಮಹಾಪುರಾಣದ ದ್ವಿತೀಯಖಂಡವು ಅನುವಾದ ದೊಡನೆ ಹಿಂದಿನ ಸಂಪುಟಕ್ಕೆ ಮುಗಿದಿಥೆ ತೃತೀಯಖಂಡ ಮತ್ತು ಅದರ ಅನುವಾದವು ಈ ಸಂಪುಟದಿಂದ ಪ್ರಾರಂಭವಾಗುತ್ತವೆ ನಾನು ಈ ಗ್ರಂಥಕ್ಕೆ ಬರೆದಿರುವ ಅನುವಾದದಲ್ಲಿ ಇದು ಮೂರನೆಯ ಸಂಪುಟ.

ಸರ್ವಶರೀರಿಯಾಗಿಯೂ, ಸರ್ವದೇವತಾತ್ಮಕನಾಗಿಯೂ ಇರುವ ವಾಸುದೇವ ನನ್ನು ಯಥಾವಿಧಿಯಾದ ವಿಗ್ರಹ ಪ್ರತಿಷ್ಠೆಗಳಿಂದ ಪೂಜಿಸಿ ಎಲ್ಲರೂ ಕೃತಾರ್ಥ ರಾಗಬೇಕೆಂಬುದೇ ಈ ಗ್ರಂಥದಿಂದ ತಿಳಿದುಬರುವ ಗ್ರಂಥಕಾರರ ಮುಖ್ಯೋಪದೇಶ ಈ ಉಪದೇಶವು ಜನಗಳ ಆಚರಣೆಯಿಂದ ಸಫಲವಾಗಬೇಕಾದಲ್ಲಿ ಅಂತಹ ವಾಸುದೇವನ ಸ್ವರೂಪ, ಅವನ ವಿಗ್ರಹನಿರ್ಮಾಣ ಕ್ರಮ, ಆ ವಿಗ್ರಹದ ಪ್ರತಿಷ್ಠಾ ವಿಧಾನ ಅನಂತರ ನಡೆಸಬಹುದಾದ ಪೂಜಾವಿಧಾನ ಇವೆಲ್ಲವನ್ನೂ ಆಸ್ತಿಕರಾದ ಭಗವದ್ಭಕ್ತರು ತಿಳಿದಿರಬೇಕು. ಇವುಗಳ ಅರಿವು ಉಂಟಾಗದೇ ಇದ್ದಲ್ಲಿ ಅಥವಾ ವಿಪರೀತ ಜ್ಞಾನ ಉಂಟಾದಲ್ಲಿಯೂ ಸಹ ಅಂತಹ ಪೂಜಾವಿಧಾನವು ಭಕ್ತರಿಗೆ ಇಷ್ಟಫಲಪ್ರದವಾಗುವುದಿಲ್ಲವಾದುದರಿಂದ ಈ ಉಪದೇಶವು ವ್ಯರ್ಥವಾಗಬಹುದು ಆದುದರಿಂದ ಈ ಅರಿವನ್ನು ಭಕ್ತರಿಗೆ ಉಂಟುಮಾಡಲು ಭಾರತಭೂಮಿಯಲ್ಲಿ ಪ್ರಚಾರದಲ್ಲಿರುವ ಪ್ರಮುಖಭಾಷೆ ಮತ್ತು ಕಲೆ, ಶಿಲ್ಪ ಎಲ್ಲವನ್ನೂ ವಿಗ್ರಹ ನಿರ್ಮಾಣಕ್ಕಾಗಿ ಈ ಗ್ರಂಥಕಾರರು ಉಪಯೋಗಿಸಿಕೊಂಡಿರುವರು

ಗಾನದಿಂದ ಭಗವಂತನನ್ನು ಸಂತೋಷಪಡಿಸಲು ಗೀತೆಗಳು ಬೇಕಾಗುತ್ತವೆ ಅಂತಹ ಗೀತೆಗಳು ಸಂಸ್ಕೃತ, ಪ್ರಾಕೃತವೆಂಬ ಪ್ರಧಾನ ಭಾಷೆಗಳಲ್ಲಿರುವುದರಿಂದ ಭಾಷಾಜ್ಞಾನವೂ, ಭಾಷಾಮಯವಾದ ಗೀತೆಗಳ ಗಾನಕ್ಕಾಗಿ ಬೇಕಾಗುವ ಸಂಗೀತ ಶಾಸ್ತ್ರಜ್ಞಾನವೂ, ಗೀತಗಳು ನೃತ್ಯದಿಂದ ಕೂಡಿರುವುದರಿಂದ ನೃತ್ಯಶಾಸ್ತ್ರಜ್ಞಾನವೂ, ಇದಕ್ಕಾಗಿ ಬೇಕಾಗುವ ವಾದ್ಯವಿಧಾನವೂ, ಇವುಗಳಿಂದ ಕೂಡಿರುವ ನಾಟ್ಯಶಾಸ್ತ್ರ ಜ್ಞಾನವೂ, ನಾಟ್ಯದಿಂದ ಅಭಿವ್ಯಕ್ತಿಗೊಳಿಸಲಾಗುವ ರಸಭಾವಾದಿಜ್ಞಾನವೂ, ಅಂತಹ ಅಭಿವ್ಯಕ್ತಿಗೆ ತಕ್ಕ ಅಂಗೋಪಾಂಗವ್ಯಾಪಾರಜ್ಞಾನವೂ, ಸಹ ಅವಶ್ಯಕ ವಾದುದರಿಂದ ಎಲ್ಲಾ ಶಾಸ್ತ್ರ ಮತ್ತು ಶಿಲ್ಪಗಳಿಂದ ಉಂಟಾಗಬಹುದಾದ ಜ್ಞಾನವನ್ನೂ ಆಯಾಯ ಸನ್ನಿವೇಶದಿಂದ ಕೂಡಿರುವ ಭಗವಂತನ ಮೂರ್ತಿನಿರ್ಮಾಣಕ್ಕಾಗಿ ಉಪಯೋಗಿಸಕೊಳ್ಳಲಾಗಿದ. ವಾಸುದೇವನು ಸರ್ವಾತ್ಮಕನಾದುದರಿಂದ ಅವನ ಶರೀರವೆಂಬ ದೃಷ್ಟಿಯಿಂದ ಎಲ್ಲಾ ದೇವತೆಗಳನ್ನೂ ಪೂಜಿಸಬಹುದೆಂಬುದೇ

ಗ್ರಂಥಕಾರರ ಅಭಿಪ್ರಾಯ. ಆದುದರಿಂದಲೇ ರಸಭಾವಾದಿಗಳಿಗೆ ತಕ್ಕಂತಹ ಅಂಗೋಪಾಂಗವಿನ್ಯಾಸವುಳ್ಳ ಎಲ್ಲಾ ದೇವತೆಗಳ ಚಿತ್ರ, ವಿಗ್ರಹ ಮುಂತಾದವುಗಳ ವಿಧಾನಕ್ರಮವನ್ನು ವಿಸ್ತಾರವಾಗಿ ವಿವರಿಸಿದ್ದಾರೆ

ಮತ್ತು ಚಿತ್ರರಚನೆ ವಿಗ್ರಹನಿರ್ಮಾಣಗಳಿಗೆ ವರ್ಣವಿನ್ಯಾಸಾದಿಗಳಿಂದ ಕೂಡಿದ ಚಿತ್ರಕಲೆಯನ್ನೂ, ವಿಗ್ರಹಶಿಲ್ಪವನ್ನೂ ಉಪಯೋಗಗೊಳಿಸಿ, ವಾಸ್ತು ಶಿಲ್ಪದಿಂದ ವಿಗ್ರಹಪ್ರತಿಷ್ಠೆಗೆ ಅನುಗುಣವಾದ ನೂರುವಿಧಪ್ರಾಸಾದಗಳನ್ನೂ ವಿಸ್ತಾರವಾಗಿ ವಿವರಿಸಿರುತ್ತಾರೆ ದೇವತಾಪ್ರಾಸಾದಗಳನ್ನು ಯಥಾವಿಧಿಯಾಗಿ ನಿರ್ಮಿಸುವಾಗ ಶಲ್ಯವಿಜ್ಞಾನಾದಿಗಳಿಂದ ಭೂಮಿಯ ಪರೀಕ್ಷಗಾಗಿ ವಾಸ್ತುಶಿಲ್ಪ ಮತ್ತು ಜ್ಯೋತಿಶ್ಶಾಸ್ತ್ರಗಳನ್ನು ಉಪಯೋಗಿಸಿ ಸಾರ್ಥಕಪಡಿಸಿದ್ದಾರೆ. ಹಿಂದೆ ವಿವರಿಸಲಾಗಿರುವ ಪೈತಾಮಹ ಸಿದ್ಧಾಂತವೆಂಬ ಜ್ಯೋತಿಶ್ಶಾಸ್ತ್ರದ ಪರಿಚಯುವನ್ನು ವಿಗ್ರಹ ಪ್ರತಿಷ್ಠೆಗೆ ತಕ್ಕ ಲಗ್ನ, ಗ್ರಹಸ್ಥಿತಿ ಇವುಗಳ ಪರಿಜ್ಞಾನದಿಂದ ಸಫಲ ಗೊಳಿಸಿದ್ದಾರೆ

ಜ್ಞಾನ ಮತ್ತು ತಪಸ್ಸುಗಳಿಂದ ಪ್ರತ್ಯಕ್ಷವಾಗಿ ಭಗವಂತನನ್ನು ಸಂತೋಷ ಪಡಿಸಿ ಇಷ್ಟಾರ್ಥಹೊಂದಲು ಅವಕಾಶವಿದ್ದ ಕೃತ, ತ್ರೇತಾಯುಗಗಳಲ್ಲಿ ವಿಗ್ರಹದ ಪ್ರತಿಷ್ಠೆಗೇ ಅವಕಾಶವಿರಲಿಲ್ಲವೆಂದೂ, ಜ್ಞಾನಾದಿಗಳಿಗೆ ಹ್ರಾಸವುಂಟಾಗಿರುವ ಕಲಿಯುಗದಲ್ಲಿ ಮಾತ್ರ ದೇವತೆಗಳ ವಿಗ್ರಹಪ್ರತಿಷ್ಠೆಗೆ ಅತ್ಯಂತಾವಶ್ಯಕತೆ ಉಂಟಾಯಿ ತೆಂದೂ ಗ್ರಂಥಕಾರರೇ ಅಲ್ಲಲ್ಲಿ ಒತ್ತಿ ಹೇಳಿದ್ದಾರೆ ಜ್ಞಾನಯೋಗ ಭಕ್ತಿ ಯೋಗಗಳಿಂದ ಪರಮಾತ್ಮನ ಪ್ರಾಪ್ತಿಯನ್ನು ಬೋಧಿಸುವ ಇತರ ವೇದಾಂತ ಗ್ರಂಥಗಳಿಗಿಂತಲೂ ವೇದಶಾಸ್ತ್ರಾದಿ ಸಿದ್ಧವಾದ ಪರಮಾತ್ಮನ ಪೂಜೆಯನ್ನೇ ಅಂತಹ ಉಪಾಯ ನಿಷ್ಪತ್ತಿಗೆ ಕಾರಣವಾಗುವಂತೆ ಎಲ್ಲಾ ವಿದ್ಯೆಗಳನ್ನೂ, ಕಲೆಗಳನ್ನೂ ಭಗವಂತನ ಪೂಜಾದಿಗಳಲ್ಲೇ ಸಾರ್ಥಕಗೊಳಿಸಿ ಕಲಿಯುಗಕ್ಕೆ ಅತ್ಯವಶ್ಯಕವಾದ ಪೂಜಾವಿಧಿಯನ್ನು ಮುಖ್ಯ ಧರ್ಮವನ್ನಾಗಿ ಪರಿಗಣಿಸಿರುವಿಕೆಯೇ ಈ ಗ್ರಂಥದ ಅಸಾಧಾರಣವಾದ ವೈಶಿಷ್ಟ್ಯ

ವಾಸ್ತು ಶಿಲ್ಪಕ್ಕೆ ಅನುಬಂಧಿಸಿರುವ ಪ್ರಾಸಾದನಿರ್ಮಾಣ ವಿಧಿಯಲ್ಲಿರುವ ಅನೇಕ ಪದಗಳು ಸಾಂಕೇತಿಕವಾಗಿರುವುದರಿಂದ ಅವುಗಳ ಸರಿಯಾದ ಅರ್ಥವು ಆ ಶಿಲ್ಪದಲ್ಲಿ ಸಂಪೂರ್ಣವಾದ ಪಾಂಡಿತ್ಯ ಮತ್ತು ಅನುಭವಗಳುಳ್ಳ ಪ್ರಾಜ್ಞರಿಂದಲೇ ನಿರ್ಣಯಿಸಲು ಸಾಧ್ಯ. ಅಂತಹ ಪದಗಳ ಅರ್ಥವಿವರಣಕ್ಕಾಗಿ ನಾನು ಪ್ರಯತ್ನ ಪಟ್ಟಿದ್ದರೂ ಪ್ರಮಾದವು ಸಂಭಾವಿತ, ಆದುದರಿಂದಲೇ ಅವೆಲ್ಲವೂ ಸರಿಯಾಗಿಯೇ ಇವೆ ಎಂದು ಹೇಳುವ ಧೈರ್ಯ ನನಗಿಲ್ಲ ಮತ್ತು ವಜ್ರಲೇಪ ವಿಧಾನಪ್ರಕರಣದಲ್ಲಿರುವ ಕೆಲವು ಮೂಲಿಕೆ ಮತ್ತು ಸರಕುಗಳಿಗೆ ಕನ್ನಡ ಭಾಷೆಯಲ್ಲಿ ಅರ್ಥ ಬರೆಯಲು

ಸಾಧ್ಯವಾಗಿಲ್ಲ ಸಂಸ್ಕೃತ ಪದಗಳಿಂದಲೇ ಅನುವಾದದಲ್ಲಿ ಸೇರಿಸಲಾಗಿದೆ ಈಗಿರುವ ಕೋಶಗಳಲ್ಲಿ ಆ ಪದಗಳೇ ದುರ್ಲಭ ಈ ವಿಧವಾದ ನ್ಯೂನತೆಯನ್ನು ಸರಿಪಡಿಸಿ ಕೊಂಡು ಪರಿಮಿತವಾಗಿರುವ ನನ್ನ ಈ ಜ್ಞಾನಶಕ್ತಿಗಳನ್ನು ಪ್ರಪಂಚದ ಉಪಕಾರಕ್ಕಾಗಿ ವಿನಿಯೋಗಿಸುವ ಭಾರವು ಪಂಡಿತೋತ್ತಮರ ಪಾಲಿಗೆ ಸೇರಿದ್ದು

ಅಶುದ್ಧವಾಗಿರುವ ಮೂಲದ ಕೆಲವು ಭಾಗಗಳನ್ನು ಇತರ ಗ್ರಂಥದ ಸಂವಾದ ದಿಂದ ಸರಿಪಡಿಸಲಾಗಿದೆ ಸರಿಯಾದ ಸಂವಾದವು ಸಿಕ್ಕದಿರುವ ಸ್ಥಳಗಳಲ್ಲಿ ಮೂಲವನ್ನು ಸರಿಪಡಿಸುವ ಸಾಹಸಕ್ಕೆ ಕೈಹಾಕಿಲ್ಲ ನನಗೆ ತೋರಿಬಂದ ಪಾಠ ವನ್ನು ಕೆಳಗಡೆ ಸಣ್ಣಕ್ಷರದಲ್ಲಿ ಬರೆಯಲಾಗಿದೆ. ಶಲ್ಯವಿಜ್ಞಾನ ಪ್ರಕರಣದವರಿಗಿನ ಗ್ರಂಥವನ್ನು ಈ ಸಂಪುಟದಲ್ಲಿ ಅಡಕಮಾಡಲಾಗಿದೆ ಪ್ರತಿಷ್ಠಾದಿವಿಧಿಗಳು ಮುಂದಿನ ಸಂಪುಟಕ್ಕೆ ಸೇರುತ್ತವೆ

ಗಂಭೀರವಾಗಿಯೂ, ಲೋಕೋಪಕಾರಕವಾಗಿಯೂ ಇರುವ ಇಂತಹ ಗ್ರಂಥ ರತ್ನವನ್ನು ಭಾರತೀಯ ಸಮಸ್ತ ಕಲೆ ಮತ್ತು ಶಿಲ್ಪಗಳಿಗೂ ಪ್ರಕಾಶಕವಾಗುವಂತೆ ಕನ್ನಡ ಭಾಷೆಗೆ ಪರಿವೃತ್ತಿಗೊಳಿಸಿ ಪ್ರಕಾಶಪಡಿಸುತ್ತಿರುವ ಭಗವದ್ಭಕ್ತರೂ, ದಯಾಶಾಲಿಗಳೂ ಆದ ಆಳುವ ಮಹಾಸ್ವಾಮಿಯವರಾದ **ಶ್ರೀಮಜ್ಜಯಚಾಮ ರಾಜೇಂದ್ರ ಒಡೆಯರ್, ಬಹದ್ದೂರ್, ಜಿ ಸಿ.ಬಿ., ಜಿ.ಸಿ ಎಸ್.ಐ ,** ಮಹಾಪ್ರಭುಗಳಿಗೆ ಭಗವಂತನು ಇತೋಽಪ್ಯತಿಶಯವಾದ ಅನನ್ಯಸಾಧಾರಣ ಆಯುರಾರೋಗ್ಯ ಐಶ್ವರ್ಯಸಂತ್ಸಂತಾನಾದಿಗಳನ್ನು ಅನುಗ್ರಹಿಸಿ ಕಾಪಾಡುತ್ತಿರ ಲೆಂದು ಅನನ್ಯ ಮನಸ್ಕತೆಯಿಂದ ಪ್ರಾರ್ಥಿಸುತ್ತೇನೆ

ಅನುವಾದಕ

ತಾ॥ 28—8—53 ಮಹಾವಿದ್ವಾನ್,

ಸಂಕೀರ್ಘಟ್ಟಂ, **ವೆಂಕಟಾಚಾರ್ಯರು.**



# ವಿ ಷ ಯಾ ನು ಕ್ರ ಮ ಣಿ ಕೆ .

## ಮೂರನೆಯ ಖಂಡ

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಪ್ರಥಮೋಽಧ್ಯಾಯಃ ||

**|| ವಜ್ರ ಉವಾಚ ||**

**ಕಿಂ ಕರ್ತವ್ಯಂ ಮನುಷ್ಯೇಣ ಕಿಂ ಕುರ್ವನ್ ಸುಖಮೇಧತೆ ।**
**ಅಸ್ಮಿನ್ ಲೋಕೇ ಪರೇ ಚೈವ ಕೇನಾಪ್ನೋತಿ ಮಹತ್ಸುಖಂ || ೧ ||**

**|| ಮಾರ್ಕಂಡೇಯ ಉವಾಚ ||**

**ಅಂತರ್ವೇದಿ ಬಹಿರ್ವೇದಿಪುರುಷೇಣ ವಿಜಾನತಾ ।**
**ದೇವತಾಪೂಜನಂ ಕಾರ್ಯಂ ಲೋಕದ್ವಯಮಭೀಪ್ಸತಾ || ೨ ||**

---

### ಮೊದಲನೆಯ ಅಧ್ಯಾಯವು

೧ ವಜ್ರನು ಪ್ರಶ್ನೆಮಾಡುತ್ತಾನೆ --ಮನುಷ್ಯನಾಗಿ ಹುಟ್ಟಿದವನು ಅವಶ್ಯ ಮಾಡತಕ್ಕ ಕೆಲಸವೇನು? ಯಾವ ಕೆಲಸವನ್ನು ಮಾಡಿದಲ್ಲಿ ಇವನು ಸುಖದಿಂದ ಅಭಿವೃದ್ಧಿಹೊಂದಬಹುದು ಈ ಲೋಕದಲ್ಲಿಯೂ, ಪರಲೋಕದಲ್ಲಿಯೂ ಯಾವ ಕಾರ್ಯವನ್ನು ಮಾಡಿದಲ್ಲಿ ಹೆಚ್ಚಾದ ಸುಖಕ್ಕೆ ಭಾಗಿಯಾಗುವನು, ಈ ಪ್ರಶ್ನೆಗೆ ಉತ್ತರವನ್ನು ಮಾರ್ಕಂಡೇಯನು ಹೇಳುತ್ತಾನೆ

೨-೪ ಜ್ಞಾನಿಯಾದ ಮನುಷ್ಯನು ಅಂತರ್ವೇದಿಯಲ್ಲಿಯೂ, ಬಹಿರ್ವೇದಿಯಲ್ಲಿಯೂ ದೇವತಾ ಪೂಜೆಯನ್ನು ಮಾಡಿ ಲೋಕದ್ವಯವನ್ನೂ ಸಾಧಿಸಬೇಕು ಅಂತರ್ವೇದಿ ಎಂದರೆ ಯಜ್ಞದಲ್ಲಿ ಮಾಡತಕ್ಕ ದೇವತಾತೃಪ್ತಿ, ಬಹಿರ್ವೇದಿ ಎಂದರೆ ದೇವತಾಪ್ರೀತ್ಯರ್ಥವಾದ ಶಾಸ್ತ್ರೀಯೋಪವಾಸ ಮತ್ತು ವ್ರತಾದಿಗಳ ಆಚರಣೆ,

**ಯಜ್ಞೇಷು ದೇವಯಜನಮಂತರ್ವೇದಿ ಪ್ರಕೀರ್ತಿತಂ ।**
**ಬಹಿರ್ವೇದಿ ತಥೈವೋಕ್ತಂ ಉಪವಾಸವ್ರತಾದಿಕಂ ।**
**ಇಷ್ಟಾಪೂರ್ತೇನ ಲಭ್ಯಂತೇ ಯೇ ಲೋಕಾಃ ತಾನ್ ಬುಭೂಷತಾ ॥ ೩ ॥**

**ದೇವಾನಾಮಾಲಯಃ ಕಾರ್ಯಃ ದ್ವಯಮಪ್ಯತ್ರ ದೃಶ್ಯತೇ ।**
**ವಿಶೇಷೇಣ ಕಲೌ ಕಾಲೇ ಕರ್ತವ್ಯಂ ದೇವತಾಗೃಹಂ ॥ ೪ ॥**

**ಕೃತತ್ರೇತಾದ್ವಾಪರೇಷು ನರಾಃ ಪಶ್ಯಂತಿ ದೇವತಾಂ ।**
**ತಿಷ್ಯಂ ಪ್ರಾಪ್ಯ ನ ಪಶ್ಯಂತಿ ಪೂಜಾಸ್ತ್ವರ್ಚಾಗತಾ ಯತಃ ॥ ೫ ॥**

**ಕೃತಾದಿಷ್ವಪಿ ದೃಷ್ಟ್ವಾ ಚ ದೇವಾನ್ ಮನುಜಸತ್ತಮ ।**
**ಅರ್ಚಾಗತಾನ್ ವಿಶೇಷೇಣ ಪೂಜಯಂತಿ ವಿಧಾನತಃ ॥ ೬ ॥**

**ಚಿತ್ರಸೂತ್ರವಿಧಾನೇನ ದೇವತಾರ್ಚಾಂ ವಿನಿರ್ಮಿತಾಂ ।**
**ಸುರೂಪಾಂ ಪೂಜಯೇದ್ವಿದ್ವಾನ್ ತತ್ರ ಸನ್ನಿಹಿತಾ ಭವೇತ್ ॥ ೭ ॥**

---

ಯಜ್ಞಾದಿಗಳಿಂದಲೂ ವಾಪೀಕೂಪ ತಟಾಕಾದಿ ನಿರ್ಮಾಣಗಳಿಂದಲೂ ಯಾವ ಲೋಕಗಳನ್ನು ಹೊಂದಬಹುದೋ ಅಂತಹ ಲೋಕಗಳನ್ನು ಅಪೇಕ್ಷಿಸುವವನು ದೇವತಾಗೃಹವನ್ನು ನಿರ್ಮಾಣಮಾಡಬೇಕು ಏಕೆಂದರೆ ಇಷ್ಟಾಪೂರ್ತಗಳೆರಡರ ಫಲವೂ ಇದರಲ್ಲಿ ಅಡಗಿದೆ ಅದರಲ್ಲಿಯೂ ಈ ಕಲಿಯುಗದಲ್ಲಿ ವಿಶೇಷವಾಗಿ ದೇವತಾಗೃಹನಿರ್ಮಾಣವೇ ಪ್ರಶಸ್ತವಾದುದು ಆದನ್ನು ಮಾಡಲೇಬೇಕು

೫–೭ ಕೃತ, ತ್ರೇತಾ, ದ್ವಾಪರ ಯುಗಗಳಲ್ಲಿ ಮನುಷ್ಯರು ದೇವತೆಗಳನ್ನು ಕಣ್ಣಿನಿಂದ ನೋಡುತ್ತಾರೆ ಕಲಿಯುಗವನ್ನು ಹೊಂದಿರುವ ಮನುಷ್ಯರು ದೇವತೆಗಳನ್ನು ಕಣ್ಣಿನಿಂದ ನೋಡುವುದಿಲ್ಲ ಆದುದರಿಂದ ಆ ದೇವತೆಗಳ ಪೂಜೆಯೆಲ್ಲವೂ, ದೇವತಾಸಾನ್ನಿಧ್ಯವನ್ನು ಹೊಂದಿರುವ ವಿಗ್ರಹವನ್ನೇ ಆಶ್ರಯಿಸಿರುತ್ತದೆ ಕೃತ, ತ್ರೇತಾದಿ ಯುಗಗಳಲ್ಲಿಯೂ, ದೇವತೆಗಳನ್ನು ಕಣ್ಣಿನಿಂದ ನೋಡಿದರೂ ವಿಗ್ರಹಗಳಲ್ಲಿ ಸಾನ್ನಿಧ್ಯ ಹೊಂದಿರುವ ಆ ದೇವತೆಗಳನ್ನು ವಿಶೇಷ ದೃಷ್ಟಿಯಿಂದ ಯಥಾವಿಧಿಯಾಗಿ ಪೂಜಿಸುತ್ತಾರೆ ಚಿತ್ರಸೂತ್ರವೆಂಬ ಮುಂದೆ ಹೇಳುವ ವಿಧಾನದಿಂದ ಸುರೂಪವುಳ್ಳ ದೇವತಾವಿಗ್ರಹವನ್ನು ನಿರ್ಮಿಸಿ ಜ್ಞಾನಿಯಾದವನು ಪೂಜಿಸಬೇಕು ಆ ವಿಗ್ರಹದಲ್ಲಿ ದೇವತೆಯು ಸಾನ್ನಿಧ್ಯ ಹೊಂದಿರುತ್ತದೆ

ಸ್ವಾಕಾರಾಂ ಲಕ್ಷಣೋಪೇತಾಂ ಯಸ್ತ್ವಾಂ ಸಂಪೂಜಯೇನ್ನರಃ ।
ಸ ಸರ್ವಕಾಮಾನಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ।
ಅಸ್ಮಿನ್ ಲೋಕೇ ಪರೇ ಚೈವ ಸುಖವಾನ್ಸಭವೇತ್ಸದಾ ॥ ೮ ॥

ಅಥಾರ್ಚಾಂ ಲಕ್ಷಣೈರ್ಹೀನಾಂ ಯಸ್ತು ಪೂಜಯತೇ ನರಃ ।
ತಸ್ಯಾನರ್ಥಾ ವಿವರ್ಧಂತೇ ತಸ್ಮಾತ್ತಾಂ ಚ ವಿವರ್ಜಯೇತ್ ॥ ೯ ॥

ಪ್ರಾಸಾದಕರಣಂ ಪುಣ್ಯಂ ದೇವಚಾರ್ಕಕರಣಂ ತಥಾ ।
ಸುರಾರ್ಚಾಪೂಜನಂ ಪುಣ್ಯಂ ತತ್ರ ಪುಣ್ಯಾ ನಮಸ್ಕ್ರಿಯಾ ॥ ೧೦ ॥

ತಸ್ಮಾತ್ಸರ್ವಪ್ರಯತ್ನೇನ ಸುರಾರ್ಚಾಂ ಲಕ್ಷಣಾನ್ವಿತಾಂ ।
ಕಾರಯೇತ್ಪೂಜನಂ ವಿದ್ವಾನ್ನತ್ವಲಕ್ಷಣಸಂಯುತಾಂ ॥ ೧೧ ॥

ಧರ್ಮಮರ್ಥಂ ತಥಾ ಕಾಮಂ ಮೋಕ್ಷಂ ಚ ಯದುನಂದನ ।
ಪ್ರಯಚ್ಛಂತಿ ಮಹಾರಾಜ ನರಾಣಾಮಿಹ ದೇವತಾಃ ॥ ೧೨ ॥

೮-೯ ಸುಂದರವಾದ ಆಕಾರದಿಂದಲೂ, ಲಕ್ಷಣದಿಂದಲೂ, ಕೂಡಿರುವ ಅಂತಹ ವಿಗ್ರಹವನ್ನು ಯಾವನು ಪೂಜಿಸುತ್ತಾನೆಯೋ ಅವನು ಎಲ್ಲಾ ವಿಧವಾದ ಇಷ್ಟಾರ್ಥಗಳನ್ನೂ ಹೊಂದಿ ಸುಖಿಸುತ್ತಾನೆ ಇದರಲ್ಲಿ ಸಂದೇಹವಿಲ್ಲ ಈ ಲೋಕದಲ್ಲಿಯೂ, ಪರಲೋಕದಲ್ಲಿಯೂ ಅವನು ಯಾವಾಗಲೂ ಸುಖಿಯಾಗಿಯೇ ಇರುತ್ತಾನೆ. ಶುಭಲಕ್ಷಣಗಳಿಲ್ಲದಿರುವ ವಿಕೃತರೂಪವುಳ್ಳ ವಿಗ್ರಹವನ್ನು ಯಾವನು ಪೂಜಿಸುತ್ತಾನೆಯೋ ಅವನಿಗೆ ಅನರ್ಥಪರಂಪರಗಳೇ ಹೆಚ್ಚಾಗುತ್ತವೆ ಆದುದರಿಂದ ದುರ್ಲಕ್ಷಣವುಳ್ಳ ವಿಗ್ರಹಗಳನ್ನು ತ್ಯಜಿಸಬೇಕು, ಪೂಜಿಸಬಾರದು

೧೦-೧೨ ದೇವಾಲಯದ ಗೋಪುರ ಉಪ್ಪರಿಗೆ ಮುಂತಾದುವನ್ನು ನಿರ್ಮಾಣಮಾಡುವುದರಿಂದಲೂ ದೇವತೆಗಳ ವಿಗ್ರಹವನ್ನು ನಿರ್ಮಿಸಿರುವುದರಿಂದಲೂ ಪುಣ್ಯ ಉಂಟಾಗುತ್ತದೆ ದೇವತೆಗಳ ವಿಗ್ರಹವನ್ನು ಪೂಜಿಸುವುದರಿಂದಲೂ ಪುಣ್ಯ ಉಂಟಾಗುತ್ತದೆ ಅಂತಹ ವಿಗ್ರಹಗಳ ನಮಸ್ಕಾರವು ಪುಣ್ಯಕರವಾಗುತ್ತದೆ ಆದುದರಿಂದ ಜ್ಞಾನಿಯಾದವನು ಸರ್ವ ಪ್ರಯತ್ನದಿಂದಲೂ ಸುಲಕ್ಷಣಗಳಿಂದ ಮಾಡಿರುವ ವಿಗ್ರಹವನ್ನೇ ಪೂಜಿಸಬೇಕು ಲಕ್ಷಣಹೀನವಾದ ವಿಗ್ರಹವನ್ನು ಪೂಜಿಸಲೇಕೂಡದು ಎಲೈ ದೊರೆಯೇ, ಈ ಲೋಕದಲ್ಲಿ ಯಥಾವಿಧಿಯಾಗಿ ಪೂಜಿಸಲ್ಪಟ್ಟ ದೇವತೆಗಳು ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳನ್ನೂ ಕೊಡುತ್ತಾರೆ

**ಕಾಮಾನಿಷ್ಟಾನ್ ಪ್ರಯಚ್ಛಂತಿ ಸ್ವರ್ಗಮತ್ಯಂತಮೇವ ಚ ।**
**ತಸ್ಮಾತ್ಸರ್ವಪ್ರಯತ್ನೇನ ನೃಣಾಂ ಪೂಜ್ಯಾ ದಿವೌಕಸಃ ॥ ೧೩ ॥**

**ನಿತ್ಯಂ ನರಾಣಾಂ ಸುರಪೂಜಕಾನಾಂ**
**ಲೋಕಾ ಮನೋಜ್ಞಾಃ ಸುಲಭಾ ಭವಂತಿ ।**
**ಲೋಕೇ ತಥಾಸ್ಮಿನ್ ಧನಧಾನ್ಯಯುಕ್ತಾಃ**
**ಸಮೃದ್ಧಿಭಾಜಶ್ಚ ನರಾ ಭವಂತಿ ॥ ೧೪ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ**
**ಮಾರ್ಕಂಡೇಯವಜ್ರಸಂವಾದೇ ಚಿತ್ರಸೂತ್ರೇ**
**ಪ್ರಥಮೋಽಧ್ಯಾಯಃ**

---

೧೩-೧೪ ಇಷ್ಟವಾದ ಎಲ್ಲಾ ಮನೋರಥಗಳನ್ನೂ ಕೊಡುತ್ತಾರೆ ಅವಿನಾಶಿಯಾದ ಸ್ವರ್ಗವನ್ನೂ ಕೊಡುತ್ತಾರೆ ಆದುದರಿಂದ ಸರ್ವಪ್ರಯತ್ನದಿಂದಲೂ ದೇವತೆಗಳು ಮನುಷ್ಯರಿಗೆ ಪೂಜ್ಯರೇ ಆಗಿರುತ್ತಾರೆ. ಸರ್ವ ಕಾಲದಲ್ಲಿಯೂ ದೇವತಾ ಪೂಜೆಯನ್ನು ಮಾಡುವ ಮನುಷ್ಯರಿಗೆ ಸುಖಕರವಾದ ಲೋಕಗಳೆಲ್ಲವೂ ಸುಲಭವಾಗಿ ಲಭಿಸುತ್ತವೆ ಈ ಲೋಕದಲ್ಲಿಯೂ ಅವರು ಧನಧಾನ್ಯ ಸಮೃದ್ಧಿಯನ್ನು ಹೊಂದಿ ಸುಖದಿಂದಿರುತ್ತಾರೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ಮೂರನೆಯ ಖಂಡದಲ್ಲಿ ಮಾರ್ಕಂಡೇಯ ಸಂವಾದದಲ್ಲಿ ಚಿತ್ರಸೂತ್ರವೆಂಬ ಪ್ರಘಟ್ಟದಲ್ಲಿ ಮೊದಲನೆಯ ಅಧ್ಯಾಯ ಮುಗಿದುದು



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ದ್ವಿತೀಯೋಽಧ್ಯಾಯಃ ||

**|| ವಜ್ರ ಉವಾಚ ||**

**ದೇವತಾರೂಪನಿರ್ಮಾಣಂ ಕಥಯಸ್ವ ಮಮಾನಘ |**
**ಯಸ್ಮಾತ್ಸನ್ನಿಹಿತಾ ನಿತ್ಯಂ ಶಾಸ್ತ್ರವತ್ಸಾಕೃತಿರ್ಭವೇತ್ || ೧ ||**

**|| ಮಾರ್ಕಂಡೇಯ ಉವಾಚ ||**

**ಚಿತ್ರಸೂತ್ರಂ ನ ಜಾನಾತಿ ಯಸ್ತು ಸಮ್ಯಙ್ನರಾಧಿಪ |**
**ಪ್ರತಿಮಾಲಕ್ಷಣಂ ವೇತ್ತುಂ ನ ಶಕ್ಯಂ ತೇನ ಕರ್ಹಿಚಿತ್ || ೨ ||**

---

### ಎರಡನೆಯ ಅಧ್ಯಾಯವು

೧ ವಜ್ರನು ಪುನಃ ಪ್ರಶ್ನೆಮಾಡುತ್ತಾನ.—ಎಲೈ ಪೂಜ್ಯನೇ, ಯಾವ ದೇವತಾಕೃತಿಯಲ್ಲಿ ಯಥಾ ಶಾಸ್ತ್ರವಾಗಿ ದೇವತೆಯ ಸಾನ್ನಿಧ್ಯವು ಯಾವಾಗಲೂ ಇದ್ದೇ ಇರುವುದೆಂದು ತಿಳಿಯಬಹುದೋ, ಅಂತಹ ದೇವತಾಕೃತಿಯ ನಿರ್ಮಾಣ ಕ್ರಮವನ್ನು ನನಗೆ ಹೇಳಬೇಕು, ಎನ್ನಲು ಈ ಪ್ರಶ್ನೆಗೆ ಉತ್ತರವಾಗಿ ಮಾರ್ಕಂ ಡೇಯನು ಹೇಳುತ್ತಾನೆ

೨ ಎಲೈ ಧೊರೆಯೇ ಚಿತ್ರಸೂತ್ರ ವಿಧಾನವು ಯಾವನಿಗೆ ಚೆನ್ನಾಗಿ ತಿಳಿ ದಿರುವುದಿಲ್ಲವೋ ಅವನಿಗೆ ಪ್ರತಿಮಾಲಕ್ಷಣವನ್ನು ತಿಳಿಯಲು ಸರ್ವಥಾ ಸಾಧ್ಯವೇ ಇಲ್ಲ ಈ ಮಾತನ್ನು ಕೇಳಿ ವಜ್ರನು ಪುನಃ ಪ್ರಶ್ನೆಮಾಡುತ್ತಾನೆ—ಎಲೈ ಭಾರ್ಗವನೇ ಚಿತ್ರಸೂತ್ರವನ್ನೇ ಮೊದಲು ಹೇಳು, ಏಕೆಂದರೆ ಆ ಚಿತ್ರಸೂತ್ರವನ್ನು ತಿಳಿದವನೇ ಶಬ್ದಗಮ್ಯವಾದ ಲಕ್ಷಣವನ್ನೂ ತಿಳಿಯಲು ಸಾಧ್ಯವಾದೀತು

|| ವಜ್ರ ಉವಾಚ ||

ಚಿತ್ರಸೂತ್ರಂ ಸಮಾಚಕ್ಷ್ವ ಭೃಗುವಂಶವಿವರ್ಧನ ।
ಚಿತ್ರಸೂತ್ರವಿದೇವಾಥ ವೇತ್ತಿ ವಾಗ್ಲಕ್ಷಣಂ ಯತಃ ।

|| ಮಾರ್ಕಂಡೇಯ ಉವಾಚ ||

ವಿನಾ ತು ನೃತ್ಯಶಾಸ್ತ್ರೇಣ ಚಿತ್ರಸೂತ್ರಂ ಸುದುರ್ವಿದಂ || ೩ ||

ಜಗತೋ ನ ಕ್ರಿಯಾ ಕಾರ್ಯಾ ದ್ವಯೋರಪಿ ಯತೋ ನೃಪ ।

|| ವಜ್ರ ಉವಾಚ ||

ನೃತ್ಯಶಾಸ್ತ್ರಂ ಸಮಾಚಕ್ಷ್ವ ಚಿತ್ರಸೂತ್ರಂ ವದಿಷ್ಯಸಿ ।
ನೃತ್ಯಶಾಸ್ತ್ರವಿಧಾನೇ ಚ ಚಿತ್ರಂ ವೇತ್ತಿ ಯತೋ ದ್ವಿಜ || ೪ ||

|| ಮಾರ್ಕಂಡೇಯ ಉವಾಚ ||

ಆತೋದ್ಯಂ ಯೋ ನ ಜಾನಾತಿ ತಸ್ಯ ನೃತ್ತಂ ಹಿ ದುರ್ವಿದಂ ।
ಆತೋದ್ಯೇನ ವಿನಾ ನೃತ್ತಂ ವಿದ್ಯತೇ ನ ಕಥಂ ಚನ || ೫ ||

---

೩-೪ ಮಾರ್ಕಂಡೇಯನು ಹೇಳುತ್ತಾನೆ — ನೃತ್ಯಶಾಸ್ತ್ರವು ತಿಳಿಯದಿದ್ದಲ್ಲಿ ಚಿತ್ರಸೂತ್ರವನ್ನು ತಿಳಿಯಲು ಸಾಧ್ಯವೇ ಇಲ್ಲ ನೃತ್ಯ ಚಿತ್ರ ಇವೆರಡೂ ಇಲ್ಲದಿದ್ದಲ್ಲಿ ಜಗದ್ರೂಪದ ರಚನೆಯೇ ನಡೆಯುವುದಿಲ್ಲ ವಜ್ರನು ಪುನಃ ಪ್ರಶ್ನೆಮಾಡುತ್ತಾನೆ ಹಾಗಿದ್ದಲ್ಲಿ ನೃತ್ಯಶಾಸ್ತ್ರವನ್ನೇ ಮೊದಲು ಹೇಳಬೇಕು ನೃತ್ಯಶಾಸ್ತ್ರವನ್ನು ತಿಳಿದುಕೊಂಡಮೇಲೆ ಚಿತ್ರವನ್ನು ತಿಳಿಯಲು ಸೌಕರ್ಯವಿರುವುದರಿಂದ ಅನಂತರವೇ ಚಿತ್ರವನ್ನು ಹೇಳಬಹುದು

೫-೬ ಮಾರ್ಕಂಡೇಯನು ಹೇಳುತ್ತಾನೆ — ಆತೋದ್ಯವನ್ನು (ನೃತ್ಯೋಪಯೋಗಿಯಾದ ನಾಲ್ಕು ಬಗೆಯ ವಾದ್ಯವಿಶೇಷ) ತಿಳಿಯದಿದ್ದಲ್ಲಿ ನೃತ್ಯಶಾಸ್ತ್ರವನ್ನು ತಿಳಿಯಲು ಸಾಧ್ಯವಿಲ್ಲ ಆತೋದ್ಯವಿಲ್ಲದಿದ್ದಲ್ಲಿ ನೃತ್ತದ ಸ್ವರೂಪವೇ ನಿಲ್ಲುವುದಿಲ್ಲ ವಜ್ರನು ಹೇಳುತ್ತಾನೆ-ಹಾಗಿದ್ದಲ್ಲಿ ಆತೋದ್ಯವನ್ನೇ ಮೊದಲು ಹೇಳಿರಿ ನೃತ್ಯವನ್ನು

|| ವಜ್ರ ಉವಾಚ ||

ಆತೋದ್ಯಂ ಬ್ರೂಹಿ ಧರ್ಮಜ್ಞ ನೃತ್ಯಶಾಸ್ತ್ರಂ ವದಿಷ್ಯಸಿ ।
ತಸ್ಮಿನ್ ಸುವಿದಿತೇ ವೇತ್ತಿ ನೃತ್ಯಂ ಭಾರ್ಗವಸತ್ತಮ || ೬ ||

|| ಮಾರ್ಕಂಡೇಯ ಉವಾಚ ।

ನ ಗೀತೇನ ವಿನಾ ಶಕ್ಯಂ ಜ್ಞಾತುಮಾತೋದ್ಯಮುಚ್ಯತೇ ।
ಗೀತಶಾಸ್ತ್ರವಿಧಾನಜ್ಞಃ ಸರ್ವಂ ವೇತ್ತಿ ಯಥಾವಿಧಿ || ೭ ||

|| ವಜ್ರ ಉವಾಚ ||

ಗೀತಶಾಸ್ತ್ರಂ ಸಮಾಚಕ್ಷ್ವ ಸರ್ವಧರ್ಮಭೃತಾಂ ವರ ।
ಗೀತಶಾಸ್ತ್ರವಿದೇವಾಥ ಸರ್ವಜ್ಞಃ ಪುರುಷೋತ್ತಮಃ || ೮ ||

|| ಮಾರ್ಕಂಡೇಯ ಉವಾಚ ||

ಸಂಸ್ಕೃತಂ ಪ್ರಾಕೃತಂ ಚೈವ ಗೀತಂ ದ್ವಿವಿಧಮುಚ್ಯತೇ ।
ಅಪಭ್ರಷ್ಟಂ ತೃತೀಯಂ ಚ ತದನಂತಂ ನರಾಧಿಪ || ೯ ||

ದೇಶಭಾಷಾವಿಶೇಷೇಣ ತಸ್ಯಾಂತೋ ನೇಹ ವಿದ್ಯತೇ ।
ಗೀತಂ ಪಾಠವಶಾತ್ ಜ್ಞೇಯಂ ಸ ಚ ಪಾಠೋ ದ್ವಿಧಾ ಮತಃ || ೧೦ ||

---

ಅನಂತರ ಹೇಳಬಹುದು ಆತೋದ್ಯವನ್ನು ಚನ್ನಾಗಿ ತಿಳಿದುಕೊಂಡಲ್ಲಿ ನೃತ್ಯವನ್ನು ತಿಳಿಯಲು ಸಾಧ್ಯವಾಗುತ್ತದೆ ಎಂದನು

೭-೮ ಅನಂತರ ಮಾರ್ಕಂಡೇಯನು ಹೇಳುತ್ತಾನೆ —ಗೀತವನ್ನು ತಿಳಿಯದೆ ಆತೋದ್ಯವನ್ನು ತಿಳಿಯಲು ಸಾಧ್ಯವೇ ಇಲ್ಲ ಆ ಗೀತಶಾಸ್ತ್ರದ ವಿಧಾನ ಕ್ರಮವನ್ನು ತಿಳಿದವನು ಎಲ್ಲಾ ರಹಸ್ಯಗಳನ್ನೂ ತಿಳಿಯುತ್ತಾನೆ (ಎಂದನು) ಪುನಃ ವಜ್ರನು-ಎಲೈ ಧರ್ಮಜ್ಞನೇ ಆ ಗೀತಶಾಸ್ತ್ರವನ್ನೇ ಮೊದಲು ಹೇಳಿರಿ ಅಂತಹ ಗೀತಶಾಸ್ತ್ರವನ್ನು ತಿಳಿದವನು ಸರ್ವಜ್ಞನೂ, ಪುರುಷಶ್ರೇಷ್ಠನೂ ಆಗುತ್ತಾನಲ್ಲವೇ

೯-೧೨ ಮಾರ್ಕಂಡೇಯನು ಹೇಳುತ್ತಾನೆ.— ಗೀತವು ಸಂಸ್ಕೃತ ಪ್ರಾಕೃತ ಎಂದು ಎರಡುವಿಧ ಅಪಭ್ರಷ್ಟವೆಂಬುದು ಮೂರನೆಯದು ಅದರ ಭೇದಪ್ರಭೇದಗಳು ಅನಂತವಾಗಿವೆ ಆಯಾಯ ದೇಶಭಾಷಾ ಭೇದಗಳಿಂದ ಅದಕ್ಕೆ ಕೊನೆಯೇ

ಗದ್ಯಂ ಪದ್ಯಂ ಚ ಧರ್ಮಜ್ಞ ಗದ್ಯಂ ಸಂಕಥಯಾ ಸ್ಮೃತಂ ।
ಪದ್ಯಂ ಛಂದೋವಿಶೇಷೇಣ ಛಂದಶ್ಚ ಬಹುಧಾ ಭವೇತ್ ॥ ೧೧ ॥

ಗದ್ಯಪದ್ಯಾನುಭಾವೇನ ಜ್ಞೇಯೌ ಲಕ್ಷಣಸಂಯುತೌ ।
ಪದ್ಯಂ ಚ ದ್ವಿವಿಧಂ ತತ್ರ ಸುವೃತ್ತಮತಿಮುಕ್ತಕಂ ॥ ೧೨ ॥

ಏಕವಿಂಶತಿಸಂಖ್ಯಾಃ ಸ್ಯುಃ ಸುಪಃ ಸುಪ್ತಿಙ್ಪರಂ ಸ್ಮೃತಂ ।
ಪ್ರಥಮಃ ಪುರುಷಸ್ತ್ವೇಕೋ ದ್ವಿತೀಯೋ ಮಧ್ಯಮೋ ಮತಃ ॥ ೧೩ ॥

ಉತ್ತಮಾಖ್ಯಃ ತೃತೀಯಸ್ತು ತತ್ಕ್ರಿಯಾವಚನಂ ತ್ರಿಕಂ ।
ತಿಙಶ್ಚ ನವಕಂ ತತ್ರ ಪರಸ್ಮೈಪದಸಂಜ್ಞಕಂ ॥ ೧೪ ॥

ಆತ್ಮನೇಪದಸಂಜ್ಞಂ ಚ ನವಕಂ ಪರಿಕೀರ್ತಿತಂ ।
ಯುಷ್ಮದ್ಯುಪಪದೇ ತತ್ರ ಮಧ್ಯಮಃ ಪುರುಷೋ ಭವೇತ್ ॥ ೧೫ ॥

---

ಇಲ್ಲ ಗೀತವೆಂಬುದೂ ಪಾರವಶದಿಂದ ತಿಳಿಯಬೇಕಾದ್ದು ಅಂತಹ ಪಾರವೂ ಸಹ ಗದ್ಯಪದ್ಯ ಭೇದದಿಂದ ಎರಡುವಿಧ ಗದ್ಯವೆಂದರೆ ಕೇವಲ ಮಾತನಾಡುವಂತೆ ಇರುವ ಸರಣಿ ಪದ್ಯವೆಂಬುದು ಛಂದೋವಿಶೇಷಗಳಿಂದ ಜೋಡಿಸಲ್ಪಟ್ಟ ಪದ ಸರಣಿ ಛಂದಸ್ಸೂ ಸಹ ನಾನಾ ವಿಧವಾದ್ದು ಈ ಗದ್ಯಪದ್ಯಗಳ ಲಕ್ಷಣಗಳನ್ನು ಅವುಗಳ ಸ್ವಭಾವಕ್ಕೆ ತಕ್ಕಂತೆ ತಿಳಿಯಬೇಕು ಪದ್ಯವೂ ಸಹ, ಸುವೃತ್ತ ಅತಿ ಮುಕ್ತಕವೆಂದು ಎರಡುವಿಧ ಇಂತಹ ಗದ್ಯಪದ್ಯದಲ್ಲಿ ಸೇರುವ ಪದಗಳು ಸುಪ್ತಿ ಙನ್ತಗಳಾಗಿರುತ್ತವೆ ಅವುಗಳಲ್ಲಿ ಸುಬ್ವಿಭಕ್ತಿಯು ಇಪ್ಪತ್ತೊಂದು (ಏಳು ವಿಭಕ್ತಿ ಗಳಿಗೂ ಏಕವಚನ, ದ್ವಿವಚನ, ಬಹುವಚನಭೇದದಿಂದ) ಮತ್ತೊಂದು ತಿಙ್ ಎನಿಸು ತ್ತದೆ (ಕ್ರಿಯಾಪದಗಳೆಂದು ಹೇಳಲಾಗುವ ಪದಗಳ ಮುಂಭಾಗದಲ್ಲಿರುವ ಪ್ರತ್ಯಯ ಗಳೇ ತಿಙ್ ಪ್ರತ್ಯಯಗಳು )

೧೩–೧೫ ಕ್ರಿಯಾವಾಚಕವಾದ ಆ ತಿಙಂತವು ಪ್ರಥಮಪುರುಷ, ಮಧ್ಯಮ ಪುರುಷ, ಉತ್ತಮಪುರುಷವೆಂದು ಮೂರು ವಿಧವಾಗಿದೆ ಅವುಗಳೂ ಪರಸ್ಮೈ ಪದವೆಂಬ ಸಂಜ್ಞೆಯುಳ್ಳ ತಿಙಂತವು ಒಂಭತ್ತು ಆತ್ಮನೇಪದ ಸಂಜ್ಞೆಯುಳ್ಳ ತಿಙನ್ತವೂ ಒಂಭತ್ತು ಇರುತ್ತವೆ ಯುಷ್ಮಚ್ಛಬ್ದವು ಉಪಪದವಾಗಿದ್ದಲ್ಲಿ ಮಧ್ಯಮ ಪುರುಷವೇ ಬರುತ್ತದೆ

**ಅಸ್ಮದ್ಯುಪಪದೇ ಚೈವ ಸ್ಯಾತ್ತ್ರಥೋತ್ತಮಸಂಜ್ಞಕಃ ।**
**ಶೇಷೇ ಪ್ರಥಮಮಿಚ್ಛಂತಿ ಪುರುಷಂ ಯದುಸತ್ತಮ ॥ ೧೬ ॥**

**ಅರ್ಥೇ ಪ್ರಾತಿಪದಿಕಸ್ಯ ಸ್ಯಾದೌ ವಚನಮಂತ್ರಣೇ ।**
**ಪರಿಮಾಣೇ ಚ ಕಥಿತಾ ವಿಭಕ್ತಿಃ ಪ್ರಥಮಾ ಬುಧೈಃ ॥ ೧೭ ॥**

**ದ್ವಿತೀಯಾ ಕರ್ಮಣಿ ಮತಾ ತೃತೀಯಾ ಕರಣೇ ಸ್ಮೃತಾ ।**
**ಕಾರಕೇ ಕರ್ಮಣಿ ತಥಾ ಸೈವ ಚಾನ್ಯೈಃ ಪ್ರಕೀರ್ತಿತಾ ॥ ೧೮ ॥**

**ಚತುರ್ಥೀ ಸಂಪ್ರದಾನೇ ಸ್ಯಾದಪಾದಾನೇ ಚ ಪಂಚಮೀ ।**
**ಸಂಬಂಧೇ ಚ ತಥಾ ಷಷ್ಠೀ ಸಪ್ತಮ್ಯಾಧಾರ ಭಾವಯೋಃ ॥ ೧೯ ॥**

**ತೇಷಾಂ ತು ಪೂರ್ವಮೇವೋಕ್ತಂ ವ್ಯಾಖ್ಯಾನಂ ರಿಪುಸೂದನ ।**
**ದ್ವಿತೀಯಂ ತವ ಧರ್ಮಜ್ಞ ಮಯಾ ತತ್ಪರಿಕೀರ್ತಿತಂ ॥ ೨೦ ॥**

---

೧೬–೧೮ ಅಸ್ಮಚ್ಛಬ್ದವು ಉಪಪದವಾಗಿದ್ದಲ್ಲಿ ಉತ್ತಮಪುರುಷವು ಬರುತ್ತದೆ ಉಳಿದ ವಿಷಯದಲ್ಲಿ ಪ್ರಥಮ ಪುರುಷವೇ ಬರುತ್ತದೆ ಎಂದು ವೈಯ್ಯಾಕರಣರು ನಿರ್ಣಯಿಸುತ್ತಾರೆ ಪ್ರಾತಿಪದಿಕದ ಮೇಲೆ ಪ್ರಕೃತ್ಯರ್ಥದಲ್ಲಿಯೂ, ಲಿಂಗ ಮತ್ತು ಪರಿಮಾಣ ಈ ಅರ್ಥಗಳಲ್ಲಿಯೂ ಪ್ರಥಮಾ ವಿಭಕ್ತಿಯು ಬರುತ್ತದೆ ದ್ವಿತೀಯಾ ವಿಭಕ್ತಿಯು ಕರ್ಮಾರ್ಥದಲ್ಲಿಯೂ, ತೃತೀಯಾ ವಿಭಕ್ತಿಯು ಕರಣಾರ್ಥದಲ್ಲಿಯೂ, ಬರುತ್ತದೆ ಕರ್ಮಲಕಾರದಲ್ಲಿ ಕರ್ತೃಕಾರಕದ ಮೇಲೆಯೂ ವಿಭಕ್ತಿಯೇ ಬರುತ್ತದ

೧೯–೨೧ ಚತುರ್ಥೀವಿಭಕ್ತಿಯು ಸಂಪ್ರದಾನಾರ್ಥದಲ್ಲಿಯೂ, ಪಂಚಮೀ ವಿಭಕ್ತಿಯು ಅಪಾದಾನಾರ್ಥದಲ್ಲಿಯೂ ಬರುತ್ತದೆ ಷಷ್ಠೀವಿಭಕ್ತಿಯು ಸಂಬಂಧಾರ್ಥ ದಲ್ಲಿಯೂ, ಸಪ್ತಮೀವಿಭಕ್ತಿಯು ಆಧಾರ ಮತ್ತು ಭಾವವಾರ್ಥದಲ್ಲಿಯೂ (ಭಾವ ಲಕ್ಷಣ) ಬರುತ್ತವೆ ಇದರ ವ್ಯಾಖ್ಯಾನವನ್ನು ಮೊದಲೇ ನಿನಗೆ ಹೇಳಿರುವೆನು ಈಗಲೂ ಹೇಳಿದ್ದೇನೆ ಪ್ರಾತಿಪದಿಕವೆಂದರೆ ಪ್ರತ್ಯಯುವನ್ನು ಹೊಂದಲು ಅರ್ಹವಾದ ಅರ್ಥವತ್ತಾದ ಪ್ರಕೃತಿ ಎಂಬ ಶಬ್ದಸ್ವರೂಪ ಈ ಪ್ರಕತಿಯೂ ಸಹ ಧಾತು

**ಪ್ರಾತಿಪದಿಕಮಿಹಸ್ತಂ ಪ್ರಕೃತಿಃ ಸ್ಯಾತ್ತ್ರ-**
**ತ್ಪ್ರಕೃತಿಮಪಿ ಧಾತುಮಿಚ್ಛಂತಿ।**
**ವಾಙ್ಮಯಮಖಿಲಮನೇರನ ನಿಬದ್ಧಂ**
**ಗದ್ಯಮಪಿ ಯದಥ ಪದ್ಯಸಮೇತಂ ॥ ೨೦ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ ವಜ್ರಸಂವಾದೇ ಶಬ್ದಾಧ್ಯಾಯೋ ನಾಮ ದ್ವಿತೀಯೋಽಧ್ಯಾಯಃ**

ಗಳಿಂದಲೇ ಉಂಟಾಗಿದೆ ಎಂದು ಹೇಳಲ್ಪಡುತ್ತದೆ ಗದ್ಯಪದ್ಯಾತ್ಮಕವಾದ ಸಮಸ್ತ ವಾಕ್ಪ್ರಪಂಚವೂ ಸುಬಂತ ತಿಙನ್ತರೂಪಗಳಾದ ಇಂತಹ ಶಬ್ದಗಳಿಂದಲೇ ಪೂರ್ಣ ವಾಗಿರುತ್ತದೆ

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದದಲ್ಲಿ ಶಬ್ದಾಧ್ಯಾಯವೆಂಬ ಎರಡನೆಯ ಅಧ್ಯಾಯ ಮುಗಿದಿದೆ.

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ತೃತೀಯೋಽಧ್ಯಾಯಃ ||

### || ಮಾರ್ಕಂಡೇಯ ಉವಾಚ ||

**ಷಡಕ್ಷರೇಣ ಪಾದೇನ ಗಾಯತ್ರಂ ಛಂದ ಉಚ್ಯತೇ ।**
**ಉಷ್ಣಿಕ್ ಸಪ್ತಾಕ್ಷರಂ ಚೈವ ಅಷ್ಟಾಕ್ಷರಮನುಷ್ಟುಭಂ ॥ ೧ ॥**

**ನವಾಕ್ಷರಾ ಚ ಬೃಹತೀ ಪಂಙ್ಕ್ತಿಸಂಜ್ಞಂ ದಶಾಕ್ಷರಂ ।**
**ಏಕಾದಶಾಕ್ಷರಂ ತ್ರಿಷ್ಟುಬ್ಜಗತೀ ದ್ವಾದಶಾಕ್ಷರಂ ॥ ೨ ॥**

**ತ್ರಯೋದಶಾಕ್ಷರಂ ಜ್ಞೇಯಮತಿಪೂರ್ವಂ ತಥೈವ ಹಿ ।**
**ಚತುರ್ದಶಾಕ್ಷರಾ ಚೈವ ಶಕ್ವರೀ ಯದುನಂದನ ॥ ೩ ॥**

---

### ಮೂರನೆಯ ಅಧ್ಯಾಯ

೧–೪ ಮಾರ್ಕಂಡೇಯನು ಪದ್ಯಮಯವಾದ ಪ್ರಬಂಧಕ್ಕೆ ಅನುಬಂಧಿಸುವ ಛಂದೋವಿಶೇಷಗಳನ್ನು ಹೇಳುತ್ತಾನೆ ಆರು ಅಕ್ಷರಗಳಿಂದ ಒಂದೊಂದು ಪಾದವು ಇದ್ದಲ್ಲಿ ಅದು ಗಾಯತ್ರ ಛಂದಸ್ಸೆಂದು ಹೇಳಲ್ಪಡುತ್ತದೆ ಏಳು ಅಕ್ಷರಗಳ ಪಾದವುಳ್ಳದ್ದು ಉಷ್ಣಿಕ್ ಎಂತಲೂ, ಎಂಟು ಅಕ್ಷರಗಳ ಪಾದವುಳ್ಳದ್ದು ಅನುಷ್ಟುಪ್ ಎಂತಲೂ, ಒಂಭತ್ತಕ್ಷರ ಪಾದವುಳ್ಳದ್ದು ಬೃಹತೀ ಎಂತಲೂ, ಹತ್ತು ಅಕ್ಷರದ ಪಾದವುಳ್ಳದ್ದು ಪಂಙ್ಕ್ತಿ ಎಂತಲೂ, ಹನ್ನೊಂದು ಅಕ್ಷರಗಳ ಪಾದವುಳ್ಳದ್ದು ತ್ರಿಷ್ಟುಬೆಂತಲೂ, ಹನ್ನೆರಡಕ್ಷರಗಳ ಪಾದವುಳ್ಳದ್ದು ಜಗತೀ ಎಂತಲೂ, ಹದಿಮೂರಕ್ಷರಗಳುಳ್ಳ ಪಾದವುಳ್ಳದ್ದು ಅತಿಜಗತೀ ಎಂತಲೂ, ಹದಿನಾಲ್ಕು ಅಕ್ಷರಗಳುಳ್ಳ ಪಾದ

ಅತಿಶಕ್ವರೀ ಚ ಕಥಿತಾ ತಥಾ ಪಂಚದಶಾಕ್ಷರಾ ।
ಷೋಡಶಾಕ್ಷರಮಿಚ್ಛಂತಿ ಛಂದೋಽಷ್ಟಿರಿತಿ ಯತ್ಸ್ಮೃತಂ ॥ ೪ ॥

ಅತ್ಯಷ್ಟಿಸಂಜ್ಞಂ ಛಂದಶ್ಚ ತಥಾ ಸಪ್ತದಶಾಕ್ಷರಂ ।
ಅಷ್ಟಾದಶಾಕ್ಷರಂ ಚೈವ ವೃತ್ತಿಸಂಜ್ಞಂ ಪ್ರಕೀರ್ತಿತಂ ॥ ೫ ॥

ತಥಾತಿವೃತ್ತಿಸಂಜ್ಞಂ ಚ ವಿಂಶತಿಸ್ತ್ವೇಕವರ್ಜಿತಾ ।
ವಿಂಶತಿಶ್ಚಾಕ್ಷರಾಣಿ ಸ್ಯುಃ ಕೃತಿಸಂಜ್ಞಂ ಯದೂತ್ತಮ ॥ ೬ ॥

ವಿಂಶತಿಸ್ತ್ವೇಕಸಂಯುಕ್ತಾ ಪ್ರಕೃತಿಃ ಪರಿಕೀರ್ತಿತಾ ।
ದ್ವಾವಿಂಶತಿಶ್ಚ ಕಥಿತಂ ತಧ್ಯೈವಾಕೃತಿಸಂಜ್ಞಕಂ ॥ ೭ ॥

ತ್ರಯೋವಿಂಶತಿಶ್ಚ ವಿಕೃತಿಃ ಸಾ ಚೈಕಾಸಂಕೃತಿರ್ಮತಾ ।
ಸಂಕೃತಿಶ್ಚೈಕ ಸಂಯುಕ್ತಾ ಕಥಿತಾ ವಿಕೃತಿರ್ನೃಪ ॥ ೮ ॥

ಷಡ್ವಿಂಶತಿಶ್ಚಾತಿಕೃತಿಃ ಛಂದಶ್ಚೋಕ್ತಂ ಮನೀಷಿಭಿಃ ।
ಯಥಾಯಥಂ ಚತುರ್ಭಿಃ ಸ್ಯುಃ ಪಾದೈರೇತಾನಿ ನಿರ್ದಿಶೇತ್ ॥ ೯ ॥

---

ವುಳ್ಳದ್ದು ಶಕ್ವರೀ ಎಂದೂ, ಹದಿನೈದು ಅಕ್ಷರಗಳ ಪಾದವುಳ್ಳದ್ದು ಅತಿಶಕ್ವರೀ ಎಂದೂ ಹದಿನಾರು ಅಕ್ಷರಗಳುಳ್ಳ ಪಾದವುಳ್ಳದು ಅಷ್ಟಿ ಎಂದೂ ಹೇಳಲ್ಪಡುತ್ತವೆ

೫-೮ ಹಾಗೆಯೇ ಹದಿನೇಳು ಅಕ್ಷರಗಳುಳ್ಳ ಪಾದವುಳ್ಳ ಛಂದಸ್ಸಿಗೆ ಅತ್ಯಷ್ಟಿ ಎಂತಲೂ, ಹದಿನೆಂಟು ಅಕ್ಷರಗಳುಳ್ಳ ಪಾದಗಳುಳ್ಳ ಛಂದಸ್ಸಿಗೆ ವೃತ್ತಿ ಎಂತಲೂ, ಹತ್ತೊಂಭತ್ತು ಅಕ್ಷರಗಳುಳ್ಳ ಪಾದಗಳಿಂದ ಕೂಡಿರುವ ಛಂದಸ್ಸಿಗೆ ಅತಿವೃತ್ತಿ ಎಂತಲೂ, ಇಪ್ಪತ್ತು ಅಕ್ಷರಗಳುಳ್ಳ ಪಾದಗಳಿರುವ ಛಂದಸ್ಸಿಗೆ ಕೃತಿ ಎಂದೂ, ಇಪ್ಪತ್ತೊಂದು ಅಕ್ಷರಗಳಿಂದ ಕೂಡಿದ ಪಾದಗಳುಳ್ಳ ಛಂದಸ್ಸಿಗೆ ಪ್ರಕೃತಿ ಎಂದೂ, ಇಪ್ಪತ್ತೆರಡು ಅಕ್ಷರಗಳುಳ್ಳ ಪಾದಗಳಿರುವ ಛಂದಸ್ಸಿಗೆ ಆಕೃತಿ ಎಂದೂ, ಇಪ್ಪತ್ತ ಮೂರು ಅಕ್ಷರಗಳುಳ್ಳ ಪಾದಗಳಿರುವ ಛಂದಸ್ಸಿಗೆ ವಿಕೃತಿ ಎಂದೂ, ಇಪ್ಪತ್ತನಾಲ್ಕು ಅಕ್ಷರಗಳುಳ್ಳ ಪಾದಗಳಿರುವ ಛಂದಸ್ಸಿಗೆ ಸಂಕೃತಿ ಎಂದೂ, ಮತ್ತು ಒಂದರಕ್ಷವು ಹೆಚ್ಚಾಗಿದ್ದಲ್ಲಿ ಅವಿಕೃತಿ ಎಂದೂ ಹೆಸರುಗಳಿರುತ್ತವೆ

೯-೧೧ ಇಪ್ಪತ್ತಾರು ಅಕ್ಷರಗಳುಳ್ಳ ಪಾದಗಳಿದ್ದಲ್ಲಿ ಅದಕ್ಕೆ ಅತಿಕೃತಿ ಎಂದೂ ಪಂಡಿತರು ಹೇಳಿರುತ್ತಾರೆ ಯಥಾಕ್ರಮವಾಗಿ ನಾಲ್ಕು ಪಾದಗಳೂ

ಮಾತ್ರಿಕಸ್ತು ಲಘುರ್ವರ್ಣಃ ಸ್ಪಷ್ಟರೇಖಾಭಿಚಿಹ್ನಿತಃ ।
ಸಂಸ್ಥಾಪ್ಯಃ ಸ್ಯಾದ್ವಿಮಾತ್ರಸ್ತು ಗುರುರ್ವಕ್ರಸ್ತಥಾ ಭವೇತ್ ॥ ೧೦ ॥

ಲಘುಶ್ಚಾಂತ್ಯಶ್ಚ ಯೋ ವರ್ಣಃ ಸ ಗುರುಶ್ಚ ಭವೇನ್ನೃಪ ।
ದೀರ್ಘಪ್ಲುತೌ ಚ ಕಥಿತೌ ತಥೈವ ಗುರುಸಂಜ್ಞಕೌ ॥ ೧೧ ॥

ಸಂಯೋಗಾದ್ಯಾಃ ಪರೇ ಯಸ್ಮಾತ್ಸಲಘುಶ್ಚ ಗುರುಃ ಸ್ಮೃತಃ ।
ಲಘೋರ್ಗುರೋರ್ವಿಭಾಗೇನ ಪ್ರಸ್ತಾರೋನೇನ ಯಾದವ ॥ ೧೨ ॥

ಸರ್ವೇ ಛಂದೋ ವಿಕಲ್ಪಾಶ್ಚ ಭವಂತಿ ಬಹುಶೋ ನೃಪ ।
ಸ್ಯಾದ್ಯಥಾನಯನಂ ತೇಷಾಂ ತಥಾ ವಕ್ಷ್ಯಾಮಿ ತಚ್ಛೃಣು ॥ ೧೩ ॥

ಯಾವತ್ಸಂಖ್ಯಾಕ್ಷರಂ ಛಂದಃ ತಾವಂತೋ ಗುರವೋ ನೃಪ ।
ಸ್ಥಾಪ್ಯಾ ಅಧಶ್ಚ ಪೂರ್ವಾಣಾಂ ಲಘುಂ ಪೂರ್ವಸ್ಯ ವಿನ್ಯಸೇತ್ ॥ ೧೪ ॥

---

ಈ ರೀತಿ ಇದ್ದಲ್ಲಿ ಅದನ್ನು ಆಯಾಯ ಛಂದಸ್ಸಿನಿಂದ ವ್ಯವಹರಿಸಬೇಕು ಒಂದೇ ಒಂದು ಮಾತ್ರೆಯುಳ್ಳ ವರ್ಣಕ್ಕೆ ಲಘುವರ್ಣವೆಂದೂ ಅದಕ್ಕೆ ಸ್ಪಷ್ಟವಾದ ಒಂದೇ ರೇಖೆಯು ಚಿಹ್ನೆಯಾಗಿರುತ್ತದೆ ಎರಡು ಮಾತ್ರೆಯುಳ್ಳ ವರ್ಣವು ಗುರುವೆಂದು ನಿಶ್ಚಯಿಸ ಬೇಕು ಅದಕ್ಕೆ ವಕ್ರವಾದಚಿಹ್ನೆಯೇ ಸಂಜ್ಞೆಯಾಗುತ್ತದೆ ಅಂತ್ಯದಲ್ಲಿರುವ ಲಘುವರ್ಣವು ಗುರುಸಂಜ್ಞೆಯನ್ನು ಹೊಂದುತ್ತದೆ ದೀರ್ಘ ಮತ್ತು ಪ್ಲುತಗಳೂ ಗುರುಸಂಜ್ಞೆಯನ್ನು ಹೊಂದುತ್ತವೆ ಸಂಯೋಗವು ಪರದಲ್ಲಿದ್ದಲ್ಲಿ ಅಂತಹ ಲಘುವೂ ಗುರುಸಂಜ್ಞೆಯನ್ನು ಹೊಂದುತ್ತದೆ

೧೨–೧೬ ಎಲ್ಲಾ ಛಂದಸ್ಸುಗಳಿಗೂ ಸಹ ಅವುಗಳ ಭೇದಗಳನ್ನು ಲಘು ಗುರು ವಿಭಾಗದಿಂದ ಪ್ರಸ್ತಾರದಲ್ಲಿ ತಿಳಿಯಬೇಕು. ಇಷ್ಟು ಲಘುಗಳುಳ್ಳ ಮತ್ತು ಇಷ್ಟು ಗುರುಗಳುಳ್ಳ ವೃತ್ತಗಳು ಆಯಾಯ ಛಂದಸ್ಸಿನಲ್ಲಿ ಎಷ್ಟಿವೆ ಎಂಬು ದನ್ನು ಪ್ರಸ್ತಾರದಿಂದ ತಿಳಿಯಬೇಕಾಗುತ್ತದೆ ಅವುಗಳ ಅನಯನ ಕ್ರಮವನ್ನು ನಿನಗೆ ಹೇಳುತ್ತೇನೆ ಕೇಳು–ಛಂದಸ್ಸಿನಲ್ಲಿ ಅಕ್ಷರಗಳ ಸಂಖ್ಯೆಯು ಎಷ್ಟಿದೆಯೋ ಅಷ್ಟು ಗುರುಸಂಜ್ಞೆಯನ್ನು ಮೊದಲು ವಿನ್ಯಾಸ ಮಾಡಬೇಕು ‿ ಈ ರೀತಿಯಾದ ಚಿಹ್ನೆ ಎಂದು ತಾತ್ಪರ್ಯ ಅಂದರೆ ಸರ್ವಗುರುವುಳ್ಳ ಒಂದು ವೃತ್ತವು ಆ ಛಂದಸ್ಸಿನಲ್ಲಿ

**ಅತೋಽನ್ಯೇಷು ತ್ವವಸ್ಥಾಸ್ಯಂ ನೃಪಮುಖ್ಯ ಯಥಾ ಸ್ಥಿತಂ ।**
**ಏವಮೇವ ವಿಧಿಂ ಕುರ್ಯಾದಾದಿಶ್ಚ ಗುರುಭಿಃ ಪುನಃ ॥ ೧೫ ॥**

**ಪೂರಯೇದಕ್ಷರೈಸ್ತಾವತ್ಕುರ್ಯಾದೇತಂ ನೃಪೋತ್ತಮ ।**
**ಯಾವದಕ್ಷರಸಂಖ್ಯಾಃ ಸ್ಯುಃ ಸರ್ವೇ ಹಿ ಲಘವೋ ನೃಪ ॥ ೧೬ ॥**

**ಏತತ್ಸ್ಯಾದಕ್ಷರೈಃ ಛಂದಃ ಮಾತ್ರಾಚ್ಛಂದಸ್ತಥೈವ ಹಿ ।**
**¹ಉಕ್ತವರ್ಣಾಕ್ಷರಂ ಛಂದೋ ಭವೇದೇಕವಿವರ್ಜಿತಃ ॥ ೧೭ ॥**

**ಯದಾ ತದಾ ನಿವೃತ್ಸಂಜ್ಞೋಹ್ಯಧಿಕೇನ ತಮುತ್ತಥಾ ।**
**ವರ್ಣದ್ವಯೇನ ರಹಿತಂ ವಿರಾಡಿತಿ ಹಿ ಶಬ್ದಿತಂ ॥ ೧೮ ॥**

**ಅಧಿಕಂ ಚ ಸುರಾಸಂಜ್ಞಂ ಕಥಿತಂ ಯದುಸತ್ತಮ ।**
**ತೇಭ್ಯೋ ಭವಂತಿ ಸರ್ವಾಣಿ ಮಾತ್ರಾಚ್ಛಂದಾಂಸಿ ಯಾದವ ॥ ೧೯ ॥**

ಮೊದಲನೆಯದಾಗುತ್ತದೆ ಆದರೆ ಕೆಳಗಿನ ಪಂಕ್ತಿಯಲ್ಲಿ ಮೊದಮೊದಲನೆಯ ಗುರುವಿನ ಕೆಳಗೆ ಲಘು । ಎಂಬ ಸಂಜ್ಞೆಯನ್ನು ವಿನ್ಯಾಸಮಾಡಬೇಕು ಉಳಿದ ದ್ವಿತೀಯಾದಿ ಸ್ಥಾನಗಳಿಗೆ ಮೇಲಿರುವಂತೆಯೇ ಚಿಹ್ನೆಯನ್ನು ನಿರ್ದೇಶಮಾಡಬೇಕು ಎರಡು ಮತ್ತು ಮೂರನೆಯ ಪಙ್ಕ್ತಿಯಲ್ಲಿ ಎರಡು ಮತ್ತು ಮೂರನೆಯ ಸ್ಥಾನದಲ್ಲಿ ಲಘುಗಳು ಬಂದಲ್ಲಿ ಅದರ ಮೊದಮೊದಲಿನ ಸ್ಥಾನದಲ್ಲಿ ಗುರುವನ್ನೇ ಇಡಬೇಕು ಇದೇ ವಿಧಿಯನ್ನೇ ಸರ್ವಲಘುವೃತ್ತ ವೃತ್ತವು ಸಿಕ್ಕುವವರೆಗೂ ಮಾಡುತ್ತಾ ಹೋಗಬೇಕು

೧೭-೧೯ ಈ ಛಂದಸ್ಸುಗಳೆಲ್ಲವೂ ಅಕ್ಷರಗಳ ಛಂದಸ್ಸು ಇದಕ್ಕಿಂತಲೂ ಬೇರೆಯಾದ ಮಾತ್ರಾಛಂದಸ್ಸಿರುತ್ತದೆ ಹಿಂದೆ ಹೇಳಿದ ಛಂದಸ್ಸಿನಲ್ಲಿ ಎಷ್ಟು ವರ್ಣಗಳು ಹೇಳಲಾಗಿವೆಯೋ ಆ ವರ್ಣಗಳಲ್ಲಿ ಒಂದು ವರ್ಣವು ಕಡಿಮೆಯಾದಲ್ಲಿ ಅದಕ್ಕೆ ನಿವೃತ್ತಿ ಎಂದು ಹೆಸರು ಹೆಚ್ಚಾಗಿ ಇದ್ದಲ್ಲಿ ಆ ಮಾತ್ರಾವೃತ್ತಕ್ಕೆ ತಮಃ ಎಂದು ಹೆಸರು ಎರಡು ವರ್ಣಗಳು ಕಡಿಮೆಯಾಗಿದ್ದಲ್ಲಿ ಅದಕ್ಕೆ ವಿರಾಟ್ ಎಂದು ಹೆಸರು ಹೆಚ್ಚಾಗಿದ್ದಲ್ಲಿ ಸುರಾ ಎಂದು ಹೆಸರು. ಇವುಗಳಿಂದಲೇ ಎಲ್ಲಾ ಮಾತ್ರಾ ಛಂದಸ್ಸುಗಳುಂಟಾಗುತ್ತವೆ

1 ಈ ರೀತಿಯಾದ ವಿವರಣವು ಈಗ ಪ್ರಚಾರದಲ್ಲಿರುವ ಪ್ರಸಿದ್ಧ ಗ್ರಂಥಗಳಲ್ಲಿ ಕಂಡು ಬಂದಿಲ್ಲ

**ದಿಙ್ಮಾತ್ರಮೇತತ್ಕಥಿತಂ ನರೇಂದ್ರ**
**ವಿಸ್ತಾರಜಿಜ್ಞಾಸುರತೋ ಮನುಷ್ಯಃ ।**
**ಸಂಸಾಧಯೇತ್ತತ್ಸ್ವಧಿಯಾ ಯಥಾವ-**
**ತ್ಸುದುಸ್ತರಂ ವಿಸ್ತರಶೋ ಹಿ ವಕ್ತುಂ　　　॥ ೨೦ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ**
**ವಜ್ರಸಂವಾದೇ ಛಂದೋವಿಧಿರ್ನಾಮ**
**ತೃತೀಯೋಽಧ್ಯಾಯಃ**

---

೨೦　ಈ ರೀತಿ ಛಂದಸ್ಸಿನ ವಿಷಯವನ್ನು ದಿಕ್ಕನ್ನು ತೋರಿಸುವಂತೆ ಸಂಗ್ರಹವಾಗಿ ಅದರ ಮಾರ್ಗವನ್ನು ಮಾತ್ರ ಹೇಳಿರುವೆನು　ಇದರ ವಿಸ್ತಾರವನ್ನು ತಿಳಿಯಲು ಇಚ್ಛೆಯುಳ್ಳವನು ತನ್ನ ಬುದ್ಧಿಯಿಂದ ಶಾಸ್ತ್ರವನ್ನು ಪರಿಶೀಲಿಸಿ ತಿಳಿದು ಕೊಳ್ಳಬೇಕು　ಇದಕ್ಕಿಂತಲೂ ಬಹಳ ವಿಸ್ತಾರವಾಗಿ ಹೇಳಲು ಸಾಧ್ಯವಿಲ್ಲ

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯ ಖಂಡದಲ್ಲಿ ಮಾರ್ಕಂಡೇಯ
ವಜ್ರ ಸಂವಾದದಲ್ಲಿ ಛಂದೋವಿಧಿ ಎಂಬ ಮೂರನೆಯ
ಅಧ್ಯಾಯ ಮುಗಿದಿದೆ

---

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಚತುರ್ಥೋಽಧ್ಯಾಯಃ ||

### || ಮಾರ್ಕಂಡೇಯ ಉವಾಚ ||

**ತತ್ಪ್ರಜ್ಞಾಯುಕ್ತಮುದ್ವೃತ್ತಂ ದೀಪ್ತಂ ಗಂಭೀರಶಬ್ದವತ್ ।**
**ಕ್ವಚಿನ್ನಿರುಕ್ತಸಂಯುಕ್ತಂ ವಾಕ್ಯಮೇತತ್ಸ್ವಯಂಭುವಃ ॥ ೧ ॥**

**ಯತ್ಕಿಂಚಿನ್ಮಿಶ್ರಸಂಯುಕ್ತಂ ಯುಕ್ತಂ ನಾಮವಿಭಕ್ತಿಭಿಃ ।**
**ಪ್ರತ್ಯಕ್ಷಾಭಿಹಿತಂ ಯಚ್ಚ ತಾದೃಶೀನಾಂ ವಚಃ ಸ್ಮೃತಂ ॥ ೨ ॥**

**ನೈಗಮೈರ್ವಿವಿಧೈಃ ಶಬ್ದೈಃ ನಿಪಾತಂ ಬಹುಲಂ ಚ ಯತ್ ।**
**ನ ಚಾಪಿ ಸುಮಹದ್ವಾಕ್ಯಮೃಚೀಕಾನಾಂ ವಚಃ ಸ್ಮೃತಂ ॥ ೩ ॥**

---

### ನಾಲ್ಕನೆಯ ಅಧ್ಯಾಯ

೧–೪ ಮಾರ್ಕಂಡೇಯರು ವಾಕ್ಯಪರೀಕ್ಷೆಯನ್ನು ವಿವಿಧ ಲಕ್ಷಣ ಪುರಸ್ಸರವಾಗಿ ಹೇಳುತ್ತಾರೆ, ಇಂತಹ ಅರ್ಥಬೋಧಕ ವಾಕ್ಯಗಳಲ್ಲಿ ಆಜ್ಞೆಯಿಂದ ಕೂಡಿಯೂ, ಏಕಾರ್ಥಪ್ರತಿಪಾದಕವಾಗಿಯೂ, ಉಜ್ವಲವಾಗಿಯೂ, ಗಂಭೀರವಾದ ಉದಾತ್ತ ಶಬ್ದಗಳಿಂದ ಕೂಡಿಯೂ, ನಿರುಕ್ತದಿಂದ ಸಂಸ್ಕೃತವಾಗಿಯೂ ಇರುವ ವಾಕ್ಯವು ಸ್ವಯಂಭುವಿನ ವಾಕ್ಯವೆಂದು ತಿಳಿಯಬೇಕು ಸ್ವಲ್ಪ ಮಟ್ಟಿಗೆ ಗಂಭೀರಾ ಗಂಭೀರ ಶಬ್ದಗಳಿಂದ ಮಿಶ್ರವಾಗಿಯೂ, ವಿಭಕ್ತಿಗಳಿಂದ ಕೂಡಿಯೂ, (ಶಿಥಿಲ ಬಂಧದಿಂದ ಕೂಡಿ ಎಂದು ತಾತ್ಪರ್ಯ) ಪ್ರತ್ಯಕ್ಷವಾಗಿಯೂ ಇರುವ ಕೆಲವು ವಾಕ್ಯಗಳೂ ಅಂತಹವರ ವಾಕ್ಯವೇ ಆಗುತ್ತವೆ ನಾನಾ ವಿಧವಾದ ವೇದಗಳ ಶಬ್ದಗಳಿಂದ

**ಅವಿಸ್ಪಷ್ಟಪದಂ ಜ್ಞೇಯಂ ಋಷಿಪುತ್ರವಚೋ ನೃಪ ।**
**ಭೂತಭವ್ಯಭವಜ್ಞಾನಂ ಜನ್ಮದುಃಖವಿಕುತ್ಸನಂ ॥ ೪ ॥**

**ಮಿತ್ರಾಣಾಂ ತದ್ಭವೇದ್ವಾಕ್ಯಂ ಗರ್ಭೇಷು ಚ ಪ್ರವರ್ತನಂ ।**
**ಆಜ್ಞಾಯುಕ್ತಂ ಚ ವಚನಂ ತಥಾ ಹೇತುವಿವರ್ಜಿತಂ ॥ ೫ ॥**

**ರಾಜರ್ಷೀಣಾಂ ತು ವಿಜ್ಞೇಯಂ ಬಹ್ವರ್ಥಂ ಬಹುವಿಸ್ತರಂ ।**
**ಬಹ್ವಭಿಧಾನಂ ಬಹ್ವರ್ಥೇ ದೇವತಾನಾಂ ಪ್ರಕೀರ್ತಿತಂ ॥ ೬ ॥**

**ಬಹ್ವಭಿಧಾನಮಲ್ಪಾರ್ಥಂ ದಾನವಾನಾಂ ಪ್ರಕೀರ್ತಿತಂ ।**
**ಅಲ್ಪಾಭಿಧಾನಮಲ್ಪಾರ್ಥಂ ಗಂಧರ್ವಾಣಾಂ ತಥಾ ಭವೇತ್ ॥ ೭ ॥**

---

ಕೂಡಿಯೂ, ನಿಪಾತಗಳಿಂದ ಕೂಡಿಯೂ, ಮಹಾವಾಕ್ಯದಂತಿರದೆ ಸಣ್ಣ ಸಣ್ಣ ವಾಕ್ಯದಂತೆಯೂ ಇರುವ ವಚನಗಳನ್ನು ಯುಚೀಕರ ವಚನವೆಂದು ತಿಳಿಯಬೇಕು ಅಸ್ಪಷ್ಟವಾದ ಪದಗಳಿಂದ ಕೂಡಿದ ವಾಕ್ಯವು ಋಷಿ ಪುತ್ರರ ವಚನವೆಂದು ತಿಳಿಯ ಬೇಕು

೫–೭ ಭೂತಭವಿಷ್ಯದ್ವರ್ತಮಾನವೆಂಬ ತ್ರಿಕಾಲದ ವಿಷಯದಲ್ಲಿಯೂ ಪ್ರವರ್ತಿಸಕ್ಕದ್ದಾಗಿಯೂ ಜನ್ಮದಿಂದುಂಟಾಗಬಹುದಾದ ದುಃಖವನ್ನು ನಿಂದಿಸ ತಕ್ಕದ್ದಾಗಿಯೂ, ರಹಸ್ಯ ವಿಷಯದಲ್ಲೂ ಪ್ರವರ್ತಕವಾಗಿಯೂ ಇರುವ ವಾಕ್ಯಗಳು ಮಿತ್ರವಾಕ್ಯವೆಂದು ಹೇಳಲ್ಪಡುತ್ತವೆ ಆಜ್ಞೆಯಿಂದ ಕೂಡಿಯೂ, ಕಾರಣನಿರ್ದೇಶ ವಿಲ್ಲದೆಯೂ, ಬಹ್ವರ್ಥಗರ್ಭಿತವಾಗಿಯೂ, ವಿಸ್ತಾರವಾಗಿಯೂ ಇರುವ ವಚನವು ರಾಜರ್ಷಿ ವಚನವೆಂದು ತಿಳಿಯಬೇಕು ಅನೇಕಾರ್ಥಗಳಿಂದ ಕೂಡಿ, ಅನೇಕ ಶಬ್ದದಿಂದಲೂ ವಿಸ್ತಾರವಾಗಿರುವ ವಚನಗಳು ದೇವತೆಗಳ ವಚನವೆಂದು ಹೇಳ ಲಾಗಿದೆ ಅನೇಕ ಶಬ್ದಗಳಿಂದ ಕೂಡಿಯೂ, ಅಲ್ಪಾರ್ಥವುಳ್ಳದ್ದಾಗಿಯೂ ಇರುವ ವಚನಗಳು ದಾನವರ ವಚನಗಳಾಗುತ್ತವೆ ಶಬ್ದಗಳೂ ಕಡಿಮೆಯಾಗಿ ಅರ್ಥವೂ ಅಲ್ಪವಾಗಿದ್ದಲ್ಲಿ ಅಂತಹ ವಚನಗಳು ಗಂಧರ್ವರ ವಚನಗಳೆಂದೂ ತಿಳಿಯಬೇಕು

ದುರ್ಬೋಧಂ ವಿಷಮಂ ಚೈವ ರಾಕ್ಷಸಾನಾಂ ಪ್ರಕೀರ್ತಿತಂ ।
ಗೂಢಾಕ್ಷರಂ ತು ಯಕ್ಷಾಣಾಂ ಕಿನ್ನರೈರುಕ್ತವತ್ತಥಾ ॥ ೮ ॥

ನಾಗಾನಾಮತಿವಿಸ್ಪಷ್ಟಂ ಪುನರುಕ್ತಸಮನ್ವಿತಂ ।
ರಾಗದ್ವೇಷಸಮಾಯುಕ್ತಂ ಹೇತುಮತ್ಪೌರುಷಂ ಭವೇತ್ ॥ ೯ ॥

ಮಂತ್ರಾ ನವವಿಧಾಃ ಪ್ರೋಕ್ತಾಃ ಋಗ್ಯಜುಸ್ಸಾಮಲಕ್ಷಣಾಃ ।
ಸ್ತುತಿರ್ನಿಂದಾಪ್ರಶಂಸಾ ಚ ಆಕ್ರೋಶಃ ಪ್ರೇಷ್ಯ ಏವ ಚ ॥ ೧೦ ॥

ಪ್ರಶ್ನೋಽನುಜ್ಞಾ ತಥಾಖ್ಯಾನಮಾಶಾಸ್ತಿರ್ವಿಷಯಾ ಮತಾಃ ।
ಏವಂ ತೇ ಸರ್ವವಿದ್ಯಾನಾಂ ವಿಹಿತಂ ಸರ್ವಲಕ್ಷಣಂ ॥ ೧೧ ॥

ಪೌರುಷೇ ವಿದ್ಯತೇ ತಚ್ಚ ನಾನ್ಯತ್ರೇತಿ ವಿನಿಶ್ಚಯಃ ।
ಸ್ವಭಾವಾನ್ನಚ್ಯವಂತ್ಯೇವ ಯೇ ಪ್ರೋಕ್ತಾ ನರವರ್ಜಿತಾಃ ॥ ೧೨ ॥

---

೮–೯ ಅರ್ಥವಾಗದಿರುವ ಮತ್ತು ವ್ಯಾಹತಾರ್ಥಕವಾದ ವಾಕ್ಯವು ರಾಕ್ಷಸ ವಾಕ್ಯವೆಂದು ತಿಳಿಯಬೇಕು ಗುಪ್ತವಾದ ಅಕ್ಷರವುಳ್ಳ ವಾಕ್ಯವು ಯಕ್ಷರ ಮತ್ತು ಕಿನ್ನರರ ವಾಕ್ಯವೆಂದೂ ತಿಳಿಯಬೇಕು ಬಹಳ ಅಸ್ಪಷ್ಟವಾಗಿಯೂ, ಪುನರುಕ್ತ ದೋಷದಿಂದ ಕೂಡಿಯೂ ಇರುವ ವಚನಗಳು ಸರ್ಪಗಳ ವಚನಗಳೆಂದು ತಿಳಿಯಬೇಕು ರಾಗದ್ವೇಷದಿಂದ ಕೂಡಿಯೂ, ಕಾರಣಗಳಿಂದ ಕೂಡಿಯೂ ಇರುವ ವಾಕ್ಯವು ಪುರುಷವಾಕ್ಯವೆಂದೂ ತಿಳಿಯಬೇಕು

೧೦–೧೧ ಋಗ್ಯಜುಸ್ಸಾಮರೂಪಗಳಾದ ಎಲ್ಲಾ ಮಂತ್ರಗಳೂ ಸ್ತುತಿ, ನಿಂದಾ, ಪ್ರಶಂಸಾ, ಆಕ್ರೋಶ, ಪ್ರೇಷ್ಯ, ಪ್ರಶ್ನ, ಅನುಜ್ಞಾ, ಆಖ್ಯಾನ, ಆಶಾಸ್ತಿ ಎಂಬ ವಿಷಯಭೇದಗಳಿಂದ ಒಂಭತ್ತು ವಿಧವಾಗುತ್ತವೆ ಈ ರೀತಿ ಎಲ್ಲಾ ವಾಕ್ಯಗಳ ಲಕ್ಷಣಗಳನ್ನೂ ನಿನಗೆ ಹೇಳಿದ್ದಾಯಿತು.

೧೨–೧೫ ಪೌರುಷ ವಾಕ್ಯದಲ್ಲಿ ಇಲ್ಲಿ ನಾನು ಹೇಳಿರುವ ಗುಣಗಳೆಲ್ಲವೂ ಇದ್ದೇ ಇರುತ್ತವೆ ಮತ್ತೊಂದು ಕಡೆಗಳಲ್ಲಿ ಇರುವುದೇ ಇಲ್ಲವೆಂಬುದು ನಿಶ್ಚಯ.

ದೃಶ್ಯತೇ ಹಿ ಪುಮಾನ್ ಕಶ್ಚಿತ್ಕಶ್ಚಿಚ್ಛ್ರೇಷ್ಠತಮೋ ಧಿಯಾ ।
ತಸ್ಮಾತ್ತತ್ರೈವ ತಸ್ಯೋಕ್ತಾ ಬುದ್ಧಿಃ ಶ್ರೇಷ್ಠತಮಾ ನೃಪ ॥ ೧೩ ॥

ಏತನ್ಮಯೋಕ್ತಂ ಸುಪರೀಕ್ಷಣಂ ತೇ
ವಾಕ್ಯಸ್ಯ ಭೋ ವಾಕ್ಯವಿದಾಂ ವರಿಷ್ಠ ।
ವಿಚಕ್ಷಣೈರತ್ರ ಚ ರಾಗತಸ್ತು
ಜ್ಞೇಯಂ ತಥಾ ದ್ವೇಷಸಮಾಗಮಾಚ್ಚ ॥ ೧೪ ॥

ದಿವ್ಯೇನ ತುಲ್ಯಂ ಯದಿವಾರ್ಷವಾಕ್ಯಂ
ವಾಕ್ಯೇನ ತುಲ್ಯಂ ಯದಿವಾ ಪರೇಣ ।
ವಾಕ್ಯಂ ನರಾಣಾಂ ನೃಪ ರಾಗತಸ್ತು
ಜ್ಞೇಯಂ ಯಥಾ ದ್ವೇಷಸಮಾಗಮಾತ್ ॥ ೧೫ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ವಾಕ್ಯಪರೀಕ್ಷಾಧ್ಯಾಯೋ ನಾಮ
ಚತುರ್ಥೋಽಧ್ಯಾಯಃ

---

ಇಂತಹ ನರವಚನಗಳು ಹೊರತು ನಾನು ಹೇಳಿರುವ ಇತರ ವಚನಗಳೆಲ್ಲಾ ಅವುಗಳ ಆಯಾಯ ಸ್ವಭಾವವನ್ನು ಬಿಟ್ಟು ಇರುವುದೇ ಇಲ್ಲ ಲೋಕದಲ್ಲಿಯೂ ಸಹ ಬುದ್ಧಿಯಿಂದ ಉತ್ಕೃಷ್ಟನಾದ ಒಬ್ಬೊಬ್ಬ ಮನುಷ್ಯನನ್ನು ನಾವು ನೋಡುತ್ತಿದ್ದೇವೆ ಅಂತಹ ಶ್ರೇಷ್ಠವಾದ ಬುದ್ಧಿಯಲ್ಲಿ ಆ ಗುಣಗಳೆಲ್ಲವೂ ಇರುತ್ತವೆ ಎಂದೇ ಹೇಳ ಬಹುದಾಗಿದೆ ಎಲೈ ವಾಕ್ಯವಿಶಾರದನೇ, ವಾಕ್ಯಗಳ ಪರೀಕ್ಷೆ ಎಲ್ಲವನ್ನೂ ಈ ರೀತಿ ನಿನಗೆ ಹೇಳಿದ್ದಾಯಿತು ಬುದ್ಧಿವಂತರಾದವರು ಇಂತಹ ವಾಕ್ಯಗಳಲ್ಲಿ ರಾಗದ್ವೇಷಾದಿ ಸಂಬಂಧಗಳಿಂದ ಆಯಾಯ ವಕ್ತೃವಿಶೇಷವನ್ನು ನಿಶ್ಚಯಮಾಡಿಕೊಳ್ಳಬೇಕು ಕೆಲವು ಸಂದರ್ಭಗಳಲ್ಲಿ ಋಷಿವಾಕ್ಯವು ದಿವ್ಯವಾಕ್ಯಕ್ಕೆ ಸಮಾನವಾಗಿಯೂ ಇರ ಬಹುದು ಅಂತಹ ವಾಕ್ಯವೂ ಇತರ ವಾಕ್ಯಕ್ಕೆ ಸಮಾನವಾಗಿಯೂ ಇರಬಹುದು ಆದರೆ ನರರ ವಾಕ್ಯಗಳು ಮಾತ್ರ ರಾಗದ್ವೇಷಗಳ ಸಂಬಂಧದಿಂದಲೇ ತಿಳಿಯಲ್ಪಡ ತಕ್ಕವುಗಳು

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ ವಜ್ರ
ಸಂವಾದದಲ್ಲಿ ವಾಕ್ಯಪರೀಕ್ಷೆ ಎಂಬ ನಾಲ್ಕನೆಯ ಅಧ್ಯಾಯ
ಮುಗಿದಿದೆ

॥ ಓಂ ॥

॥ ಶ್ರೀ ಹಯಗ್ರೀವಾಯ ನಮಃ ॥

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### ॥ ಪಂಚಮೋಽಧ್ಯಾಯಃ ॥

**ಅಲ್ಪಾಕ್ಷರಮಸಂದಿಗ್ಧಂ ಸಾರವದ್ವಿಶ್ವತೋಮುಖಂ ।**
**ಅಸ್ತೋಭಮನವದ್ಯಂ ಚ ಸೂತ್ರಂ ಸೂತ್ರವಿದೋ ವಿದುಃ ॥ ೧ ॥**

**ಉತ್ಸರ್ಗೇಣಾಪವಾದೇನ ದ್ವಿವಿಧಂ ತತ್ಪ್ರಕೀರ್ತಿತಂ ।**
**ಸೂತ್ರಂ ವ್ಯುದಾಸಶ್ಚ ತಥಾ ತಥೋದಾಹರಣಂ ನೃಪ ॥ ೨ ॥**

**ಪ್ರತ್ಯುದಾಹರಣಂ ಚೈವ ಚತುರಂಗಂ ಪ್ರಕೀರ್ತಿತಂ ।**
**ವಾಕ್ಯಂ ಚೈವಾರ್ಥವಾಕ್ಯಾರ್ಥಂ ಪದಾರ್ಥಃ ಪದಮೇವ ಚ ॥ ೩ ॥**

---

### ಐದನೆಯ ಅಧ್ಯಾಯವು.

೧-೨ ಅಲ್ಪ ಸಂಖ್ಯಾಕವಾದ ಅಕ್ಷರಗಳಿಂದ ಕೂಡಿಯೂ ಮುಖ್ಯವಾದ ಅರ್ಥಕ್ಕ ಬೋಧಕವಾಗಿಯೂ ಅನೇಕ ಮುಖ್ಯವಾದ ಅರ್ಥ ಬೋಧಕ್ಕೆ ತಕ್ಕಂತೆಯೂ ಸ್ತೋಭಾಕ್ಷರವಿಲ್ಲದೆಯೂ, ಇರುವ ನಿರ್ದುಷ್ಟವಾದ ವರ್ಣಸಮುದಾಯವನ್ನು ಸೂತ್ರಜ್ಞರು ಸೂತ್ರವೆಂದು ಕರೆಯುತ್ತಾರೆ ಆ ಸೂತ್ರವೂ ಸಹ ಉತ್ಸರ್ಗ ಅಪವಾದ ಎಂದು ಎರಡು ವಿಧವಾಗಿರುತ್ತದೆ. ಅಂತಹ ಸೂತ್ರಕ್ಕೆ ಸಂಗ್ರಹವಾಗಿ ಅರ್ಥ ನಿರೂಪಣೆ, ನಿಷೇಧ, ಉದಾಹರಣೆ, ಪ್ರತ್ಯುದಾಹರಣೆ ಎಂಬ ನಾಲ್ಕು ಅಂಗಗಳು ಪ್ರಸಿದ್ಧವಾಗಿವೆ

೩-೪ ವಾಕ್ಯವೂ ಸಹ ಅರ್ಥ, ವಾಕ್ಯಾರ್ಥ, ಪದಾರ್ಥ, ಪದ ಈ ರೀತಿಯಾಗಿ ನಾಲ್ಕು ಅವಯವಗಳುಳ್ಳದ್ದೆಂದು ಹೇಳಲ್ಪಟ್ಟಿದೆ ಹಾಗೆಯೇ ಪ್ರತಿಜ್ಞಾ, ಹೇತು,

**ಚತುರಂಗಮಿದಂ ಚೇತಿ ತಥೈವಾನ್ಯತ್ತ್ರಿಕೀರ್ತಿತಂ ।**
**ಪ್ರತಿಜ್ಞಾಹೇತು ದೃಷ್ಟಾನ್ತಾವುಪಸಂಹಾರ ಏವ ಚ ॥ ೪ ॥**

**ತಥಾ ನಿಗಮನಂ ಚೈವ ಪಂಚಾವಯವಮಿಷ್ಯತೇ ।**
**ಆರಂಭೋಽಥಾಪಿ ಸಂಬಂಧಃ ಸೂತ್ರಾರ್ಥಸ್ತದ್ವಿಶೇಷಣಂ ॥ ೫ ॥**

**ಚೋದನಾ ಪರಿಹಾರಶ್ಚ ವ್ಯಾಖ್ಯಾ ಸೂತ್ರಸ್ಯ ಷಡ್ವಿಧಾ ।**
**ಸೂತ್ರೇಷ್ವೇವ ಹಿ ತತ್ಸರ್ವಂ ಯದ್ವೃತ್ತಂ ಸಮುದಾಹೃತಂ ॥ ೬ ॥**

**ವಿಸ್ತರೋಕ್ತಂ ಮತಿಂ ಹನ್ತಿ ಸಮಾಸೋಕ್ತಂ ನ ಗೃಹ್ಯತೇ ।**
**ಸಮಾಸವಿಸ್ತರೌ ಹಿತ್ವಾ ವಕ್ತವ್ಯಂ ಯದ್ವಿವಕ್ಷಿತಂ ॥ ೭ ॥**

**ಅಪಾರ್ಥಂ ವ್ಯಾಹತಂ ಚೈವ ಪುನರುಕ್ತಂ ತಥೈವ ಚ ।**
**ತಥಾ ವಿಭಿನ್ನಸಂಸ್ಥಾನಂ ಯುಕ್ತಿಹೀನಂ ವಿವರ್ಜಯೇತ್ ॥ ೮ ॥**

---

ದೃಷ್ಟಾಂತ, ಉಪಸಂಹಾರ, ನಿಗಮನಗಳೆಂಬ ಐದು ಅವಯವಗಳುಳ್ಳದುದರಿಂದ ಪಂಚಾವಯವವೆಂದು ಹೇಳಲ್ಪಡುತ್ತದೆ

೫–೭ ಸೂತ್ರಗಳ ವ್ಯಾಖ್ಯಾನವೂ ಕೂಡ ಆರಂಭ, ಸಂಬಂಧ, ಸೂತ್ರಾರ್ಥ, ವಿಶೇಷಣ, ಪ್ರಶ್ನೆ, ಪರಿಹಾರ ಎಂದು ಆರು ವಿಧವಾಗಿರುತ್ತದೆ ಈ ಕ್ರಮವೆಲ್ಲವೂ ಸೂತ್ರಗಳಲ್ಲಿಯೇ ತಿಳಿಯಬರುತ್ತದೆ ಇಂತಹ ವ್ಯಾಖ್ಯಾನವನ್ನು ವಿಸ್ತಾರವಾಗಿ ಮಾಡಿದಲ್ಲಿ ಅದು ಬಹುಮಟ್ಟಿಗೂ ಬುದ್ಧಿಗೆ ಕ್ಲೇಶವನ್ನುಂಟುಮಾಡುತ್ತದೆ ಬಹಳ ಸಂಗ್ರಹವಾಗಿದ್ದಲ್ಲಿ ಬುದ್ಧಿಯು ಅದನ್ನು ಗ್ರಹಿಸುವುದೇ ಇಲ್ಲ ಆದುದರಿಂದ ಬಹಳ ವಿಸ್ತಾರ ಕ್ರಮವನ್ನೂ ಬಹಳ ಸಂಕೋಚ ಕ್ರಮವನ್ನೂ ಬಿಟ್ಟು ಮಧ್ಯಸ್ಥ ಕ್ರಮವನ್ನು ಆಶ್ರಯಿಸಿ ವಿವಕ್ಷಿತಾರ್ಥವನ್ನು ಉಪಪಾದಿಸಬೇಕು

೮–೯, ಅರ್ಥರಹಿತವಾಗಿಯೂ, ಪರಸ್ಪರ ವಿರುದ್ಧವಾಗಿಯೂ, ಪುನರುಕ್ತವಾಗಿಯೂ, ಪ್ರಕರಣದ ಔಚಿತ್ಯವಿಲ್ಲದೆ ಬೇರೆ ಸ್ಥಳದಲ್ಲಿ ಸೇರಿರುವದೂ, ಯುಕ್ತಿರಹಿತವಾದುದೂ ಇಂತಹ ಸೂತ್ರಗಳು ತ್ಯಾಜ್ಯಗಳು ಸೂತ್ರಗಳಲ್ಲಿ ಸರಿಯಾದ

ಕ್ರಮಭೇದೋ ವಿಭಕ್ತಿಶ್ಚ ಗುರುಸೂತ್ರಂ ತಥೈವ ಚ ।
ಅಭಿಧಾನಸ್ಯ ಚಾನ್ಯತ್ವಂ ನೈತಾನಿ ಸ್ಯುರಕಾರಣಾತ್ ॥ ೯ ॥

ಸರ್ವಂ ಕೃತ್ವಾ ಪದಚ್ಛೇದಂ ಸಮಾಸಂ ತದನಂತರಂ ।
ಸಮಾಸೇ ತು ಕೃತೇ ಪಶ್ಚಾದರ್ಥಂ ಬ್ರೂಯಾದ್ವಿಚಕ್ಷಣಃ ॥ ೧೦ ॥

ಸೂತ್ರಾರ್ಥಶ್ಚ ಪದಾರ್ಥಶ್ಚ ಹೇತುಶ್ಚ ಕ್ರಮಶಸ್ತಥಾ ।
ನಿರುಕ್ತಮಥ ವಿನ್ಯಾಸೋ ವ್ಯಾಖ್ಯಾಯೋಗಸ್ಯ ಷಡ್ವಿಧಾ ॥ ೧೧ ॥

ಪ್ರತ್ಯಕ್ಷಮನುಮಾನಂ ಚ ತಥಾಪ್ತವಚನಂ ಭವೇತ್ ।
ತ್ರಿಭಿಃ ಪ್ರಮಾಣೈಃ ಸಂಯುಕ್ತೈಃ ತಂತ್ರೀಪ್ರಾಮಾಣ್ಯಮರ್ಹತಿ ॥ ೧೨ ॥

ಪ್ರತ್ಯಕ್ಷಾಭಾಸಮುಪ್ಯುಕ್ತಂ ತಥಾ ವೈ ಮೃಗತೃಷ್ಣಿಕಾ ।
ಆಭಾಸಮನುಮಾನಸ್ಯ ಬಾಷ್ಪರೇಣುಚಯೌ ತಥಾ ॥ ೧೩ ॥

---

ಯಾವುದೊಂದು ಕಾರಣವೂ ಇಲ್ಲದೆ ಆರಂಭದ ಕ್ರಮವನ್ನು ಬದಲಾಯಿಸುವುದು, ಬೇರ್ಪಡಿಸುವುದು, ದೀರ್ಘವಾಗಿ ರಚಿಸುವುದು ಬೇರೆ ಪದದಿಂದ ನಿರ್ಮಿಸುವುದು ಇವು ಇರಕೂಡದು

೧೦–೧೧ ಸೂತ್ರಗಳಲ್ಲಿ ಮೊದಲು ಎಲ್ಲಾ ಪದಗಳನ್ನೂ ಬೇರೆಬೇರೆಯಾಗಿ ತೋರ್ಪಡಿಸಿ ಅನಂತರ ಸಮಾಸವನ್ನು ವ್ಯಾಖ್ಯಾನಮಾಡಬೇಕು ಅನಂತರ ಅವುಗಳಿಗೆ ಅರ್ಥವನ್ನು ವಿವರಿಸಬೇಕು ಒಂದೇ ಆನುಪೂರ್ವಿಯಲ್ಲಿರುವ ಸೂತ್ರಕ್ಕೆ ಮೊದಲು ಸೂತ್ರಾರ್ಥವನ್ನೂ ಅನಂತರ ಅದಕ್ಕೆ ಉಪಪಾದಕವಾದ ಪದಾರ್ಥವನ್ನೂ ಅನಂತರ ಕಾರಣವನ್ನೂ ಕ್ರಮವಾಗಿ ಹೇಳಿ ಅನಂತರ ವ್ಯಾಕರಣ ವಿಷಯಗಳನ್ನೂ ಸೂತ್ರದ ವಿನ್ಯಾಸವನ್ನೂ ರಚಿಸಬೇಕು ಈ ರೀತಿ ಒಂದೇ ಆನುಪೂರ್ವಿಯುಳ್ಳ ಸೂತ್ರದ ವ್ಯಾಖ್ಯಾನ ಕ್ರಮವು ಆರು ವಿಧವಾಗಿದೆ

೧೨–೧೩ ಯಾವ ಶಾಸ್ತ್ರಜ್ಞನು ಪ್ರತ್ಯಕ್ಷ, ಅನುಮಾನ, ಆಪ್ತವಚನಗಳೆಂಬ ಮೂರು ಪ್ರಮಾಣಗಳನ್ನು ಆಶ್ರಯಿಸಿ ಅಂತಹ ಪ್ರಮಾಣಗಳಿಂದಲೇ ಶಾಸ್ತ್ರಾರ್ಥವನ್ನು ನಿರ್ಧರಿಸುವನೋ ಅಂತಹ ಶಾಸ್ತ್ರಾರ್ಥವೇ ಪ್ರಮಾಣವೆಂದು ಹೇಳಲ್ಪಡುತ್ತದೆ ಅಂತಹ ಪ್ರತಕ್ಷಪ್ರಮಾಣದಲ್ಲಿಯೂ, ದುಷ್ಟವಾದ ಪ್ರಮಾಣವೂ ಉಂಟು. ಮೃಗ

**ಧೂಮುಶಂಕಾಂ ಜನಯುತೋ ನ ಚ ವಹ್ನ್ಯುಪಲಬ್ಧಯೇ ।**
**ಆಪ್ತತ್ವಂ ದರ್ಶಯಿತ್ವಾ ತು ಯುದನಾಪ್ತೇನ ಭಾಷಿತಂ　　॥ ೧೪ ॥**

**ತದಾಪ್ತವಚನಾಭಾಸಂ ವದಂತಿ ನೃಪಸತ್ತಮ ।**
**ರಾಗದ್ವೇಷವಿನಿರ್ಮುಕ್ತಃ ಆಪ್ತ ಇತ್ಯಭಿಧೀಯತೇ　　॥ ೧೫ ॥**

**ನೈರುಕ್ತಂ ದ್ವಿವಿಧಂ ವಿದ್ಧಿ ಸಿದ್ಧಮೌತ್ಪತ್ತಿಕಂ ತಥಾ ।**
**ನಿರ್ವಕ್ತವ್ಯಂ ತು ತತ್ಸಿದ್ಧಮರ್ಥಸಿದ್ಧಿಸ್ತು ಸರ್ವದಾ　　॥ ೧೬ ॥**

**ತತ್ರ ತ್ವೌತ್ಪತ್ತಿಕಂ ಸರ್ವಂ ಗೌರಶ್ವಃ ಪುರುಷೋ ಯಥಾ ।**
**ದಶಧಾತುಗಣೋದ್ದಿಷ್ಟಂ ತದ್ವಕ್ಷ್ಯಾಮಿ ಯಥಾಗತಂ　　॥ ೧೭ ॥**

---

ತೃಷ್ಣಿಕಾ (ಬಿಸಿಲುಕುದುರೆ) ವಿಷಯಕವಾದ ಪ್ರತ್ಯಕ್ಷವು ಸತ್ಯಾರ್ಥಶೂನ್ಯವಾದುದರಿಂದ ಪ್ರತ್ಯಕ್ಷಾಭಾಸವೆಂದು ಹೇಳಲ್ಪಡುತ್ತದೆ ಇದೇ ರೀತಿಯಾಗಿ ಅನುಮಾನಾಭಾಸವೂ ಉಂಟು ಬಾಷ್ಪ (ಹಬೆ) ಮತ್ತು ಧೂಳಿನ ಸಮುದಾಯ ಇವೂ ಹೊಗೆಯಂತೆ ತೋರುತ್ತವೆ ಆದರೆ ಇವುಗಳಿಂದ ವಹ್ನಿಯ ಅನುಮಿತಿಯು ಸಿದ್ಧಿಸುವುದಿಲ್ಲ. ಒಂದುವೇಳೆ ಭ್ರಮದಿಂದ ಅನುಮಿತಿಯುಂಟಾದರೂ ಆ ಅನುಮಿತಿಯು ಯಥಾರ್ಥವಾದ ವಹ್ನಿಲಾಭಕ್ಕೆ ಸಾಧಕವಾಗುವುದಿಲ್ಲ

೧೪–೧೬ ಯಾವನು ಮೊದಲು ಸತ್ಯವಾದಿತ್ವವನ್ನು ತೋರ್ಪಡಿಸಿ ಅನಂತರ ಅನಾಪ್ತನಾಗಿ ಅನೃತವನ್ನು ಹೇಳುತ್ತಾನೆಯೋ ಅಂತಹ ವಚನವೇ ಅರ್ಥದಲ್ಲಿ ಸತ್ಯತೆ ಇರುವುದಿಲ್ಲವಾದುದರಿಂದ ಆಪ್ತವಚನಾಭಾಸವೆಂದು ಕರೆಯಲ್ಪಡುತ್ತದೆ ಆಪ್ತನೆಂದರೆ ಮತ್ತೊಬ್ಬರನ್ನು ವಂಚಿಸುವುದಕ್ಕಾಗಿ ರಾಗದ್ವೇಷದಿಂದ ಮಾತನಾಡದೇ ಯಥಾರ್ಥವನ್ನೇ ಹೇಳತಕ್ಕವನು ನೈರುಕ್ತವೆಂಬುದು ಎರಡುವಿಧ ಸಿದ್ಧ ಮತ್ತು ಔತ್ಪತ್ತಿಕ, ಈ ಎರಡರಲ್ಲಿ ಯಾವಾಗಲೂ ಪ್ರತೀತಿಗೆ ಕಾರಣವಾದುದು ಸಿದ್ಧಶಬ್ದವೆನಿಸುತ್ತದೆ

೧೭–೧೯ ಇವುಗಳಲ್ಲಿ ಗೌಃ, ಅಶ್ವಃ, ಪುರುಷಃ ಇತ್ಯಾದಿ ಶಬ್ದಗಳು ಔತ್ಪತ್ತಿಕವೆಂದು ಹೇಳಲ್ಪಡುತ್ತವೆ. (ನಿತ್ಯವಾದ ಶಬ್ದಾರ್ಥ ಸಂಬಂಧವುಳ್ಳವುಗಳು) ಧಾತುಗಣಗಳಲ್ಲಿ ಹೇಳಿರುವ ಶಬ್ದಗಳು ಹತ್ತು ವಿಧವಾಗಿವೆ ಅವೆಲ್ಲವನ್ನೂ ಆಯಾಯ ಸ್ಥಳದಲ್ಲಿ ಹೇಳುತ್ತೇನೆ ಗೌಣ, ನೈಮಿತ್ತಿಕ, ಭಾಕ್ತ, ಸಂವಾದ, ಕಾರ್ಶಕ, ಉಪ

**ಗೌಣೋ ನೈಮಿತ್ತಿಕೋ ಭಾಕ್ತಃ ಸಂವಾದಃ ಕಾರ್ತಕಸ್ತಥಾ ।**
**ಉಪಚಾರಶ್ಚ ಸಂಬಂಧಃ ಗೌಣಕೋ। ಯೌಗಿಕಸ್ತಥಾ ॥ ೧೮ ॥**

**ಗುಣಾತ್ತು ಗೌಣಂ ಪಶ್ಯಾಮೋ ಮಹದಿತ್ಯೇವಮಾದಯಃ ।**
**ನಿಮಿತ್ತತಸ್ತು ನೈಮಿತ್ತಂ ಖಂಡಮುಂಡಾದಿಕಂ ಯಥಾ ॥ ೧೯ ॥**

**ಭಕ್ತ್ಯಾ ಭಾಕ್ತಂ ನೃಸಿಂಹಸ್ಯಾದಮಾತರಿ ಚ ಮಾತೃವತ್ ।**
**ಸಮಂ ವದಂತಿ ಯಸ್ಮಿಂಶ್ಚ ಸಂವಾದಶ್ಚಿತ್ವರೀ ಯಥಾ ॥ ೨೦ ॥**

**ಕಾರ್ತಕಃ ಸ್ಯಾತ್ತು ಕೃತಕೋ ದೇವದತ್ತಾದಿಕೋ ಯಥಾ ।**
**ಉಪಚಾರಸ್ತೂಪಚಾರಾತ್ತೈಲಪಾಶಂ ತುಲಾ ಯಥಾ ॥ ೨೧ ॥**

---

ಚಾರ, ಸಂಬಂಧ, ಗೌಣಿಕ, ಯೌಗಿಕ, ಎಂದೂ ಮೊದಲು ಹೇಳಿರುವ ಔತ್ಪತ್ತಿಕ ವೆಂಬ ಭೇದದೊಡನೆ ಹತ್ತು ವಿಧವೆಂದು ಹೇಳಲ್ಪಟ್ಟಿದೆ ಅವುಗಳಲ್ಲಿ ಗುಣಸಂಬಂಧ ದಿಂದ ನಿಷ್ಪನ್ನವಾಗುವ ಶಬ್ದಗಳು ಗೌಣವೆಂದು ತಿಳಿಯುತ್ತೇವೆ ಮಹತ್ ಇತ್ಯಾದಿ ಶಬ್ದಗಳು ಇದಕ್ಕ ಉದಾಹರಣೆ ಯಾವುದಾದರೊಂದು ನಿಮಿತ್ತದಿಂದ ಪ್ರಯೋಗಕ್ಕ ಅರ್ಹವಾದ ಶಬ್ದಗಳು ನೈಮಿತ್ತವೆಂದು ಹೇಳಲ್ಪಡುತ್ತವೆ ಖಂಡಮುಂಡಾದಿ ಶಬ್ದಗಳು ಇದಕ್ಕ ಉದಾಹರಣೆ—

೨೦–೨೧ ಭಕ್ತಿ ಎಂಬ ಲಕ್ಷಣಾಭೇದದಿಂದ ಉಂಟಾದ ಶಬ್ದವು ಭಾಕ್ತವೆನಿಸು ವುದು ತಾಯಿಯಾಗದಿರುವವಳಲ್ಲಿ ತಾಯಿ ಎಂದು ವ್ಯವಹರಿಸುವಂತೆ, ನೃಸಿಂಹನಾಗ ದಿರುವವನಲ್ಲಿ ನೃಸಿಂಹನೆಂಬ ಶಬ್ದವೇ ಉದಾಹರಣ ವ್ಯವಹಾರದಲ್ಲಿ ಸಾಮ್ಯ ಹೊಂದಿರುವ ಚಿತ್ವರೀ ಇತ್ಯಾದಿ ಶಬ್ದಗಳು ಸಂವಾದವೆಂಬ ಭೇದಕ್ಕ ಸೇರುತ್ತವೆ ಕೃತ್ರಿಮ ಸಂಕೇತದಿಂದ ವ್ಯವಹರಿಸಲ್ಪಡುವ ದೇವದತ್ತಾದಿ ಶಬ್ದಗಳು ಕಾರ್ತಕವೆಂದು ಹೇಳಲ್ಪಡುತ್ತವೆ ಉಪಚಾರದಿಂದ ವ್ಯವಹರಿಸಲ್ಪಡುವ ತೈಲ, ಪಾಶ, ತುಲಾ ಇತ್ಯಾದಿ ಶಬ್ದಗಳು ಉಪಚಾರ ಶಬ್ದಗಳೆನಿಸುತ್ತವೆ ವಸ್ತುಸಂಬಂಧದಿಂದ ವ್ಯವಹರಿಸ ಲ್ಪಡುವ ಛತ್ರೀ, ಮೀಮಾಂಸಕ ಇತ್ಯಾದಿ ಶಬ್ದಗಳು ಸಂಬಂಧ ಶಬ್ದಗಳೆನಿಸುತ್ತವೆ

1 ಮುಂದಿನ ಉದಾಹರಣ ದೃಷ್ಟಿಯಿಂದ ಇಲ್ಲಿ ಸಂಯೋಗೋ ಯೌಗಿಕಸ್ತಥಾ ಎಂದು ಪಾಠವಿರಬೇಕೆಂದು ತೋರುತ್ತದೆ

**ಸಂಬಂಧತಸ್ತು ಸಂಬಂಧಃ ಛತ್ರೀ ಮೀಮಾಂಸಕೋ ಯಥಾ ।**
**ಸಂಯೋಗಾದಪಿ ಸಂಯೋಗಃ ಕ್ರಿಯಾಯಾಃ ಕ್ರಯಿಕಃ ಸ್ಮೃತಃ ॥ ೨೨ ॥**

**ಪಟಕೃಲ್ಲಗುಡಚ್ಛೇದ್ಯೋ ಜ್ಞೇಯಃ ಶಾಕಟಿಕಸ್ತಥಾ ।**
**ಏವಂ ಪರೇಷಾಂ ಚಪರಾ ಸ್ಯಾನ್ನೈಗಮನಿಚಣ್ಟಕಂ ॥ ೨೩ ॥**

**ಸುಖಾರ್ಥೇ ನ ಪ್ರಸಿದ್ಧಸ್ತ್ವೇತತ್ಸಾಧನಾನಾಂ ವಿಧಿಂ ಶೃಣು ।**
**ಯದ್ವಿಪನ್ನಂತು ದೃಶ್ಯೇತ ತತ್ಸಾಧ್ಯಂ ಸಾಧನೈರಿವೈಃ ॥ ೨೪ ॥**

**ಆತ್ಮೇಂದ್ರಿಯಮನೋರ್ಥಾನಾಂ ಸಂಯೋಗ ಉಪದಿಶ್ಯತೇ ।**
**ಜ್ಞಾನದೇಶಾದಿಸಂವಿಷ್ಟಂ ಪ್ರತ್ಯಕ್ಷಮಿತಿ ತದ್ಭವೇತ್ ॥ ೨೫ ॥**

**ಬುದ್ಧ್ಯಾ ಶರೀರಿಭೂತಾತ್ಮಾ ಯಶ್ಚ ಯುಕ್ತ್ಯಾನುಮೀಯತೇ ।**
**ಸೋಽಗ್ನಿರ್ಧೂಮಾದ್ಯಥಾ ವಿದ್ಯಾದನುಮಾನಂ ತದಿಷ್ಯತೇ ॥ ೨೬ ॥**

೨೨-೨೩ ಸಂಯೋಗರೂಪವಾದ ಸಂಬಂಧದಿಂದ ಸಂಯೋಗ ಶಬ್ದವು ನಿಷ್ಪನ್ನವಾಗುತ್ತದೆ ಕ್ರಿಯಾಸಂಬಂಧದಿಂದ ಉಂಟಾಗುವ ಕ್ರಯಿತಃ ಎಂಬ ಶಬ್ದವು ಇದಕ್ಕೆ ಉದಾಹರಣೆ ಪಟಕೃತ್, ಲಗುಡಚ್ಛೇದ್ಯಃ, ಶಾಕಟಿಕಃ ಇವೆಲ್ಲವೂ ಯೌಗಿಕ ಶಬ್ದಗಳಾಗುತ್ತವೆ- ಹೀಗೆಯೇ ಇತರ ಎಲ್ಲಾ ಶಬ್ದಗಳಿಗೂ ಆಯಾಯ ನಿಯಮ ದಿಂದ ಸ್ವರೂಪ ಸಂಗ್ರಹವನ್ನು ತಿಳಿಯಬೇಕು ಅನಾಯಾಸದಿಂದ ಅರ್ಥವನ್ನು ತಿಳಿಯಲು ಸಾಧ್ಯವಿಲ್ಲದ ಅಪ್ರಸಿದ್ಧ ಶಬ್ದಗಳನ್ನು ಆಯಾಯ ಶಾಸ್ತ್ರಸಂಕೇತದಿಂದ ತಿಳಿಯಬೇಕು ಇನ್ನು ಮುಂದ ಅರ್ಥಜ್ಞಾನಕ್ಕೆ ಸಾಧನಗಳಾದ ಪ್ರತ್ಯಕ್ಷಾದಿ ಪ್ರಮಾಣಗಳ ಸ್ವರೂಪವನ್ನು ಹೇಳುತ್ತೇನೆ ಕೇಳು

೨೪-೨೬ ಹಿಂದ ತಿಳಿಯದಿದ್ದ ಯಾವ ವಸ್ತುವನ್ನು ಈ ಸಾಧನಗಳಿಂದ ತಿಳಿಯುತ್ತೇವೆಯೋ ಅಂತಹ ವಸ್ತು ದರ್ಶನವೇ ಸಾಧ್ಯವೆನಿಸುತ್ತದೆ ಯಾವ ವಸ್ತುವಿನ ವಿಷಯದಲ್ಲಿ ಆತ್ಮ. ಇಂದ್ರಿಯ, ಮನಸ್ಸುಗಳಿಗೆ ಸಂಯೋಗ ಉಂಟಾಗು ತ್ತದೆಯೋ, ಜ್ಞಾನದ ವಿಷಯದಲ್ಲಿಯಾಗಲಿ, ಒಂದು ಪ್ರದೇಶದ ವಿಷಯದಲ್ಲಿಯಾಗಲಿ ಉಂಟಾಗುವ ಆ ಸಂಬಂಧವೇ ಪ್ರತ್ಯಕ್ಷವೆನಿಸುತ್ತದೆ ಬುದ್ಧಿಯಿಂದ ದೇಹಾತಿರಿಕ್ತ ನಾದ ಆತ್ಮನನ್ನು ಹೇತು ನಿರ್ದೇಶಪೂರ್ವಕವಾಗಿ ಅನುಮಾನದಿಂದ ತಿಳಿಯುವ ಪ್ರಸಂಗದಲ್ಲಿ ಅಗ್ನಿಯನ್ನು ಧೂಮದಿಂದ ತಿಳಿಯುವಂತೆ ಉಪಯೋಗಕರವಾದ

ವೇದವಿದ್ಯಾವಿರುದ್ಧಂ ಯತ್ಸಾ ಸ್ಮೃತಿಃ ಶಿಷ್ಟಸಮ್ಮತಾ ।
ಅಪ್ರತ್ಯಕ್ಷಫಲಂ ವಿದ್ಯಾತ್ಸಾಧನಂ ಶಾಸ್ತ್ರಸಂಜ್ಞಿತಂ ॥ ೨೭ ॥

ದ್ವಯೋಃ ಸದೃಶಯೋರೇಕಂ ನಿರ್ದಿಷ್ಟಂ ಸಾಧಯೇತ್ಪರಂ ।
ಗವಯಾದಿವ ಗೋಃ ಸಿದ್ಧಿಃ ಉಪಮಾನಂ ತದಿಷ್ಯತೇ ॥ ೨೮ ॥

ಸಾಧ್ಯೋಽರ್ಥಶ್ಚೇದತತ್ಕಾಯೋರ್ವಾಕ್ಯೇ ಯಸ್ಮಿನ್ ಪ್ರಕಲ್ಪ್ಯತೇ ।
ಸಾಽರ್ಥಾಪತ್ತಿರ್ದಿವಾ ಭುಙ್ಕ್ತೇ ದೇವರಾತ ಇತೀತಿ ಯತ್ ॥ ೨೯ ॥

ನಿಪಾತನಾದ್ಯೋಗವಿಭಾಗದರ್ಶನಾ-
ದ್ಗುರೂಪದೇಶಾದನುವಾರ್ತಿಕಾದಪಿ ।

ಪ್ರಮಾಣವು ಅನುಮಾನವೆನಿಸುತ್ತದೆ ವೇದ ವಿದ್ಯೆಗೆ ವಿರುದ್ಧವಾಗದಯೂ, ಶಿಷ್ಟ ಸಮ್ಮತವಾಗಿಯೂ ಇರುವ ಶಬ್ದಪ್ರಮಾಣವು ಸ್ಮೃತಿ ಎನಿಸುತ್ತದೆ ಶಾಸ್ತ್ರವೆಂಬ ಶಬ್ದಪ್ರಮಾಣವು ಪ್ರತ್ಯಕ್ಷ ಪ್ರಮಾಣದಿಂದ ತಿಳಿಯಲಸಾಧ್ಯವಾದ ಅರ್ಥ ಜ್ಞಾನವನ್ನೇ ಫಲವನ್ನಾಗಿ ಹೊಂದುತ್ತದೆ

೨೮-೩೦ ಗೋಸದೃಶೋಗವಯಃ ಎಂದು ಸಾದೃಶ್ಯ ಸಂಬಂಧದಿಂದ ನಿರ್ದೇಶಿಸಲ್ಪಡುವ ಪ್ರಸಂಗದಲ್ಲಿ ಗೋಸಾದೃಶ್ಯ ಜ್ಞಾನದಿಂದ ಗವಯದ ಸಿದ್ಧಿಯೇ ಉಪಮಾನವೆನಿಸುತ್ತದೆ ದೇವರಾತನು ರಾತ್ರಿಯಲ್ಲಿ ಊಟಮಾಡುವುದಿಲ್ಲ ಆದರೂ ಪುಷ್ಟಿಯಾಗಿದ್ದಾನೆ, ಎಂಬ ವಾಕ್ಯಪ್ರಯೋಗದಿಂದ ಪುಷ್ಟಿ ಎಂಬ ಸಾಧ್ಯಾಂಶವು ಭೋಜನವಿಲ್ಲದಿದ್ದರ ಉಂಟಾಗುವುದಿಲ್ಲವಾಗಿ ಅದನ್ನು ಸಾಧಿಸಲು ರಾತ್ರಿಯಲ್ಲಿ ಭೋಜನವಿಲ್ಲವನು ಹಗಲಿನಲ್ಲಿ ಭೋಜನಮಾಡುತ್ತಾನೆಂಬ ಅರ್ಥವನ್ನು ಕಲ್ಪಿಸಬೇಕಾಗುತ್ತದೆ ಇದು ಅರ್ಥಾಪತ್ತಿ ಪ್ರಮಾಣವೆನಿಸುತ್ತದೆ ಶಬ್ದಪ್ರಮಾಣವೆಂದು ಹೇಳಲಾಗುವ ಶಬ್ದಗಳನ್ನು ಸಾಧಿಸುವ ಸಂಧರ್ಭದಲ್ಲಿ ನಿಪಾತ, ಯೋಗವಿಭಾಗ. ಗುರೂಪದೇಶ, ವಾರ್ತಿಕ, ಆ ಶಾಸ್ತ್ರದ ಸಂಪ್ರದಾಯ, ಇತರ ಶಾಸ್ತ್ರದ

ಸ್ವತಂತ್ರಸಿದ್ಧೇಃ ಪರತಂತ್ರದರ್ಶನಾ-
ತ್ಪ್ರಸಾಧಯೋಲ್ಲಕ್ಷಣತಶ್ಚ ಷಡ್ವಿಧಂ ॥ ೩೦ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ತಂತ್ರಗುಣದೋಷವರ್ಣನೋ ನಾಮ
ಪಂಚಮೋಽಧ್ಯಾಯಃ

ಪರೀಕ್ಷಣ ಈ ಆರು ಮಾರ್ಗಗಳನ್ನು ಆಶ್ರಯಿಸಿ ಆಯಾಯ ಲಕ್ಷಣಕ್ಕೆ ತಕ್ಕಂತೆ ಆಯಾಯ ಶಬ್ದಗಳನ್ನು ಸಾಧಿಸಬೇಕು

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ತೃತೀಯ ಖಂಡದಲ್ಲಿ ಮಾರ್ಕಂಡೇಯ
ವಜ್ರ ಸಂವಾದದಲ್ಲಿ ತಂತ್ರಗುಣದೋಷವರ್ಣನವೆಂಬ ಐದನೆಯ
ಅಧ್ಯಾಯವು ಮುಗಿದಿದೆ.



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಷಷ್ಠೋಽಧ್ಯಾಯಃ ||

**|| ಮಾರ್ಕಂಡೇಯ ಉವಾಚ ||**

**ಗದ್ಯ || ಅಥ ತಂತ್ರಯುಕ್ತಯೋ ಭವನ್ತಿ, ಅಧಿಕರಣಂ, ಯೋಗಃ, ಪದಾರ್ಥಃ, ಹೇತ್ವರ್ಥಃ, ಉದ್ದೇಶೋ, ನಿರ್ದೇಶಃ, ಪ್ರದೇಶೋ-ತಿದೇಶಃ, ಅಪವರ್ಗೋ, ವಾಕ್ಯವಿಶೇಷೋಽರ್ಥಾಪತ್ತಿಃ, ಪ್ರಸಂಗಃ, ಏಕಾಂತೋಽನೈಕಾಂತಃ, ಪೂರ್ವಪಕ್ಷೋ, ನಿರ್ಣಯೋ, ವಿಧಾನಪ-ರ್ಯಾಯೋಽತಿಕ್ರಾಂತಾವೇಕ್ಷಣಂ ಸಂಶಯೋ ವ್ಯಾಖ್ಯಾನಂ ಅನು ಮತಿಃ ಸ್ವಸಂಜ್ಞಾನಿರ್ವಚನಂ, ದೃಷ್ಟಾಂತೋ, ನಿಯೋಗೋ ವಿಕಲ್ಪಃ ಸಮುಚ್ಚಯೋಽರ್ಥ ಇತಿ ||**

**ಆರನೆಯ ಅಧ್ಯಾಯವು.**

ಮಾರ್ಕಂಡೇಯರು ಸಪ್ರಮಾಣವಾದ ಶಾಸ್ತ್ರಾರ್ಥವನ್ನು ರಚಿಸುವವನು ಆ ಗ್ರಂಥದಲ್ಲಿ ಉಪಪಾದಿಸಬಹುದಾದ ಅತ್ಯವಶ್ಯಕವಾದ ಕಲವು ವಿಷಯಗಳನ್ನು ತಂತ್ರ ಶುದ್ಧಿ ಎಂಬ ಈ ಅಧ್ಯಾಯದಲ್ಲಿ ನಿರೂಪಿಸುತ್ತಾರೆ ಅಧಿಕರಣ, ಯೋಗ, ಪದಾರ್ಥ, ಹೇತ್ವರ್ಥ ಉದ್ದೇಶ, ನಿರ್ದೇಶ, ಪ್ರದೇಶ, ಅತಿದೇಶ, ಅಪವರ್ಗ, ವಾಕ್ಯವಿಶೇಷ, ಅರ್ಥಾಪತ್ತಿ, ಪ್ರಸಂಗ, ಏಕಾಂತ, ಅನೈಕಾಂತ, ಪೂರ್ವಪಕ್ಷ, ನಿರ್ಣಯ, ವಿಧಾನ, ಪರ್ಯಾಯ, ಅತಿಕ್ರಾಂತಾವೇಕ್ಷಣ, ಸಂಶಯ, ವ್ಯಾಖ್ಯಾನ, ಅನುಮತಿ, ಸ್ವಸಂಜ್ಞಾನಿರ್ವಚನ, ದೃಷ್ಟಾಂತ, ನಿಯೋಗ, ವಿಕಲ್ಪ, ಸಮುಚ್ಚಯ ಈ ಅರ್ಥ ಗಳೆಲ್ಲವೂ, ಶಾಸ್ತ್ರಾರ್ಥನಿರೂಪಣಕ್ಕಾಗಿ ಉಪಯೋಗಿಸಲ್ಪಡುವ ತಂತ್ರಯುಕ್ತಿ ಗಳೆಂದು ಹೇಳಲ್ಪಡುತ್ತವೆ

**ತದಧಿಕರಣಂ ಯೇನ ವಾಕ್ಯಾರ್ಥೋ ಯೋಜ್ಯತೇ, ಸ ಯೋಗಃ ಯೋಽರ್ಥೋ ವಿಕೃತಸೂತ್ರಪದಂ, ಸಪದಾರ್ಥಃ, ಯದನ್ಯತಃ ಯುಕ್ತಿಮದರ್ಥಸ್ಯಸಾಧನಂ ಸಹೇತ್ವರ್ಥಃ, ಸಮಾಸವಚನಮುದ್ದೇಶಃ, ವಿಸ್ತರವಚನಂ ನಿರ್ದೇಶಃ, ಏವಮೇವೇತ್ಯತಿದೇಶೋಽನೇನ ಕಾರಣೇನೇತ್ಯುಪದೇಶಃ ಪ್ರಕೃತಸ್ಯಾನಾಗತೇನ ಸಾಧನಂ ಪ್ರದೇಶೋಽತಿಕ್ರಾಮಣೇನ ತಸ್ಮಿನ್ ಸತಿ ಅತಿದೇಶಃ ಅಭಿಪ್ರಾಯೋನುಕರ್ಷಣಮಪವರ್ಗಃ ಯೇನಾರ್ಥಃ ಪರಿಸಮಾಪ್ಯತೇ ||**

**ಪದೇನಾಹಾರ್ಯೇಣ ಸ ವಾಕ್ಯಶೇಷೋ, ಯದಕೀರ್ತಿತಂ ಮರ್ಯಾದಾಮಾಪದ್ಯತೇ ಸಾರ್ಥಾಪತ್ತಿಃ, ಪ್ರಕರಣಾಭಿಹಿತೋಽರ್ಥಃ ಕೇನ ಚಿದುಪೋದ್ಘಾತೇನ ಪುನರುದ್ದಿಶ್ಯಮಾನಃ ಪ್ರಸಂಗಃ, ಸರ್ವತ್ರ ಯು-**

---

ಯಾವ ಅರ್ಥ ಸಮುದಾಯದಿಂದ ನಿರ್ದಿಷ್ಟ ವಾಕ್ಯಾರ್ಥವು ಯೋಜಿಸಲ್ಪಡುವುದೋ ಅದಕ್ಕೆ ಅಧಿಕರಣವೆಂದು ಹಸರು, ಯೋಗವೆಂದರ ಒಟ್ಟಾಗಿರುವ ಸೂತ್ರವನ್ನು ಬೇರೆಬೇರ ಪದರೂಪದಿಂದ ವಿಭಾಗಿಸಿ ನಿಷ್ಪನ್ನವಾದಪದ ಅಂತಹ ಪದದ ಅರ್ಥವೇ ಪದಾರ್ಥ ಬೇರೆಯಾದ ಕಾರಣದಿಂದ ಸಕಾರಣವಾದ ಕಾರ್ಯವನ್ನು ಸಾಧಿಸಿದ್ದೇ ಆದರೆ ಅಂತಹ ಕಾರ್ಯಕ್ಕೆ ಸಾಧಕವಾದ ಅರ್ಥವೇ ಹೇತ್ವರ್ಥ, ಸಂಗ್ರಹವಾಗಿ ಮೊದಲು ನಿರ್ದೇಶಿಸುವುದೇ ಉದ್ದೇಶ, ವಿಸ್ತಾರವಾಗಿ ಅದನ್ನು ಉಪಪಾದಿಸುವಿಕೆಯೇ ನಿರ್ದೇಶ, ಇದೇ ರೀತಿಯಲ್ಲಿ ಆ ಅರ್ಥವು ಸಿದ್ಧಿಸುತ್ತದೆ ಎಂಬುದು ಉಪದೇಶ ಈ ಕಾರಣದಿಂದ ಎಂದು ಉಪಪಾದಿಸುವಿಕಯೇ ಅಪದೇಶ ಪ್ರಕೃತ ಪದಾರ್ಥವನ್ನು ಮುಂದೆ ಹೇಳುವ ಕಾರಣದಿಂದ ಸಾಧಿಸುವಿಕಯೇ ಪ್ರದೇಶ, ಅದನ್ನು ಬಿಟ್ಟು ಬೇರೆ ಕಡೆಯಲ್ಲಿ ಅಂತಹ ಅರ್ಥಸಾಧನೆಯು ಅತಿದೇಶ ಹಿಂದಿನ ಅಭಿಪ್ರಾಯವನ್ನು ಸಂಗ್ರಹಿಸುವುದೇ ಅಪವರ್ಗ ಇದರಿಂದಲೇ ಅರ್ಥೋಪಪಾದನವು ಸಮಾಪ್ತಿ ಹೊಂದುತ್ತದೆ

ಮತ್ತೊಂದು ಸ್ಥಳದಲ್ಲಿರುವ ಪದದಿಂದ ಅರ್ಥ ನಿಶ್ಚಯವನ್ನು ಮಾಡುವಿಕೆಯೇ ವಾಕ್ಯಶೇಷವೆನಿಸುತ್ತದೆ ಯಾವದೊಂದು ಕಾರಣವು ವಾಕ್ಯದಲ್ಲಿ ಹೇಳಲ್ಪಡದಿದ್ದರೂ ವಾಕ್ಯದ ಅರ್ಥ ನಿಶ್ಚಯಕ್ಕೆ ಆಶ್ರಯವಾಗುತ್ತದೆಯೋ ಅದೇ ಅರ್ಥಾಪತ್ತಿ, ಒಂದು ಪ್ರಕರಣದಲ್ಲಿ ಎಲ್ಲವನ್ನೂ ಹೇಳಿಮುಗಿಸಿದ ನಂತರ ಬೇರೆ ವಿಷಯವನ್ನು ಉಪಪಾದಿಸುವ ಸಂದರ್ಭದಲ್ಲಿ ಪುನಃ ಮೊದಲಿನ ವಿಷಯವನ್ನು ಪ್ರಸ್ತಾಪಿಸುವಿಕೆಯೇ ಪ್ರಸಂಗ

**ತ್ರ್ತಥಾ ಸ ಏಕಾನ್ತಃ, ಕ್ವಚಿತ್ತಥಾ ಕ್ವಚಿದನ್ಯಥಾಸಾವನೇಕಾಂತಃ, ಪ್ರತಿಷೇಧವಚನಂ ನಿರ್ಣಯಃ, ಪ್ರಕರಣಾನುಪೂರ್ವಂ ವಿಧಾನಂ, ತಸ್ಯ ಪ್ರಾತಿಲೋಮ್ಯಂ ವಿಪರ್ಯಯ ಇತ್ಯುಕ್ತಂ ॥**

**ಅತಿಕ್ರಾಂತಾವೇಕ್ಷಣಂ ಪರತ್ರ ವಕ್ಷ್ಯಾಮಿ ಇತ್ಯನಾಗತಾವೇಕ್ಷಣಂ, ಉಭಯತೋ ಹೇತುದರ್ಶನಂ ಸಂಶಯಃ ತತ್ರಾತಿಶಯವರ್ಣನಂ ವ್ಯಾಖ್ಯಾನಂ, ಪರಮತಮಪ್ರತಿಷಿದ್ಧಮನುಮತಂ, ಪರೈರಸಮ್ಮತಃ ಶಬ್ದಃ ಸ್ವಸಂಜ್ಞಾ, ಲೋಕೇ ಪ್ರತೀತಮುದಾಹರಣಂ ನಿರ್ವಚನಂ, ತದ್ಯುಕ್ತಿನಿರ್ವಚನಂ ದೃಷ್ಟಾಂತಃ, ಏವೇತಿನಿಯೋಗಃ ಇದಂ ವಾ ಇದಂವೇತಿ ವಿಕಲ್ಪಃ, ಇದಂ ಚೇದಂ ಚೇತಿ ಸಮುಚ್ಚಯಃ, ಅತ್ರ-ಯದನಿರ್ದಿಷ್ಟಂ ಯುಕ್ತಿಗಮ್ಯಂ ತದೂಹ್ಯಮಿತಿ ॥**

---

ಎಲ್ಲಾ ಕಡೆಯಲ್ಲಿಯೂ ಹಾಗೆಯೇ ಅರ್ಥಗಳನ್ನು ಸಮರ್ಥಿಸಿದಲ್ಲಿ ಅದಕ್ಕೆ ಏಕಾಂತವೆಂದು ಹೆಸರು ಕೆಲವೆಡೆಗಳಲ್ಲಿ ಮಾತ್ರ ಅಂತಹ ಕ್ರಮ ಮತ್ತೆ ಕೆಲವೆಡೆಗಳಲ್ಲಿ ಬೇರೆಯಾದ ಕ್ರಮವಿದ್ದಲ್ಲಿ ಅದು ಅನೇಕಾಂತ, ಇತರ ನಿಷೇಧ ಪುರಸ್ಸರವಾಗಿ ಅರ್ಥವನ್ನು ನಿರ್ಧರಿಸುವುದೇ ನಿಶ್ಚಯ ಪ್ರಕರಣ ಕ್ರಮಾನುಸರಣವೇ, ವಿಧಾನ, ಆದರ ಅನ್ಯಥಾ ಭಾವವೇ ವಿಪರ್ಯಯವೆಂದೂ ಹೇಳಲ್ಪಟ್ಟಿದೆ

ಮುಂದೆ ಈ ಅರ್ಥವನ್ನು ಹೇಳುತ್ತೇನೆ ಎಂದು ಮೊದಲು ನಿರ್ದೇಶಮಾಡುವಿಕೆಯೇ ಅತಿಕ್ರಾಂತಾವೇಕ್ಷಣಂ, ಎರಡು ವಿಧವಾದ ನಿರ್ಣಯಕ್ಕೂ ಕಾರಣವನ್ನು ತೋರ್ಪಡಿಸುವುದೇ ಸಂಶಯ, ಅದರಲ್ಲಿಯೂ ಒಂದು ಪಕ್ಷದಲ್ಲಿ ಅತಿಶಯ ವರ್ಣನಕ್ಕೆ ವ್ಯಾಖ್ಯಾನವೆಂದು ಹೆಸರು ಇತರರ ಮತವನ್ನು ತಿರಸ್ಕರಿಸದಿರ ವಿಕಯೇ ಅನುಮತ, ಇತರರಿಗೆ ತಿಳಿಯದಿರುವ ತನ್ನ ಪಾರಿಭಾಷಿಕ ಶಬ್ದವೇ ಸ್ವಸಂಜ್ಞಾ ಲೋಕದಲ್ಲಿ ಪ್ರಸಿದ್ಧವಾಗಿರುವ ಉದಾಹರಣೆಯನ್ನು ತೋರಿಸುವುದೇ ನಿರ್ವಚನ, ಅದಕ್ಕೆ ಕಾರಣವನ್ನು ವಿವರಿಸುವುದೇ ದೃಷ್ಟಾಂತ, ಹೀಗೆಯೇ ಮಾಡಬೇಕೆಂದು ಉಪಯೋಗಿಸುವ ಅಸಾಧಾರಣವೇ ನಿಯೋಗವೆನಿಸುತ್ತದ ಇದೇ ಅಥವಾ ಇದೇ ಎಂಬ ಸಂಶಯರೂಪವಾದ ಜ್ಞಾನವೇ ವಿಕಲ್ಪವೆನಿಸುತ್ತದೆ ಇದು ಮತ್ತು ಇದೂ ಸಹ ಎಂದು ವಿವರಿಸಲ್ಪಡುವ ಅರ್ಥವೇ ಸಮುಚ್ಚಯ ಇಲ್ಲಿ ಯಾವುದನ್ನು ನಾವು ನಿರ್ದೇಶಿಸಿಲ್ಲವೋ ಅದನ್ನೂ ಸಹ ಆಯಾಯ ಯುಕ್ತಿಗೆ ತಕ್ಕಂತೆ ಊಹಿಸಿಕೊಳ್ಳಬೇಕು.

ಪ್ರಯೋಜನಂ ಸಂಶಯನಿರ್ಣಯೌ ಚ
ವ್ಯಾಖ್ಯಾವಿಶೇಷೋ ಗುರುಲಾಘವೌ ಚ ।
ಕೃತವ್ಯುದಾಸೋ ಕೃತಶಾಸನಂ ಚ
ಸಾಂವರ್ತಿಕೋ ಧರ್ಮಗುಣೋಽಷ್ಟಕಶ್ಚ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ವಜ್ರಸಂವಾದೇ
ತಂತ್ರಶುದ್ಧಿರ್ನಾಮ ಷಷ್ಠೋಽಧ್ಯಾಯಃ

---

ಅರ್ಥನಿಶ್ಚಯಸಾಧಕವಾದ ಶಾಸ್ತ್ರವು ಪ್ರಯೋಜನ, ಸಂಶಯ, ನಿರ್ಣಯ, ವ್ಯಾಖ್ಯಾವಿಶೇಷ, ಸಿದ್ಧಾಂತದಲ್ಲಿನ ಗೌರವ, ಮತ್ತು ಲಾಘವವಿಚಾರ, ಇತರ ನಿಷೇಧ, ವಿಹಿತವಾದ ಅರ್ಥದ ಶಾಸನ ಈ ವಿಧವಾದ ಎಂಟು ಧಾರ್ಮಿಕಗುಣಗಳಿಂದ ಕೂಡಿರಬೇಕು

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ತಂತ್ರಶುದ್ಧಿ ಎಂಬ ಆರನೆಯ
ಅಧ್ಯಾಯ ಮುಗಿದಿದೆ



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### ಸಪ್ತಮೋಽಧ್ಯಾಯಃ

|| ಮಾರ್ಕಂಡೇಯ ಉವಾಚ ||

**ಅಥಾತಃ ಸಂಪ್ರವಕ್ಷ್ಯಾಮಿ ತವ ಪ್ರಾಕೃತಲಕ್ಷಣಂ |**
**ಋ ಋೂ, ಌ ೡ ನಸಂತ್ಯತ್ರ ನಷ್ಮಾ ಸ ಚ ಮಘಾವುಭೌ || ೧ ||**

**ಸಕಾರಹೀನಾ ಚ ತಥಾ ನಾಸಿಕ್ಯಾಶ್ಚ ತಥಾ ನೃಪ |**
**ರೇಫಶ್ಚ ಶಯವಾರಾರ್ಜ್ಯ ಸಂಯೋಗೇ ನಾಸ್ತಿ ಕರ್ಹಿಚಿತ್ || ೨ ||**

**ಐಕಾರಶ್ಚ ತಥೈಕಾರಃ ಪದಮಧ್ಯೇ ಮಹಾಬಲ |**
**ದೃಢಯೋಗೇ ಋಕಾರೋಽತ್ರ ಡಗಯೋಗೇ ತಥೈವ ಚ || ೩ ||**

---

### ಏಳನೆಯ ಅಧ್ಯಾಯವು

೧-೨ ಮಾರ್ಕಂಡೇಯರು ಹೇಳುತ್ತಾರೆ, ಇನ್ನು ಮುಂದ ಪ್ರಾಕೃತಭಾಷಾ ಲಕ್ಷಣವನ್ನು ಹೇಳುತ್ತೇನೆ ಕೇಳು. ಪ್ರಾಕೃತಭಾಷೆಯಲ್ಲಿ ಋ ಋೂ ಌ ೡ ಎಂಬ ಅಕ್ಷರಗಳಿರುವುದಿಲ್ಲ ಷ್ಮಾ ಎಂಬ ಸಂಯುಕ್ತಾಕ್ಷರವೂ ಮಕಾರ ಘಕಾರಗಳೂ ಇರುವುದಿಲ್ಲ ಸಕಾರರಹಿತವಾಗಿಯೂ ಅನುಸ್ವಾರವೆಂಬ ನಾಸಿಕ್ಯವರ್ಣದಿಂದ ಕೂಡಿಯೂ ಇರುತ್ತದೆ ಯಾವ ಸಂಯೋಗದಲ್ಲಿಯೂ ರೇಫ ಮತ್ತು ಶಕಾರ, ಯಕಾರ, ವಕಾರಗಳಿರುವುದಿಲ್ಲ

೩-೫ ಏಕಾರ ಮತ್ತು ಐಕಾರಗಳು ಪದ ಮಧ್ಯದಲ್ಲಿರುವುದಿಲ್ಲ ದೃ ಮತ್ತು ಢ ಇವುಗಳಿಗೆ ಸಂಬಂಧ ಉಂಟಾದಲ್ಲಿ ಋಕಾರವು ಲೋಪ ಹೊಂದುತ್ತದೆ ಹಾಗೆಯೇ ಡಕಾರ ಗಕಾರಗಳ (ಡ್ಗ ಎಂಬ) ಸಂಯೋಗದಲ್ಲಿಯೂ, ಗಕಾರ ಯಕಾರ

ಗಯುಯೋಗೇ ಗಕಾರೋಽತ್ರ ಲೋಪಮಾಯಾತಿ ನಿತ್ಯದಾ ।
ದಮೌ ಯುಕ್ತೌ ಪೃಥಕ್ಕೃತ್ವಾ ದುಮೌ ಕಾರ್ಯೌ ತಥೈವ ಚ　　॥ ೪ ॥

ಋತಯೋಗೇ ದಕಾರಸ್ಸ್ಯಾತ್ತ್ತಕಾರಸ್ತ್ವಭಿಧೀಯತೇ ।
ಕಕಾರಃ ಪದಮಧ್ಯೇಽತ್ರ ವಕ್ತವ್ಯೋ ಹಲ್ವಿವರ್ಜಿತಃ　　॥ ೫ ॥

ನಕಾರಸ್ಯ ಣಕಾರಃ ಸ್ಯಾತ್ ಕ್ಷಕಾರಸ್ಯ ಖ ಇಷ್ಯತೇ ।
ತಕಾರಶ್ಚ ಥಕಾರಶ್ಚ ಜ್ಞಕಾರಸ್ಯ ಣ ಏವ ಚ　　॥ ೬ ॥

ಕ್ವಚಿತ್ ಕ್ವಚಿತ್ ಸ್ಯಾತ್ತದಾ ಹಕಾರಶ್ಚ ತಥಾ ಕ್ವಚಿತ್ ।
ಕ್ಷಕಾರಸ್ಯ ತು ವಕ್ತವ್ಯಂ ವಾಂಕಾರಸ್ಯ ಹ ಇಷ್ಯತೇ　　॥ ೭ ॥

ಚಕಾರಸ್ಯ ಛಕಾರಸ್ಸ್ಯಾತ್ ಕಕಾರೇ ಹಲ್ ಚ ಲುಪ್ಯತೇ ।
ಯುಕ್ತೇ ಷಕಾರೇ ತದ್ಧೀಭೇ ಹಕಾರೋಽಪಿ ವಿಧೀಯತೇ　　॥ ೮ ॥

ಸಂಯೋಗದಲ್ಲಿಯೂ ಗಕಾರವು ಯಾವಾಗಲೂ ಲೋಪ ಹೊಂದುತ್ತದೆ ಸಂಯುಕ್ತ ವಾದ ದಕಾರ ಮಕಾರಗಳನ್ನು (ದ್ಮ) ದುಮು ಎಂದು ಉಚ್ಚರಿಸಬೇಕು, ಋ ಮತ್ತು ತಕಾರಗಳ(ರ್ತ) ಎಂಬ ಸಂಯೋಗದಲ್ಲಿ ದಕಾರವನ್ನೇ ಉಚ್ಚರಿಸಬೇಕು ತಕಾರ ವನ್ನು ಮುಂದೆ ಹೇಳುತ್ತೇನೆ. ಕಕಾರವು ಪದ ಮಧ್ಯದಲ್ಲಿ ಬಂದರೆ, ಅದನ್ನು ವ್ಯಂಜನರಹಿತವಾಗಿ (ಬರೀ ಸ್ವರವನ್ನಾಗಿಯೇ) ಉಚ್ಚರಿಸಬೇಕು

೬-೮ ಪ್ರಕೃತ ಭಾಷೆಯಲ್ಲಿ ನಕಾರಕ್ಕೆ ಣಕಾರವು ಬರುತ್ತದೆ ಹಾಗೆಯೇ ಕ್ಷಕಾರಕ್ಕೆ ಖಕಾರವೂ ಬರುತ್ತದೆ ತಕಾರಕ್ಕೆ ಥಕಾರವೂ ಜ್ಞ ಎಂಬುದಕ್ಕೆ ಣಕಾರವೂ ಬರುತ್ತವೆ ಕೆಲವು ಕಡೆಗಳಲ್ಲಿ ಹಕಾರವೂ ಬರುವುದುಂಟು ಇದನ್ನು ಕ್ಷಕಾರ ಸ್ಥಾನದಲ್ಲಿಯೇ ಹೇಳಬೇಕು ವಾಂ ಎಂಬುದಕ್ಕೂ ಹಕಾರವೇ ಬರುತ್ತದೆ ಚಕಾರಕ್ಕೆ ಛಕಾರವು ಬರುತ್ತದೆ ಕಕಾರದಲ್ಲಿ ಉಚ್ಚರಿಸುವಾಗ ತ್ ಎಂಬ ವ್ಯಂಜನ ವರ್ಣವು ಲೋಪ ಹೊಂದುತ್ತದೆ ಸಂಯುಕ್ತವಾದ ಷಕಾರಕ್ಕೂ ಅದರಂತೆ ಇರುವ ಸಂಯುಕ್ತ ವರ್ಣಕ್ಕೂ ಸಹ ಹಕಾರವೇ ಬರುತ್ತದೆ

**ಚತುರ್ಥೀ ನಾತ್ರ ವಿಜ್ಞೇಯಾ ನ ಚ ದ್ವಿವಚನಂ ಕ್ವಚಿತ್ ।**
**ಪದಾದೌ ಯೋ ಗುರುಃ (ಪ್ರೋಕ್ತಃ) ಸೋऽತ್ರ ಲಘುರೇವ ವಿಧೀಯತೇ ॥**

**ದ್ವಿಮಾತ್ರಮೇತದುದ್ದಿಷ್ಟಂ ವಿದ್ಯಾತ್ಪ್ರಾಕೃತಲಕ್ಷಣಂ ।**
**ಪ್ರಯೋಗಾದನುಕರ್ತವ್ಯೋ ವಿಸ್ತರೋಹ್ಯತಿವಿಸ್ತರಃ ॥ ೧೦ ॥**

**ದೇಶೇಷು ದೇಶೇಷು ಪೃಥಗ್ವಿಭಿನ್ನಂ**
**ನ ಶಕ್ಯತೇ ಲಕ್ಷಣತಸ್ತು ವಕ್ತುಂ ।**
**ಲೋಕೇಷು ಯತ್ಸ್ಯಾದಪಭ್ರಷ್ಟಸಂಜ್ಞಂ**
**ಜ್ಞೇಯಂ ಹಿ ತದ್ದೇಶವಿದೋಧಿಕಾರಂ ॥ ೧೧ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ**
**ವಜ್ರಸಂವಾದೇ ಪ್ರಾಕೃತಭಾಷಾಲಕ್ಷಣಂ ನಾಮ**
**ಸಪ್ತಮೋऽಧ್ಯಾಯಃ**

---

೯–೧೧ ಈ ಪ್ರಾಕೃತ ಭಾಷೆಯಲ್ಲಿ ಚತುರ್ಥೀವಿಭಕ್ತಿ ಇರುವುದಿಲ್ಲ ದ್ವಿವಚನವೂ ಇಲ್ಲ ಪದದ ಆದಿಯಲ್ಲಿರುವ ಗುರುವೂ ಸಹ ಲಘುವಾಗಿಯೇ ಆಗುತ್ತದೆ ಇದೂ ಸಹ ದ್ವಿಮಾತ್ರವೆಂದೇ ಹೇಳಲ್ಪಟ್ಟಿದೆ ಪ್ರಾಕೃತಭಾಷೆಯ ಲಕ್ಷಣವನ್ನು ಈರೀತಿ ತಿಳಿಯಬೇಕು ಈ ಪ್ರಾಕೃತಭಾಷೆಯಲ್ಲಿ ಇತರಶಬ್ದಗಳನ್ನು ಆಯಾಯ ಶಿಷ್ಟಪ್ರಯೋಗಕ್ಕೇ ತಕ್ಕಂತೆ ಉಚ್ಚರಿಸಬೇಕು ಇದರ ವಿಸ್ತಾರವು ಅತಿವಿಸ್ತಾರ ರೂಪವೇ ಆಗುತ್ತದೆ ಅಂತಹ ಶಬ್ದಗಳೂ ಸಹ ದೇಶದೇಶದಲ್ಲಿ ನಾನಾವಿಧವಾಗಿ ಪ್ರಚಾರದಲ್ಲಿವೆ ಅವನ್ನೆಲ್ಲಾ ಲಕ್ಷಣದಿಂದ ಹೇಳಲು ಸಾಧ್ಯವೇ ಇಲ್ಲ ಅಪಭ್ರಷ್ಟವೆಂದು ಹೇಳಲ್ಪಡುವ ಅದರಭೇದವೂ ಸಹ ಆಯಾಯ ದೇಶದಭಾಷಾಭಿಜ್ಞರ ಉಚ್ಚಾರಣಾಧಿಕಾರಕ್ಕೆ ಸೇರಿದ್ದೆಂದು ತಿಳಿಯಬೇಕು

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯ ಖಂಡದಲ್ಲಿ ಮಾರ್ಕಂಡೇಯ
ವಜ್ರ ಸಂವಾದದಲ್ಲಿ ಛಂದೋವಿಧಿ ಎಂಬ ಏಳರನೆಯ
ಅಧ್ಯಾಯ ಮುಗಿದಿದೆ

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

### || ಅಷ್ಟಮೋಽಧ್ಯಾಯಃ ||

**|| ಮಾರ್ಕಂಡೇಯ ಉವಾಚ ||**

**ದೇವಾ ದಿವೌಕಸೋ ದಿವ್ಯಾ ಗೀರ್ವಾಣಾಸ್ತ್ರಿದಶಾಃ ಸುರಾಃ ।**
**ಹರಿರ್ಜನಾರ್ದನೋ ವಿಷ್ಣುರ್ವಾಸುದೇವಸ್ತ್ವಧೋಕ್ಷಜಃ || ೧ ||**

**ನಾರಾಯಣೋ ಹೃಷೀಕೇಶಶ್ಚಕ್ರೀ ಗರುಡವಾಹನಃ ।**
**ಬಲಃ ಸಂಕರ್ಷಣೋಽನಂತಃ ಶೇಷಸ್ತಾಲಧ್ವಜೋ ಹಲೀ || ೨ ||**

**ಪ್ರದ್ಯುಮ್ನಃ ಕಾಮದೇವಶ್ಚ ಚಾಪೀ ಮಕರಕೇತನಃ ।**
**ಖಡ್ಗಾಯುಧೋಽನಿರುದ್ಧಶ್ಚ ತಥಾನ್ಯೈ ಋಷ್ಯಕೇತನಃ || ೩ ||**

### ಎಂಟನೆಯ ಅಧ್ಯಾಯವು.

೧-೩ ಮಾರ್ಕಂಡೇಯರು ಹೇಳುತ್ತಾರೆ ದೇವಾಃ, ದಿವೌಕಸಃ, ದಿವ್ಯಾಃ, ಗೀರ್ವಾಣಾಃ, ತ್ರಿದಶಾಃ, ಸುರಾಃ ಇವು ದೇವತೆಗಳ ಹೆಸರಿನ ಪರ್ಯಾಯಪದಗಳು ಹರಿ, ಜನಾರ್ದನ, ವಿಷ್ಣು, ವಾಸುದೇವ, ಅಧೋಕ್ಷಜ, ನಾರಾಯಣ, ಹೃಷೀಕೇಶ, ಚಕ್ರೀ, ಗರುಡವಾಹನ ಇವು ಮಹಾವಿಷ್ಣುವಿನ ನಾಮಗಳು ಬಲ, ಸಂಕರ್ಷಣ, ಅನಂತ, ಶೇಷ, ತಾಲಧ್ವಜ, ಹಲೀ ಇವು ಬಲರಾಮನ ನಾಮಗಳು ಪ್ರದ್ಯುಮ್ನ, ಕಾಮದೇವ, ಚಾಪೀ, ಮಕರಕೇತನ, ಖಡ್ಗಾಯುಧ, ಅನಿರುದ್ಧ, ಋಷ್ಯಕೇತನ ಇವುಗಳು ಮನ್ಮಥನ ನಾಮಗಳು

ಲಕ್ಷ್ಮೀಃ ಕರೀಷಿಣೀ ಶ್ರೀಶ್ಚ ತಥಾ ದೇವೀ ವಿಭಾವರೀ ।
ಚಕ್ರಃ ಸುದರ್ಶನಃ ಪ್ರೋಕ್ತಃ ಶಾರ್ಙ್ಗಂ ಚಾಪಸ್ತು ವೈಷ್ಣವಂ ॥ ೪ ॥

ಮಾಹೇಶ್ವರಂ ಪಿನಾಕಾಖ್ಯಂ ವಾರುಣಂ ಗಾಂಡಿವಂ ಭವೇತ್ ।
ಶಾಕ್ರಮಾಜಗವಂ ಪ್ರೋಕ್ತಂ ವಜ್ರಃ ಕುಲಿಶ ಉಚ್ಯತೇ ॥ ೫ ॥

ವೈಷ್ಣವೀ ತು ಗದಾ ಪ್ರೋಕ್ತಾ ತದಾ ಕೌಮೋದಕೀ ನೃಪ ।
ಹಲೋ ಲಲಾಮ ಇತ್ಯುಕ್ತಃ ಸಾನಂದಂ ಮುಸಲಂ ಸ್ಮೃತಂ ॥ ೬ ॥

ಪಾಂಚಜನ್ಯಃ ಸ್ಮೃತಃ ಶಂಖಃ ಯಂ ಬಿಭರ್ತಿ ಜನಾರ್ದನಃ ।
ಕರೇಽಸ್ಯ ಕಮಲಂ ಪ್ರೋಕ್ತಂ ತಥಾಸ್ತ್ರಾಲೋಕ್ಯಸಂಜ್ಞಿತಂ ॥ ೭ ॥

ಭೂಮಿರ್ವಸುಂಧರಾ ಪೃಥ್ವೀ ಕ್ಷಮಾ ಕ್ಷೋಣೀ ಧರಾ ಮಹೀ ।
ನಭಃ ಖಂ ಗಗನಂ ಚೈವ ತಥಾಕಾಶಂ ಹರೇಃ ಕ್ರಮಂ ॥ ೮ ॥

ತಾರ್ಕ್ಷ್ಯಃ ಸುಪರ್ಣೋ ಗರುಡೋ ಹರಿಕೇತನವಾಹನಃ ।
ನಾಗಾಂತಕೋ ಹಲಧರಃ ಶೇಷಃ ತಾಲಧ್ವಜೀ ಹಲೀ ॥ ೯ ॥

---

೪-೭ ಲಕ್ಷ್ಮೀಃ, ಕರೀಷಿಣೀ, ಶ್ರೀಃ, ದೇವೀ, ವಿಭಾವರೀ ಇವು ಮಹಾಲಕ್ಷ್ಮಿಯ ನಾಮಗಳು ವಿಷ್ಣುವಿನ ಚಕ್ರಕ್ಕೆ ಸುದರ್ಶನವೆಂದು ಹೆಸರು ಅವನ ಧನುಸ್ಸಿಗೆ ಶಾರ್ಙ್ಗವೆಂದು ಹೆಸರು ರುದ್ರದೇವನ ಧನುಸ್ಸಿಗೆ ಪಿನಾಕವೆಂದೂ, ವರುಣನ ಧನುಸ್ಸಿಗೆ ಗಾಂಡಿವವೆಂದೂ, ಇಂದ್ರನ ಧನುಸ್ಸಿಗೆ ಆಜಗವವೆಂದೂ ಅವನ ವಜ್ರಾಯುಧಕ್ಕೆ ಕುಲಿಶವೆಂದೂ ಹೆಸರು, ವಿಷ್ಣುವಿನ ಗದೆಗೆ ಕೌಮೋದಕೀ ಎಂದು ಹೆಸರು, ಬಲರಾಮನ ಹಲಾಯುಧಕ್ಕೆ ಲಲಾಮ ಎಂದೂ, ಮುಸಲಾಯುಧಕ್ಕೆ ಸಾನಂದವೆಂದೂ ಹೆಸರು ವಿಷ್ಣುವಿನ ಶಂಖಕ್ಕೆ ಪಾಂಚಜನ್ಯವೆಂದೂ, ಕೈಯ್ಯಿನಲ್ಲಿರುವ ಕಮಲಕ್ಕೆ ಅಸ್ತ್ರಾಲೋಕ್ಯವೆಂದೂ ಹೆಸರು.

೮-೧೦ ಭೂಮಿ, ವಸುಂಧರಾ, ಪೃಥ್ವೀ, ಕ್ಷಮಾ, ಕ್ಷೋಣೀ, ಧರಾ, ಮಹೀ ಇವು ಭೂದೇವಿಯ ನಾಮಗಳು ನಭಃ, ಖಂ, ಗಗನಂ, ಆಕಾಶಂ, ಹರಿಕ್ರಮಂ ಇವುಗಳು ಆಕಾಶದ ನಾಮಗಳು ತಾರ್ಕ್ಷ್ಯಃ, ಸುಪರ್ಣಃ, ಗರುಡಃ, ಹರಿಕೇತನಃ, ಹರಿವಾಹನಃ, ನಾಗಾಂತಕಃ ಇವು ಗರುಡನ ನಾಮಗಳು ಹಲಧರ, ಶೇಷ, ತಾಲಧ್ವಜೀ, ಹಲೀ, ಇವು ಬಲರಾಮನ ನಾಮಗಳು ಬ್ರಹ್ಮಾ, ಪಿತಾಮಹ,

ಬ್ರಹ್ಮಾ ಪಿತಾಮಹಃ ಶಂಭುಃ ಸ್ವಯಂಭೂರ್ಭೂತಭಾವನಃ ।
ಮಹಾದೇವೋ ಭವಃ ಶಂಭುಃ ತ್ರ್ಯಂಬಕಃ ಪಾರ್ವತೀಪತಿಃ ॥ ೧೦ ॥

ಉಮಾ ಸತೀ ಪರ್ವತಜಾ ಮೇನಕಾಜಾ ತಥೋಚ್ಯತೇ ।
ಭದ್ರಕಾಲೀ ಸ್ಮೃತಾ ದುರ್ಗಾ ಗಣಾಶ್ಚ ಪ್ರಮಥಾಃ ಸ್ಮೃತಾಃ ॥ ೧೧ ॥

ವಿನಾಯಕೋ ಗಣಪತಿಃ ಕುಮಾರಃ ಸ್ಕಂದ ಇಷ್ಯತೇ ।
ಇಂದ್ರಃ ಶಕ್ರಃ ಕೌಶಿಕಶ್ಚ ಪುರುಹೂತಃ ಪುರಂದರಃ ॥ ೧೨ ॥

ಅಗ್ನಿರ್ವೈಶ್ವಾನರೋ ವಹ್ನಿಃ ಜಾತವೇದೋ ಹುತಾಶನಃ ।
ವೈವಸ್ವತೋ ಯಮಶ್ಚೈವ ಕೀನಾಶಃ ಪ್ರೇತನಾಯಕಃ ॥ ೧೩ ॥

ವಿರೂಪಾಕ್ಷೋ ನಿಋುತಿಶ್ಚ ತಥಾ ರಾತ್ರಿಂಚರಾಧಿಪಃ ।
ಯಾದಸಾಮೀಶ್ವರೋ ದೇವಃ ಪ್ರಚೇತಾ ವರುಣೋಽಂಬುಪಃ ॥ ೧೪ ॥

---

ಶಂಭು, ಸ್ವಯಂಭೂಃ ಭೂತಭಾವನ, ಇವು ಚತುರ್ಮುಖ ಬ್ರಹ್ಮನ ನಾಮಗಳು ಮಹಾದೇವ, ಭವ, ಶಂಭು, ತ್ರ್ಯಂಬಕ, ಪಾರ್ವತೀಪತಿ ಇವು ರುದ್ರದೇವನ ನಾಮಗಳು ಉಮಾ, ಸತೀ, ಪರ್ವತಜಾ, ಮೇನಕಾಜಾ ಇವು ಪಾರ್ವತಿಯ ನಾಮಗಳು

೧೧-೧೪ ಭದ್ರಕಾಲೀ ಎಂಬುದು ದುರ್ಗಾದೇವಿಯ ನಾಮವು ಗಣಗಳು ಎಂದರೆ ಪ್ರಮಥ ಗಣಗಳು, ಗಣಪತಿ ಎಂಬುದು ವಿನಾಯಕನ ಹಸರು ಕುಮಾರ ಎಂಬುದು ಷಣ್ಮುಖನ ಹೆಸರು ಇಂದ್ರ, ಶಕ್ರ, ಕೌಶಿಕ, ಪುರುಹೂತ, ಪುರಂದರ ಇವು ಇಂದ್ರನ ನಾಮಗಳು ಅಗ್ನಿ, ವೈಶ್ವಾನರ, ವಹ್ನಿ, ಜಾತವೇದ, ಹುತಾಶನ ಇವು ಅಗ್ನಿದೇವನ ನಾಮಗಳು ವೈವಸ್ವತ, ಯಮ, ಕೀನಾಶ, ಪ್ರೇತ ನಾಯಕ, ಇವು ಯಮನ ನಾಮಗಳು ವಿರೂಪಾಕ್ಷ, ನಿಋುತಿ, ರಾತ್ರಿಂಚರಾಧಿಪ ಇವು ನಿಋುತಿಯ ನಾಮಗಳು, ಯಾದಸಾಮೀಶ್ವರ ದೇವ, ಪ್ರಚೇತಾಃ, ವರುಣ, ಅಂಬುಪ ಇವು ವರುಣನ ನಾಮಗಳು

ತೋಯಮಂಬು ಜಲಂ ಚಾಪಃ ಪಾನೀಯಂ ಸಲಿಲಂ ಪಯಃ ।
ವಾಯುಃ ಸಮೀರಣೋ ವಾತಃ ಪವನಃ ಸರ್ವಗೋಽನಿಲಃ ॥ ೧೫ ॥

ರಾಜರಾಜೋ ಧನಾಧ್ಯಕ್ಷಃ ತಥೈವೈಲಬಿಲಃ ಸ್ಮೃತಃ ।
ಈಶಾನಃ ಶಂಕರಃ ಶರ್ವಃ ತಥಾ ಪಶುಪತಿಃ ಶಿವಃ ॥ ೧೬ ॥

ನಾಸತ್ಯಾವಶ್ವಿನೌ ಪ್ರೋಕ್ತೌ ವಸವೋ ವಸುಸಂಜ್ಞಿತಾಃ ।
ತಥೈವಾಂಗಿರಸೋ ನಾಗಾಃ ವಿಶ್ವೇ ಸತ್ರಾಗ್ರಭೋಜಿನಃ ।
ವೃಷಭಾವಗಮಾರುದ್ಧ ಭೃಗವೋ ಮರುತೋ ಮತಾಃ ।
ಸಾಧ್ಯಾ ಧರ್ಮಸುತಾಃ ಪ್ರೋಕ್ತಾಃ ಆದಿತ್ಯಾಃ ಕಶ್ಯಪಾತ್ಮಜಾಃ ॥ ೧೮ ॥

ಮಾರುತೋ ಮಾತರಿಶ್ವಾನೋ ಗ್ರಹಾಸ್ತ್ರಿಭುವನೇಶ್ವರಾಃ ।
ನಕ್ಷತ್ರಾಣಿ ತಥಾ ತಾನಿ ಋಕ್ಷಾಣಿ ಚ ಉಡೂನಿ ಚ ॥ ೧೯ ॥

---

೧೫–೧೬ ತೋಯ, ಅಂಬು, ಜಲ, ಆಪಃ, ಪಾನೀಯ, ಸಲಿಲ, ಪಯಃ ಇವು ಜಲದ ನಾಮಗಳು ವಾಯು, ಸಮೀರಣ, ವಾತ, ಜವನ, ಸರ್ವಗ, ಅನಿಲ ಇವು ವಾಯುವಿನ ನಾಮಧೇಯಗಳು ರಾಜ, ಧನಾಧ್ಯಕ್ಷ, ಐಲಬಿಲ ಇವು ಕುಬೇರನ ನಾಮಧೇಯಗಳು ಈಶಾನ, ಶಂಕರ, ಶರ್ವ, ಪಶುಪತಿ, ಶಿವ ಇವು ರುದ್ರದೇವನ ನಾಮಗಳು, ನಾಸತ್ಯ, ಅಶ್ವಿನೌ ಇವು ಅಶ್ವಿನೀದೇವತೆಗಳ ನಾಮಗಳು ವಸುಗಳಿಗೆ ವಸವಃ ಎಂದೇ ನಾಮಧೇಯ ಆಂಗಿರಸಃ, ನಾಗಾಃ ಇವು ಸರ್ಪಗಳಿಗೆ ಸಂಜ್ಞೆಯಾಗುತ್ತದೆ ಯಜ್ಞಭಾಗಕ್ಕೆ ಉತ್ತಮಾಧಿಕಾರಿಗಳಾದ ದೇವತಾವಿಶೇಷಗಳಿಗೆ ವಿಶ್ವೆ ಎಂದು ಹೆಸರು

೧೮–೨೦ ವೃಷಭ, ಅವಗಮ, ಅರುದ್ಧ, ಭೃಗು ಇವು ಮರುತ್ತೆಂಬ ದೇವತೆಗಳ ನಾಮಧೇಯಗಳು ಸಾಧ್ಯರೆಂಬ ದೇವತೆಗಳಿಗೆ ಧರ್ಮಸುತರೆಂದು ಹೆಸರು ಆದಿತ್ಯ, ಕಶ್ಯಪಾತ್ಮಜ ಇವೂ ದೇವತೆಗಳ ಹೆಸರುಗಳು ಮಾರುತ, ಮಾತರಿಶ್ವಾ ಇವೂ ವಾಯುದೇವನ ಹೆಸರುಗಳು ಗ್ರಹಗಳಿಗೆ—ತ್ರಿಭುವನೇಶ್ವರ ಎಂದು ಹೆಸರು ಋಕ್ಷ, ಉಡು ಇವು ನಕ್ಷತ್ರಗಳ ನಾಮಗಳು, ಆದಿತ್ಯ, ಭಾಸ್ಕರ,

**ಆದಿತ್ಯೋ ಭಾಸ್ಕರಸ್ಸೂರ್ಯಃ ಸವಿತಾ ರವಿರರ್ಯಮಾ ।**
**ಚಂದ್ರಃ ಶೀತಕರಃ ಸೋಮಃ ಶಶಾಂಕೋ ಮೃಗಲಾಂಛನಃ　　॥ ೨೦ ॥**

**ವಕ್ರಃ ಕ್ಷಿತಿಸುತೋ ಭೌಮಃ ಬುಧೋಜ್ಞಃ ಸೋಮನಂದನಃ ।**
**ಬೃಹಸ್ಪತಿರ್ಗುರುರ್ಜೀವಃ ಶುಕ್ರ ಆಸ್ಫುಜಿರೇವ ಚ　　॥ ೨೧ ॥**

**ಸಾರಣಃ ಪಂಚಮಃ ಪ್ರೋಕ್ತೋ ಪ್ರಮಂಥೇಷು ವಿಚಕ್ಷಣಃ ।**
**ಅಸುರಾ ದಾನವಾ ದೈತ್ಯಾ ಗಂಧರ್ವಾ ದೇವನಾಯಕಾಃ　　॥ ೨೨ ॥**

**ಯಕ್ಷಾಃ ಪುಣ್ಯಜನಾಃ ಪ್ರೋಕ್ತಾಃ ಯಾತುಧಾನಾಶ್ಚ ರಾಕ್ಷಸಾಃ ।**
**ಅದೃಶ್ಯಾಶ್ಚ ತಥಾ ಭೂತಾಃ ಪಿಶಾಚಾಃ ಪಿಶಿತಾಶನಾಃ　　॥ ೨೩ ॥**

**ಕಿನ್ನರಾಖ್ಯಾಃ ಕಿಂಪುರುಷಾಃ ನಾಗಾಃ ಕದ್ರುಸುತಾ ಮತಾಃ ।**
**ಸಿದ್ಧಾ ವಿದ್ಯಾಧರಾಃ ಪ್ರೋಕ್ತಾಃ ದೇವರಾಮಾಸ್ತಥಾಪ್ಸರಾಃ　　॥ ೨೪ ॥**

---

ಸೂರ್ಯ, ಸವಿತಾ, ರವಿ, ಅರ್ಯಮಾ ಇವು ಸೂರ್ಯನ ನಾಮಗಳು ಚಂದ್ರ, ಶೀತಕರ, ಸೋಮ, ಶಶಾಂಕ, ಮೃಗಲಾಂಛನ ಇವು ಚಂದ್ರನ ಹೆಸರುಗಳು ವಕ್ರ, ಕ್ಷಿತಿಸುತ, ಭೌಮ ಇವು ಅಂಗಾರಕನ ನಾಮಗಳು ಬುಧ, ಜ್ಞ, ಸೋಮನಂದನ, ಇವು ಬುಧನ ಹೆಸರುಗಳು ಬೃಹಸ್ಪತಿ, ಗುರು, ಜೀವ ಇವು ಗುರು ಗ್ರಹದ ಹಸರುಗಳು. ಶುಕ್ರ, ಆಸ್ಫುಜಿ ಇವು ಶುಕ್ರನ ನಾಮಗಳು

೨೨–೨೫ ಪಂಚಮ ಸಾರಣ ಇವು ಇತರರ ಹಿಂಸಾಕೃತ್ಯದಲ್ಲಿ ಸಮರ್ಥನಾಗಿರುವ ವ್ರಾತ್ಯನ ಹೆಸರುಗಳು ಅಸುರ, ದಾನವ, ದೈತ್ಯ ಇವು ದಾನವರೆಂಬ ರಾಕ್ಷಸರ ಭೇದದಲ್ಲೂ, ಗಂಧರ್ವ ದೇವನಾಯಕ ಇವು ಗಂಧರ್ವರಲ್ಲೂ ವರ್ತಿಸುತ್ತವೆ ಯಕ್ಷ, ಪುಣ್ಯಜನ ಇವು ಯಕ್ಷರಿಗೂ, ಯಾತುಧಾನ ರಾಕ್ಷಸ ಇವು ರಾಕ್ಷಸರಿಗೂ ವಾಚಕವಾಗುತ್ತವೆ ಪಿಶಾಚ ಪಿಶಿತಾಶನ ಇವು ಕಣ್ಣಿಗೆ ಕಾಣದಿರುವ ಭೂತಗಳ ನಾಮಗಳು ಕಿನ್ನರರೆಂದರೆ ಕಿಂಪುರುಷರೆಂಬ ದೇವತಾ ವಿಶೇಷ, ನಾಗ, ಎಂಬುದು ಕದ್ರುವಿನ ಮಕ್ಕಳಾದ ಸರ್ಪಗಳ ಹಸರು ಸಿದ್ಧರೆಂದರೆ ವಿದ್ಯಾಧರರೆಂಬ ದೇವಭೇದ ಅಪ್ಸರಸ್ಸುಗಳೆಂದರೆ ದೇವತೆಗಳ ಸ್ತ್ರೀಯರು, ಭೂತಸೃಷ್ಟಿಗೆ ಕಾರಣನಾಗಿರುವ

ಮಹರ್ಷಯೋ ಭೂತಕೃತಃ ತಥಾ ಬ್ರಹ್ಮರ್ಷಯೋಽಮಲಾಃ ।
ಪ್ರೋಕ್ತಾಃ ಸಪ್ತರ್ಷಯೋ ಲೋಕೇ ತಥಾ ಚಿತ್ರಶಿಖಂಡಿನಃ ॥ ೨೫ ॥

ಧ್ರುವಃ ಸ್ಥಾಣುಃ ತಥಾ ಪ್ರೋಕ್ತಃ ಕೃಕಲಾಸಸ್ತಥೈವ ಚ ।
ಆಶಾದಿಶಸ್ತಥಾ ಕಾಷ್ಠಾ ಭಚಕ್ರಂ ಭಗಣಂ ಸ್ಮೃತಂ ॥ ೨೬ ॥

ಕೃತಾನಿ ಶಾಸ್ತ್ರಾಣಿ ನರೇಂದ್ರಪೂರ್ವೈಃ
ಸ್ಮೃತಿಸ್ತಥೋಕ್ತಾ ಶ್ರುತಿರೇವ ವೇದಃ ।
ಸಮ್ಯಗ್ಯದಾಚಾರಮಿತಿ ಪ್ರದಿಷ್ಟಂ
ವೃತ್ತಂ ಹಿ ಯಚ್ಛಾಸ್ತ್ರವಿದಾಂ ನರೇಂದ್ರ ॥ ೨೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ದೇವಾದಿಶಬ್ದಪರ್ಯಾಯವರ್ಣನಂ
ನಾಮಾಷ್ಟಮೋಽಧ್ಯಾಯಃ

---

ಮಹರ್ಷಿಗಳೂ ಪರಿಶುದ್ಧರಾದ ಬ್ರಹ್ಮರ್ಷಿಗಳೂ ಸಹ ಸಪ್ತರ್ಷಿಗಳೆಂದೂ, ಚಿತ್ರ ಶಿಖಂಡಿ ಎಂದೂ, ಹೇಳಲ್ಪಡುತ್ತಾರೆ

೨೬-೨೭ ಸ್ಥಿರವಾಗಿರುವ ವಸ್ತುವಿಗೆ ಧ್ರುವವೆಂದೂ ಕೃಕಲಾಸವೆಂದೂ ಹೆಸರು ಆಶಾ, ದಿಕ್, ಕಾಷ್ಠಾ ಇವು ದಿಕ್ಕುಗಳ ನಾಮಗಳು, ಆಕಾಶದಲ್ಲಿರುವ ಗ್ರಹನಕ್ಷತ್ರಾದಿಗಳಿಗೆ ಭಚಕ್ರ, ಭಗಣ ಎಂಬನಾಮಗಳಿವೆ ಎಲೈ ದೊರೆಯೇ, ಯಾವುದು ಒಳ್ಳೆಯ ಆಚಾರವೆಂದು ಹೇಳಲಾಗುವುದೋ, ಶಾಸ್ತ್ರಜ್ಞರಾಗಿದ್ದವರು ಅಂತಹ ಯಾವಯಾವ ಆಚಾರಗಳನ್ನು ನೆರವೇರಿಸಿ ಕೃತಕೃತ್ಯರಾದರೋ ಅಂತಹ ಆಚಾರಗಳನ್ನನುಸರಿಸಿ ಅನೇಕ ಶಾಸ್ತ್ರಗಳನ್ನು ಪೂರ್ವಿಕರು ಪ್ರಕಾಶಕ್ಕೆ ತಂದಿರುವರು ಅಂತಹ ಶಾಸ್ತ್ರಗಳಲ್ಲಿ ಸ್ಮೃತಿ ಎಂದೂ, ಶ್ರುತಿ ಎಂದೂ ಎರಡುಪ್ರಕಾರ ಉಂಟು ಹಿಂದಿನ ಶಾಸ್ತ್ರಜ್ಞರು ನಿರ್ಮಿಸಿರುವ ನಿಬಂಧಗಳಿಗೆ ಸ್ಮೃತಿ ಎಂದೂ, ಅದಕ್ಕ ಪ್ರಮಾಣಭೂತವಾದ ಶ್ರುತಿಗೆ ವೇದವೆಂದೂ ಹೆಸರು

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರ ಸಂವಾದದಲ್ಲಿ ದೇವಾದಿಪರ್ಯಾಯಶಬ್ದವರ್ಣನವೆಂಬ
ಎಂಟನೆಯ ಅಧ್ಯಾಯ ಮುಗಿದಿದೆ

॥ ಓಂ ॥

॥ ಶ್ರೀ ಹಯಗ್ರೀವಾಯ ನಮಃ ॥

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### ॥ ನವಮೋಽಧ್ಯಾಯಃ ॥

**ಸಂವತ್ಸರೋಽಬ್ದೋ ವರ್ಷಂ ಚ ಸಮಾ ಹಾಯನ ಏವ ಚ ।**
**ದಿವಸೋ ವಾಸರಶ್ಚೈವ ದಿನಂ ಚಾಹಸ್ತಥೈವ ಚ ॥ ೧ ॥**

**ದೋಷಾ ವಿಭಾವರೀ ರಾತ್ರಿಃ ಶರ್ವರೀ ಯಾಮಿನೀ ಕ್ಷಪಾ ।**
**ಸಂಧಿಃ ಪ್ರೋಕ್ತಾ ತಥಾ ಸಂಧ್ಯಾ ಅಂಧಕಾರಂ ತಮಃ ಸ್ಮೃತಂ ॥ ೨ ॥**

**ಚಂದ್ರಿಕಾ ಚ ತಥಾ ಜ್ಯೋತ್ಸ್ನಾ ಚೈತ್ರೋ ಮಧುರಿತಿ ಸ್ಮೃತಃ ।**
**ವೈಶಾಖೋ ಮಾಧವಃ ಪ್ರೋಕ್ತಃ ಶುಚಿಃ ಜ್ಯೇಷ್ಠ ಉದಾಹೃತಃ ॥ ೩ ॥**

---

### ಒಂಭತ್ತನೆಯ ಅಧ್ಯಾಯವು.

೧-೪ ಸಂವತ್ಸರ, ವತ್ಸರ, ಅಬ್ದ, ವರ್ಷ, ಸಮಾಃ, ಹಾಯನ ಇವು ಸಂವತ್ಸರಕ್ಕೆ ವಾಚಕವಾದಪದಗಳು ದಿವಸ, ವಾಸರ, ದಿನ, ಅಹಃ ಇವು ಹಗಲಿಗೆ ವಾಚಕವಾದ ಶಬ್ದಗಳು ದೋಷಾ, ವಿಭಾವರೀ, ರಾತ್ರಿ, ಶರ್ವರೀ, ಯಾಮಿನೀ, ಕ್ಷಪಾ, ಇವು ರಾತ್ರಿಯ ನಾಮಗಳು ಸಂಧಿಃ ಎಂಬವದವು ಸಂಧ್ಯೆಗೆ ವಾಚಕವಾದ್ದು ಅಂಧಕಾರ, ತಮಃ ಇವು ಕತ್ತಲೆಯ ನಾಮಗಳು ಚಂದ್ರಿಕಾ, ಜ್ಯೋತ್ಸ್ನಾ ಇವು ಬೆಳದಿಂಗಳಿಗೆ ವಾಚಕವಾಗಿವೆ ಚೈತ್ರ, ಮಧು ಇವು ಚೈತ್ರ ಮಾಸಕ್ಕೂ ಹೆಸರುಗಳು ಶುಚಿಃ ಎಂಬುದು ಜ್ಯೇಷ್ಠ ಮಾಸಕ್ಕೂ ಶುಕ್ಲಃ ಎಂಬುದು ಆಷಾಢ ಮಾಸಕ್ಕೂ ವಾಚಕವಾಗುತ್ತದೆ ನಭಃ ಎಂಬುದು ಶ್ರಾವಣಮಾಸಕ್ಕೂ,

**ಶುಕ್ಲಃ ಪ್ರೋಕ್ತಃ ತಥಾಷಾಢೋ ನಭಃ ಶ್ರಾವಣ ಇಷ್ಯತೇ ।**
**ಪ್ರೌಷ್ಠಪಾದೋ ನಭಸ್ಯಶ್ಚ ಇಷಶ್ಚಾಶ್ವಯುಜಃ ಸ್ಮೃತಃ । ೪ ॥**

**ಊರ್ಜಾಖ್ಯಃ ಕಾರ್ತಿಕಃ ಪ್ರೋಕ್ತಃ ಮಾರ್ಗಶೀರ್ಷಃ ಸಹಸ್ತಥಾ ।**
**ಸಹಸ್ಯಃ ಪೌಷ ಇತ್ಯುಕ್ತಃ ಮಾಘಃ ಸ್ಯಾತ್ತಪ ಏವ ಚ ॥ ೫ ॥**

**ಫಾಲ್ಗುನಶ್ಚ ತಪಸ್ಯಾಖ್ಯೋ ಮಾಸೋ ಯದುಕುಲೋದ್ವಹ ।**
**ತುಲಾ ಮೇಷಗತೇ ಭಾನೌ ವಿಷುವದ್ದಿನಮುಚ್ಯತೇ ॥ ೬ ॥**

**ಧನ್ವತೋ ಮಿಥುನಾಂತಶ್ಚ ಅಯನೇ ಸೋಽಸ್ಯ ದಕ್ಷಿಣೇ ।**
**ಮೇಷಾನ್ತೇ ಚ ತುಲಾನ್ತೇ ಚ ಯುಗಾದಿದಿವಸೌ ಸ್ಮೃತೌ ॥ ೭ ॥**

**ತಥಾ ವಿಷ್ಣುಪದಂ ಪ್ರೋಕ್ತಂ ಕುಲೀರಮಕರಾನ್ತಯೋಃ ।**
**ಕನ್ಯಾಮಕರಮೀನಾನಾಂ ಪ್ರವೇಶೇ ಧನುಷಸ್ತಥಾ ॥ ೮ ॥**

---

ನಭಸ್ಯ, ಪ್ರೌಷ್ಠವಾದ ಇವು ಭಾದ್ರಪದಮಾಸಕ್ಕೂ, ಇಷಃ ಎಂಬುದು ಆಶ್ವಯುಜ ಮಾಸಕ್ಕೂ ವಾಚಕಗಳಾಗುತ್ತವೆ

೫-೭ ಊರ್ಜವೆಂಬುದು ಕಾರ್ತಿಕ ಮಾಸದ ಹೆಸರು ಸಹಃ ಎಂಬುದು ಮಾರ್ಗಶೀರ್ಷದ ಹೆಸರು ಸಹಸ್ಯ ಎಂಬುದು ಪುಷ್ಯಮಾಸದ ಹಸರು ತಪಃ ಎಂಬುದು ಮಾಘಮಾಸದ ಹೆಸರು ಫಾಲ್ಗುಣಮಾಸಕ್ಕೆ ತಪಸ್ಯ ಎಂದು ಹಸರು ಈ ಮಾಸಗಳಿಗೆಲ್ಲ ಈ ಹೆಸರುಗಳನ್ನು ಹೇಳಿ ಆಯಿತು ಸೂರ್ಯನು ತುಲಾ ಮತ್ತು ಮೇಷಗಳಲ್ಲಿರುವಾಗ ಆ ದಿನಗಳಿಗೆ ವಿಷುವದ್ದಿನವೆಂದು ಹೆಸರು ಧನುರ್ಮಾಸದ ಕೊನೆಯಿಂದ ಮಿಥುನಮಾಸದ ಕೊನೆಯವರಿವಿಗೆ ದಕ್ಷಿಣಾಯನವೆಂದು ಹೇಳಲ್ಪಡುತ್ತವೆ ಹಾಗೆಯೇ ಕರ್ಕಾಟಕ ಮತ್ತು ಮಕರ ಮಾಸದ ಅಂತ್ಯದಿನಗಳು ವಿಷ್ಣು ಪದವೆಂದು ಹೇಳಲ್ಪಟ್ಟಿವೆ

೮-೧೦ ಸೂರ್ಯನಿಗೆ ಕನ್ಯಾ ಮತ್ತು ಮಕರ, ಮೀನ, ಧನುಸ್ಸು ಇವುಗಳ ಪ್ರವೇಶವುಂಟಾದಾಗಲೂ ಆ ನಾಲ್ಕು ದಿನಗಳೂ ಷಡಶೀತಿಮುಖವೆಂದು ಹೇಳಲ್ಪ

ಷಡಶೀತಿ ಮುಖಂ ನಾಮ ಜ್ಞೇಯಂ ದಿನಚತುಷ್ಟಯಂ ।
ರಶ್ಮಿರ್ಗಭಸ್ತಿರ್ಭದ್ರಾ ಚ ಕರೋ ದೀಧಿತಿರೇವ ಚ　　॥ ೯ ॥

ಸೂರ್ಯೋದಯಾಸ್ತಮಯಯೋಃ ಸದೀರ್ಘಃ ಪರಿಧಿರ್ಭವೇತ್ ।
ತಿರ್ಯಗ್ಗತಾಂ ಮೇಘರಾಜಿಂ ತದೇವ ಪರಿಘೋ ಭವೇತ್　　॥ ೧೦ ॥

ತದೇವ ದಂಡಸಂಸ್ಥಾನೋ ಮೇಘೋ ದಂಡೋಭಿಧೀಯತೇ ।
ಶಕ್ರಚಾಪಂ ಶಕ್ರಧನುಃ ತದ್ದೀರ್ಘಂ ರೋಹಿತಂ ಭವೇತ್　　॥ ೧೧ ॥

ತತ್ಪೀತಕಮಥಾಲ್ಪಂ ಸ್ಯಾದುಪಾಸ್ಯಂ ಪ್ರತಿಸೂರ್ಯಕಂ ।
ಚಂದ್ರಾರ್ಕಯೋಃ ಮೇಘರಾಜಿಃ ಪರಿವೇಷಸ್ತು ಮಂಡಲಾತ್　　॥ ೧೨ ॥

ಸ್ವರ್ಗಾಚ್ಛುಭಫಲೇ ಕ್ಷೀಣೇ ಪತನ್ನುಲ್ಕೇತಿ ಕಥ್ಯತೇ ।
ಅನಿತ್ಯಃ ಸಶಿಖೋ ದೃಷ್ಟಃ ತಾರಕಃ ಕೇತುರಿಷ್ಯತೇ　　॥ ೧೪ ॥

---

ಡುತ್ತವೆ ರಶ್ಮಿ, ಗಭಸ್ತಿ, ಭದ್ರಾ, ಕರ, ದೀಧಿತಿ ಇವು ರಶ್ಮಿಯನಾಮಗಳು ಸೂರ್ಯನ ಉದಯಾಸ್ತಕಾಲದ ದೀರ್ಘವಾದ ಮಧ್ಯಕಾಲವು ಪರಿಧಿ ಎಂದು ಹೇಳಲ್ಪಡುತ್ತದೆ ಅಡ್ಡಡ್ಡವಾಗಿರುವ ಮೇಘಪಙ್ತಿಗೆ ಪರಿಘವೆಂದು ಹೆಸರು

೧೧-೧೪ ಅದೇ ಮೇಘಪಙ್ತಿಯು ದಂಡದಂತೆ ದೀರ್ಘವಾಗಿದ್ದಲ್ಲಿ ದಂಡವೆಂದು ಹೇಳಲ್ಪಡುತ್ತದೆ ಶಕ್ರಚಾಪ, ಶಕ್ರಧನುಃ ಇವು ಇಂದ್ರಧನುಸ್ಸಿನ ನಾಮಗಳು ಅವೇ ಇಂದ್ರಚಾಪವು ಉದ್ದುದ್ದವಾಗಿದ್ದಲ್ಲಿ ಅದಕ್ಕೆ ರೋಹಿತವೆಂದು ಹೆಸರು ಅದೇ ಹೊಂಬಣ್ಣವಾಗಿಯೂ, ಅಲ್ಪಪರಿಮಾಣವುಳ್ಳದ್ದಾಗಿಯೂ ಇದ್ದಲ್ಲಿ ಉಪಾಸ್ಯ, ಪ್ರತಿಸೂರ್ಯಕ ಎನಿಸುತ್ತದೆ ಚಂದ್ರಸೂರ್ಯರ ಮಂಡಲದ ಹೊರಗೆ ವರ್ತುಲಾಕಾರವಾದ ಮೇಘಪಙ್ತಿಗೆ ಪರಿವೇಷವೆಂದು ಹಸರು ಸ್ವರ್ಗದಿಂದ ಶುಭಫಲವು ಕ್ಷೀಣವಾದ ನಂತರ ಬೀಳುವ ತೇಜಸ್ಸಿಗೆ ಉಲ್ಕಾ ಎಂದು ಹಸರು ಮೇಲುಭಾಗದಲ್ಲಿ ಶಿಖೆಯಿಂದ ಕೂಡಿ ತಾತ್ಕಾಲಿಕವಾಗಿ ಉಂಟಾಗುವ ನಕ್ಷತ್ರಕ್ಕೆ ಕೇತುವೆಂದು ಹೆಸರು

ಅಗ್ನಿವರ್ಣಾ ತು ದಿಙ್ಮ್ರುಷ್ಟಾ ದಿಗ್ದಾಹ ಇತಿ ವಿಶ್ರುತಃ ।
ನಗರಂ ಶೂನ್ಯತೋ ದೃಷ್ಟಂ ಗಂಧರ್ವನಗರಂ ಸ್ಮೃತಂ　　|| ೧೫ ||

ನಿರ್ಘಾತಂ ಸ್ತನಿತಂ ಪ್ರೋಕ್ತಂ ವಿನಾ ಮೇಘನಿದರ್ಶನಾತ್ ।
ಯತೋಯತಸ್ತೋಯದೃಷ್ಟಿಃ ಕಥಿತಾ ಮೃಗತೃಷ್ಣಿಕಾ　　|| ೧೬ ||

ಮೇಘೋ ಘನಂ ವಾರಿದಂ ಚ ಜೀಮೂತಂ ಚ ಬಲಾಹಕಂ ।
ಸ್ತನಿತಂ ಗರ್ಜಿತಂ ವಿದ್ಯಾತ್ ವೃಷ್ಟ್ಯಾ ಪ್ರೋಕ್ತಾ ಪ್ರವರ್ಷಣೇ　　|| ೧೭ ||

ಆಸಾರೋ ವೇಗವದ್ವರ್ಷಂ ವೃಷತೋ ಮಂದ ಉಚ್ಯತೇ ।
ದೃಶ್ಯಮಾನೇ ತಥಾ ಸೂರ್ಯೇ ದಿವ್ಯಂ ಪ್ರೋಕ್ತಂ ಚ ವರ್ಷಣಂ　　|| ೧೮ ||

ದೃಶ್ಯಮಾನೇ ತಥಾ ಚಂದ್ರೇ ಸಾಮೃತಂ ಪರಿಕೀರ್ತಿತಂ ।
ವಾತ್ಯಾ ವಾತಸಮುತ್ಥಾ ಸ್ಯಾತ್ ನೀಹಾರಂ ತಮ ಉಚ್ಯತೇ　　|| ೧೯ ||

೧೫-೧೭　ಪರಿಶುದ್ಧವಾದ ದಿಕ್ಕು ಅಗ್ನಿವರ್ಣದಿಂದ ಕೂಡಿದ್ದಲ್ಲಿ ಅದಕ್ಕೆ ದಿಗ್ದಾಹವೆಂದು ಪ್ರಸಿದ್ಧಿ ಇದೆ　ಆಕಾಶದಲ್ಲಿ (ಮೇಘಗಳ) ಸನ್ನಿವೇಶದಿಂದ ತೋರಿ ಬರುವ ಶೂನ್ಯವಾದ ನಗರಗಳಿಗೆ ಗಂಧರ್ವನಗರವೆಂದು ಹೆಸರು　ಮೇಘವು ಕಾಣಬರದಿದ್ದರೂ ಆಕಾಶದಲ್ಲ ಕೇಳಿ ಬರುವ ತೀಕ್ಷ್ಣವಾದ ಶಬ್ದಕ್ಕೆ ನಿರ್ಘಾತ ವೆಂದು ಹೆಸರು　ಎಲ್ಲಿ ನೀರಿರುವುದಿಲ್ಲವೋ ಅಲ್ಲಲ್ಲಿ ತೋರಿಬರುವ ಜಲಬುದ್ಧಿಗೆ ಮೃಗತೃಷ್ಣಿಕಾ ಎಂದು ಹೆಸರು　ಮೇಘ, ಘನ, ವಾರಿದ, ಜೀಮೂತ, ಬಲಾಹಕ, ಇವು ಮೇಘಪರ್ಯಾಯಗಳು　ಮಳೆ ಬರುತ್ತಿರುವಾಗ ಉಂಟಾಗುವ ಮೇಘಗರ್ಜನೆಗೆ ಸ್ತನಿತವೆಂದು ಹೆಸರು　ವೇಗವಾಗಿ ಸುರಿಯುವ ಮಳೆಗೆ ಆಸಾರವೆಂದು ಹೆಸರು ಜಲದ ಬಿಂದುಗಳಿಗೆ ಮಂದವೆಂದು ಹೆಸರು

೧೮-೧೯　ಸೂರ್ಯನು ಕಾಣುತ್ತಿರುವಾಗಲೇ ಉಂಟಾಗುವ ಮಳೆಗೆ ದಿವ್ಯ ವೆಂದೂ, ಚಂದ್ರನು ಕಾಣುತ್ತಿರುವಾಗ ಉಂಟಾಗುತ್ತಿರುವ ಮಳೆಗೆ ಅಮೃತವೆಂದೂ ಹಸರು　ವಾತ್ಯಾ ಎಂಬುದು ಗಾಳಿಯಗುಂಪು　ನಿಹಾರ, ತಮಃ, ಶೀಕರ, ಅವಶ್ಯಾಯ, ತುಷಾರ, ತುಹಿನ, ಹಿಮ ಇವು ಮಂಜಿನ ಹೆಸರುಗಳು

ಶೀಕರಾಖ್ಯಮವಶ್ಯಾಯಂ ತುಷಾರಸ್ತುಹಿನಂ ಹಿಮಂ ।
ವಿದ್ಯುತ್ತಟಿತ್ತಥಾ ಲೋಲಾ ಚಂಚಲಾ ಚ ಶತಹ್ರದಾ　　॥ ೨೦ ॥

ಸಮುದ್ರಾಶ್ಚಾಂಬುನಿಧಯಃ ಸಾಗರಾ ಲವಣೋದಕಾಃ ।
ನದ್ಯಃ ಕುಟಿಲಗಾಮಿನ್ಯೋ ನಿಮ್ನಗಾಃ ಸರಿತಸ್ತಥಾ　　॥ ೨೧ ॥

ಗಂಗಾ ವಿಷ್ಣುಪದೀ ಪ್ರೋಕ್ತಾ ಜಾಹ್ನವೀ ತ್ರಿಪಥಾ ತಥಾ ।
ಕಾಲಿಂದೀ ಯಮುನಾ ಪ್ರೋಕ್ತಾ ರೇವಾ ಪ್ರೋಕ್ತಾ ಚ ನರ್ಮದಾ ।
ವಿಪಾಶಾ ಚ ಸನಂದಾಖ್ಯಾ ಶತದ್ರುಃ ಶೌರಿಸಂಜ್ಞಿಕಾ　　॥ ೨೨ ॥

ಬುದ್ಧಿಸ್ತಥಾ ಸೂರ್ಯ ಇತಿ ಪ್ರದಿಷ್ಟೋ
　ಭೂತಾನಿ ಚೋಕ್ತಾನಿ ತಥೇಂದ್ರಿಯಾಣಿ ।
ವಾಣೀ ತಥೋಕ್ತಾ ಚ ಸರಸ್ವತೀ ಚ
　ಮನಸ್ತಥೋಕ್ತಂ ನೃಪಚಂದ್ರಸಂಜ್ಞಂ　　॥ ೨೩ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಅಭಿಧಾನಕೋಶೋ ನಾಮ
ನವಮೋಽಧ್ಯಾಯಃ

---

೨೦–೨೩ ವಿದ್ಯುತ್, ತಟಿತ್, ಲೋಲಾ, ಚಂಚಲಾ, ಶತಹ್ರದಾ ಇವು ಮಿಂಚಿನ ಹೆಸರುಗಳು ಸಮುದ್ರ, ಅಂಬುನಿಧಿ, ಸಾಗರ, ಲವಣೋದಕ ಇವು ಸಮುದ್ರದ ನಾಮಗಳು ನದೀ, ಕುಟಿಲಗಾಮಿನೀ, ನಿಮ್ನಗಾ, ಸರಿತ್ ಇವು ನದಿಗಳ ಸಾಮಾನ್ಯನಾಮಗಳು ಗಂಗಾ, ವಿಷ್ಣುಪದೀ, ಜಾಹ್ನವೀ, ತ್ರಿಪಥಾ ಇವು ಗಂಗಾನದಿಯ ನಾಮಗಳು ನರ್ಮದಾ, ರೇವಾ ಇವು ನರ್ಮದಾ ನದಿಯ ಹೆಸರುಗಳು ಸನಂದಾ ವಿಪಾಶಾ ಇವು ವಿಪಾಶಾ ನದಿಯ ನಾಮಗಳು ಶತದ್ರು, ಶೌರಿ ಇವು ಶತದ್ರೂನದಿಯ ನಾಮಗಳು ಬುದ್ಧಿಗೆ ಸೂರ್ಯನೆಂದೂ, ಇಂದ್ರಿಯಗಳಿಗೆ ಭೂತಗಳೆಂದೂ, ಸರಸ್ವತಿಗೆ ವಾಣೀ ಎಂದೂ, ಮನಸ್ಸಿಗೆ ಚಂದ್ರನೆಂದೂ ಹೆಸರುಗಳಿವೆ

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಅಭಿಧಾನಕೋಶವೆಂಬ ಒಂಭತ್ತನೆಯ
ಅಧ್ಯಾಯವು ಮುಗಿದುದು

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ದಶಮೋಽಧ್ಯಾಯಃ ||

**|| ಮಾರ್ಕಂಡೇಯ ಉವಾಚ ||**

**ಮನುಷ್ಯೋ ಮನುಜಶ್ಚೈವ ಪುರುಷಃ ಪೂರುಷಸ್ತಥಾ ।**
**ರಾಮಾ ಯೋಷಿತ್ತಥಾ ಸ್ತ್ರೀ ಚ ಲಲನಾ ಚ ತಥಾ ಸ್ಮೃತಾ || ೧ ||**

**ವರಾರೋಹಾ ಪುರಂಧ್ರಿಶ್ಚ ಶ್ರೇಷ್ಠಾ ಸಾ ಮತ್ತಕಾಶಿನೀ ।**
**ಬ್ರಾಹ್ಮಣಶ್ಚ ತಥಾ ವಿಪ್ರೋ ರಾಜನ್ಯಃ ಕ್ಷತ್ರಿಯೋ ಮತಃ || ೨ ||**

**ಕೀನಾಶಶ್ಚ ಸ್ಮೃತೋ ವೈಶ್ಯಃ ಶೂದ್ರಶ್ಚಾನ್ತ್ಯಜ ಉಚ್ಯತೇ ।**
**ಚಂಡಾಲಃ ಪುಲ್ಕಸಃ ಪ್ರೋಕ್ತಃ ಮಾತಂಗಶ್ಚ ತಥೋಚ್ಯತೇ || ೩ ||**

---

### ಹತ್ತನೆಯ ಅಧ್ಯಾಯವು.

೧-೩ ಮಾರ್ಕಂಡೇಯರು ಪುನಃ ಹೇಳುತ್ತಾರೆ.—ಮನುಷ್ಯ, ಮನುಜ, ಪುರುಷ, ಪೂರುಷ ಇವು ಮನುಷ್ಯನಾಮಗಳು ರಾಮಾ, ಯೋಷಿತ್, ಸ್ತ್ರೀ, ಲಲನಾ, ವರಾರೋಹಾ ಪುರಂಧ್ರಿ, ಇವು ಹೆಂಗಸರ ನಾಮಗಳು ಮತ್ತಕಾಶಿನೀ ಎಂಬುದು ಶ್ರೇಷ್ಠಳಾದ ಯುವತಿಯ ಹೆಸರು ಬ್ರಾಹ್ಮಣ, ವಿಪ್ರ ಇವು ಬ್ರಾಹ್ಮಣನ ನಾಮಗಳು ರಾಜನ್ಯ ಎಂಬುದು ಕ್ಷತ್ರಿಯನ ಹೆಸರು ಕೀನಾಶ ಎಂಬುದು ವೈಶ್ಯನ ಹೆಸರು ಅಂತ್ಯಜ ಎಂಬುದು ಶೂದ್ರನ ಹೆಸರು ಪುಲ್ಕಸ ಎಂಬುದೂ ಮಾತಂಗ ಎಂಬುದೂ ಚಂಡಾಲನ ಹೆಸರು

ಹಸ್ತೀ ದ್ವಿಪ ಇಭೋ ದಂತೀ ಮಾತಂಗಃ ಕುಂಜರೋ ಗಜಃ ।
ಅಶ್ವಶ್ಚ ತುರಗಃ ಸಪ್ತಿರ್ಹಯೋ ವಾಜೀ ಹರಿಸ್ತಥಾ ॥ ೪ ॥

ಗೌರುಕ್ಷಾ ಛಾಗಲೋಽಜಶ್ಚ ಉರಭ್ರೋಽವಿಸ್ತಥೋಚ್ಯತೇ ॥ ೫ ॥

ಅಸಿರ್ವಿಶಸನಃ ಖಡ್ಗಸ್ತೀಕ್ಷ್ಣಧಾರೋ ದುರಾಸದಃ ।
ಶ್ರೀಗರ್ಭೋ ವಿಜಯಶ್ಚೈವ ಧರ್ಮಾಧಾರಸ್ತಥಾಷ್ಟಮಃ ॥ ೬ ॥

ಸುವರ್ಣಂ ಕನಕಂ ರುಕ್ಮಂ ಹೇಮಂ ಕಾರ್ತಸ್ವರಂ ತಥಾ ।
ಜಾಂಬೂನದಂ ತದ್ದೇವಾನಾಂ ರೂಪ್ಯಂ ರಜತಮಿಷ್ಯತೇ ॥ ೭ ॥

ಉದುಂಬರಂ ಸ್ಮೃತಂ ತಾಮ್ರಂ ಅಯೋ ಲೋಹಂ ಪ್ರಕೀರ್ತಿತಂ ।
ಆರಕೂಟಂ ತಥಾ ರೀತೀ ರತ್ನಂ ಮಾಣಿಕ್ಯಮುಚ್ಯತೇ ॥ ೮ ॥

ಆತಪತ್ರಂ ಸ್ಮೃತಂ ಛತ್ರಂ ಕಂಬುಃ ಶಂಖ ಉದಾಹೃತಃ ।
ಪಂಕಜಂ ಕಮಲಂ ಪದ್ಮಂ ಪುಂಡರೀಕಂ ಪ್ರಕೀರ್ತಿತಂ ॥ ೯ ॥

---

೪–೭ ಹಸ್ತೀ, ದ್ವಿಪ, ಇಭ, ದಂತೀ, ಮಾತಂಗ, ಕುಂಜರ, ಗಜ, ಇವು ಆನೆಯ ನಾಮಗಳು ಅಶ್ವ, ತುರಗ, ಸಪ್ತಿ, ಹಯ, ವಾಜೀ, ಹರಿ ಇವು ಕುದುರೆಯ ಪರ್ಯಾಯಪದಗಳು ಗೌಃ, ಉಕ್ಷಾ, ಇವು ಕ್ರಮವಾಗಿ ಹಸು ಮತ್ತು ಎತ್ತಿನ ನಾಮಗಳು ಛಾಗಲ, ಅಜ ಇವು ಆಡಿನ ಹಸರುಗಳು ಉರಭ್ರ, ಅವಿ ಇವು ಕುರಿಯ ಹಸರುಗಳು ಅಸಿ, ವಿಶಸನ, ಖಡ್ಗ, ತೀಕ್ಷ್ಣಧಾರ, ದುರಾಸದ, ಶ್ರೀಗರ್ಭ, ವಿಜಯ, ಧರ್ಮಾಧಾರ, ಅಷ್ಟಮ ಇವು ಕತ್ತಿಯನಾಮಗಳು ಸುವರ್ಣ ಕನಕ, ರುಕ್ಮ, ಹೇಮ, ಕಾರ್ತಸ್ವರ, ಜಾಂಬೂನದ ಇವು ಚಿನ್ನದ ಹೆಸರುಗಳು ರೂಪ್ಯ, ರಜತ ಇವು ಬೆಳ್ಳಿಯ ನಾಮಗಳು

೮–೯ ಉದುಂಬರ, ತಾಂಬ್ರ ಇವು ತಾಂಬ್ರದ ಹೆಸರುಗಳು ಅಯಃ, ಲೋಹಂ ಇವು ಕಬ್ಬಿಣದ ಹೆಸರುಗಳು ಆರಕೂಟ, ರೀತಿ. ಇವು ಹಿತ್ತಾಳೆಯ ಹೆಸರುಗಳು ರತ್ನ, ಮಾಣಿಕ್ಯ ಇವು ರತ್ನಸಾಮಾನ್ಯದ ಹೆಸರುಗಳು ಆತಪತ್ರ, ಛತ್ರ ಇವು ಛತ್ರಿಯ ಹೆಸರುಗಳು ಕಂಬು, ಶಂಖಃ ಇವು ಶಂಖದ ಹಸರುಗಳು ಪಂಕಜ, ಕಮಲ, ಪುಂಡರೀಕ, ತಾಮರಸ, ಶತಪತ್ರ, ದೈವತ ಇವು ಕಮಲದ ಹೆಸರುಗಳು

ತಥಾ ತಾಮರಸಂ ಚೈವ ಶತಪತ್ರಂ ತು ದೈವತಂ ।
ಇಂದೀವರಂ ಚೋತ್ಪಲಂ ಸ್ಯಾತ್ಕಲ್ಹಾರಂ ಶುಕ್ಲಮೇವ ತತ್ ॥ ೧೦ ॥

ಸಂಗ್ರಾಮಮಾಜಿರ್ಯುದ್ಧಂ ಚ ಜನ್ಯಮಾಹವ ಏವ ಚ ।
ದಾನಂ ಸಂವನನಂ ಪ್ರೋಕ್ತಂ ವಿವಾಹೋ ವಿನಿವೇಶನಂ ॥ ೧೧ ॥

ಪತ್ನೀ ಭಾರ್ಯಾ ತಥಾ ಜಾಯಾ ಸುತಃ ಪುತ್ರಸ್ತನೂದ್ಭವಃ ।
ಮಾತಾ ಜನಿತ್ರೀ ಜನನೀ ಜನಿತಾ ಜನಕಃ ಪಿತಾ ॥ ೧೨ ॥

ಕ್ಷಯಂ ಚ ಭವನಂ ಪ್ರೋಕ್ತಂ ಮಂದಿರಂ ಗೃಹಮೇವ ಚ ।
ಭಾಂಡಾಗಾರಃ ಸ್ಮೃತಃ ಕೋಶಃ ಧನ್ವನಂ ಗುಪ್ತಿರಿಷ್ಯತೇ ॥ ೧೩ ॥

ವಾಹನಂ ಪತ್ರಸಂಜ್ಞಂ ಸ್ಯಾದಮತ್ರಂ ಪಾತ್ರಮುಚ್ಯತೇ ।
ವರ್ಧಮಾನಂ ಶರಾವೇಸ್ಯಾ ಚ್ಚಾಪಂ ಚ ಧನುರುಚ್ಯತೇ ॥ ೧೪ ॥

ಸಾಯಕಶ್ಚ ಶರಃ ಪ್ರೋಕ್ತಃ ಇಷು ರ್ಬಾಣಶ್ಶಿಲೀಮುಖಃ ।
ಹಸ್ತಮೋಚ್ಯಃ ಸ ಏವೋಕ್ತೋ ಬೃಹಂಕಶ್ಚೈವ ತೋಮರಃ ॥ ೧೫ ॥

೧೦-೧೩ ಇಂದೀವರ, ಉತ್ಪಲ, ಕಲ್ಹಾರ, ಶುಕ್ಲ ಇವು ನೈದಲೆ ಹೂವಿನ ಹೆಸರುಗಳು ಸಂಗ್ರಾಮ, ಆಜಿ, ಯುದ್ಧ ಜನ್ಯ, ಆಹವ ಇವು ಯುದ್ಧದ ಹೆಸರುಗಳು ದಾನ, ಸಂವನನ ಇವು ದಾನದ ಹೆಸರುಗಳು ವಿವಾಹ, ವಿನಿವೇಶನ ಇವು ವಿವಾಹ ಪರ್ಯಾಯಗಳು ಪತ್ನೀ, ಭಾರ್ಯಾ, ಜಾಯಾ ಇವು ಪತ್ನಿಯ ಹೆಸರುಗಳು ಸುತ, ಪುತ್ರ, ತನೂದ್ಭವ ಇವು ಪುತ್ರನ ಹೆಸರುಗಳು ಮಾತಾ, ಜನಿತ್ರೀ ಜನನೀ ಇವು ತಾಯಿಯ ಹಸರುಗಳು ಜನಿತಾ, ಜನಕ, ಪಿತಾ ಇವು ತಂದೆಯ ಹೆಸರುಗಳು ಕ್ಷಯ, ಭವನ, ಮಂದಿರ, ಗೃಹ ಇವು ಮನೆಯ ಹೆಸರುಗಳು ಭಾಂಡಾಗಾರ, ಕೋಶ ಇವು ಧನಗೃಹಕ್ಕೆ ಹೆಸರುಗಳು ಧನ್ವನವೆಂದರೆ ರಕ್ಷಣೆಯೆಂದರ್ಥ

೧೪-೧೬ ವಾಹನ, ಪತ್ರ ಇವು ವಾಹನ, ಪರ್ಯಾಯಗಳು, ಅಮತ್ರ, ಪಾತ್ರ ಇವು ಪಾತ್ರೆಯ ಹೆಸರುಗಳು, ವರ್ಧಮಾನ, ಶರಾವ, ಇವು ಶರಾವೆಯ ಹೆಸರುಗಳು ಚಾಪ, ಧನುಸ್ಸು, ಇವು ಧನುಸ್ಸಿನ ಹೆಸರುಗಳು ಸಾಯಕ, ಶರ,

**ಪುಷ್ಪಪ್ರಕರಮಿತ್ಯುಕ್ತಮುಪಕಾರಂ ನರಾಧಿಪ ।**
**ವಾಲವ್ಯಜನಮುಪ್ಯುಕ್ತಂ ತಥಾ ಚಾಮರಸಂಜ್ಞಿತಂ　　॥ ೧೬ ॥**

**ಮೃಜಾ ಶೋಭಾ ವಿನಿರ್ದಿಷ್ಟಾ ಅಲಂಕಾರೋ ವಿಭೂಷಣಂ ।**
**ಪ್ರಸಾಧನಂ ಮಂಡನಂ ಸ್ಯಾದ್ಬಲಃ ಸಾರ ಉದಾಹೃತಃ　　॥ ೧೭ ॥**

**ಅರ್ಭಕಶ್ಚ ಸ್ಮೃತೋ ಬಾಲೋ ಬಾಲಶ್ಚಾಶ್ವಃ ಕಿಶೋರಕಃ ।**
**ಹಸ್ತೀ ಕಲಭ ಇತ್ಯುಕ್ತೋ ವತ್ಸಶ್ಚೋಕ್ಷಾ ಪ್ರಕೀರ್ತಿತಃ　　॥ ೧೮ ॥**

**ಸರ್ವಹಾ ಕೇಸರೀ ಸಿಂಹಃ ಶಾರ್ದೂಲೋ ವ್ಯಾಘ್ರ ಉಚ್ಯತೇ ।**
**ವಿಪಿನಂ ನಿರ್ಜನಂ ಪ್ರೋಕ್ತಮಜಿರಂ ಸ್ಯಾತ್ ಗೃಹಾಂಗಣಂ　　॥ ೧೯ ॥**

**ಉಪನೀಯ ದದದ್ವೇದಮಾಚಾರ್ಯಃ ಸ ಉದಾಹೃತಃ ।**
**ಏಕದೇಶಮುಪಾಧ್ಯಾಯೋ ಋತ್ವಿಕ್ ಯಜ್ಞಕೃದುಚ್ಯತೇ　　॥ ೨೦ ॥**

---

ಇಷು, ಬಾಣ, ಶಿಲೀಮುಖ, ಇವು ಕೈಯ್ಯಿಂದ ಬಿಡುವ ಬಾಣಗಳ ಹೆಸರುಗಳು ದೊಡ್ಡದಾದ ಆ ಬಾಣಗಳೇ ತೋಮರವೆಂದು ಹೇಳಲ್ಪಡುತ್ತವೆ ಉಪಕಾರಕ್ಕೆ ಪುಷ್ಪಪ್ರಕರವೆಂದು ಸಂಜ್ಞೆ, ವಾಲವ್ಯಜನ, ಚಾಮರ, ಇವು ಚಾಮರದ ಹೆಸರುಗಳು

೧೭-೨೦ ಮೃಜಾ, ಶೋಭಾ, ಇವು ಕಾಂತಿಯ ಪರ್ಯಾಯಗಳು ಅಲಂಕಾರ, ವಿಭೂಷಣ, ಇವು ಅಲಂಕಾರ ಸಾಮಗ್ರಿಯ ಹೆಸರುಗಳು ಪ್ರಸಾಧನ, ಮಂಡನ, ಇವು ಅಲಂಕರಣ ಕ್ರಿಯೆಯ ಹೆಸರುಗಳು ಬಲ, ಸಾರ, ಇವು ಬಲದ ಹೆಸರುಗಳು. ಅರ್ಭಕ, ಬಾಲ, ಇವು ಬಾಲಕನ ಹೆಸರುಗಳು ಸಣ್ಣ ಕುದುರೆಗೆ ಕಿಶೋರಕ ಎಂದು ಹೆಸರು ಸಣ್ಣ ಆನೆಗೆ ಕಲಭ ಎಂದೂ, ಸಣ್ಣ ಎತ್ತಿಗೆ ವತ್ಸ ಎಂದೂ ಹೆಸರುಗಳು ಸರ್ವಹಾ, ಕೇಸರೀ ಸಿಂಹ. ಇವು ಸಿಂಹದ ಹೆಸರುಗಳು ಶಾರ್ದೂಲ, ವ್ಯಾಘ್ರ, ಇವು ಹುಲಿಯ ಹೆಸರುಗಳು ನಿರ್ಜನವಾದ ಕಾಡಿಗೆ ವಿಪಿನವೆಂದೂ, ಮನೆಯ ಅಂಗಳಕ್ಕೆ ಅಜಿರವೆಂದೂ ಹಸರು ಉಪನಯನ ಮಾಡಿ ವೇದವನ್ನು ಉಪದೇಶಿಸಿದವನಿಗೆ ಆಚಾರ್ಯನೆಂದೂ ಸ್ವಲ್ಪ ಭಾಗವನ್ನು ಉಪದೇಶಿಸಿದವನಿಗೆ, ಉಪಾಧ್ಯಾಯನೆಂದೂ, ಯಜ್ಞವನ್ನು ಮಾಡುವವನಿಗೆ ಋತ್ವಿಕ್ ಎಂದೂ ಹೆಸರು

ಸಾಂವತ್ಸರೋ ಜ್ಯೋತಿಷವಿತ್ ವೃತೋ ಭವತಿ ಭೂಭುಜಾ ।
ತಸ್ಯೈವ ಯಜ್ಞಕೃದ್ಯಸ್ತು ಸ ಪುರೋಹಿತ ಇಷ್ಯತೇ ॥ ೨೧ ॥

ಅಮಾತ್ಯಶ್ಚ ಸ್ಮೃತೋ ಮಂತ್ರೀ ದೇಶೋ ನಿಚಯ ಉಚ್ಯತೇ ।
ರಾಜಾ ನರೇಂದ್ರೋ ನೃಪತಿಸ್ತಥೈವ ಸಿಹ್ಮಾಸನಂ ತಸ್ಯ ತಥಾಸನಂ ಸ್ಯಾತ್।
ಕ್ಷತ್ತಾ ಪ್ರತೀಹಾರ ಇತಿ ಪ್ರದಿಷ್ಟಸ್ತದ್ಧಸ್ತದಂಡಃ ಕಥಿತಂ ತು ವೇತ್ರಂ॥ ೨೨ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಅಭಿಧಾನಕೋಶೇ ಚಂಡಾಲಾದಿಪರ್ಯಾಯ
ವರ್ಣನಂ ನಾಮ ದಶಮೋऽಧ್ಯಾಯಃ

---

೨೧-೨೨ ರಾಜನಿಂದ ತನ್ನ ಕಾರ್ಯಕ್ಕಾಗಿ ವರಿಸಲ್ಪಟ್ಟ ಜ್ಯೋತಿಶ್ಶಾಸ್ತ್ರಜ್ಞನು ಸಾಂವತ್ಸರನೆಂದು ಹೇಳಲ್ಪಡುತ್ತಾನೆ, ಆ ರಾಜನ ಯಜ್ಞಕಾರ್ಯವನ್ನು ನಿರ್ವಹಿಸುವವನು ಪುರೋಹಿತನೆಂದು ಹೇಳಲ್ಪಡುತ್ತಾನೆ ಮಂತ್ರಿಗೆ ಅಮಾತ್ಯನೆಂದು ಹೆಸರು. ದೇಶಕ್ಕೆ ನಿಚಯವೆಂದು ಹೆಸರು ರಾಜಾ ನರೇಂದ್ರ, ನೃಪತಿ ಇವು ರಾಜನ ನಾಮಗಳು ಅವನ ಆಸನವು ಸಿಹ್ಮಾಸನವೆಂದು ಹೇಳಲ್ಪಡುತ್ತದೆ. ಅವನ ದ್ವಾರಪಾಲಕನಿಗೆ ಕ್ಷತ್ತಾ ಎಂದೂ, ಆ ದ್ವಾರಪಾಲಕನ ಕೈಯಲ್ಲಿರುವ ದಂಡಕ್ಕೆ ವೇತ್ರವೆಂದೂ ಹಸರು

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯ ಖಂಡದಲ್ಲಿ ಮಾರ್ಕಂಡೇಯ
ವಜ್ರ ಸಂವಾದದಲ್ಲಿ ಅಭಿಧಾನ ಕೋಶದಲ್ಲಿ ಚಂಡಾಲಾದಿಪ
ರ್ಯಾಯವರ್ಣನವೆಂಬ ಹತ್ತನೆಯ ಅಧ್ಯಾಯ
ಮುಗಿದಿದೆ



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಏಕಾದಶೋಽಧ್ಯಾಯಃ ||

### || ಮಾರ್ಕಂಡೇಯ ಉವಾಚ ||

**ಕೀರ್ತಿರ್ಲಕ್ಷ್ಮೀಃ ಧೃತಿರ್ಮೇಧಾ ಮತಿಃ ಪುಷ್ಟಿಃ ಸರಸ್ವತೀ ।**
**ಸ್ಮೃತಿಃ ಶ್ರದ್ಧಾ ರತಿಶ್ಚೈವ ಧೃತಿರ್ನೀತಿಃ ಸ್ಥಿತಿಃ ಶ್ರುತಿಃ ॥ ೧ ॥**

**ರಾತ್ರಿಃ ಪ್ರಭಾ ಕ್ಷಮಾ ದೀಪ್ತಿಃ ಶಾಲಾ ಮಾಲಾ ನಿಶಾ ಸ್ಪೃಹಾ ।**
**ದೋಲಾ ಹೇಲಾ ತಥಾಲೀಲಾ ಯಾಮಿನೀ ಕ್ಷಣದಾಚರಾ ॥ ೨ ॥**

**ಯಾತ್ರಾ ಭಸ್ತ್ರಾ ದ್ಯುತಿರ್ವಾರ್ತಾ ದಂಷ್ಟ್ರಾ ಸೇನಾ ವಚಾ ತಥಾ ।**
**ಕುಟಿಃ ಖೋರೀ ದಯಾ ಜ್ಯೋತ್ಸ್ನಾ ಸೀಮಾವೇಣಿಸ್ತಥೈವ ವಾಕ್ ॥**

**ತನುರ್ಧೂಲಿಃ ಶಲಾಕಾ ಚ ಗ್ರೀವಾ ಭ್ರೂಶ್ಚ ಶರತ್ತಥಾ ।**
**ದರೀಪ್ರಾವೃಟ್ಚ ಧಮನೀ ಸ್ಥೂಣಾ ಚೂಡಾ ಸಿರಾ ವಸಾ ॥ ೪ ॥**

**ಕಕ್ಷ್ಯಾ ಸಪ್ತಾ ಸುರಾ ಜಂಘಾ ಜಟಾ ಘಂಟಾ ಕಶಾ ತಥಾ ।**
**ವಿದ್ಯುತ್ಕಕ್ಷಾ ಸರಿದ್ವಲ್ಲೀರಿಷೀಕಾ ರಜ್ಜುರಿಷ್ಟಕಾ ॥ ೫ ॥**

**ದಿಗ್ಭೂರ್ಭೂಮಿರ್ಮಹೀ ಕ್ಷೋಣೀ ಕ್ಷಮಾ ಚೈವ ವಸುಂಧರಾ ।**
**ಛಾಯಾ ಚಮೂರ್ವಾಲುಕಾ ಚ ತಥಾ ವಿದ್ಯುದ್ವಿಪತ್ಸರಿತ್ ॥ ೬ ॥**

**ಇರಾಸಂಪದವಾಪಶ್ಚ ಲೀಲಾವೇಲಾ ತಲಾ ಶಿಲಾ ।**
**ಕಲಾ ಚ ಮೇಖಲಾ ಜ್ವಾಲಾ ಸೇನಾ ದದ್ರುರ್ವಲೀ ಸಮಾ ॥ ೭ ॥**

---

### ಹನ್ನೊಂದನೆಯ ಅಧ್ಯಾಯವು

೧-೧೫ ಇವೆಲ್ಲವೂ ಸ್ತ್ರೀಲಿಂಗ ಶಬ್ದಗಳು ಈ ರೀತಿ ಸ್ತ್ರೀಲಿಂಗದಲ್ಲಿರುವ ಶಬ್ದಗಳನ್ನೆಲ್ಲಾ ನಿನಗೆ ಸಂಗ್ರಹವಾಗಿ ಹೇಳಿದ್ದೇನೆ ಇಕಾರಾಂತವಾದ ಸ್ತ್ರೀಲಿಂಗ

ಜ್ಯಾ ಚ ಮ್ಲಾನಿಸ್ತಥಾ ಹಾನಿಃ ಶಾಟೀ ಸ್ವಾಹಾ ತಥೈವ ಗೀಃ ।
ಧೀರ್ವೃದ್ಧಿರ್ಧೂಃ ಕ್ಷಮಾ ಬುದ್ಧಿಃ ಕ್ಷುತ್ಸೂಕ್ಷ್ಮಾಶೀಃ ಸವಾಲುಕಾ ॥ ೮ ॥

ವಿಂಶತೇರ್ನವತಿರ್ಯಾವ ತ್ಕ್ರೀಡಾ ಸ್ವದುಶಿರೋಧರಾ ।
ಮಾಯಾ ಚ ಶಷ್ಕುಲೀ ಜಿಹ್ವಾ ಘುಟೋತ್ಕಾ ಸ್ನಾಯುರೇವ ಚ ॥ ೯ ॥

ಲೇಖಾ ಜರಾ ತಥಾಪಜ್ಙ್ಕ್ತಿ ಸ್ತ್ರೀತಾ ಪ್ರಾವೃಡರೋಚಕಾ ।
ಲಾಕ್ಷಾ ಕಂಡೂಃ ಪ್ರಿಯಂಗುಶ್ಚ ಮಾಂಡಿಕಾ ಕಟಿರೌಷಧಿಃ ॥ ೧೦ ॥

ಖುಕ್ ಸ್ಫುಲಿಂಗಾ ಕಲಿಃ ಶಯ್ಯಾ ಕೋಟಿಃ ಕಂಥಾ ಚ ನಾಲಿಕಾ ।
ನಿಃಶ್ರೇಣಿಃ ಪೃತನಾ ದೀಪ್ತಿರ್ನಿದ್ರಾ ತಂದ್ರಾ ಗುಹಾ ರುಚಿಃ ॥ ೧೧ ॥

ಸಾಮ್ನಾ ದಾಮ್ನಾ ತಥಾವೀಥೀ ನೀವಿರ್ಧಾರಾ ತಥಾ ಕೃಷಿಃ ।
ಮಂಜೂಷಾಪರ್ಷದಶ್ಚೈವ ಪತಾಕಾ ಕಾಕಿನೀ ಕೃಪಾ ॥ ೧೨ ॥

ವೇಲಾ ಚೈವ ಸಮಂಜಿಷ್ಠಾ ಭೇರೀ ನೇಮಿರ್ಮನಃ ಶಿಲಾ ।
ದರ್ವೀ ಸ್ಥಾಲೀ ಸಭಾ ವೀಚಿಃ ಸ್ಥಲೀ ಚೈವ ಸಮಂಜರೀ ॥ ೧೩ ॥

ವಲ್ಲರೀ ಮಂದುರಾ ಲಾಕ್ಷಾ ಸೂಚೀ ಚಾಧಿಷಣಾ ಶಮೀ ।
ಮಕ್ಷಿಕಾ ವಿಕೃತಿರ್ಯೂಕಾ ಶಿಖಾ ಶಾಖಾ ತಥಾಟವೀ ॥ ೧೪ ॥

ಸ್ತ್ರೀವೃತ್ತಯಸ್ತೇ ಕಥಿತಾ ಮಯೈತೇ
ಶಬ್ದಾಃ ಸಮಾಸಸ್ತ್ವಯಮತ್ರ ರಾಜನ್ ।
ಇದಂ ತಮಾನನ್ತ್ಯಮುಶಂತಿ ಸರ್ವಂ
ಸ್ತ್ರೀವಾಚಕಂ ಶಬ್ದಮುಶಂತಿ ಧೀರಾಃ ॥ ೧೫ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಅಭಿಧಾನಕೋಶೇ ಸ್ತ್ರೀಲಿಂಗನಿರ್ದೇ
ಶೋನಾಮೈಕಾದಶೋಽಧ್ಯಾಯಃ

---

ಶಬ್ದಗಳು ಅನಂತವಾಗಿವೆ ಎಂದೂ ಸ್ತ್ರೀ ವಾಚಕವಾದ ಶಬ್ದಗಳೆಲ್ಲವೂ ಸ್ತ್ರೀಲಿಂಗದಲ್ಲಿರುತ್ತವೆ ಎಂದೂ ಬುದ್ಧಿವಂತರ ಅಭಿಪ್ರಾಯವಿದೆ

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯ ಖಂಡದ ಮಾರ್ಕಂಡೇಯ
ವಜ್ರ ಸಂವಾದದಲ್ಲಿ ಅಭಿಧಾನಕೋಶದ ಸ್ತ್ರೀಲಿಂಗನಿರ್ದೇಶವೆಂಬ
ಹನ್ನೊಂದನೆಯ ಅಧ್ಯಾಯ ಮುಗಿದಿದೆ

॥ ಓಂ ॥

॥ ಶ್ರೀ ಹಯಗ್ರೀವಾಯ ನಮಃ ॥

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### ॥ ದ್ವಾದಶೋಽಧ್ಯಾಯಃ ॥

**॥ ಮಾರ್ಕಂಡೇಯ ಉವಾಚ ॥**

**ಅತಃ ಪರಂ ಪ್ರವಕ್ಷ್ಯಾಮಿ ಯದುವಂಶವಿವರ್ಧನ ।**
**ತವ ಪುಂವಾಚಕಾನ್ ಶಬ್ದಾನ್ ಶೃಣು ತಾನ್ ವದತೋ ಮಮ ॥ ೧ ॥**

**ರಾಜಾ ಕೃತಾಕ್ಷಮೂರ್ಧಾನಾತ್ಮಾ ವಾಯುಶ್ಲೇಷ್ಮಾ ಶ್ಮಪೂರಣಃ ।**
**ಮಜ್ಜಾಪ್ಲೀಹಾ ಚ ಕಥಿತಾ ತಾನಾದ್ಯರ್ಥಾಃ ಪುಮರ್ಥಕಾಃ ॥ ೨ ॥**

**ವೃತ್ರಃ ಪುತ್ರಸ್ತಥಾ ಮಂತ್ರಃ ತಥೈವಾಮಂತ್ರ ಇಷ್ಯತೇ ।**
**ಪುಂಸಿ ರಾಶಿರ್ಮುಹೂರ್ತಶ್ಚ ಮಾಸಃ ಪಕ್ಷೋಽಬ್ದವಾಸರೌ ॥ ೩ ॥**

**ಋತುಃ ಕಾಲೋ ಗಿರಿಃ ಶೈಲಃ ಶಿಲೋಚ್ಚಯನಗಾಚಲಾಃ ।**
**ಸುರಾಸುರಾಣಾಂ ಸಂಜ್ಞಾಶ್ಚ ಯಾಶ್ಚ ಪ್ರೋಕ್ತಾ ಮಹೋದಧೇಃ ॥ ೪ ॥**

---

### ಹನ್ನೆರಡನೆಯ ಅಧ್ಯಾಯವು.

೧-೬ ಎಲೈ ಯದುವಂಶಶಿರೋಮಣಿಯೇ ಇನ್ನು ಮುಂದೆ ಪುಲ್ಲಿಂಗ ಶಬ್ದಗಳನ್ನು ಹೇಳುತ್ತೇನೆ. ಅದನ್ನು ಕೇಳು'—ರಾಜಾ ಎಂಬ ಶಬ್ದ ಮೊದಲು, ಪೂರಣ ಶಬ್ದ ಪರ್ಯಂತವೂ ಮಜ್ಜಾಪ್ಲೀಹಾ ಶಬ್ದಗಳೂ ತಾನಬೋಧಕವಾದ ಶಬ್ದಗಳೂ ಸಹ ಪುಲ್ಲಿಂಗಗಳೆಂದೂ ಹೇಳಲ್ಪಟ್ಟಿವೆ ವೃತ್ರ, ಪುತ್ರ, ಮಂತ್ರ, ಅಮಂತ್ರ, ರಾಶಿ, ಮುಹೂರ್ತ, ಮಾಸ, ಪಕ್ಷ, ಅಬ್ದ, ವಾಸರ, ಋತು, ಕಾಲ, ಗಿರಿ, ಶೈಲ, ಶಿಲೋಚ್ಚಯ, ನಗ, ಅಚಲ ಇವೂ ಸುರಾಸುರರಿಗೆ ವಾಚಕಗಳಾದ ಮತ್ತು ಸಮುದ್ರಕ್ಕೆ

ಸಂವತ್ಸರಶ್ಚ ದಿವಸೋ ಗ್ರಹೋ ವಾಸರ ಏವ ಚ ।
ಪರ್ಯಾಯಃ ಸಂಕಶರಯೋಃ ಅರಿನಿಸ್ತ್ರಿಂಶಯೋರಪಿ ॥ ೫ ॥

ಪುತ್ರಪರ್ಯಾಯಶಬ್ದಾಶ್ಚ ಪಿತೃಪರ್ಯಾಯಸಂಯುತಾಃ ।
ಕಂಠಬಾಹ್ವೋಸ್ತಥಾ ಸಂಜ್ಞಾಃ ಸ್ತನಕೇಶರದಸ್ಯ ಚ ॥ ೬ ॥

ಗುಲ್ಫನಾಮಾನಿ ಕರ್ಣಶ್ಚ ಹನುಃ ಪ್ರಶ್ನೋ ವಿಧಿರ್ನಿಧಿಃ ।
ಕಪೋಲನಾಮಾನಿ ತಥಾ ನಿಘೋರ್ಕೇಕ್ಷುಕಕೇಲಯಃ ॥ ೭ ॥

ಕಲಿರ್ವಿಘ್ನೋ ಘಟೋ ಜೂಟಃ ಪಟಃ ಪಾಯುಃ ಕುಶೋಽಂಕುಶಃ ।
ಬಿಂದುಃ ಸ್ವರಃ ಕುಠಾರಶ್ಚ ಪಣಶಾಣೌ ಚ ಪರ್ಪಟಃ ॥ ೮ ॥

ವಟೋ ಬಂಧಃ ಪುಟೋ ಮೃತ್ಯುಃ ಮನ್ಯುಃ ಶೋಣಃ ಕಿಣಃ ಫಣಃ ।
ಗುಣಶ್ಚಾರ್ಣೋ ಗಣಃ ಪಂಥಾ ಅಧ್ವಾಜ್ಯಃ ಪೂಗ ಏವ ಚ ॥ ೯ ॥

---

ವಾಚಕಗಳಾದ ಎಲ್ಲಾ ಶಬ್ದಗಳೂ ಪುಲ್ಲಿಂಗಶಬ್ದಗಳೆಂದು ತಿಳಿಯಬೇಕು ಸಂವತ್ಸರ, ದಿವಸ, ಗ್ರಹ, ವಾಸರ ಈ ಶಬ್ದಗಳೂ, ಕಸರು ಮತ್ತು ಬಾಣ ಇದಕ್ಕೆ ವಾಚಕಗಳಾಗಿರುವ ಶಬ್ದಗಳೂ ಮತ್ತು ಶತ್ರುಗಳಿಗೂ ಕತ್ತಿಗೂ ವಾಚಕಗಳಾದ ಶಬ್ದಗಳೂ ಪುಲ್ಲಿಂಗಗಳಾಗಿರುತ್ತವೆ ಪುತ್ರ ವಾಚಕಗಳಾದ ಮತ್ತು ಪಿತೃ ವಾಚಕಗಳಾದ ಶಬ್ದಗಳೂ, ಕಂಠ, ಬಾಹು ಇವುಗಳ ಪರ್ಯಾಯ ಶಬ್ದಗಳೂ, ಸ್ತನ, ಕೂದಲು, ಹಲ್ಲುಗಳು, ಇದಕ್ಕೆ ಬೋಧಕಗಳಾದ ಶಬ್ದಗಳೂ ಸಹ ಪುಲ್ಲಿಂಗಗಳಾಗುತ್ತವೆ

೭-೧೧ ಕಾಲಿನ ಹರಡುಗಳಿಗೆ ವಾಚಕವಾದ ಶಬ್ದಗಳು, ಕರ್ಣ, ಹನು, ಪ್ರಶ್ನ, ವಿಧಿ, ನಿಧಿ, ಮತ್ತು ಕಪೋಲ (ಕೆನ್ನೆಯ)ದ ವಾಚಕ ಶಬ್ದಗಳು, ನಿದಾಘ, ಇಕ್ಷುರಕ, ಲಯ ಈ ಶಬ್ದಗಳೂ ಸಹ ಪುಲ್ಲಿಂಗಗಳಾಗುತ್ತವೆ ಮತ್ತು ಕಲಿ, ವಿಘ್ನ, ಘಟ, ಜೂಟ, ಪಟ, ವಾಯು, ಕುಶ, ಅಂಕುಸ, ಬಿಂದು, ಸ್ವರ,

1 ಇಲ್ಲಿ ನಿದಾಘೇಕ್ಷುರಕಾದಯ ಎಂದು ಪಾಠವಿರಬೇಕೆಂದು ತೋರುತ್ತದೆ

**ಕಮಂಡಲುಃ ಪಲಾಂಡುಶ್ಚ ಗಂಡಃ ಸ್ಥೂಲಿಶ್ಚ ಕಂಕಟಃ ।**
**ಪ್ರಸ್ಥಃ ಶಂಖೋ ರಥಶ್ಚೈವ ರಸೋ ವರ್ಗಸ್ತುಷೋ ಬುಧಃ　|| ೧೦ ||**

**ಯುವೋ ಮಾಷಸ್ತಥಾ ಶಬ್ದಃ ಸ್ಪರ್ಶೋ ಗಂಧಃ ಶರೋ ವಣಿಕ್ ।**
**ಕರೀಷಸ್ತರಲೋ ಮೇಢ್ರೋ ರಥೋ ಮಂಡಪ ಏವ ಚ　|| ೧೧ ||**

**ನರಕೋ ನೂಪುರಶ್ಚೈವ ಸಮುದ್ಗೋ ಲೋಕ ಏವ ಚ ।**
**ಕಾರ್ಷಾಪಣಃ ಕೋಣಮುಸಲೌ ಕುಸೂಲಶೂರ್ಪದರ್ದುರೌ ।**
**ಪಂಚಪಿಣ್ಯಾಕಶೂರ್ಪಾಶ್ಚ ವಾತದಂಡಾಂಕುರಾಂಕುಶಾಃ　|| ೧೨ ||**

**ಕುಣಪಃ ಪ್ರೋಥಯೂಥೌ ಚ ಕುಂತದರ್ಪಣವೇಣುಕಾಃ ।**
**ಧ್ವಜೋ ವಂಶಸ್ತಥಾಃ ವೇಣುಃ ಕ್ರಿಮಿಕಲ್ಕಋಷಿಕರ್ದರಾಃ　|| ೧೩ ||**

**ಪುಸ್ತಕಶ್ಚಾಧ್ವರೋ ವ್ರೀಹಿರಂಬುದೋಂಜನ ಏವ ಚ　|| ೧೪ ||**

---

ಕುಠಾರ, ಪಣ, ಶಾಣ, ಪರ್ಪಟ, ವಟ, ಬಂಧ, ಪುಟ, ಮೃತ್ಯು, ಮನ್ಯು, ಶೋಣ, ಕಿಣ, ಫಣ, ಗುಣ, ಚೂರ್ಣ, ಗಣ, ಪಂಥಾಃ, ಅಧ್ವಾ, ಅಂಕ, ಪೂಗ, ಕಮಂಡಲು, ಪಲಾಂಡು, ಗಂಡ, ಸ್ಥೂಲ, ಕಂಕಟ, ಪ್ರಸ್ಥ, ಶಂಖ, ರಥ, ರಸ, ವರ್ಗ, ತುಷ, ಬುಧ, ಯುವ, ಮಾಷ, ಶಬ್ದ, ಸ್ಪರ್ಶ, ಗಂಧ, ಶರ, ವಣಿಕ್, ಕರೀಷ, ತರಲ, ಮೇಢ್ರ, ರಥ, ಮಂಡಪ, ಈ ಶಬ್ದಗಳೂ ಪುಲ್ಲಿಂಗ ಗಳಾಗುತ್ತವೆ

೧೨-೧೫ ನರಕ, ನೂಪುರ, ಸಮುದ್ಗ, ಲೋಕ, ಕಾರ್ಷಾಪಣ, ಕೋಣ, ಮುಸಲ, ಕುಸೂಲ, ಶೂರ್ಪ, ದರ್ದುರ, ಪಂಚ, ಪಿಣ್ಯಾಕ, ಶೂರ್ಪ, ವಾತ, ದಂಡ, ಅಂಕುಶ, ಕುಣಪ, ಪ್ರೋಥ, ಯೂಥ, ಕುಂತ, ದರ್ಪಣ, ವೇಣುಕ, ಧ್ವಜ, ವಂಶ, ವೇಣು, ಕ್ರಿಮಿ, ಕಲ್ಕ, ಋಷಿ, ಕರ್ದರ, ಪುಸ್ತಕ, ಅಧ್ವರ, ವ್ರೀಹಿ, ಅಂಬುದ, ಅಂಜನ, ಸ್ತಂಭ, ಪಶು, ಘರ್ಮ, ನಿದಾಘ,

ಸ್ತಂಭಃ ಪಶುರ್ಘರ್ಮನಿದಾಘಕುಂಭಾಃ
ಕಟಾಹಯಾವಸ್ತಬಕಾಃ ಸಫೇನಾಃ ।
ನಿತಂಬಷಂಡಕ್ಷುಪಸೂಪಯೂಪಾಃ
ಪುಂಸಿ ಸ್ಮೃತಾ ಯಾದವವಂಶಮುಖ್ಯ ॥ ೧೫ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಅಭಿಧಾನಕೋಶೇ ಪುಂವರ್ಗನಿರ್ದೇಶೋ
ನಾಮ ದ್ವಾದಶೋಽಧ್ಯಾಯಃ

---

ಕುಂಭ, ಕಟಾಹ, ಯಾವ, ಸ್ತಬಕ, ಫೇನ, ನಿತಂಬ, ಷಂಡ, ಕ್ಷುಪ, ಸೂಪ, ಯೂಪ, ಇವೆಲ್ಲವೂ ಪುಲ್ಲಿಂಗಕ್ಕೆ ಸೇರಿರುತ್ತವೆ

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ಮೂರನೆಯ ಖಂಡದಲ್ಲಿ ಮಾರ್ಕಂಡೇಯ
ವಜ್ರ ಸಂವಾದದಲ್ಲಿ ಅಭಿಧಾನಕೋಶದಲ್ಲಿ ಪುಲ್ಲಿಂಗವರ್ಗನಿದೇಶವೆಂಬ
ಹನ್ನೆರಡನೆಯ ಅಧ್ಯಾಯ ಮುಗಿದಿದೆ.



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ತ್ರಯೋದಶೋಽಧ್ಯಾಯಃ ||

**|| ಮಾರ್ಕಂಡೇಯ ಉವಾಚ ||**

**ಅನ್ತ್ಯಲಿಂಗೇಽಥ ವರ್ತನ್ತೇ ಯೇ ಶಬ್ದಾ ನೃಪಸತ್ತಮ ।**
**ತಾನಹಂ ಸಂಪ್ರವಕ್ಷ್ಯಾಮಿ ಶೃಣುಷ್ವ ಗದತೋ ಮಮ || ೧ ||**

**ಜಲನಾಮಾನಿ ಸರ್ವಾಣಿ ವಿನಾಪೋ ಯದುಸತ್ತಮ ।**
**ಭ್ರಾಂತಾಶ್ಚ ಪೂರ್ವಂ ಯೇ ನೋಕ್ತಾಃ ತೇ ನಪುಂಸಕವೃತ್ತಯಃ || ೨ ||**

**ದ್ವ್ಯಚೋ ನಾನ್ತಾಸ್ತಥಾ ಯೇ ಚ ನೋಕ್ತಾಸ್ತೇಯದುಸತ್ತಮ ।**
**ಅಸತ್ಯಂ ಚ ಧನಂ ಸರ್ವಂ ಜರಸೋಽನ್ಯತ್ರ ಯಾದವ || ೩ ||**

---

### ಹದಿಮೂರನೆಯ ಅಧ್ಯಾಯವು.

೧-೪ ಮಾರ್ಕಂಡೇಯರು ಹೇಳುತ್ತಾರೆ, ಎಲೈ ದೊರೆಯೇ ಯಾವ ಯಾವ ಶಬ್ದಗಳು ಕೊನೆಯದಾದ ನಪುಂಸಕಲಿಂಗದಲ್ಲಿರುವುವೋ ಅವೆಲ್ಲವನ್ನೂ ಹೇಳುತ್ತೇನೆ ಕೇಳು ಆಪಃ ಎಂಬಶಬ್ದ ಹೊರತು ಜಲವಾಚಕಗಳಾದ ಎಲ್ಲಾ ಶಬ್ದಗಳೂ ನಪುಂಸಕಲಿಂಗದಲ್ಲಿರುತ್ತವೆ ಹಿಂದೆ ನಾನು ಹೇಳದಿರುವ ಭ್ರ ಎಂಬ ಅಕ್ಷರವೇ ಅಂತದಲ್ಲಿ ಉಳ್ಳ ಅಭ್ರ ಮೊದಲಾದ ಶಬ್ದಗಳೂ ನಪುಂಸಕಲಿಂಗದಲ್ಲಿವೆ ಎರಡು ಸ್ವರಗಳಿಂದ ಕೂಡಿ ನಕಾರಾಂತವಾಗಿರುವ ಹಿಂದೆ ಹೇಳದೆ ಇರುವ ಶಬ್ದಗಳೂ ನಪುಂಸಕಲಿಂಗಕ್ಕೆ ಸೇರುತ್ತವೆ ಅಸತ್ಯ ಧನ ಇವುಗಳಿಗೆ ವಾಚಕವಾದ ಶಬ್ದಗಳೂ

ನಪುಂಸಕೇ ಚ ವರ್ತಂತೇ ಶಬ್ದಾ ಲೋಚನವಾಚಕಾಃ ॥ ೪ ॥

ಸರ್ವಾಣಿ ಪುಷ್ಪನಾಮಾನಿ ಕಥಿತಾ ನಿ ನಪುಂಸಕೇ ।
ಶರೀರಮಸ್ಥಿ ದಧಿ ಚ ಸಕ್ಥಿ ವಾ ಗುದಜಾನುನೀ ॥ ೫ ॥

ಶ್ಮಶ್ರುಕೂಲೇ ಕುಲಂ ಪರ್ಣಂ ಲೋಹನಾಮಾನಿ ಯೋನಿ ಚ ।
ಅಹರ್ನಿಶಂ ಶಕೃತ್ಸಕ್ಥಿ ಧನುಃ ಶೋಣಿತದಾರುಣೀ ॥ ೬ ॥

ಕ್ಷೀರಂ ವಿಷಾಮೃತೇ ಷಂಡಂ ಫಲಮೂಲಮಲಾನಿ ಚ ।
ಪುರಂ ಮಧು ಖಲಂ ನಾಲಂ ಚೀವರಂ ಚೀರಮಂಬರಂ ॥ ೭ ॥

ಗಗನಂ ಘನಮಾಕಾಶಂ ಸುಖದುಃಖಪದಾನಿ ಚ ।
ಕೂಪಬೀಜೇಽಥ ಪಲಲಂ ತಲ್ಪಪದ್ಮಶವಾನಿ ಚ ॥ ೮ ॥

ನಿಮಿತ್ತಚಿತ್ತಪಿತ್ತೌಘ ತಕ್ರಶುಕ್ರ ಭಯಾನಿ ಚ ।
ತೀರ್ಥಪಂಜರಚೇಲಾನಿ ಫಲದ್ವಂದ್ವಾಕ್ಷರಾಣಿ ಚ ॥ ೯ ॥

---

ನಪುಂಸಕಲಿಂಗಕ್ಕೆ ಸೇರಿರುತ್ತವೆ ಜರಾ ಎಂಬ ಶಬ್ದವು ನಪುಂಸಕಲಿಂಗವಲ್ಲ, ಕಣ್ಣಿಗೆ ಬೋಧಕಗಳಾದ ಶಬ್ದಗಳೆಲ್ಲಾ ನಪುಂಸಕಲಿಂಗಕ್ಕೆ ಸೇರಿರುತ್ತವೆ

೫-೭ ಹೂವುಗಳಿಗೆ ವಾಚಕಗಳಾದ ಎಲ್ಲಾ ಶಬ್ದಗಳೂ, ನಪುಂಸಕಲಿಂಗದಲ್ಲಿರುತ್ತವೆ ಅಸ್ಥಿ, ದಧಿ, ಸಕ್ಥಿ, ಗುದ, ಜಾನು, ಶ್ಮಶ್ರು, ಕೂಲ, ಕುಲ ಪರ್ಣ ಮತ್ತು ಕಬ್ಬಿಣಕ್ಕೆ ಬೋಧಕವಾದ ಶಬ್ದಗಳು ಅಹರ್ನಿಶಂ, ಶಕೃತ್, ಧನು . ಶೋಣಿತ, ದಾರು, ಕ್ಷೀರ, ವಿಷ, ಅಮೃತ, ಷಂಡ, ಫಲ, ಮೂಲ, ಮಲ, ಪುರ, ಮಧು, ಖಲ, ನಾಲ, ಚೀವರ, ಚೀರ, ಅಂಬರ ಇವೂ ಸಹ ನಪುಂಸಕಲಿಂಗದಲ್ಲಿರುತ್ತವೆ.

೮-೧೧ ಗಗನ, ಘನ, ಆಕಾಶ, ಸುಖದುಃಖಗಳಿಗೆ ವಾಚಕಗಳಾದ ಪದಗಳು ಮತ್ತು ಕೂಪ, ಬೀಜ, ಪಲಲ, ತಲ್ಪ, ಪದ್ಮ, ಶವ, ನಿಮಿತ್ತ, ಚಿತ್ತ, ಪಿತ್ತ, ಓಘ, ತಕ್ರ, ಶುಕ್ರ, ಭಯ, ತೀರ್ಥ, ಪಂಜರ, ಚೇಲ, ಫಲ, ದ್ವಂದ್ವ, ಅಕ್ಷರ,

ಧಾನ್ಯಶ್ಮಶಾನ ರತ್ನಾಗ್ರತಲ್ಪ ರತ್ನಯುಗಾನಿ ಚ ।
ಗೋಪಪತ್ತನಸ್ವೈನ್ಯಾರ್ಘ ಮಂಗಲಾಯುಧಖಾನಿ ಚ ॥ ೧೦ ॥

ನಗರಂ ಹರಿತಾಲಂ ಚ ತಿಮಿರಂ ಪಲಿತಂ ವಿಷಂ ।
ಶ್ಮಶಾನಂ ಮಿಥುನಂ ತತ್ವಂ ಕಿಲ್ಬಿಷಂ ವಿದಲಂ ಹಿಮಂ ॥ ೧೧ ॥

ವೃಂದಂ ಕುತೂಹಲಂ ಶೀಧು ಶರಾವಂ ಶಿಖರಂ ಪಲಂ ।
ವೃತ್ತಂ ಚ ಮುಕುಟಂ ಪಣ್ಯಂ ಮಲಮಂಶುಕಮೇವ ಚ ॥ ೧೨ ॥

ಇಂದ್ರಿಯಂ ಯುಗಲಂ ಕೂಟಂ ಕಪಾಲಂ ಶೂಲಶೇಖರೇ ।
ಪಾತಾಲಂ ವಿವರಂ ರಂಧ್ರಂ ಛಿದ್ರಮಾಕಾಶಮೇವ ಚ ॥ ೧೩ ॥

ತೃಣಂ ಶುಭ್ರಮಿರಂ ಚೈವ ಕುಂಕುಮಂ ಶುಷ್ಕಚೀವರಂ ।
ಮೃಣಾಲಮಜಿರಂ ಖಡ್ಗಂ ತುಹಿನಂ ದ್ವಾರಮಾಸ್ಪದಂ ॥ ೧೪ ॥

---

ಧಾನ್ಯ, ಶ್ಮಶಾನ, ರತ್ನಾಗ್ರ, ತಲ್ಪ, ರತ್ನ, ಯುಗ, ಗೋಪ, ಪತ್ತನ, ಸ್ವನ್ಯ, ಅರ್ಘ, ಮಂಗಲ, ಆಯುಧ, ಖ, ನಗರ, ಹರಿತಾಲ, ತಿಮಿರ, ಪಲಿತ, ವಿಷ, ಶ್ಮಶಾನ, ಮಿಥುನ, ತತ್ವ, ಕಿಲ್ಬಿಷ, ವಿದಲ ಹಿಮ ಇವೆಲ್ಲವೂ ನಪುಂಸಕಲಿಂಗಕ್ಕೆ ಸೇರಿರುತ್ತವೆ

೧೨-೧೫ ವೃಂದ, ಕುತೂಹಲ, ಶೀಧು, ಶರಾವ, ಶಿಖರ, ಪಲ, ವೃತ್ತ, ಮುಕುಟ, ಪಣ್ಯ, ಮಲ, ಅಂಶುಕ, ಇಂದ್ರಿಯ, ಯುಗಲ, ಕೂಟ, ಕಪಾಲ, ಶೂಲ, ಶೇಖರ, ಪಾತಾಲ, ವಿವರ, ರಂಧ್ರ, ಛಿದ್ರ, ಆಕಾಶ, ತೃಣ, ಶುಭ್ರ, ಇರ, ಕುಂಕುಮ, ಶುಷ್ಕ, ಚೀವರ, ಮೃಣಾಲ, ಅಜಿರ, ಖಡ್ಗ, ತುಹಿನ, ದ್ವಾರ, ಆಸ್ಪದ, ರಾಷ್ಟ್ರ, ಕಿಟ್ಟ, ಕಫ, ಆಯುಃ, ಸ್ಥಾಲ, ಖಲೀನ, ಪಲಲ, ಪಲಾಲ,

ರಾಷ್ಟ್ರಂ ತಲಂ ಕಿಟ್ಟಕಫೇ ತಥಾಯುಃ
ಸ್ಥೂಲಂ ಖಲೀನಂ ಪಲಲಂ ಪಲಾಲಂ।
ಕಾಷ್ಠಂ ರಣಂ ಪಾರ್ಶ್ವಕುಕುಂದರೆ ಚ
ಸಂದೇಹಕೇ ಚೈವ ನಪುಂಸಕಂ ಸ್ಯಾತ್ ॥ ೧೫ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಅಭಿಧಾನಕೋಶೇ ನಪುಂಸಕವಿಧೌ
ತ್ರಯೋದಶೋಽಧ್ಯಾಯಃ

ಕಾಷ್ಠ, ರಣ, ಪಾರ್ಶ್ವ, ಕುಕುಂದರ, ಸಂದೇಹಕ ಇವೂ ಸಹ ನಪುಂಸಕಲಿಂಗಕ್ಕೆ ಸೇರಿರುತ್ತವೆ

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರ ಸಂವಾದದಲ್ಲಿ ಅಭಿಧಾನಕೋಶದಲ್ಲಿ ನಪುಂಸಕವಿಧಿಯೆಂಬ
ಹದಿಮೂರನೆಯ ಅಧ್ಯಾಯ ಮುಗಿದಿದೆ



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಚತುರ್ದಶೋಽಧ್ಯಾಯಃ ||

|| ಮಾರ್ಕಂಡೇಯ ಉವಾಚ ||

**ಏಕೈಕಸ್ಯ ತು ವರ್ಣಸ್ಯ ವಿನ್ಯಾಸೋ ಯಃ ಪುನಃ ಪುನಃ ।**
**ಅರ್ಥಗತ್ಯಾ ತು ಸಂಖ್ಯಾತಮನುಪ್ರಾಸಂ ಪುರಾತನೈಃ ॥ ೧ ॥**

**ಅತ್ಯರ್ಥಂ ತತ್ಕೃತಂ ರಾಜನ್ ಗ್ರಾಮ್ಯತಾಮುಪಗಚ್ಛತಿ ।**
**ಶಬ್ದಾಃ ಸಮಾನಾನುಪೂರ್ವ್ಯಾ ಯಮಕಂ ಕೀರ್ತಿತಂ ಪುನಃ ॥ ೨ ॥**

**ಆದೌ ಮಧ್ಯೇ ತಥೈವಾಂತೇ ಪಾದಸ್ಯ ತು ತದಿಷ್ಯತೇ ।**
**ಸಂದಷ್ಟಕಸಮುದ್ರಾಖ್ಯೌ ತಥೈವ ಯಮಕೌ ಮತೌ ॥ ೩ ॥**

---

### ಹದಿನಾಲ್ಕನೆಯ ಅಧ್ಯಾಯವು.

೧-೨ ಮಾರ್ಕಂಡೇಯರು ಹೇಳುತ್ತಾರೆ —ಒಂದೇ ಜಾತಿಯ ವರ್ಣಕ್ಕೆ ಪುನಃ ಪುನಃ ಕಾವ್ಯಾರ್ಥಕ್ಕೆ ತಕ್ಕಂತೆ ವಿನ್ಯಾಸ ಉಂಟಾದಲ್ಲಿ ಅದನ್ನು ಪ್ರಾಚೀನರಾದ ಅಲಂಕಾರ ಪಂಡಿತರು ಅನುಪ್ರಾಸವೆಂಬ ಶಬ್ದಾಲಂಕಾರವೆನ್ನುವರು ಅಂತಹ ಅನುಪ್ರಾಸವು ಕಾವ್ಯದಲ್ಲಿ ಬಹಳ ಹೆಚ್ಚಾಗಿ ರಚನೆ ಮಾಡಿದಲ್ಲಿ ಗ್ರಾಮ್ಯವಾಗಿ ಪರಿಣಮಿಸುತ್ತದೆ ಒಂದೇ ಆನುಪೂರ್ವಿಯುಳ್ಳ ಶಬ್ದಗಳಿಗೆ ಅರ್ಥಭೇದದಿಂದ ಪುನಃ ಪುನಃ ಪ್ರಯೋಗ ಉಂಟಾದಲ್ಲಿ ಅದಕ್ಕೆ ಯಮಕವೆಂದು ಹೆಸರು ಆ ಯಮಕವು ಪಾದದ ಆದಿಯಲ್ಲೂ, ಮಧ್ಯದಲ್ಲಿಯೂ, ಅಂತ್ಯದಲ್ಲಿಯೂ ಬಂದು ಯಮಕದಲ್ಲಿ ಮೂರುವಿಧವನ್ನುಂಟುಮಾಡುತ್ತದೆ

೩-೫ ಸಂದಷ್ಟಕ, ಸಮುದ್ರ, ಇವೂ ಯಮಕಭೇದಗಳೆಂದು ಪರಿಗಣಿಸಲಾಗಿದೆ ಸಮಸ್ತಪಾದ ಯಮಕವೆಂಬುದು ಬಹುಕ್ಲೇಶದಿಂದ ರಚಿಸಲ್ಪಡತಕ್ಕದ್ದು

ಸಮಸ್ತಪಾದಯಮಕಂ ದುಷ್ಕರಂ ಪರಿಕೀರ್ತಿತಂ ।
ಉಪಮಾನೇನ ತುಲ್ಯತ್ವಮುಪಮೇಯಸ್ಯ ರೂಪಕಂ ॥ ೪ ॥

ರೂಪಕಾಭ್ಯಧಿಕಂ ನಾಮ ತದ್ವೈವೈಕಗುಣಾಧಿಕಂ ।
ಗುಣಾನಾಂ ವ್ಯತಿರೇಕೇಣ ವ್ಯತಿರೇಕಮುದಾಹೃತಂ ॥ ೫ ॥

ಉಪಮಾನವಿರುದ್ಧೈಶ್ಚ ಗುಣೈಸ್ತದಪರಂ ಮತಂ ।
ದ್ವಿತ್ರ್ಯರ್ಥವಾಚಕೈಃ ಶಬ್ದೈಃ ಶ್ಲೇಷ ಇತ್ಯಭಿಧೀಯತೇ ॥ ೬ ॥

ಅನ್ಯರೂಪಸ್ಯ ಚಾರ್ಥಸ್ಯ ಕಲ್ಪನಾ ಯಾನ್ಯಥಾ ಭವೇತ್ ।
ಉತ್ಪ್ರೇಕ್ಷಾಖ್ಯೋಽಹ್ಯಲಂಕಾರಃ ಕಥಿತಃ ಸ ಪುರಾತನೈಃ ॥ ೭ ॥

ಉಪನ್ಯಾಸಸ್ತಥಾನ್ಯಃ ಸ್ಯಾತ್ಪ್ರಸ್ತುತಾದ್ಯಃ ಕ್ವಚಿದ್ಭವೇತ್ ।
ಜ್ಞೇಯಃ ಸೋಽರ್ಥಾನ್ತರನ್ಯಾಸಃ ಪೂರ್ವಾರ್ಥಾನುಗತೋ ಯದಿ ॥ ೮ ॥

---

ಉಪಮಾನದೊಡನೆ ಉಪಮೇಯಕ್ಕೆ ಸಾದೃಶ್ಯಾತಿಶಯವರ್ಣನವು ರೂಪಕಾಲಂಕಾರ ವೆನಿಸುತ್ತದೆ ಅದಕ್ಕಿಂತಲೂ ಗುಣಾಧಿಕ್ಯ ಉಳ್ಳ ಸಾಮ್ಯವರ್ಣನೆಗೆ ರೂಪಕಾಭ್ಯ ಧಿಕವೆಂದು ಹೆಸರು ಗುಣಗಳ ವೈಲಕ್ಷಣ್ಯಬೋಧನವು ವ್ಯತಿರೇಕಾಲಂಕಾರ ವಾಗುತ್ತದೆ

೬-೮ ಉಪಮಾನದೊಡನೆ ವಿರುದ್ಧಗಳಾದ ಗುಣಬೋಧಕವಾದ ವ್ಯತಿ ರೇಕವೂ ಒಂದು ಭೇದಕ್ಕೆ ಸೇರಿದ, ಎರಡು ಅಥವಾ ಅದಕ್ಕಿಂತ ಹೆಚ್ಚಾದ ಅರ್ಥ ಗಳನ್ನು ಬೋಧಿಸುವ ಶಬ್ದಗಳಿಂದ ಉಂಟಾಗುವ ಕಾವ್ಯಕ್ಕೆ ಶ್ಲೇಷವೆಂದು ಹೆಸರು ಒಂದು ರೀತಿಯಲ್ಲಿರುವ ವಸ್ತುವನ್ನು ಮತ್ತೊಂದು ರೀತಿಯುಳ್ಳದ್ದನ್ನಾಗಿ ಕಲ್ಪಿಸಿ ವರ್ಣಿಸುವ ಅರ್ಥವಿಶೇಷಕ್ಕೆ ಪ್ರಾಚೀನರಾದ ಆಲಂಕಾರಿಕರು ಉತ್ಪ್ರೇಕ್ಷೆ ಎಂದು ಹೇಳುವರು ಪ್ರಸ್ತುತವಾದ ಅರ್ಥಕ್ಕೆ ಉಪಪಾದಕವಾಗಿರುವ ಅಪ್ರಸ್ತುತವಾದ ಅರ್ಥವನ್ನು ರಚಿಸಿದ್ದೇ ಆದರೆ ಅದು ಸಾಮಾನ್ಯವಾಗಿಯೋ ವಿಶೇಷವಾಗಿಯೋ ಇದ್ದು ಪ್ರಕೃತಾರ್ಥಕ್ಕೆ ಉಪಪಾದಕವಾಗುವಂತೆ ಇದ್ದಲ್ಲಿ ಅದಕ್ಕೆ ಅರ್ಥಾಂತರನ್ಯಾಸ ವೆಂದು ಹೆಸರು

ಉಪನ್ಯಾಸೇನ ವಾನ್ಯಸ್ಯ ಯದನ್ಯಃ ಪರಿಕೀರ್ತ್ಯತೇ ।
ಉಪನ್ಯಾಸಮಲಂಕಾರಂ ತಂ ನರೇಂದ್ರ ಪ್ರಚಕ್ಷತೇ ॥ ೯ ॥

ಹೇತುಂ ವಿನಾ ವಿಶೇಷತಾಂ ಪ್ರಾಪ್ತಾ ಸಾ ತು ವಿಭಾವನಾ ।
ಪ್ರೋಕ್ತಾ ಸಾತಿಶಯೋಕ್ತಿಸ್ತು ಹ್ಯತುಲ್ಯೈರುಪಮಾಗುಣೈಃ ॥ ೧೦ ॥

ಯಥಾ ಸ್ವರೂಪಕಥನಂ ಸ್ವಭಾವೋಕ್ತಿಃ ಪ್ರತೀರ್ತಿತಾ ।
ಭೂಯಸಾಮುಪದಿಷ್ಟಾನಾಂ ನಿರ್ದೇಶಃ ಕ್ರಮಶಸ್ತಥಾ ॥ ೧೧ ॥

ಯಥಾಸಂಖ್ಯಮಿತಿ ಪ್ರೋಕ್ತಮಲಂಕಾರಃ ಪುರಾತನೈಃ ।
ವಿಶೇಷಪ್ರಾಪಣಾದುಕ್ತಾ ವಿಶೇಷೋಕ್ತಿಸ್ತಥಾ ನೃಪ ॥ ೧೨ ॥

ಯಾ ಕ್ರಿಯಾ ಚಾನ್ಯಫಲದಾ ವಿರೋಧಸ್ತು ಸ ಇಷ್ಯತೇ ।
ಸ್ತುತಿರೂಪೇಣ ಯಾ ನಿಂದಾ ನಿಂದಾಸ್ತುತಿರಿಹೋಚ್ಯತೇ ॥ ೧೩ ॥

---

೯-೧೦　ಒಂದು ಅರ್ಥದ ಉಪನ್ಯಾಸ ಕಾಲದಲ್ಲಿ ಮತ್ತೊಂದು ಅರ್ಥವನ್ನು ಅದರ ಉಪಷ್ಟಂಭನಕ್ಕಾಗಿ ಎಲ್ಲಿ ಉದಹರಿಸಲಾಗುತ್ತದಯೋ ಅದನ್ನು ಉಪನ್ಯಾಸಾಲಂಕಾರವೆನ್ನುತ್ತಾರೆ　ಕಾರಣವಿಲ್ಲದೆ ಕಾರ್ಯದ ಉತ್ಪತ್ತಿಯನ್ನು ಬೋಧಿಸುವ ಅರ್ಥ ವಿಸ್ತಾರವು ವಿಭಾವನಾಲಂಕಾರವೆನಿಸುತ್ತದೆ　ಹೆಚ್ಚಾದ ಸಾಮ್ಯಗುಣದಿಂದ ಪ್ರಕೃತಾರ್ಥದಲ್ಲಿ ಹೇಳುವ ಅತಿಶಯವು ಅತಿಶಯೋಕ್ತಿ ಎಂಬ ಅಲಂಕಾರವಾಗುತ್ತದೆ　ವಸ್ತುವಿನ ಸ್ವಭಾವಕ್ಕೆ ತಕ್ಕಂತೆ ವರ್ಣಿಸುವಿಕೆಯೇ ಸ್ವಭಾವೋಕ್ತಿ ಎನಿಸುತ್ತದೆ

೧೧-೧೫　ಮೊದಲು ವರ್ಣನಾರ್ಹವಾದ ಅನೇಕ ಪದಾರ್ಥಗಳನ್ನು ಯಾವ ರೀತಿ ನಿರ್ದೇಶಿಸಲಾಗಿದೆಯೋ ಅದೇ ಕ್ರಮದಿಂದ ಅದಕ್ಕೆ ಅನುಬಂಧಿಸುವ ಅನೇಕ ಪದಾರ್ಥಗಳನ್ನು ನಿರ್ದೇಶಮಾಡಿದಲ್ಲಿ ಅದಕ್ಕೆ ಯಥಾಸಂಖ್ಯಾಲಂಕಾರವೆಂದು ಪ್ರಾಚೀನರು ಹೇಳಿರುವರು　ವಿಶೇಷಾರ್ಥ ಸ್ಫೂರ್ತಿಗೆ ಕಾರಣವಾದ ಅರ್ಥಕ್ಕೆ ವಿಶೇಷೋಕ್ತಿ ಎಂದು ಹೆಸರು　ನಿರ್ದಿಷ್ಟವಾದ ಒಂದು ಕ್ರಿಯೆಯು ವಿವಕ್ಷಿತ ಫಲಕ್ಕೆ ವಿರುದ್ಧವಾದ ಮತ್ತೊಂದು ಫಲಕ್ಕೆ ಸಾಧಕವಾದಲ್ಲಿ ಅದಕ್ಕೆ ವಿರೋಧಾಲಂಕಾರವೆಂದು

ನಿಂದಾಸ್ತುತಿಸ್ತಥೈವೋಕ್ತಾ ನಿಂದಾರೂಪೇಣ ಯಾ ಸ್ತುತಿಃ ।
ವಸ್ತುನಾ ರೂಪ್ಯಮಾಣೇನ ದರ್ಶನಂ ತನ್ನಿದರ್ಶನಂ ॥ ೧೪ ॥

ವಿನಾ ತಥಾ ಸ್ಯಾದುಪಮಾ ತು ಯತ್ರ
ತೇನೈವ ತಸ್ಯೈವ ಭವೇನ್ನೃವೀರ ।
ಅನನ್ವಯಾಖ್ಯಂ ಕಥಿತಂ ಪುರಾಣೈಃ
ಏತಾವದುಕ್ತಂ ತವ ಲೇಶಮಾತ್ರಂ ॥ ೧೫ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಅಲಂಕಾರಾಧ್ಯಾಯೋನಾಮ
ಚತುರ್ದಶೋಽಧ್ಯಾಯಃ

---

ಹೆಸರು ಸ್ತುತಿರೂಪದಿಂದಿರುವ ವಾಖ್ಯಾರ್ಥದಿಂದ ವಿವಕ್ಷಿತವಾದ ನಿಂದೆಯೇ ತೋರಿ ಬಂದಲ್ಲಿ ಅದಕ್ಕೆ ನಿಂದಾಸ್ತುತಿ ಎಂದು ಹೆಸರು ಹಾಗೆಯೇ ನಿಂದಾರೂಪದಿಂದಿರುವ ವಾಕ್ಯಾರ್ಥದಿಂದ ಸ್ತುತಿಯು ತೋರಿಬಂದಲ್ಲಿ ಅದೂ ನಿಂದಾಸ್ತುತಿ ಎನಿಸಿಕೊಳ್ಳುತ್ತದೆ ಮತ್ತೊಂದು ವಸ್ತುವಿನ ರೂಪಣವು ನಿದರ್ಶನರೂಪದಿಂದ ಪ್ರಕೃತಾರ್ಥಕ್ಕೆ ಉಪಪಾದಕವಾದಲ್ಲಿ ಅದಕ್ಕೆ ನಿದರ್ಶನಾಲಂಕಾರವೆಂದು ಹೆಸರು ಎಲ್ಲಿ ಉಪಮಾನೋಪಮೇಯಗಳಿಗೆ ಭೇದವಿಲ್ಲದೆ ಒಂದೇ ವಸ್ತುವಿಗೆ ಉಪಮಾನೋಪಮೇಯ ಭಾವವು ವರ್ಣಿಸಲ್ಪಡುತ್ತದಯೋ ಆ ಅಲಂಕಾರಕ್ಕೆ ಅನನ್ವಯವೆಂದು ಪ್ರಾಚೀನರ ಸಂಜ್ಞೆಯುಂಟು ಹೀಗೆ ಅಲಂಕಾರಪ್ರಕರಣದ ಲೇಶ ಭಾಗವನ್ನು ಮಾತ್ರ ನಿನಗೆ ಹೇಳಿದ್ದಾಯಿತು

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ತೃತೀಯ ಖಂಡದಲ್ಲಿ ಮಾರ್ಕಂಡೇಯ
ವಜ್ರ ಸಂವಾದದಲ್ಲಿ ಅಲಂಕಾರಾಧ್ಯಾಯವೆಂಬ ಹದಿನಾಲ್ಕನೆಯ
ಅಧ್ಯಾಯವು ಮುಗಿದಿದೆ

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಪಂಚದಶೋಽಧ್ಯಾಯಃ ||

**|| ಮಾರ್ಕಂಡೇಯ ಉವಾಚ ||**

**ಧರ್ಮಾರ್ಥಕಾಮಮೋಕ್ಷಾಣಾಂ ಶಾಸ್ತ್ರಂ ಸ್ಯಾದುಪದೇಶಕಂ ।**
**ಪೂರ್ವೈರಾಚರಿತಂ ಸದ್ಭಿಃ ಧರ್ಮಕಾಮಾರ್ಥಸಾಧಕಂ ॥ ೧ ॥**

**ಮೋಕ್ಷಸ್ಯ ಯತ್ರೋಪನ್ಯಾಸಃ ಇತಿಹಾಸಃ ಸ ಉಚ್ಯತೇ ।**
**ತದೇವ ಕಾವ್ಯಮಿತ್ಯುಕ್ತಂ ಚೋಪದೇಶಂ ವಿನಾ ಕೃತಂ ॥ ೨ ॥**

**ಏಕಸ್ಯ ಚರಿತಾದೇವ ತಥಾ ಕಾವ್ಯಂ ಪ್ರಕೀರ್ತಿತಂ ।**
**ನಿಬದ್ಧಾ ಯತ್ರ ರಾಜೇಂದ್ರ ನಾಯಕಪ್ರತಿನಾಯಕೌ ॥ ೩ ॥**

---

### ಹದಿನೈದನೆಯ ಅಧ್ಯಾಯವು.

೧–೩ ಮಾರ್ಕಂಡೇಯರು ಹೇಳುತ್ತಾರೆ —ಶಾಸ್ತ್ರವೆಂದರೆ ಧರ್ಮಾರ್ಥಕಾಮ ಮೋಕ್ಷಗಳೆಂಬ ಪುರುಷಾರ್ಥಗಳಿಗೆ ಉಪದೇಶಕವಾದ ಗ್ರಂಥವಿಶೇಷ ಪೂರ್ವದಲ್ಲಿದ್ದ ಶಾಸ್ತ್ರಜ್ಞರೂ ಸಹ ಅಂತಹ ಶಾಸ್ತ್ರವನ್ನು ತಮ್ಮ ತಮ್ಮ ಅಧಿಕಾರಾನುಗುಣವಾದ ಅಂತಹ ಪುರುಷಾರ್ಥಗಳಿಗೆ ಸಾಧಕವಾಗುವಂತೆ ತಮ್ಮ ಆಚರಣೆಯಿಂದ ಸಾರ್ಥಕ ಪಡಿಸಿಕೊಂಡರು ಮೋಕ್ಷವೆಂಬ ಪುರುಷಾರ್ಥವನ್ನೇ ಮುಖ್ಯವಾಗಿ ಬೋಧಿಸುವ ಗ್ರಂಥಕ್ಕೆ ಇತಿಹಾಸವೆಂದು ಹೆಸರು ಅಂತಹ ಗ್ರಂಥವೇ ಉಪದೇಶರೂಪದಲ್ಲಿರದೇ ಒಬ್ಬಾನೊಬ್ಬ ಮಹಾಪುರುಷನ ಚರಿತ್ರೆಯಾಗಿದ್ದಲ್ಲಿ ಅದು ಕಾವ್ಯವೆಂದು ಹೇಳಲ್ಪಡುತ್ತದೆ ಅಂತಹ ಕಾವ್ಯದಲ್ಲಿ ನಾಯಕ ಮತ್ತು ಪ್ರತಿನಾಯಕರು ವರ್ಣಿಸಲ್ಪಡುತ್ತಾರೆ

ಪ್ರಯಾಣೋದ್ಯತಸಂಪ್ರೇಷ ಯುದ್ಧಯುಕ್ತಂ ತದೇವ ತು ।
ನಾಯಕಾಭ್ಯುದಯೋಪೇತಂ ಮಹಾಕಾವ್ಯಂ ತದಿಷ್ಯತೇ ॥ ೪ ॥

ವರ್ಣಯೇಚ್ಚ ಮಹಾಕಾವ್ಯೇ ದೇಶಪತ್ತನಪಾರ್ಥಿವಾನ್ ।
ಋತ್ವಗ್ನಿನಿಮ್ನಗಾಶ್ಚೈವ ತಥಾ ನಾರೀಶ್ಚ ಪಾರ್ಥಿವ ॥ ೫ ॥

ವರ್ಣನೀಯೌ ತಥೈವಾತ್ರ ನಾಯಕಪ್ರತಿನಾಯಕೌ ।
ನಾಯಕೋ ಧರ್ಮವಿಜಯೀ ಸತಾಂ ಪಂಥಾನಮಾಶ್ರಿತಃ ॥ ೬ ॥

ತಥಾ ಚ ಲೋಕವಿಜಯೀ ವಿಜ್ಞೇಯಃ ಪ್ರತಿನಾಯಕಃ ।
ಪ್ರತಿನಾಯಕಘಾತಸ್ತು ಕರ್ತವ್ಯೋ ನೇತರಸ್ಯ ತು ॥ ೭ ॥

ನಾಯಕಸ್ಯ ಮಹಾರಾಜ ಮರಣಂ ನೈವ ವರ್ಣಯೇತ್ ।
ಸಶರೀರಸ್ಯ ಯಸ್ಯ ಸ್ಯಾತ್ಸಂಪ್ರಾಪ್ತಿಸ್ತಸ್ಯ ವರ್ಣಯೇತ್ ॥ ೮ ॥

---

೪-೬ ಅಂತಹ ಕಾವ್ಯವು ಪ್ರಯಾಣಸನ್ನದ್ಧನಾದ ಪುರುಷನ ಮತ್ತು ದೂತಪ್ರೇಷಣಾದಿಗಳ ಮತ್ತು ಯುದ್ಧವೃತ್ತಾಂತದ ವರ್ಣನದಿಂದ ಕೂಡಿರಬೇಕು. ನಾಯಕನ ಅಭ್ಯುದಯದಿಂದ ಕೂಡಿರಬೇಕು, ಹೀಗೆ ಇದ್ದಲ್ಲಿ ಅದಕ್ಕೆ ಮಹಾಕಾವ್ಯವೆಂದು ಹೆಸರು ಅಂತಹ ಮಹಾಕಾವ್ಯದಲ್ಲಿ ದೇಶ, ಪಟ್ಟಣ, ರಾಜರು, ಋತುಗಳು, ಅಗ್ನಿ, ನದಿಗಳು, ಸ್ತ್ರೀಯರು ಇವೆಲ್ಲವೂ ವರ್ಣಿತವಾಗಿರಬೇಕು ನಾಯಕನ ಮತ್ತು ಪ್ರತಿನಾಯಕನ ಗುಣಗಳನ್ನೂ ವರ್ಣಿಸಬೇಕು ನಾಯಕನು ಸನ್ಮಾರ್ಗಗಾಮಿಯಾಗಿಯೂ ಧರ್ಮವಿಜಯಿಯಾಗಿಯೂ ಇರಬೇಕು ಹಾಗೆಯೇ ಪ್ರತಿನಾಯಕನೂ ಸಹ ಜಗದ್ವಿಜಯಿಯೇ ಆಗಿರಬೇಕು

೭-೧೦ ಇಂತಹ ಮಹಾಕಾವ್ಯದಲ್ಲಿ ಪ್ರತಿನಾಯಕನ ವಧವನ್ನು ವರ್ಣಿಸಬೇಕೇ ಹೊರತು ಇತರರ ವಧವನ್ನು ವರ್ಣಿಸಬಾರದು ಪ್ರಧಾನ ನಾಯಕನ ವಧವನ್ನು ಮಾತ್ರ ಯಾವ ಸಂದರ್ಭದಲ್ಲಿಯೂ ವರ್ಣಿಸಬಾರದು ಆದರೆ ಆ ನಾಯಕನು ಅದೇ ಶರೀರದಿಂದ ಪುನಃ ಒದುಕಿಕೊಳ್ಳುವಂಥಾ ಸಂದರ್ಭವಿದ್ದಲ್ಲಿ ಅವನ ವಧವನ್ನೂ ವರ್ಣಿಸಬಹುದು ಛಂದಸ್ಸಿನ ನಿಯಮಕ್ಕೆ ಸೇರದಿರುವ ಪ್ರಬಂಧವು

**ಛಂದೋವಿರಹಿತಂ ಗದ್ಯಂ ಶಬ್ದಶಾಸ್ತ್ರವಿರೋಧಿ ಚ ।**
**ಕಷ್ಟಾಕ್ಷರಪದನ್ಯಾಸಮಶ್ಲೀಲವಚನಾನ್ವಿತಂ ॥ ೯ ॥**

**ತಸ್ಮಾದುಲ್ಲಕ್ಷ್ಯವಾಕ್ಯಾರ್ಥಮಪ್ರಸಿದ್ಧಾಭಿಧಾನವತ್ ।**
**ಕಾವ್ಯಬಂಧಂ ನ ಕರ್ತವ್ಯಂ ಪುನರುಕ್ತಂ ಚ ಯದ್ಭವೇತ್ ॥ ೧೦ ॥**

**ವಿಸ್ಮಯೇಽಭ್ಯಸೂಯಾಯಾಂ ಭಯಶೋಕತ್ವರಾಸು ಚ ।**
**ಹರ್ಷೇ ಚ ವೀಪ್ಸಾ ಕರ್ತವ್ಯಾ ಪುನರುಕ್ತಂ ನ ತದ್ವಿದುಃ ॥ ೧೧ ॥**

**ದೂತವಾಕ್ಯೇ ತಥಾ ಸ್ವಪ್ನೇ ಕಾರ್ಯಗತ್ಯಾ ತಥಾಗತೇ ।**
**ಪುನರ್ವಚನನಿರ್ದೇಶೇ ಪುನರುಕ್ತಂ ಚ ತದ್ವಿದುಃ ॥ ೧೨ ॥**

**ಸಸಂಶಯಂ ನ ವಕ್ತವ್ಯಂ ಪ್ರತಿಜ್ಞಾರಹಿತಂ ತಥಾ ।**
**ಪೂರ್ವಾಪರವಿರುದ್ಧಂ ಚ ಯಚ್ಚ ಲೋಕವಿಗರ್ಹಿತಂ ॥ ೧೩ ॥**

---

ಗದ್ಯಪ್ರಬಂಧವೆನಿಸುತ್ತದೆ ಕಾವ್ಯವನ್ನು ರಚಿಸುವಾಗ ವ್ಯಾಕರಣ ಶಾಸ್ತ್ರಕ್ಕೆ ವಿರುದ್ಧವಾದ ಅವ್ಯುತ್ಪನ್ನ ಪದಗಳನ್ನೂ, ಉಚ್ಚಾರಣೆಗೆ ಕ್ಲೇಶವನ್ನುಂಟುಮಾಡುವ ಕ್ಲಿಷ್ಟಾಕ್ಷರಗಳಿಂದ ಕೂಡಿದ ಪದಗಳನ್ನೂ, ಲಜ್ಜಾ, ಜುಗುಪ್ಸಾ, ಅಮಂಗಳಗಳಿಗೆ ಸೂಚಕಗಳಾದ ಪದಗಳನ್ನೂ, ರಚಿಸಲಾಗಿರುವ ಪದಗಳಿಂದ ವಿವಕ್ಷಿತಾರ್ಥವು ತೋರಿಬರದೆ ಮುಖ್ಯವಾದ ವಾಕ್ಯಾರ್ಥವನ್ನು ಆದರಿಂದ ಊಹಿಸಿ ಕಲ್ಪಿಸಲು ಅರ್ಹವಾದ ಪದಬಂಧವನ್ನೂ, ಅಪ್ರಸಿದ್ಧಾರ್ಥಬೋಧಕಗಳಾದ ಪದಗಳನ್ನೂ, ಪುನರುಕ್ತವಾಗುವ ಪದಗಳನ್ನೂ ನೇರಿಸಬಾರದು (ಇಂತಹ ದೋಷಗಳಿಗೆ ಅವಕಾಶವಿಲ್ಲದಿರುವ ಪದಗಳಿಂದಲೇ ರಚಿಸಬೇಕೆಂದು ತಾತ್ಪರ್ಯ).

೧೧-೧೩ ಆಶ್ಚರ್ಯ ಕಾಲದಲ್ಲಿಯೂ ಅಸೂಯೆಯನ್ನು ವ್ಯಕ್ತಪಡಿಸುವ ಕಾಲದಲ್ಲಿಯೂ, ಭಯ, ದುಃಖ, ತ್ವರೆ, ಹರ್ಷ ಇಂತಹ ಭಾವಗಳನ್ನು ಸೂಚಿಸುವ ಕಾಲದಲ್ಲಿಯೂ ಸಹ ಶಬ್ದವು ಪುನರುಕ್ತವಾದರೂ, ಅದು ಪುನರುಕ್ತ ದೋಷದಲ್ಲಿ ಸೇರುವುದಿಲ್ಲ ದೂತನ ವಾಕ್ಯದಲ್ಲಿಯೂ ಸ್ವಪ್ನವನ್ನು ವಿವರಿಸುವಾಗಲೂ ಶಬ್ದವು ಪುನರುಕ್ತವಾದಲ್ಲಿ ಅದು ಪುನರುಕ್ತವೆಂಬ ದೋಷದಲ್ಲಿ ಸೇರುತ್ತದೆ ಕಾವ್ಯದಲ್ಲಿ ನಿರ್ದೇಶಿಸಬಹುದಾದ ವಾಗ್ವ್ಯವಹಾರಗಳಲ್ಲಿ (ಅರ್ಥನಿರ್ಣಯಕ್ಕೆ ಅವಕಾಶವಿಲ್ಲದ) ಸಂದಿಗ್ಧಪದಗಳನ್ನೂ, ಪ್ರತಿಜ್ಞಾರಹಿತವಾದ ಅರ್ಥಗಳನ್ನೂ, ಪೂರ್ವಾಪರ ವಿರುದ್ಧವಾದ ಮತ್ತು ಲೋಕನಿಂದಿತವಾದ ಅರ್ಥಗಳನ್ನೂ ನೇರಿಸಬಾರದು

ಶೃಂಗಾರಹಾಸ್ಯಕರುಣ ರೌದ್ರವೀರ ಭಯಾನಕೈಃ ।
ಭೀಭತ್ಸಾದ್ಭುತಶಾಂತಾಖ್ಯೈಃ ರಸೈಃ ಕಾರ್ಯಂ ಸಮನ್ವಿತಂ ॥ ೧೪ ॥

ಕಾವ್ಯಂ ಕಲಾಕೌಶಲಸಂಪ್ರಯುಕ್ತಂ
ಧರ್ಮೇಣ ಚಾರ್ಥೇನ ತಥೋಪಪನ್ನಂ ।
ಧರ್ಮೇಣ ಯುಕ್ತಸ್ಯ ಚ ನಾಯಕಸ್ಯ
ಕಾರ್ಯಂ ತಥಾ ಚಾಭ್ಯುದಯಾನ್ತಮೇವ ॥ ೧೫ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ ವಜ್ರಸಂವಾದೇ ಮಹಾಕಾವ್ಯಲಕ್ಷಣಂ ನಾಮ ಪಂಚದಶೋಽಧ್ಯಾಯಃ

೧೪–೧೫ ಇಂತಹ ಮಹಾಕಾವ್ಯವನ್ನು ಶೃಂಗಾರ, ಹಾಸ್ಯ, ಕರುಣ, ರೌದ್ರ, ವೀರ, ಭಯಾನಕ, ಭೀಭತ್ಸ, ಅದ್ಭುತ, ಶಾಂತಗಳೆಂಬ ನವರಸಗಳಿಂದಲೂ ಕೂಡಿರುವಂತೆ ರಚಿಸಬೇಕು (ಅಲ್ಲಲ್ಲಿಯ ಕಥಾಸಂವಿಧಾನಕ್ಕೆ ತಕ್ಕಂತೆ ಆಯಾಯ ರಸಾಭಿವ್ಯಕ್ತಿಯುಂಟಾಗುವಂತೆ ರಚಿಸಿರಬೇಕೆಂದು ತಾತ್ಪರ್ಯ) ಇಂತಹ ಮಹಾ ಕಾವ್ಯವು ನಾನಾವಿಧವಾದ ಕಲೆಗಳಿಗೂ ಪ್ರಕಾಶಕವಾಗುವಂತೆಯೂ, ಧರ್ಮ, ಧರ್ಮಾವಿರುದ್ಧವಾದ ಅರ್ಥ(ಇವೆರಡಕ್ಕೂ ಅವಿರುದ್ಧವಾದ ಕಾಮವೂ ಇಲ್ಲಿ ವಿವಕ್ಷಿತ) ಇವುಗಳ ಉಪಪಾದನದಿಂದ ಕೂಡಿರಬೇಕು ಕಾವ್ಯದಲ್ಲಿ ವರ್ಣಿಸಲ್ಪಡುವ ಕಥಾ ಭಾಗವೂ ಸಹ, ಧಾರ್ಮಿಕವಾದ ಕಥಾನಾಯಕನ ಅಭ್ಯುದಯ (ಶುಭ) ದಲ್ಲಿಯೇ ಪರ್ಯವಸಾನ ಹೊಂದುವಂತಿರಬೇಕು (ನಾಯಕನ ದುಃಖದಲ್ಲಿ ಪರ್ಯವಸಾನ ಹೊಂದ ಬಾರದೆಂದು ತಾತ್ಪರ್ಯ)

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ತೃತೀಯಖಂಡದಲ್ಲಿ ಮಾರ್ಕಂಡೇಯ ವಜ್ರ ಸಂವಾದದಲ್ಲಿ ಮಹಾಕಾವ್ಯಲಕ್ಷಣವೆಂಬ ಹದಿನೈದನೆಯ ಅಧ್ಯಾಯ ಮುಗಿದಿದೆ

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಷೋಡಶೋಽಧ್ಯಾಯಃ ||

**|| ಮಾರ್ಕಂಡೇಯ ಉವಾಚ ||**

**ಕಾವ್ಯೇ ಯೇಽಭಿಹಿತಾ ದೋಷಾಃ ಕೈಶ್ಚಿತ್ತೇಭ್ಯಃ ಪ್ರಹೇಳಿಕಾಃ |**
**ಕರ್ತವ್ಯಾಶ್ಚ ತಥೈವಾನ್ಯಾಸ್ತಾಸಾಂ ವಕ್ಷ್ಯಾಮಿ ಲಕ್ಷಣಂ || ೧ ||**

**ಶ್ಲೋಕೇನೈಕೇನ ವಾ ದ್ವಾಭ್ಯಾಂ ಕರ್ತವ್ಯಾ ತು ನರೋತ್ತಮ |**
**ನ ಕರ್ತವ್ಯಾಶ್ಚ ತಾ ರಾಜನ್ ಬಹುಶ್ಲೋಕನಿಬಂಧನಾಃ || ೨ ||**

**ತಸ್ಯಾಂ ಮಾತ್ರಾವಶಾದರ್ಥೋ ಗೋಪ್ಯತೇ ಸಾ ಸಮಾಗತಾ |**
**ಪರ್ಯಾಯವಚನಾದ್ಯಸ್ಯಾಂ ವನ್ದಿತಾ ಸಾ ಪ್ರಕೀರ್ತಿತಾ || ೩ ||**

### ಹದಿನಾರನೆಯ ಅಧ್ಯಾಯವು.

೧-೨. ಮಾರ್ಕಂಡೇಯರು ಹೇಳುತ್ತಾರೆ. —ಕಾವ್ಯದಲ್ಲಿ ಯಾವ ಕೆಲವು ದೋಷಗಳು ಇದುವರಿಗೂ ಹೇಳಲ್ಪಟ್ಟಿವೆಯೋ ಅವುಗಳಲ್ಲಿ ಕೆಲವು ದೋಷಗಳು ಪ್ರಹೇಳಿಕಾ ಎಂಬ ಚಿತ್ರಕಾವ್ಯರೂಪವನ್ನು ಹೊಂದುತ್ತವೆ ಮತ್ತೆ ಕೆಲವು ಬೇರೆ ಬೇರೆಯಾದ ಚಿತ್ರಕಾವ್ಯವಾಗುತ್ತವೆ. ಅವುಗಳ ಲಕ್ಷಣಗಳನ್ನೂ ಹೇಳುತ್ತೇನೆ ಕೇಳು, ಅಂತಹ ಚಿತ್ರಕಾವ್ಯಗಳು ಒಂದೊಂದೇ ಶ್ಲೋಕದಿಂದಾಗಲಿ ಅಥವಾ ಎರಡೆರಡು ಶ್ಲೋಕಗಳಿಂದಾಗಲಿ ರಚಿಸಲ್ಪಡಬೇಕು ಅನೇಕ ಶ್ಲೋಕಗಳಿಂದ ಅಂತಹ ಕಾವ್ಯವನ್ನು ರಚಿಸಬಾರದು

೩-೪ ಯಾವ ಪ್ರಹೇಳಿಕೆಯಲ್ಲಿ ಒಂದು ಮಾತ್ರೆಯಿಂದ ಅರ್ಥಭೇದವನ್ನು ತೋರ್ಪಡಿಸಬಹುದಾದ ಶಬ್ದದಿಂದ ವಕ್ತೃವಿಗೆ ಇಷ್ಟವಾದ ಅರ್ಥವು ಮರೆಮಾಚಿಸಲ್ಪಡುತ್ತದೆಯೋ ಅಂತಹ ಪ್ರಹೇಳಿಕೆಗೆ ಸಮಾಗತಾ ಎಂದು ಹೆಸರು ಪ್ರಸಿದ್ಧ

ವೃತ್ತಾಂತಗೋಪಿಕಾನ್ವಾಯಾ ಪದ್ಯೈಃ ವ್ಯವಹಿತೈರ್ಭವೇತ್ ।
ಅಪ್ರಸಿದ್ಧೈಸ್ತು ಪರ್ಯಾಯೈಃ ದುಃಖಿತಾ ನಾಮ ಸಾ ಸ್ಮೃತಾ ॥ ೪ ॥

ಕಲ್ಪನಾ ಗೋಪಿತಾರ್ಥಾತ್ತು ಕಥಿತಾ ಪರಿಹಾಸಿಕಾ ।
ಸಮಾನರೂಪತುಲ್ಯಾರ್ಥೋ ಶಬ್ದೈರನ್ಯೈಃ ಪ್ರಕೀರ್ತಿತಾ ॥ ೫ ॥

ದುರ್ಬೋಧಾಕ್ಷರಬಂಧಾ ಚ ಪರುಷಾ ನಾಮತಃ ಸ್ಮೃತಾ ।
ಸಂಖ್ಯಾಮಾತ್ರಸಮಾನತ್ವಾತ್ಸಂಖ್ಯಾತಾಖ್ಯಾ ತಥೋಚ್ಯತೇ ॥ ೬ ॥

ಅರ್ಥಾನ್ತರಾನ್ಕಲ್ಪನಯಾ ಕಲ್ಪಿತಾ ಚ ತಥೋಚ್ಯತೇ ।
ಅನ್ಯಸ್ಯ ಸಂಜ್ಞಾವ್ಯಾಮೋಹಾನ್ನಾಮಾನ್ತರಿತಸಂಜ್ಞಿತಾ ॥ ೭ ॥

---

ವಾದ ಶಬ್ದದಿಂದ ಬೋಧಿಸದೆ ಪರ್ಯಾಯಶಬ್ದದಿಂದ ಗೂಢವಾದ ಅರ್ಥವನ್ನು ಬೋಧಿಸುವ ಅಂತಹ ಕಾವ್ಯಕ್ಕೆ ವಂದಿತಾ ಎಂದು ಹೆಸರು ಅನ್ವಯದೃಷ್ಟಿಯಿಂದ ವ್ಯವಹಿತವಾದ ಪದಗಳಿಂದ ಪ್ರಕೃತ ವೃತ್ತಾಂತವನ್ನು ಗೋಪನಮಾಡಿದರೂ ಮತ್ತು ಅಪ್ರಸಿದ್ಧವಾದ ಪರ್ಯಾಯಪದಗಳಿಂದ ಪ್ರಕೃತಾರ್ಥವನ್ನು ಗೋಪನಮಾಡಿದುದೇ ಆದರೂ ಅಂತಹ ಕಾವ್ಯಕ್ಕೆ ದುಃಖಿತಾ ಎಂದು ಹೆಸರು ಪ್ರಕೃತಾರ್ಥಬೋಧಕಗಳಾದ ಪದಗಳನ್ನು ಅರ್ಥಾನುಗುಣವಾಗಿ ಅರ್ಥಾನ್ತರ ಬೋಧಕಗಳಾಗುವಂತೆ ಕಲ್ಪಿಸಿದಲ್ಲಿ ಅದು ಪರಿಹಾಸಿಕಾ ಎಂದು ಕರೆಯಲ್ಪಡುತ್ತದೆ

೫-೭ ಬೇರೆ ಬೇರೆಯಾದ ಶಬ್ದಗಳಿಂದ ರಚಿಸಲ್ಪಟ್ಟಿದ್ದರೂ ಸಮಾನ ರೂಪದಿಂದಲೂ, ಸಮಾನಾರ್ಥದಿಂದಲೂ ಕೂಡಿದ್ದಲ್ಲಿ, ಅರ್ಥಬೋಧದಲ್ಲಿ ಕ್ಲಿಷ್ಟಗಳಾದ ಪದಗಳಿಂದ ಕೂಡಿದ್ದಲ್ಲಿಯೂ ಸಹ ಆದಕ್ಕೆ ಪರುಷಾ ಎಂದು ಹೆಸರು ಕೇವಲಸಂಖ್ಯಾಸಾಮ್ಯದಿಂದ ಕೂಡಿದ ಅರ್ಥಗಳಿಗೆ ಬೋಧಕವಾದ ಅಂತಹ ಕಾವ್ಯವು ಸಂಖ್ಯಾತವೆಂಬ ಹೆಸರುಳ್ಳದಾಗಿ ಆಗಿರುತ್ತದೆ ಕಲ್ಪಿತವಾದ ಇತರ ನಿಗೂಢಾರ್ಥಗಳಿಂದ ಕೂಡಿದ ಅಂತಹ ಕಾವ್ಯವು ಕಲ್ಪಿತಾ ಎಂದು ಹೇಳಲ್ಪಡುತ್ತದೆ ಮತ್ತೊಂದು ಸಂಜ್ಞೆಯಿಂದ ಕೂಡಿರುವ ಭ್ರಮಕ್ಕೆ ಕಾರಣವಾದ ಪ್ರಕೃತಸಂಜ್ಞೆಗೆ ಬೋಧಕವಾದ ಅಂತಹ ಕಾವ್ಯವು ನಾಮಾನ್ತರಿತವೆಂಬ ಹೆಸರನ್ನು ಹೊಂದುತ್ತದೆ

**ಅರ್ಥವ್ಯಾಮೋಹತಃ ಪ್ರೋಕ್ತಾ ನಿಭೃತಾ ಚ ಮಹಾನೃಪ ।**
**ಸಮಾನಶಬ್ದಾ ಕಥಿತಾ ತುಲ್ಯಶಬ್ದನಿಬಂಧನಾ ।		॥ ೮ ॥**

**ಅರ್ಥಾನುಲೋಮ ದುರ್ಬೋಧಾ ವ್ಯಾಮೂಢೇತಿ ತಥೋಚ್ಯತೇ ।**
**ಗುಚ್ಛಾಖ್ಯಾ ಕಥಿತಾ ವೃತ್ತೇ ನಾನಾಬಂಧನಿಬಂಧನಾ		॥ ೯ ॥**

**ಏಕೋಭಯಬಹುಚ್ಛನ್ನೇ ಯಥಾರ್ಥಪರಿಗೋಪಿತೇ ।**
**ಸಂಕೀರ್ಣಾ ಸಂಭವೋಪೇತಾ ಯಾ ತದರ್ಥಕರೀ ಭವೇತ್		॥ ೧೦ ॥**

**ತದರ್ಥಕಾರೀ ಯತ್ರಾರ್ಥೋ ಜ್ಞಾಯತೇಽನ್ಯಾರ್ಥಕಾಮುಕಃ ।**
**ರಾಜನ್ ಶಬ್ದವಶಾತ್ಸಾ ಚ ಕಥಿತಾ ವ್ಯಭಿಚಾರಿಣೀ		॥ ೧೧ ॥**

**ಉಕ್ತೇರ್ಥೇ ವೃತ್ತಬಂಧೇನ ಮಾತ್ರಾಭಿಃ ಸ್ಥಾಪಿತಾ ತಥಾ ।**
**ನಷ್ಟಾರ್ಥಾ ವಾ ಚ ಸಾ ಪ್ರೋಕ್ತಾ ವೃತ್ತಬಂಧನಿದರ್ಶಿತಾ		॥ ೧೨ ॥**

---

೮-೧೦. ಪ್ರಕೃತಾರ್ಥವನ್ನು ತಿಳಿಯಲು ಸಾಧ್ಯವೇ ಆಗದಿರುವ ಅಂತಹ ಕಾವ್ಯಕ್ಕ ನಿಭೃತಾ ಎಂದು ಹಸರು ಅರ್ಥಭೇದವಿದ್ದರೂ ಸಮಾನಶಬ್ದಗಳಿಂದ ಕೂಡಿರುವ ಅಂತಹ ಕಾವ್ಯಕ್ಕೆ ಸಮಾನಶಬ್ದಾ ಎಂದು ಹೆಸರು ಅನುಲೋಮ ಪ್ರತಿಲೋಮಗಳಿಂದ ಅರ್ಥಬೋಧವೇ ಉಂಟಾಗದಿರುವ ಅಂತಹ ಕಾವ್ಯಕ್ಕೆ ವ್ಯಾಮೂಡಾ ಎಂದು ಹೆಸರು ನಾನಾವಿಧವಾದ ವೃತ್ತಗಳ ಸಂಯೋಜನದಿಂದ ರಚಿಸಿದ ಅಂತಹ ಕಾವ್ಯಕ್ಕೆ ಗುಚ್ಛಾ ಎಂದು ಹೆಸರು ವಿವಕ್ಷಿತವಾದ ಮುಖ್ಯಾರ್ಥವು ಒಂದು ಅಥವಾ ಎರಡು ಬಾಹ್ಯಾರ್ಥಗಳಿಂದ ಗೋಪಿಸಲ್ಪಟ್ಟು ವಿವಕ್ಷಿತಾರ್ಥಬೋಧವೂ ಅದರಿಂದ ಸಂಭವಿಸಬಹುದಾದ ಅಂತಹ ಕಾವ್ಯವು ಸಂಕೀರ್ಣವೆಂದು ಹೇಳಲ್ಪಡುತ್ತದೆ

೧೧-೧೨ ಪ್ರಕೃತಾರ್ಥಬೋಧಕವಾದ ಕಾವ್ಯವು ಮತ್ತೊಂದು ಅಪ್ರಕೃತಾರ್ಥದಿಂದ ಕೂಡಿಯೇ ಪ್ರಕೃತಾರ್ಥಕ್ಕ ಬೋಧಕವಾಗುತ್ತದೆಯೋ ಅಂತಹ ಶಬ್ದಸನ್ನಿವೇಶದಿಂದ ಕೂಡಿರುವ ಆ ಕಾವ್ಯವು ವ್ಯಭಿಚಾರಿಣೀ ಎಂದುಹೇಳಲ್ಪಡುತ್ತದ ವೃತ್ತಬಂಧದಿಂದ ಕೂಡಿದ ಕಾವ್ಯವು ಮಾತ್ರಾವ್ಯತ್ಯಾಸವಿದ್ದರೂ ಪ್ರಕೃತಾರ್ಥಕ್ಕೆ ಲೋಪವಿಲ್ಲದೆ ಸ್ಥಾಪಿಸಲ್ಪಟ್ಟರೂ ಮತ್ತು ಅರ್ಥಲೋಪವಿದ್ದರೂ, ವೃತ್ತಕ್ಕೆ ಭಂಗಬರದ ಸ್ಥಾಪಿಸಲ್ಪಟ್ಟರೂ ಸಹ ಅದಕ್ಕೆ ವೃತ್ತಬಂಧನಿದರ್ಶಿತಾ ಎಂದು ಹಸರು ಒಂದು ಅಕ್ಷರಲೋಪದಿಂದಲಾದರೂ ವಿವಕ್ಷಿತಾರ್ಥಬೋಧಕವಾದ ಕಾವ್ಯಕ್ಕೆ ನಷ್ಟಾಕ್ಷರಾ

**ನಷ್ಟಾಕ್ಷರಾತು ಕಥಿತಾ ವಿನ್ಯೈಕೇನ ತದರ್ಥದಾ ।**
**ಅನ್ಯಾರ್ಥತಾ ತಥೈವೋಕ್ತಾ ವರ್ಣಭ್ರಷ್ಟಾ ನರೇಶ್ವರ ॥ ೧೩ ॥**

**ಕಾಲಸ್ವರೂಪರೂಪಾಣಾಂ ವ್ಯಾಖ್ಯಾನೇನ ತದರ್ಥದಾ ।**
**ಬೀಜಮಾತ್ರೇಣ ಲೇಶಾಖ್ಯಾ ಭೂಮಿಪಾಲ ಪ್ರಕೀರ್ತಿತಾ ॥ ೧೪ ॥**

**ಅಶ್ಲೀಲಮೇತಾಸ್ವಪಿ ನೈವ ಕಾರ್ಯಂ**
**ತದ್ವರ್ಜ್ಯಮಾಹುಃ ಕವಯೋ ನರೇಂದ್ರ ।**
**ಉದ್ವೇಜನೀಯಂ ತು ಸತಾಂತದುಕ್ತ**
**ಮಶ್ಲೀಲಬಂಧಂ ಸುಖದಂ ನ ಕಾವ್ಯಂ ॥ ೧೫ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ**
**ವಜ್ರಸಂವಾದೇ ಪ್ರಹೇಳಿಕಾಲಕ್ಷಣೋನಾಮ**
**ಷೋಡಶೋಽಧ್ಯಾಯಃ**

---

ಎಂದು ಹೆಸರು ಅಂತಹ ಕಾವ್ಯವು ಒಂದಕ್ಷರದ ಲೋಪದಿಂದ ಅನ್ಯಾರ್ಥಬೋಧಕವಾಗಿ ಆದಲ್ಲಿ ಅದಕ್ಕೆ ವರ್ಣಭ್ರಷ್ಟಾಎಂದು ಹಸರು

೧೪-೧೫ ಯಾವ ಕಾವ್ಯದಲ್ಲಿ ಕಾಲದ ಸ್ವರೂಪ ಮತ್ತು ಅದರ ವಿಶೇಷ ರೂಪ ಇವುಗಳನ್ನು ವ್ಯಾಖ್ಯಾನಮಾಡುವುದರಿಂದ ಸೂಕ್ಷ್ಮರೂಪದಿಂದ ತಿಳಿದು ಅಂತಹ ಅರ್ಥಬೋಧಕತ್ವವನ್ನೂ ಒಪ್ಪಬಹುದೋ ಆ ಕಾವ್ಯಕ್ಕೆ ಲೇಶವೆಂದು ಹೆಸರು ಪ್ರಹೇಳಿಕಾ ಎಂಬ ಈ ಚಿತ್ರಕಾವ್ಯದಲ್ಲಿಯೂ, ಲಜ್ಜಾಜುಗುಪ್ಸಾ ಅಮಂಗಲ ಸೂಚಕಗಳಾದ ಪದಗಳನ್ನು ವರ್ಜ್ಯವೆಂದು ಹೇಳುತ್ತಾರೆ ಅಂತಹ ಅಶ್ಲೀಲಪದಗಳನ್ನುಹೊಂದಿರುವ ಕಾವ್ಯವು ಸತ್ಪುರುಷರಿಗೆ ಉದ್ವೇಗಕ್ಕೆ ಕಾರಣವೇ ಹೊರತು ಸುಖಪ್ರವವಲ್ಲ ಆದುದರಿಂದ ಅಂತಹ ಪದಗಳನ್ನು ಈ ಕಾವ್ಯದಲ್ಲಿಯೂ ಉಪಯೋಗಿಸಬಾರದು

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯ ಖಂಡದಲ್ಲಿ ಮಾರ್ಕಂಡೇಯ
ವಜ್ರ ಸಂವಾದದಲ್ಲಿ ಪ್ರಹೇಳಿಕಾ ಲಕ್ಷಣವೆಂಬ ಹದಿನಾರನೆಯ
ಅಧ್ಯಾಯ ಮುಗಿದಿದೆ



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಸಪ್ತದಶೋಽಧ್ಯಾಯಃ ||

**|| ವಜ್ರ ಉವಾಚ ||**

**ಮಂತ್ರಾಃ ಸಬ್ರಾಹ್ಮಣಾಃ ಪ್ರೋಕ್ತಾಃ ತದರ್ಥಂ ಬ್ರಾಹ್ಮಣಂ ಸ್ಮೃತಂ ।**
**ಕಲ್ಪನಾ ಚ ತಥಾ ಕಲ್ಪಃ ಕಲ್ಪಶ್ಚ ಬ್ರಾಹ್ಮಣಸ್ತಥಾ || ೧ ||**

**ಕಥಿತಾನಿ ತಥಾರ್ಥಾನಿ ಪುರಾಣಂ ಚ ತಥಾ ದ್ವಿಜ ।**
**ಪ್ರಕ್ರಿಯಾ ಪ್ರಥಮಃ ಪಾದಃ ಕಥಾವಸ್ತುಪರಿಗ್ರಹಃ । || ೨ ||**

**ಉಪೋದ್ಘಾತಾನುಷಂಗೌ ಚ ತಥಾ ಸಂಹಾರ ಏವ ಚ ।**
**ಚತುಷ್ಪಾದಂ ಹಿ ಕಥಿತಂ ಪುರಾಣಂ ಭೃಗುನಂದನ || ೩ ||**

---

### ಹದಿನೇಳನೆಯ ಅಧ್ಯಾಯವು.

೧-೩ ವಜ್ರನು ಹೇಳುತ್ತಾನೆ ಮಂತ್ರಗಳೆಲ್ಲವೂ ಬ್ರಾಹ್ಮಣದಿಂದ ಕೂಡಿಯೇ ಇವೆ ಎಂದೂ ಹೇಳಲಾಗಿದೆ ಆ ಮಂತ್ರಗಳ ಅರ್ಥವೇ ಬ್ರಾಹ್ಮಣಗಳು ಸೃಷ್ಟಿ, ಸಂಹಾರ, ಅವುಗಳ ವಿಧಾನ ಇವೆಲ್ಲವೂ ಬ್ರಾಹ್ಮಣದಲ್ಲಿ ಅಡಗಿ ಅದೇ ಆಕಾರದಲ್ಲಿವೆ ಈ ಅರ್ಥಗಳೆಲ್ಲವೂ ಪುರಾಣಗಳಲ್ಲಿ ಹೇಳಲ್ಪಟ್ಟಿವೆ ಆ ಪುರಾಣವೂ ಸಹ ನಾಲ್ಕು ಭಾಗವಾಗಿದೆ ಪ್ರಕ್ರಿಯಾ ಎಂಬುದು ಅದರ ಮೊದಲನೆಯದಾದ ಅದೂ ಸಹ ಕಥಾವಸ್ತುವಿನ ಸ್ವೀಕಾರರೂಪದಲ್ಲಿರುತ್ತದೆ ಉಪೋದ್ಘಾತ, ಅನುಷಂಗ ಉಪಸಂಹಾರ ಇವು ಇತರ ಮೂರು ಭಾಗಗಳು

**ಸರ್ಗಶ್ಚ ಪ್ರತಿಸರ್ಗಶ್ಚ ವಂಶೋ ಮನ್ವಂತರಾಣಿ ಚ ।**
**ವಂಶಾನುಚರಿತಂ ಚೈವ ಪುರಾಣಂ ಪಂಚಲಕ್ಷಣಂ ॥ ೪ ॥**

**ತತ್ರ ವಾ ವಿದಿತಂ ಸರ್ವಂ ತತ್ರೋಕ್ತಂ ಗೀತಲಕ್ಷಣಂ ।**
**ವೃತ್ತಸ್ಯ ಲಕ್ಷಣಂ ಚೈವ ನಾಟಕಾಖ್ಯಾನಲಕ್ಷಣಂ ॥ ೫ ॥**

**ತಸ್ಮಾದಹಂ ತ್ವಾಂ ಪೃಚ್ಛಾಮಿ ದ್ವಿಜ ನಾಟ್ಯಸ್ಯ ಲಕ್ಷಣಂ ।**
**ಸಭೇದಂ ತನ್ಮಮಾಚಕ್ಷ್ವ ಸರ್ವಜ್ಞೋಽಸಿ ಯತಃ ಪ್ರಭೋ ॥ ೬ ॥**

**॥ ಮಾರ್ಕಂಡೇಯ ಉವಾಚ ॥**

**ಇತಿಹಾಸಾನುಸಾರೇಣ ಪುರಾಣಾನಾಂ ಸಮಾಶ್ರಿತಂ ।**
**ಚರಿತಂ ತ್ರಿದಶಾನಾಂ ವಾ ನಾಟಕಂ ತತ್ರ ಕೀರ್ತಿತಂ ॥ ೭ ॥**

---

೪–೬ ಸೃಷ್ಟಿ, ಪ್ರಳಯ, ಪೂರ್ವಿಕರ ವಂಶಾವಲಿ, ಮನ್ವಂತರಗಳು ಆಯಾಯ ವಂಶಗಳ ಚರಿತ್ರೆ ಈ ಐದೂ ಪುರಾಣದ ಲಕ್ಷಣವೆಂದು ಹೇಳಲ್ಪಟ್ಟಿದೆ ಇವುಗಳಲ್ಲಿ ಕೆಲವು ನಿಮ್ಮ ಅನುಗ್ರಹದಿಂದ ವಿದಿತವಾಗಿವೆ ಗೀತಲಕ್ಷಣ, ವೃತ್ತಗಳ ಲಕ್ಷಣ, ನಾಟಕ, ಆಖ್ಯಾನಕ ಇವುಗಳ ಲಕ್ಷಣಗಳನ್ನೂ ತಾವೇ ಹೇಳಿರುವಿರಿ ಆದುದರಿಂದ ಉಳಿದಿರುವ ನಾಟ್ಯದ ಲಕ್ಷಣವನ್ನು (ಸಾಂಗವಾದ ನಾಟಕದ ಜ್ಞಾನಕ್ಕಾಗಿ) ತಮ್ಮಿಂದ ತಿಳಿಯಲು ಅಪೇಕ್ಷಿಸುತ್ತಿದ್ದೇನೆ ತಾವು ಸರ್ವಜ್ಞರಾಗಿರುವುದರಿಂದ ಆ ನಾಟ್ಯದ ಭೇದಪ್ರಭೇದಗಳೊಡನೆ ಅದನ್ನು ನನಗೆ ಹೇಳಬೇಕು ಇದಕ್ಕೆ ಉತ್ತರವಾಗಿ ಮಾರ್ಕಂಡೇಯರು ಹೇಳುತ್ತಾರೆ

೭–೯ ಇತಿಹಾಸಕ್ಕೆ ತಕ್ಕಂತೆ ಅಲ್ಲಿ ಪ್ರಸಿದ್ಧವಾಗಿರುವ ದೇವತೆಗಳ ಅಥವಾ ಪ್ರಾಚೀನರಾದ ಮಹಾಪುರುಷರ ಚರಿತ್ರೆಯೇ ನಾಟಕದಲ್ಲಿ ರಚಿತವಾಗುತ್ತದೆ ಅಂತಹ ನಾಟಕವು ಒಂದೇ ನಾಯಕನಿಂದಾಗಲೀ, ನಾಯಕ ಪ್ರತಿನಾಯಕರೆಂಬ ಎರಡು ಪಾತ್ರಗಳಿಂದಾಗಲಿ ರಚಿಸಲ್ಪಡಬಹುದು ಅಂತು ಪ್ರಸಿದ್ಧಚರಿತ್ರೆಯುಳ್ಳ ನಾಯಕ

**ಏಕನಾಯಕಸಂಯುಕ್ತಂ ನಾಯಕಪ್ರತಿನಾಯಕೈಃ ।**
**ಸಂಯುಕ್ತಮಥವಾ ಕಾರ್ಯಃ ಕಾವ್ಯೇ ವೈ ತತ್ರ ನಾಯಕಃ ॥ ೮ ॥**

**ಸರ್ವಾಸ್ತು ವೃತ್ತಯಸ್ತತ್ರ ತತ್ರ ಸರ್ವೇ ತಥಾ ರಸಾಃ ।**
**ಕಾಲಪ್ರಯೋಗಂ ಚ ತಥಾ ಯುಕ್ತ್ಯಾ ಸಂದರ್ಶಯೇನ್ನೃಪ ॥ ೯ ॥**

**ಪಂಚಾವರಾಙ್ಕಂ ತತ್ಪ್ರೋಕ್ತಂ ತಥಾ ದಶಪರಂ ಶುಭಂ ।**
**ಏಕದೈವತಿಕಂ ವೃತ್ತಂ ಅಂಕೇ ರಾಜನ್ ಪ್ರದರ್ಶಯೇತ್ ॥ ೧೦ ॥**

**ತದನ್ತೇ ಸರ್ವಪಾತ್ರಾಣಾಂ ನಿಷ್ಕ್ರಮಶ್ಚ ವಿಧೀಯತೇ ।**
**ಯುಕ್ತ್ಯುಪನ್ಯಾಸಸಂಯುಕ್ತಂ ತಥಾ ನಿಷ್ಕ್ರಮಣಂ ಮತಂ ॥ ೧೧ ॥**

**ಮರಣಂ ರಾಜ್ಯವಿಭ್ರಂಶೋ ನಗರಸ್ಯೋಪರೋಧನಂ ।**
**ಏತಾನಿ ದರ್ಶಯೇನ್ನಾಂಕೇ ತಥಾ ಯುದ್ಧಂ ಚ ಪಾರ್ಥಿವ ॥ ೧೨ ॥**

---

ನನ್ನು ಅಂತಹ ನಾಟಕವೆಂಬ ಕಾವ್ಯದಲ್ಲಿ ರಚಿಸಬೇಕು ಎಲ್ಲಾ ರಸಗಳಿಗೂ ಅಭಿವ್ಯಕ್ತಿ ಇರುವಂತೆ ಆಯಾಯ ಪಾತ್ರದ ಚರಿತ್ರೆಯನ್ನು ರಚಿಸಬೇಕು ಆಯಾಯ ರಸಾಭಿವ್ಯಕ್ತಿಗೆ ತಕ್ಕಂತೆ ಕೈಶಿಕೀ ಮೊದಲಾದ ವೃತ್ತಿಗಳನ್ನೂ ರಚಿಸಿರಬೇಕು ಆಯಾಯ ಕಾಲಕ್ಕೆ ತಕ್ಕಂತೆ ಅಸಂಭವವೆಂದು ಊಹಿಸಲು ಅವಕಾಶವಿಲ್ಲದ ಅರ್ಥಗಳನ್ನು ಯುಕ್ತಿಯಿಂದ ಅಭಿನಯದಲ್ಲಿ ತೋರಿಸಬೇಕು

೧೦-೧೨ ಅಂತಹ ನಾಟಕವು ಐದು ಅಂಕಗಳಿಗೆ ಕಡಿಮೆ ಇಲ್ಲದೆಯೂ ಹತ್ತು ಅಂಕಗಳಿಗೆ ಮೀರದೆಯೂ ಇದ್ದಲ್ಲಿ ಒಳ್ಳೆಯದು ಅಂಕದಲ್ಲಿ ಒಂದೇ ದೇವತೆಯ ವ್ಯವಹಾರವನ್ನು (ಕಥಾಭಾಗವನ್ನು) ತೋರಿಸಬೇಕು ಅಂಕಗಳ ಕೊನೆಯಲ್ಲಿ ಎಲ್ಲಾ ಪಾತ್ರಗಳಿಗೂ ನಿರ್ಗಮನವನ್ನು ವರ್ಣಿಸಬೇಕು ಮಧ್ಯದಲ್ಲಿಯಾಗಲಿ ಅಂಕದ ಕೊನೆಯಲ್ಲಿ ಆಗಲಿ ಇಂತಹ ನಿರ್ಗಮನವು ಯುಕ್ತಿಯಿಂದ (ಕಾರಣನಿರ್ದೇಶದಿಂದ) ಕೂಡಿರಬೇಕು ಇಂತಹ ನಾಟಕಗಳಲ್ಲಿ ನಾಯಕನೇ ಮುಂತಾದವರಿಗೆ ಮರಣ ಮತ್ತು ರಾಜ್ಯಭ್ರಂಶ ನಗರಗಳ ಮುತ್ತಿಗೆ ಯುದ್ಧ ಇವುಗಳನ್ನು ಅಂಕಗಳಲ್ಲಿ ತೋರಿಸಬಾರದು

ಪ್ರವೇಶಕೇನ ಕರ್ತವ್ಯಂ ತೇಷಾಮಾಖ್ಯಾನಕಂ ಬುಧೈಃ ।
ಪಾತ್ರದ್ವಯೇನ ಕರ್ತವ್ಯಂ ತಥಾ ನಿತ್ಯಂ ಪ್ರವೇಶಕಂ ॥ ೧೩ ॥

ಪಾತ್ರೇ ಪರಿಜನೇ ತತ್ರ ಕರ್ತವ್ಯಂ ನಾಯಕಸ್ಯ ತು ।
ಭಿನ್ನಂ ಪಾತ್ರದ್ವಯಂ ಯತ್ರ ತತ್ರ ವಿಷ್ಕಂಭಕಂ ಸ್ಮೃತಂ ॥ ೧೪ ॥

ತಯೋರನ್ತೇ ತು ಕರ್ತವ್ಯಾ ತಥಾ ರಂಗಸ್ಯ ಶೂನ್ಯತಾ ।
ಅಂಕಾನ್ತೇ ಚ ತಥಾ ಕಾರ್ಯಾ ನ ಕಾರ್ಯಾ ಸಾನ್ಯಥಾ ಭವೇತ್ ॥ ೧೫ ॥

ಬಹುದೈವತಿಕಂ ವೃತ್ತಂ ಕರ್ತವ್ಯಂ ತು ಪ್ರವೇಶಕಂ ।
ಸಂಕ್ಷೇಪೋಕ್ತಿಶ್ಚ ಕರ್ತವ್ಯಾ ಕರ್ತವ್ಯೋ ನ ಹಿ ವಿಸ್ತರಃ । ೧೬ ॥

ಪ್ರಖ್ಯಾತೆನಾಯಕವಧಂ ನ ಚ ತತ್ರ ಪ್ರವೇಶಯೇತ್ ।
ತಸ್ಯ ಪ್ರಕಾಶನಂ ಕಾರ್ಯಮಂಕೇಷ್ವೇವ ನರಾಧಿಪ ॥ ೧೭ ॥

---

೧೩-೧೫ ಅಂತಹ ಮರಣ ಯುದ್ಧಾದಿ ವೃತ್ತಾಂತವನ್ನು ಪ್ರವೇಶಕವೆಂಬ ಅರ್ಥೋಪಕ್ಷೇಪಕದಿಂದ ಪಂಡಿತನಾದ ಕವಿಯು ತಿಳಿಯಪಡಿಸಬೇಕು ಪ್ರವೇಶಕವೆಂಬ ಆ ಸಂವಿಧಾನವನ್ನೂ ಸಹ ಪಾತ್ರದ್ವಯದಿಂದಲೇ ಏರ್ಪಡಿಸಬೇಕು ಅಂತಹ ಪಾತ್ರಗಳೂ ಸಹ ಕಥಾನಾಯಕನ ಪರಿಜನದಲ್ಲಿ ಸೇರಿದವರಾಗಿರಬೇಕು ಇತರ ಪಾತ್ರದ್ವಯದಿಂದ ರಚಿಸಲಾಗುವ ಅಂತಹ ಸಂವಿಧಾನವು ವಿಷ್ಕಂಭಕವಾಗುವುದು ಇಂತಹ ಪ್ರವೇಶಕವಿಷ್ಕಂಭಕಗಳನ್ನು ಪ್ರಯೋಗಿಸಿದನಂತರ ರಂಗಸ್ಥಲದಲ್ಲಿ ಯಾರೂ ಇರಕೂಡದು. ಅಂಕದ ಕೊನೆಯಲ್ಲಿಯೂ ರಂಗಸ್ಥಲವನ್ನು ಶೂನ್ಯವನ್ನಾಗಿ ಮಾಡಬೇಕು ಹೀಗಿಲ್ಲದಿರುವಲ್ಲಿ ರಂಗಭೂಮಿಯನ್ನು ಶೂನ್ಯಮಾಡಬಾರದು

೧೬-೧೮ ಪ್ರವೇಶಕದಲ್ಲಿ ಅನೇಕದೇವತೆಗಳ ವೃತ್ತಾಂತವನ್ನು ರಚಿಸಬೇಕು ಅದೆಲ್ಲವೂ ಸಂಕ್ಷೇಪೋಕ್ತಿರೂಪದಲ್ಲಿರಬೇಕು ಯಾವಾಗಲೂ ವಿಸ್ತರಿಸಬಾರದು ಪ್ರಸಿದ್ಧನಾದ ನಾಯಕನ ವಧವನ್ನು ಅಲ್ಲಿ ಪ್ರಕಾಶಪಡಿಸಬಾರದು ಅದರ ಪ್ರಕಾಶವನ್ನು ಅಂಕದಲ್ಲಿಯೇ ಮಾಡಬಹುದು ನಾಟಕದ ಕೊನೆಯಲ್ಲಿ

**ನಾಯಕಾಭ್ಯುದಯಃ ಕಾರ್ಯೋ ನಾಟಕಾನ್ತೇ ತಥೈವ ಚ ।**
**ಬಹ್ವ್ಯೋಽಪಿ ನಾಯಿಕಾ ಯತ್ರ ತಾಸಾಮಪಿ ತಥಾ ಭವೇತ್ ॥ ೧೮ ॥**

**ಏವಂವಿಧಾ ಸಶೃಂಗಾರಾ ಚತುರಂಕಾ ತು ನಾಟಿಕಾ ।**
**ಕೃತಂ ಪ್ರಕರಣಂ ತದ್ವತ್ ಸ್ವಯಮುತ್ಪಾದ್ಯವಸ್ತುನಾ ॥ ೧೯ ॥**

**ಬ್ರಾಹ್ಮಣೋ ನಾಯಕಸ್ತತ್ರ ವಣಿಙ್ನೃಪಸತ್ತಮ ।**
**ಏವಂ ಪ್ರಕರಣೀ ಕಾರ್ಯಾ ಚತುರಂಕಾಪಿ ಸಾ ಭವೇತ್ ॥ ೨೦ ॥**

**ಇತಿಹಾಸಾನುಬಂಧೋ ವಾ ಸ್ವಯಮುತ್ಪಾದ್ಯ ವಾ ಕೃತಃ ।**
**ಭಾರತೀ ಕರುಣಪ್ರಾಯೋ ನಿವೃತ್ತಂ ಸಮನಂತರಂ ॥ ೨೧ ॥**

---

ಕಥಾವಸ್ತುವು ನಾಯಕನ ಅಭ್ಯುದಯದಲ್ಲಿ ಪರ್ಯವಸಾನಹೊಂದುವಂತೆ ರಚಿಸಬೇಕು ನಾಯಕನಿಗೆ ಅನೇಕ ನಾಯಿಕೆಗಳಿದ್ದರೂ ಅವರ ವಿಷಯದಲ್ಲಿಯೂ ಈ ನಿಯಮವನ್ನೇ ಅನುಸರಿಸಬೇಕು

೧೯–೨೦ ಈ ರೀತಿ ಶೃಂಗಾರರಸಪ್ರಾಧಾನ್ಯದಿಂದ ರಚಿಸಲ್ಪಟ್ಟ ನಾಟಕವು ನಾಲ್ಕು ಅಂಕಗಳುಳ್ಳದ್ದಾಗಿದ್ದಲ್ಲಿ ಅದಕ್ಕ ನಾಟಿಕಾ ಎಂದು ಹೆಸರು ಅದರಂತೆಯೇ ತಾನಾಗಿ ನಿರ್ಮಿಸಿದ ಕಥಾವಸ್ತುವಿನಿಂದ ರಚಿಸಲಾದ ಪ್ರಬಂಧವು ಪ್ರಕರಣವೆನಿಸುತ್ತದೆ ಅಂತಹ ಪ್ರಕರಣವಲ್ಲಿ ಬ್ರಾಹ್ಮಣನಾಗಲಿ ವೈಶ್ಯನಾಗಲಿ ನಾಯಕನಾಗಿರಬೇಕು (ಇದು ಹತ್ತು ಅಂಕ ಉಳ್ಳದ್ದಾಗಿರಬೇಕೆಂದು ತಾತ್ಪರ್ಯ) ಇದೇ ನಿಯಮದಿಂದ ರಚಿಸಿದ ಪ್ರಬಂಧವು ನಾಲ್ಕಂಕವುಳ್ಳದ್ದಾದರೂ ಅದಕ್ಕೆ ಪ್ರಕರಣೀ ಎಂದು ಹೆಸರು ಇದು ಇತಿಹಾಸಮೂಲಕವಾಗಿದ್ದರೂ ಇರಬಹುದು ತಾನಾಗಿ ಕಲ್ಪಿಸಿದ ಕಥಾವಸ್ತುವಿನಿಂದ ಕೂಡಿಯಾದರೂ ಇರಬಹುದು

೨೧–೨೩ ಭಾರತೀವೃತ್ತಿಯಿಂದಲೂ ಕರುಣರಸದಿಂದಲೂ ಪ್ರಚುರವಾಗಿದ್ದು ನಾಲ್ಕು ಅಂಕಗಳಿಂದ ರಚಿತವಾಗಿದ್ದಲ್ಲಿ ಅದಕ್ಕೆ ಸಮನಂತರವೆಂದೂ ಹೆಸರು. ಇದು ದಿವ್ಯ ಪ್ರಕೃತಿಯಾದ ನಾಯಕನಿಂದ ಕೂಡಿರಬೇಕು ಇತಿಹಾಸಕ್ಕೆ ಅನುಗುಣವಾಗಿ ರಚಿಸಿರುವ ಮತ್ತು ನಾಯಕನ ಒಂದು ದಿನದ ವೃತ್ತಾಂತವನ್ನು ಹೊಂದಿ ಒಂದೇ ಅಂಕವಾಗಿಯೂ ಯುದ್ಧವ್ಯಾಪಾರದಿಂದ ಪ್ರಚುರವಾಗಿಯೂ ಇದ್ದಲ್ಲಿ ಇದಕ್ಕೆ ಸಮವತಾರವೆಂದು ಹೆಸರು (ಲಕ್ಷಣಗ್ರಂಥಗಳಲ್ಲಿ ಸಮವಕಾರ ಎಂದು ಸಂಜ್ಞೆ

ಚತುಷ್ಟಯೋಂಕಃ ಕರ್ತವ್ಯೋ ದಿವ್ಯನಾಯಕವರ್ಜಿತಃ ।
ಇತಿಹಾಸಾನುಸಾರೇಣ ಪ್ರಾಯಶ್ಶೈಕಾಹಿಕಃ ಸ್ಮೃತಃ ॥ ೨೨ ॥

ಏಕಾಂಕೋ ಯುದ್ಧಬಹುಲಸ್ತ್ವಾತ್ಮಶಂಸಾಪರಸ್ತಥಾ ।
ಆಕಾಶಕಥನೈರ್ಯುಕ್ತಸ್ತ್ವೇಕಪಾತ್ರಕೃತಕ್ರಿಯಃ ॥ ೨೩ ॥

ಪ್ರೋಕ್ತಸ್ಸಮವಕಾರಾಖ್ಯಃ ತ್ರಿದಶಾಸುರನಾಯಕಃ ।
ತ್ರಿಶೃಂಗಾರಸ್ತ್ರಿಕಪಟಸ್ತಥಾ ದ್ವಾದಶನಾಯಕಾಃ ॥ ೨೪ ॥

ಈಹಾಮೃಗೋಥ ಬಹ್ವಂಕಃ ತಥಾ ಗಂಧರ್ವನಾಯಕಃ ।
ಶೃಂಗಾರಬಹುಲಃ ಕಾರ್ಯೋಽತೃಪ್ತಯೋನಿರಸಾಶ್ರಯಃ ॥ ೨೫ ॥

ಏಕಾಹಿಕೋ ದೃಷ್ಟರಸೋ ವ್ಯಾಯೋಗಶ್ಚೈಕನಾಯಕಃ ।
ವೀಥೀ ತ್ರಯೋದಶಾಂಕಾಸ್ಯಾತ್ತಥಾ ನಾಯಕವರ್ಜಿತಾ ॥ ೨೬ ॥

ಇದೆ) ಇದರಲ್ಲಿ ನಾಯಕನು ಆತ್ಮಪ್ರಶಂಸಾಪರನಾಗಿರಬೇಕು ಇಂತಹ ಪ್ರಬಂಧವು ಆಕಾಶಭಾಷಿತಗಳಿಂದ ಪ್ರಚುರವಾಗಿಯೂ ಒಂದೇ ಪಾತ್ರದ ವ್ಯಾಪಾರದಿಂದ ಕೂಡಿಯೂ ಇರಬೇಕು ಇದರಲ್ಲಿ ದೇವತೆಗಳೂ ಅಸುರರೂ ನಾಯಕರಾಗಿರಬೇಕು ಶೃಂಗಾರರಸವನ್ನೂ ಕಪಟವ್ಯಾಪಾರವನ್ನೂ ಮೂರುಬಾರಿ ವರ್ಣಿಸಿ ತೋರಿಸಬೇಕು ನಾಯಕರು ಹನ್ನೆರಡು ಜನರಿರಬೇಕು

೨೪-೨೬ ಈಹಾಮೃಗವೆಂಬ ಪ್ರಬಂಧದಲ್ಲಿ ಅನೇಕಾಂಕಗಳಿರಬೇಕು ಗಂಧರ್ವನೇ ನಾಯಕನಾಗಿರಬೇಕು ಸುರತದಲ್ಲಿ ತೃಪ್ತಿ ಹೊಂದದಿರುವ ನಾಯಕರ ವ್ಯಾಪಾರದಿಂದ ಕೂಡಿ ಶೃಂಗಾರರಸವೇ ಪ್ರಚುರವಾಗಿರಬೇಕು ವ್ಯಾಯೋಗವೆಂಬ ಪ್ರಬಂಧವು ನಾಯಕನ ಒಂದು ದಿನದ ವೃತ್ತಾಂತದಿಂದ ಕೂಡಿರಬೇಕು. ಒಬ್ಬನೇ ನಾಯಕನಿರಬೇಕು ರಸವು ಬಹಳವಾಗಿಯೂ ಪುಷ್ಟಿಹೊಂದಿರಬೇಕು ವಿಥೀ ಎಂಬುದು ಹದಿಮೂರು ಅಂಕಗಳಿಂದ ಕೂಡಿರಬೇಕು ಇದರಲ್ಲಿ ಪ್ರಧಾನ ನಾಯಕನೇ ಇರಕೂಡದು

ಡಿಮಾಖ್ಯಶ್ಚ ತಥಾ ಪ್ರೋಕ್ತೋ ರಸಸ್ತು ಸುರನಾಯಕಃ ।
ತಥಾ ರೌದ್ರರಸಪ್ರಾಯಃ ಪ್ರಖ್ಯಾತವಿಷಯಾನ್ವಿತಃ		॥ ೨೭ ॥

ಏಕಾಂಕೋ ಹಾಸ್ಯಬಹುಲಸ್ತಥೈವೋದಾತ್ತನಾಯಕಃ ।
ಕಾರ್ಯಃ ಪ್ರಹಸನಾಖ್ಯಸ್ತು ವೇಶ್ಯಾವಿಟಸಮನ್ವಿತಃ		॥ ೨೮ ॥

ಸೂತ್ರಧಾರಸ್ಯ ವಾಕ್ಯೇನ ಕಾವ್ಯವಸ್ತುನಿಬಂಧನಂ ।
ಸರ್ವಂ ಪ್ರಕಾಶಯೇದಾದೌ ಸರ್ವೇಷ್ವೇತೇಷು ವಸ್ತು ಯತ್		॥ ೨೯ ॥

ಸಂಸ್ಕೃತಂ ನಾಯಕವಚೋ ಲಿಂಗಿಶ್ರೋತ್ರಿಯ ಭೂಭುಜಾಂ ।
ದ್ವಿಜನ್ಮನಾಂ ಸುರಾಣಾಂ ಚ ದೈತ್ಯಗಂಧರ್ವಭೋಗಿನಾಂ		॥ ೩೦ ॥

ನಾಯಿಕಾದೇವರಾಮಾಣಾಂ ವ್ಯಾಜಲಿಂಗವತಾಂ ತಥಾ ।
ವಿದೂಷಕಾಣಾಂ ಚ ಭವೇತ್ಪ್ರಾಕೃತಂ ವಚನಂ ನೃಪ		॥ ೩೧ ॥

---

೨೭–೨೯ ಡಿಮವೆಂಬ ಪ್ರಬಂಧದಲ್ಲಿ ದೇವತೆಯೇ ನಾಯಕನಾಗಿರುವನು ರೌದ್ರಪ್ರಧಾನವಾದ ರಸವನ್ನೇ ಅಲ್ಲಿ ವರ್ಣಿಸಬೇಕು ಕಥಾವಸ್ತುವೂ ಇತಿಹಾಸ ಪ್ರಸಿದ್ಧವಾಗಿಯೇ ಇರಬೇಕು ಪ್ರಹಸನವೆಂಬ ಪ್ರಬಂಧದಲ್ಲಿ ಉದಾತ್ತನಾದ ನಾಯಕನಿರಬೇಕು ಒಂದೇ ಅಂಕರವಿರಬೇಕು ಹಾಸ್ಯರಸದ ಪ್ರಾಚುರ್ಯವಿರಬೇಕು ವೇಶ್ಯಾ ಮತ್ತು ವಿಟರ ವ್ಯವಹಾರವನ್ನೇ ವಿಶೇಷವಾಗಿ ಹೊಂದಿರಬೇಕು ಇಂತಹ ಎಲ್ಲಾ ದೃಶ್ಯಪ್ರಬಂಧದಲ್ಲಿಯೂ ಮೊದಲು ಪ್ರವೇಶಿಸುವ ಸೂತ್ರಧಾರನ ವಾಕ್ಯದಿಂದ ಪ್ರಬಂಧದಲ್ಲಿ ಮುಖ್ಯವಾಗಿ ವರ್ಣಿಸಲ್ಪಡುವ ಕಥಾವಸ್ತುವನ್ನು ಸೂಚಿಸಬೇಕ.

೩೦–೩೧ ಇಂತಹ ಪ್ರಬಂಧಗಳಲ್ಲಿ ನಾಯಕ, ಮತ್ತು ಬ್ರಹ್ಮಚರ್ಯವೇ ಮೊದಲಾದ ಆಶ್ರಮ ಚಿಹ್ನಯುಳ್ಳವರು, ಶ್ರೋತ್ರಿಯರು, ರಾಜರು, ಬ್ರಾಹ್ಮಣರು, ದೇವತೆಗಳು, ದೈತ್ಯಗಂಧರ್ವ ಮೊದಲಾದವರೂ, ಸಹ ಸಂಸ್ಕೃತ ಭಾಷಯಲ್ಲಿಯೇ ವ್ಯವಹರಿಸಬೇಕು ಮತ್ತು ಕಥಾನಾಯಕಿ, ದೇವತಾಸ್ತ್ರೀಯರು, ಕೃತಕವಾದ ವೇಷದಿಂದ ಲಿಂಗಿಗಳಂತೆ ತೋರುವವರು ಮತ್ತು ವಿದೂಷಕರು ಇವರುಗಳಿಗೆ ಪ್ರಾಕೃತ ಭಾಷೆಯಿಂದಲೇ ವ್ಯವಹಾರವಿರಬೇಕು ಮತ್ತು ಬಾಲ, ಸ್ತ್ರೀ, ನೀಚರು,

**ಬಾಲಸ್ತ್ರೀನೀಚಷಂಡಾನಾಂ ಯೇಚಾನ್ಯೇ ನಾನುಕೀರ್ತಿತಾಃ ।**
**ತೇಷಾಂ ವಾಕ್ಯಮಪಭ್ರಷ್ಟಂ ತಚ್ಚ ಜ್ಞಾತ್ವಾ ಪ್ರಯೋಜಯೇತ್ ॥ ೩೨ ॥**

**ಸ್ವಯಮುತ್ಪಾದಿತಾನಾಂ ಮೇ ನಾನಾತ್ವಂ ಶೃಣು ಲಕ್ಷಣಂ ।**
**ಶರ್ಮವರ್ಮಧನಾನ್ಯನ್ತೇ ವರ್ಣಾನಾಂ ದಾಸವತ್ತಥಾ ॥ ೩೩ ॥**

**ರಾಜ್ಞಾಂ ವಿಕ್ರಮಸಂಯುಕ್ತಮಮಾತ್ಯಾನಾಂ ತಥಾ ಭವೇತ್ ।**
**ಸ್ತ್ರೀಣಾಂ ಸುಖೋದ್ಯಮಕ್ರೂರಂ ನಾಯಿಕಾನಾಂ ಮನೋಹರಂ ॥ ೩೪ ॥**

**ರಾಜ್ಞೀಪರಿಜನಸ್ತ್ರೀಣಾಂ ಕಲಾಕೌಶಲಸಂಯುತಂ ।**
**ರಾಜ್ಞಃ ಪರಿಜನಸ್ತ್ರೀಣಾಂ ವಿಜಯೋತ್ತರಮಿಷ್ಯತೇ ॥ ೩೫ ॥**

---

ಷಂಡರು, ಮತ್ತು ಇಲ್ಲಿ ಹೇಳದಿರುವ ಇತರ ಪಾತ್ರಗಳು ಅಪಭ್ರಂಶ ಭಾಷೆಯಿಂದಲೇ ವ್ಯವಹರಿಸಬೇಕು ಈ ವಿಷಯವಾದ ಭಾಷಾಸಿಯಮವನ್ನು ತಿಳಿದು ಆಯಾಯ ಪಾತ್ರಗಳಿಗೆ ವ್ಯವಹಾರವನ್ನು ಏರ್ಪಡಿಸಬೇಕು

೩೩-೩೫- ಕವಿಯು ಸ್ವಪ್ರತಿಭೆಯಿಂದ ನಿರ್ಮಿಸಿರುವ ಕಥಾವಸ್ತುವೇ ಪ್ರಧಾನವಾಗಿ ಉಳ್ಳ ಪ್ರಬಂಧಗಳು ಎಷ್ಟು ವಿಧವಾಗಿವೆ ಎಂಬುದನ್ನು ಅವುಗಳ ಲಕ್ಷಣಗಳೊಡನೆ ಹೇಳುತ್ತೇನೆ, ಕೇಳು —ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ರೆಂಬ ನಾಲ್ಕು ವರ್ಣಗಳಲ್ಲಿಯೂ ಆಯಾಯ ವರ್ಣದ ಪಾತ್ರಗಳಿಗೆ ಕ್ರಮವಾಗಿ ಶರ್ಮ, ವರ್ಮ, ಧನ, ದಾಸ ಇವು ಅಂತ್ಯದಲ್ಲಿರುವಂತೆ ನಾಮನಿರ್ದೇಶಗಳನ್ನು ಮಾಡಬೇಕು ರಾಜರಿಗೂ, ಅಮಾತ್ಯರಿಗೂ, ವಿಕ್ರಮ ಶಬ್ದದಿಂದ ಕೂಡಿದ ನಾಮ ಗಳನ್ನೇ ನಿರ್ದೇಶಿಸಬೇಕು ಸ್ತ್ರೀಯರಿಗೆ ಸುಖವಾಗಿ ಉಚ್ಚರಿಸಲು ಅರ್ಹವಾಗಿರುವ ಕೋಮಲ ಪದಗಳನ್ನೂ ಅದರಲ್ಲಿಯೂ ಕಥಾನಾಯಕಿಗೆ ರಮ್ಯವಾಗಿರುವ ಪದ ದಿಂದಲೂ ನಾಮಗಳನ್ನುದ್ದೇಶಿಸಬೇಕು ರಾಣಿಯ ಪರಿಜನರಾಗಿರುವ ಸ್ತ್ರೀಯರಿಗೆ ಕಲಾಕೌಶಲಸೂಚಕವಾದ ಹೆಸರುಗಳಿರಬೇಕು, ರಾಜನ ಪರಿಜನರಾಗಿರುವ ಸ್ತ್ರೀಯ ರಿಗೆ ವಿಜಯಶಬ್ದವೇ ಕೊನೆಯದಾಗಿ ಉಳ್ಳ ಹೆಸರುಗಳಿರಬೇಕು

ಸಾಂವತ್ಸರಾಣಾಂ ಮಾಂಗಲ್ಯಂ ಶಾಂತಿಪ್ರಾಯಂ ಪುರೋಧಸಾಂ ।
ಶೂರಪ್ರಾಯಮಮಾತ್ಯಾನಾಂ ಆಯುಷ್ಯಂ ಭಿಷಜಾಮಪಿ　　॥ ೩೬ ॥

ವಿಟಾನಾಂ ಭೂಷಣಪ್ರಾಯಂ ದಾಸೀನಾಂ ಕುಸುಮಾದಿಕಂ ।
ಋಷಿಗೋತ್ರಧರೌ ಕಾರ್ಯೌ ಕಂಚುಕೀಯವಿದೂಷಕೌ　　॥ ೩೭ ॥

ದತ್ತಾ ಮಿತ್ರಾ ತಥಾ ಸೇನಾ ವೇಶ್ಯಾನಾಮ ತತೊ ಭವೇತ್ ।
ಅಧಿಕಾರಾನುರೂಪಾಣಿ ತಥಾ ಚೈವಾಧಿಕಾರಿಣಾಂ　　॥ ೩೮ ॥

ಅತಃ ಪರಂ ಪ್ರವಕ್ಷ್ಯಾಮಿ ಯೇನ ವಾಚ್ಯಸ್ತು ಯೋ ಯಥಾ ।
ದೇವೇತಿ ರಾಜಾ ವಕ್ತವ್ಯೋ ಭೃತ್ಯೈಃ ಪ್ರಕೃತಿಭಿಸ್ತಥಾ　　॥ ೩೯ ॥

ರಾಜೇತಿ ವಿಪ್ರೈರ್ವಕ್ತವ್ಯೋ ಋಷಿಭಿರ್ನಾಮಗೋತ್ರತಃ ।
ಅಪತ್ಯಪ್ರತ್ಯಯಾದ್ದೇವೈರ್ವಯಸ್ಯೇತಿ ಸಮೋ ಜನಃ　　॥ ೪೦ ॥

---

೩೬-೩೭　ಜ್ಯೋತಿಷಿಕರಿಗೆ ಮಂಗಲಪ್ರದವಾಗಿಯೂ, ಪುರೋಹಿತರಿಗೆ ಶಾಂತಿಬೋಧಕಪದದಿಂದ ಕೂಡಿಯೂ, ಅಮಾತ್ಯರಿಗೆ ಶೌರ್ಯಸೂಚಕಪದದಿಂದ ಕೂಡಿಯೂ, ವೈದ್ಯರಿಗೆ ಆಯುಃಕಾರಕಪದದಿಂದ ಕೂಡಿಯೂ, ವಿಟರುಗಳಿಗೆ ಅಲಂಕಾರ ವಾಚಕಪದದಿಂದ ಕೂಡಿಯೂ, ದಾಸಿಗಳಿಗ ಮಲ್ಲೀ ಮೊದಲಾದ ಪುಷ್ಪ ವಾಚಕಪದದಿಂದ ಕೂಡಿಯೂ, ನಾಮಧೇಯಗಳನ್ನು ಏರ್ಪಡಿಸಬೇಕು ಕಾಂಚು ಕೀಯ, ವಿದೂಷಕ ಇವರಿಗೆ ಋಷಿಗಳ ಗೋತ್ರದಿಂದ ಕೂಡಿದ ನಾಮಧೇಯಗಳಿರ ಬೇಕು

೩೮-೪೦　ವೇಶ್ಯೆಯರಿಗೆ ದತ್ತಾ, ಮಿತ್ರಾ, ಸೇನಾ ಈ ಪದಗಳಿಂದ ಕೂಡಿದ (ವಸಂತಸೇನಾ, ಪ್ರಿಯಮಿತ್ರಾ ಇತ್ಯಾದಿ) ನಾಮಗಳಿರಬೇಕು ಅಧಿಕಾರಿ ಗಳಿಗೆ ಅವರವರ ಅಧಿಕಾರಕ್ಕೆ ಅನುರೂಪವಾದ ಹಸರುಗಳಿರಬೇಕು ಇನ್ನುಮುಂದೆ ಇಂತಹ ನಾಟಕಗಳಲ್ಲಿ ಯಾರುಯಾರು ಯಾವಯಾವ ಶಬ್ದದಿಂದ ಯಾರ್ಯಾರಿಂದ ವ್ಯವಹರಿಸಲ್ಪಡಬೇಕೆಂಬುದನ್ನು ಹೇಳುತ್ತೇನೆ ಭೃತ್ಯರೂ ಪ್ರಜೆಗಳೂ ರಾಜನನ್ನು ದೇವ ಎಂದು ಸಂಬೋಧಿಸಬೇಕು. ಬ್ರಾಹ್ಮಣರಿಂದ ರಾಜಾ ಎಂದೂ, ಋಷಿಗಳಿಂದ ಅವನ ಗೋತ್ರದ ಹೆಸರಿನಿಂದಲೂ, ದೇವತೆಗಳಿಂದ (ಇಂತಹವನ ಮಗ ಎಂದು ಬೋಧಿಸುವ) ಅಪತ್ಯಪ್ರತ್ಯಯಾಂತ ಪದಗಳಿಂದಲೂ, ಸಮಾನಸ್ಕಂಧರಿಂದ ವಯಸ ಎಂದೂ ಸಂಬೋಧಿಸಿ ವ್ಯವಹರಿಸಬೇಕು

ವಿದೂಷಕೋಽಪಿ ವಕ್ತವ್ಯೋ ವಯಸ್ಯ ಇತಿ ನಾಯಕೈಃ ।
ಆಯುಷ್ಮಾನಿತಿ ಸೂತೇನ ರಥೀ ವಾಚ್ಯಸ್ತಥಾ ಭವೇತ್ ॥ ೪೧ ॥

ಭಗವನ್ನಿತಿ ವಕ್ತವ್ಯಾ ಋಷಯೋ ಗುರವಸ್ಸುರಾಃ ।
ಪುತ್ರವತ್ಸೇತಿ ಶಿಷ್ಯಸ್ಯ ತಥಾ ವಾ ನಾಮಗೋತ್ರತಃ ॥ ೪೨ ॥

ಆರ್ಯಪುತ್ರೇತಿ ವಕ್ತವ್ಯಃ ಸ್ತ್ರಿಯಾ ಭರ್ತಾ ನರಾಧಿಪ ।
ನಾಮ್ನಾ ಭಾರ್ಯಾ ತು ವಕ್ತವ್ಯಾ ರಾಜ್ಞೀ ದೇವೀತಿ ನಾಯಿಕಾ ॥ ೪೩ ॥

ಪಿತಾ ತಾತಸ್ತಥಾ ವಾಚ್ಯೋ ಮಾತುಶ್ಚೈವಾರ್ಯಕಃ ಪಿತಾ ।
ಯುವರಾಜಃ ಕುಮಾರಃ ಸ್ಯಾನ್ಮಾನ್ಯೋ ಭಾವಃ ಸಮೀರಿತಃ ॥ ೪೪ ॥

ಮಾನ್ಯಮಾನಸ್ತಥಾ ಭಾವೋ ಭರ್ತೃದಾರಃ ಕುಮಾರಕಃ ।
ಹಲೇತಿ ತು ಸಮಾನಾ ಸ್ತ್ರೀ ವಕ್ತವ್ಯಾ ಸಮಯಾ ತಥಾ ॥ ೪೫ ॥

---

೪೧–೪೩ ವಿದೂಷಕನನ್ನೂ ಸಹ ಪ್ರಧಾನನಾಯಕನು ವಯಸ್ಯ ಎಂದು ವ್ಯವಹರಿಸಬೇಕು ರಥಿಯಾದವನು ಸೂತನಿಂದ ಆಯುಷ್ಮನ್ ಎಂದೂ, ಋಷಿಗಳೂ ಗುರುಗಳೂ, ದೇವತೆಗಳೂ ಸಹ ಇತರರಿಂದ ಭಗವನ್ ಎಂದೂ ವ್ಯವಹರಿಸಲ್ಪಡಬೇಕು ಶಿಷ್ಯನನ್ನು ಗುರುಗಳಾದವರು ಪುತ್ರ, ವತ್ಸ ಎಂದಾಗಲಿ ಅಥವಾ ಅವನ ಗೋತ್ರದ ಹಸರಿನಿಂದಾಗಲಿ ಕರೆಯಬೇಕು ಪತಿಯಾದವನನ್ನು ಪತ್ನಿಯಾದವಳು ಆರ್ಯಪುತ್ರ ಎಂದು ಕರೆಯಬೇಕು ಪತ್ನಿಯಾದ ಸ್ತ್ರೀಯನ್ನು ಅವಳ ಹೆಸರಿನಿಂದಲೇ ಕರೆಯಬೇಕು ಪಟ್ಟಮಹಿಷಿಯನ್ನು ಮಾತ್ರ ರಾಜ್ಞೀ ದೇವೀ ಎಂದು ಕರೆಯಬೇಕು.

೪೪–೪೫ ತಂದೆಯನ್ನು ತಾತನೆಂದೂ, ತಾಯಿಯ ತಂದೆಯನ್ನು ಆರ್ಯಕನೆಂದೂ ಕರೆಯಬೇಕು ಯುವರಾಜನನ್ನು ಕುಮಾರನೆಂದೂ, ಪೂಜ್ಯನಾದವನನ್ನು ಭಾವ ಎಂದೂ ಕರೆಯಬೇಕು ಸಣ್ಣ ರಾಜಕುಮಾರನನ್ನು ಭರ್ತೃದಾರಕನೆಂದೂ ಕರೆಯಬೇಕು ಸ್ತ್ರೀಯು ಸಮಾನಳಾದ ಮತ್ತೊಬ್ಬ ಸ್ತ್ರೀಯನ್ನು ಹಲಾ ಎಂದೂ, ಹಂಜೆ ಎಂದೂ ಕರೆಯಬೇಕು ತನ್ನ ಪರಿಜನರಲ್ಲಿ ಸೇರಿರುವ ಸ್ತ್ರೀಯನ್ನು ಹಂಡೆ

**ಹಂಜೇತ್ಯಾಮಂತ್ರಯೇನ್ನಾರೀಂ ಹಂಡೇ ಪರಿಜನೇ ಸ್ವಕೇ ।**
**ಸ್ವಸೇತಿ ಭಗಿನೀ ವಾಚ್ಯಾ ಲಿಂಗಸ್ಥಾ ವ್ರತಿನೀ ತಥಾ ॥ ೪೬ ॥**

**ಆರ್ಯೇತಿ ಬ್ರಾಹ್ಮಣೀ ವಾಚ್ಯಾ ಶೇಷಾ ಲಿಂಗಾರ್ಥತಸ್ತಥಾ ।**
**ಅಂತಃಪುರಚರೋ ಯಸ್ತು ಸ್ತ್ರೀಭೋಗಪರಿವರ್ಜಿತಃ ॥ ೪೭ ॥**

**ಸ ತು ವರ್ಷಧರೋ ಜ್ಞೇಯಃ ತದಧ್ಯಕ್ಷಸ್ತು ಕಂಚುಕಿಃ ।**
**ಬ್ರಾಹ್ಮಣಃ ಸ ಭವೇದ್ವೃದ್ಧೋ ಮಾನ್ಯಶ್ಚ ವಸುಧಾಧಿಪೈಃ ॥ ೪೮ ॥**

**ವಿದೂಷಕೋ ಬ್ರಾಹ್ಮಣಃ ಸ್ಯಾನ್ನಾಯಕಸ್ಯ ರಹಸ್ಯವಿತ್ ।**
**ನಟಃ ಪ್ರಧಾನಃ ಸ ಭವೇತ್ಸೂತ್ರಧಾರೋ ನರಾಧಿಪ ॥ ೪೯ ॥**

**ಜ್ಞೇಯೋ ಬೀಜಸಮುತ್ಪತ್ತಿಃ ಮುಖಂ ನಾನಾರಸೋದ್ಭವಃ ।**
**ಮುಖೋಕ್ತಬೀಜೋದ್ಘಟನಂ ತಥಾ ಪ್ರತಿಮುಖಂ ಸ್ಮೃತಂ ॥ ೫೦ ॥**

ಎಂದೂ, ಅಕ್ಕನನ್ನು ಸ್ವಸಾ ಎಂದೂ, ವ್ರತದಿಂದ ಚಿಹ್ನೆಯನ್ನು ಧರಿಸಿರುವವಳನ್ನು ವ್ರತಿನೀ ಎಂದೂ ಕರೆಯಬೇಕು

೪೭-೪೯ ಬ್ರಾಹ್ಮಣ ಸ್ತ್ರೀಯನ್ನು ಆರ್ಯಾ ಎಂದೂ, ಇತರ ಸ್ತ್ರೀಯರನ್ನು ಅವರವರ ಚಿಹ್ನೆಗೆ ತಕ್ಕಂತೆಯೂ ವ್ಯವಹರಿಸಬೇಕು ಯಾವನು ಅಂತಃಪುರದಲ್ಲಿ ಸಂಚರಿಸುತ್ತಾ ಅಲ್ಲಿರುವ ಸ್ತ್ರೀಯರ ಭೋಗದಿಂದ ದೂರದಲ್ಲಿರುವನೋ ಅವನು ವರ್ಷಧರನೆಂದು ವ್ಯವಹರಿಸಲ್ಪಡುತ್ತಾನೆ ಅವರ ಯಜಮಾನನು ಕಂಚುಕಿ ಎಂದು ವ್ಯವಹರಿಸಲ್ಪಡುತ್ತಾನೆ ಅಂತಹ ಕಂಚುಕಿಯು ಬ್ರಾಹ್ಮಣನಾಗಿಯೂ ದೊರೆಯ ಮನ್ನಣೆಗೆ ಪಾತ್ರನಾಗಿಯೂ ಇರಬೇಕು ನಾಯಕನ ರಹಸ್ಯವನ್ನೆಲ್ಲಾ ತಿಳಿದವನಾಗಿಯೂ ಬ್ರಾಹ್ಮಣನಾಗಿಯೂ ಇರುವವನು ವಿದೂಷಕನೆನಿಸುತ್ತಾನೆ. ನಟರಲ್ಲಿ ಪ್ರಧಾನನಾದವನು ಸೂತ್ರಧಾರನೆನಿಸುತ್ತಾನೆ

೫೦-೫೨ ನಾಟಕದಲ್ಲಿಯೂ ಪ್ರಕರಣದಲ್ಲಿಯೂ, ಆಯಾಯ ಪಾತ್ರಗಳ ವ್ಯವಹಾರದಿಂದ ಸಂಧಿಗಳನ್ನು ರಚಿಸಬೇಕು ಸಂಧಿ ಎಂದರೆ ಒಂದು ಫಲಕ್ಕಾಗಿ ಉಂಟಾದ ಕಥಾವಸ್ತುವಿಗೆ ಅವಾಂತರಫಲಗಳುಳ್ಳ ಇತರ ಕಥಾವಸ್ತುಗಳ ಸಂಬಂಧ, ಇವುಗಳಲ್ಲಿ ಮುಖಸಂಧಿ ಎಂಬುದು ಮೊದಲನೆಯದು ಈ ಸಂಧಿಯಲ್ಲಿ ಬೀಜವೆಂಬ

ಪ್ರಾಪ್ತ್ಯಪ್ರಾಪ್ತಿಯುತೋ ಗರ್ಭಸ್ತಸ್ಯೈವೋದ್ಭೇದಸಂಜ್ಞಿತಃ ।
ತದೇವೋದ್ಭಿನ್ನಬೀಜಾರ್ಥೋ ವಿಸರ್ಗೋ ವ್ಯಸನಾನ್ವಿತಃ ॥ ೫೧ ॥

ಮುಖಾದೀನಾಂ ನಿರ್ವಹಣಂ ತಥಾ ನಿರ್ವಹಣಂ ಭವೇತ್ ।
ನಾಟಕೇ ಸಪ್ರಕರಣೇ ಕರ್ತವ್ಯಾಃ ಪಾತ್ರಸಂಧಯಃ ॥ ೫೨ ॥

ಡಿಮೇ ಸಮವಕಾರೇ ಚ ವಿಸರ್ಗಂ ನೈವ ಕಾರಯೇತ್ ।
ವ್ಯಾಯೋಗೇಹಾಮೃಗೌ ಕಾರ್ಯೌ ತಥಾ ಗರ್ಭವಿವರ್ಜಿತೌ ॥ ೫೩ ॥

ಉತ್ಸೃಷ್ಟಾಂಕಂ ಪ್ರಹಸನಂ ವೀಥೀ ಭಾಣಕಮೇವ ಚ ।
ಏತೇಷಾಂ ನಾಮುಕರ್ತವ್ಯಂ ತಥಾ ಪ್ರತಿಮುಖಂ ನೃಪ ॥ ೫೪ ॥

ಸೂಕ್ಷ್ಮವಾದ ಕಥಾವಸ್ತುವು ಪ್ರಕಾಶಗೊಳಿಸಲ್ಪಡುವುದು ಮತ್ತು ನಾನಾವಿಧವಾದ ರಸಗಳ ಅಭಿವ್ಯಕ್ತಿಗೆ ಸ್ಥಾನವಾಗಿರುವುದು ಮುಖಸಂಧಿಯಲ್ಲಿ ಪ್ರಕಾಶಹೊಂದಿದ ಬೀಜವನ್ನು ಫಲಕ್ಕೆ ತಕ್ಕಂತೆ ಘಟನೆಮಾಡುವಿಕೆಯೇ ಪ್ರತಿಮುಖಸಂಧಿ, ಬೀಜಾರ್ಥವು ಸ್ವಲ್ಪಪ್ರಕಾಶಹೊಂದಿಯೂ, ಚನ್ನಾಗಿ ಪ್ರಕಾಶ ಹೊಂದದೆಯೂ ಇರುವ ಅವಸ್ಥೆಗೆ ಗರ್ಭಸಂಧಿ ಎಂದು ಹೆಸರು ವಸ್ತುವಿನ ಸದ್ಭಾವಕ್ಕೆ ಸೂಚಕವಾಗಿಯೂ ಹೊರಗೆ ಹಚ್ಚಾಗಿ ಪ್ರಕಾಶ ಹೊಂದದೆಯೂ ಇರುವುದರಿಂದ ಗರ್ಭವೆಂದು ಹೆಸರು ಅಂತಹ ಬೀಜಾರ್ಥವೇ ಪ್ರಕಾಶಹೊಂದಿದರೂ ಅಪ್ರಾಪ್ತಿಯಿಂದ ವ್ಯಸನಸೂಚಕವಾಗುವ ಅವಸ್ಥೆಯೇ ವಿಸರ್ಗವೆನಿಸುತ್ತದೆ (ಇದನ್ನು ಅವಮರ್ಶಸಂಧಿ ಎಂದು ಆಧುನಿಕ ಲಕ್ಷಣಕಾರರು ಹೇಳುತ್ತಾರ) ಮುಖಾದಿ ಸಂಧಿಗಳಲ್ಲಿ ಕಂಡುಬರಲಾದ ಎಲ್ಲಾ ಕಥಾಭಾಗಗಳನ್ನೂ ಪ್ರಧಾನಪ್ರಯೋಜನಕ್ಕೆ ತಕ್ಕಂತೆ ನಿರ್ವಹಿಸುವಿಕೆಯೇ ನಿರ್ವಹಣಸಂಧಿ ಎನಿಸುತ್ತದೆ ಈ ರೀತಿಯಾದ ಐದು ಅಂಗಗಳಿರಬೇಕು

೫೩-೫೪ ಡಿಮ, ಮತ್ತು ಸಮವಕಾರ ಎಂಬ ಪ್ರಬಂಧಗಳಲ್ಲಿ ವಿಸರ್ಗಸಂಧಿಯನ್ನು ವಿನ್ಯಾಸಮಾಡಕೂಡದು ವ್ಯಾಯೋಗ ಮತ್ತು ಈಹಾಮೃಗ ಎಂಬ ಪ್ರಬಂಧಗಳಲ್ಲಿ ಗರ್ಭಸಂಧಿಯನ್ನು ವಿನ್ಯಾಸಮಾಡಕೂಡದು ಪ್ರಹಸನ, ವೀಥೀ ಭಾಣ ಇವುಗಳಲ್ಲಿ ಅಂಕಗಳ ನಿಯಮವಿರುವುದಿಲ್ಲ ಪ್ರತಿಮುಖಸಂಧಿಯನ್ನು ರಚಿಸಕೂಡದು

**ಔದಾರ್ಯಂ ಸತ್ಪಥಂ ಶೌರ್ಯಂ ನಾಯಕಸ್ತು ನ ಸಂತ್ಯಜೇತ್ ।**
**ನಾಯಿಕಾಪಿ ತಥಾ ರಾಜನ್ ತ್ಯಜೇದ್ವಾ ಪ್ರತಿನಾಯಕಂ　　|| ೫೫ ||**

**ಅತಃಪರಂ ಪ್ರವಕ್ಷ್ಯಾಮಿ ನಾಯಿಕಾಷ್ಟಕಲಕ್ಷಣಂ ।**
**ನಿಜಾಪರಾಧಾತ್ಸ್ವಗೃಹೇ ವಾಸಸಜ್ಜಾ ತು ನಾಯಿಕಾ　　|| ೫೬ ||**

**ವಿರಹೋತ್ಕಂಠಿತಾ ಸೈವ ಯಾತ್ವನಾಗತನಾಯಕಾ ।**
**ಸ್ವಾಧೀನಭರ್ತೃಕಾ ಪ್ರೋಕ್ತಾ ಯಾಸ್ಯಾತ್ಸ್ವಾಧೀನಭರ್ತೃಕಾ　　|| ೫೭ ||**

**ಕಲಹಾನ್ತರಿತಾ ಪ್ರೋಕ್ತಾ ಕಲಹಾದ್ಯತನಾಯಕಾ ।**
**ಖಂಡಿತಾ ಯಾ ಚ ನಖರೈರ್ಯುತವೋತಿ ಪ್ರಗೋಪಿತಂ　　|| ೫೮ ||**

---

೫೫-೫೭　ನಾಟಕಗಳಲ್ಲಿ ಕಥಾನಾಯಕನು ಔದಾರ್ಯ, ಸನ್ಮಾರ್ಗ, ಶೌರ್ಯ ಇವನ್ನು ಯಾವಾಗಲೂ ಬಿಡಬಾರದು ನಾಯಿಕೆಯೂ ಹಾಗಯೇ ಇರಬೇಕು ಒಂದುವೇಳೆ ಅವುಗಳ ತ್ಯಾಗವು ಅನಿವಾರ್ಯವಾಗಿದ್ದಲ್ಲ ಪ್ರತಿನಾಯಕನಲ್ಲಿ ಅದನ್ನು ವರ್ಣಿಸಬೇಕು. ಇನ್ನು ಮುಂದೆ ನಾಯಿಕೆಗಳ ಲಕ್ಷಣವನ್ನು ನಿನಗೆ ಹೇಳುತ್ತೇನೆ ತನ್ನ ಅಪರಾಧದಿಂದ ಮನೆಯಲ್ಲಿಯೇ ನಾಯಕನ ನಿರೀಕ್ಷಣೆಯಿಂದ ಇರುವ ನಾಯಿಕೆಯು ವಾಸಸಜ್ಜಾ ಎನಿಸಿಕೊಳ್ಳುತ್ತಾಳೆ　ನಾಯಕನು ಬರದಿರುವುದರಿಂದ ವಿರಹಪೀಡಿತಳಾದ ಅಂತಹನಾಯಕಿಯು ವಿರಹೋತ್ಕಂಠಿತಾ ಎನಿಸಿಕೊಳ್ಳುತ್ತಾಳೆ ಯಾವ ನಾಯಕಿಗೆ ಪ್ರಿಯನಾದ ನಾಯಕನು ಸರ್ವಥಾ ಅಧೀನನಾಗಿಯೇ ಇರುತ್ತಾನೆಯೋ ಆ ನಾಯಕಿಗೆ ಸ್ವಾಧೀನಭರ್ತೃಕಾ ಎಂದು ಹೆಸರು

೫೮-೬೦　ನಾಯಕನೊಡನೆ ಕಲಹದಿಂದ ಕೂಡಿರುವ ನಾಯಿಕೆಯು ಕಲಹಾನ್ತರಿತಾ ಎನಿಸಿಕೊಳ್ಳುತ್ತಾಳೆ ಯಾವ ನಾಯಿಕೆಯು ಅನ್ಯಳಸಂಭೋಗದಿಂದ ನಖಕ್ಷತಾದಿಗಳನ್ನು ಮರೆಮಾಚಿಕೊಂಡಿರುವ ನಾಯಕನನ್ನು ಹೊಂದುವಳೋ ಅವಳು ಖಂಡಿತಾ ಎನಿಸಿಕೊಳ್ಳುತ್ತಾಳೆ ಯಾವ ನಾಯಿಕೆಯು ನಾಯಕನೊಡನೆ ಸಂಕೇತ ಹೊಂದಿದ್ದರೂ ಸಂಕೇತಸ್ಥಾನದಲ್ಲಿ ನಾಯಕನಿಲ್ಲದಿರುವುದರಿಂದ ಖಿನ್ನೆ ಯಾಗುವಳೋ

**ವಿಪ್ರಲಬ್ಧಾ ತು ಸಾ ಜ್ಞೇಯಾ ಸಂಕೇತೇ ಕಾಂತವರ್ಜಿತಾ ।**
**ಪ್ರವಾಸಗತಕಾಂತಾ ತು ತಥಾ ಪ್ರೋಷಿತಭರ್ತೃಕಾ ॥ ೫೯ ॥**

**ಏತಾಸಾಮುಚಿತಾಕಾರಲೀಲಾಭಿಃ ಬಂಧನಂ ಘನಂ ।**
**ನಾಟಕಾದಿಷು ರೂಪೇಷು ಕರ್ತವ್ಯಂ ದ್ವಾದಶಸ್ವಪಿ ॥ ೬೦ ॥**

**ಶೃಂಗಾರಹಾಸ್ಯಕರುಣವೀರರೌದ್ರಭಯಾನಕಾಃ ।**
**ಬೀಭತ್ಸಾದ್ಭುತಶಾಂತಾಖ್ಯಾ ನವ ನಾಟ್ಯರಸಾಃ ಸ್ಮೃತಾಃ ॥ ೬೧ ॥**

**ಬಂಧೋ ರಸಾನುಗಃ ಕಾರ್ಯಃ ಸರ್ವೇಷ್ವೇತೇಷು ಯತ್ನತಃ ।**
**ರಸಪ್ರಧಾನಮೇವೈತತ್ಸರ್ವಂ ನಾಟ್ಯಂ ನರಾಧಿಪ ॥ ೬೨ ॥**

---

ವಿಪ್ರಲಬ್ಧಾ ಎನಿಸಿಕೊಳ್ಳುತ್ತಾಳೆ ಯಾವ ನಾಯಿಕೆಯ ಭರ್ತೃವು ನಮ್ಮಾವದಲ್ಲಿರದೆ ದೇಶಾಂತರವಾಸಿಯಾಗುವನೋ ಅವಳು ಪ್ರೋಷಿತಭರ್ತೃಕಾ ಎನಿಸುತ್ತಾಳೆ ಇಂತಹ ನಾಯಿಕೆಯರುಗಳ ಸ್ವರೂಪಕ್ಕೆ ತಕ್ಕ ಲೀಲಾವಿಲಾಸಗಳಿಂದ ನಿಬಿಡವಾದ ಶೃಂಗಾರ ರಸವನ್ನು ಹನ್ನೆರಡು ವಿಧವಾಗಿರುವ ರೂಪಕಭೇದಗಳಲ್ಲಿ ಚೆನ್ನಾಗಿ ವರ್ಣಿಸಬೇಕು

೬೧-೬೩ ಶೃಂಗಾರ, ಹಾಸ್ಯ, ಕರುಣ, ರೌದ್ರ, ವೀರ, ಭಯಾನಕ, ಬೀಭತ್ಸ, ಅದ್ಭುತ, ಶಾಂತ ಎಂಬ ಒಂಭತ್ತು ರಸಗಳೂ ನಾಟ್ಯರಸಗಳೆಂದೇ ಹೇಳಲ್ಪಟ್ಟಿವೆ ನಾಟ್ಯವೆಲ್ಲವೂ ರಸಪ್ರಧಾನವಾದುದು ಆದುದರಿಂದ ನಾಟಕಗಳಲ್ಲಿ ರಚನೆಮಾಡುವ ಎಲ್ಲಾ ನಾಟ್ಯಗಳಲ್ಲಿಯೂ (ಅಭಿನಯಗಳಲ್ಲಿಯೂ) ಆಯಾಯ ರಸಾಭಿವ್ಯಕ್ತಿಗೆ ಅನುಗುಣವಾದ ಪದಬಂಧವನ್ನು ಪ್ರಯತ್ನಪೂರ್ವಕವಾಗಿ ಮಾಡಿಯೇ ಮಾಡಬೇಕು (ಶೃಂಗಾರವೇ ಮೊದಲಾದ ಮಧುರರಸಗಳಿಗೆ ಕೋಮಲ ವರ್ಣಗಳುಳ್ಳ ಪದಬಂಧದಿಂದ ಕೂಡಿದ ರಚನೆ ಇರಬೇಕು ವೀರ ರೌದ್ರಾದಿರಸಗಳಿಗೆ ಓಜೋಗುಣಕ್ಕೆ ತಕ್ಕ ಗಾಢವಾದ ಪದಬಂಧವನ್ನು ರಚಿಸಬೇಕೆಂದು ತಾತ್ಪರ್ಯ) ಇಂತಹ ರಸಗಳೆಲ್ಲವೂ ಕಲಾಕೌಶಲ, ಶೀಲ ಇವುಗಳಿಗೆ ಪ್ರಕಾಶಕವಾಗಿಯೂ, ಜನಗಳಲ್ಲಿ ಕಾಲಾನುಗುಣವಾಗಿ ಉಂಟಾಗಬಹುದಾದ ಆಚಾರವ್ಯವ

**ಏತೇ ಕಲಾಕೌಶಲಶೀಲಯುಕ್ತಾಃ**
**ಕಾರ್ಯಾಸ್ತಥಾ ಲೋಕವಿಧಾನಯುಕ್ತಾಃ ।**
**ಧರ್ಮಾರ್ಥಕಾಮಾದ್ಯುಪದೇಶಗಾಶ್ಚ**
**ಹಿತಾಯ ಲೋಕಸ್ಯ ನರೇಂದ್ರಚಂದ್ರ　　　　॥ ೬೩ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ ವಜ್ರಸಂವಾದೇ ದ್ವಾದಶರೂಪಕವರ್ಣನೋ ನಾಮ ಸಪ್ತದಶೋಽಧ್ಯಾಯಃ**

---

ಹಾರವೇ ಮೊದಲಾದ ಸದ್ವರ್ತನೆಗೆ ಸೂಚಕವಾಗಿಯೂ, ಇರುವ ಆಯಾಯ ಪಾತ್ರಗಳ ವ್ಯವಹರಣಯಿಂದ ಅಭಿವ್ಯಕ್ತವಾಗುವಂತೆ ಪ್ರಬಂಧಗಳನ್ನು ರಚಿಸಬೇಕು ಇಂತಹ ಪ್ರಬಂಧಗಳು ರಸಿಕರಿಂದ ಸೇರಿಸಲ್ಪಟ್ಟು ಅವರ ಚಿತ್ತಾಕರ್ಷಣೆ ಮಾಡುವುದರ ಮೂಲಕ ಧರ್ಮಾರ್ಥಕಾಮಗಳೆಂಬ ಪುರುಷಾರ್ಥಗಳಿಗೆ ಉಪದೇಶಕಗಳಾಗಿ ಜನಗಳ ಹಿತಕ್ಕೆ ಸಹಕಾರಿಗಳಾಗುತ್ತವೆ

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ತೃತೀಯ ಖಂಡದಲ್ಲಿ ಮಾರ್ಕಂಡೇಯ ವಜ್ರ ಸಂವಾದದಲ್ಲಿ ಹನ್ನೆರಡು ವಿಧವಾದ ರೂಪಕವರ್ಣನವೆಂಬ ಹದಿನೇಳನೆಯ ಅಧ್ಯಾಯವು ಮುಗಿದಿದೆ



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಅಷ್ಟಾದಶೋಽಧ್ಯಾಯಃ ||

### || ಮಾರ್ಕಂಡೇಯ ಉವಾಚ ||

**ಗದ್ಯ|| ಅಥ ಗೀತಲಕ್ಷಣಂ ಭವತಿ, ತಸ್ಯ ತ್ರೀಣಿ [1]ಸ್ಥಾನಾನಿ, ಉರಃ ಕಂಠಃ ಶಿರಶ್ಚ, ತೇಭ್ಯೋ ಮಂದ್ರ ಮಧ್ಯತಾರೋತ್ಪತ್ತಿಃ । ತ್ರಯೋ ಗ್ರಾಮಾಃ ಷಡ್ಜಮಧ್ಯಮಗಾಂಧಾರಾಃ ಸಪ್ತಸ್ವರಾಃ ಷಡ್ಜರ್ಷಭಗಾಂಧಾರ-ಮಧ್ಯಮಪಂಚಮನಿಷಾದಧೈವತಾಃ । ಏಕವಿಂಶತಿಮೂರ್ಛನಾಃ ಸಪ್ತಸಪ್ತಪ್ರತಿಗ್ರಾಮಾಶ್ರಿತಾಃ || ತದ್ಯಥಾಸಾಂ ನಾಮಾನಿ–ಸೌವೀರೀ,**

---

### ಹದಿನೆಂಟನೆಯ ಅಧ್ಯಾಯವು.

ನಾಟ್ಯಕ್ಕೆ ಉಪಕಾರಕವಾಗಿ ಗೀತದ ಲಕ್ಷಣವನ್ನು ಇನ್ನು ಮುಂದೆ ಹೇಳುತ್ತೇನೆ.— ಈ ಗೀತಕ್ಕೆ ಹೃದಯ, ಕಂಠ, ತಲೆ ಎಂಬ ಮೂರು ಉತ್ಪತ್ತಿ ಸ್ಥಾನಗಳು ಈ ಸ್ಥಾನಗಳಿಂದ ಮಂದ್ರ, ಮಧ್ಯ, ತಾರಧ್ವನಿಗಳು ಹುಟ್ಟುತ್ತವೆ ಸ್ವರಸಮುದಾಯವೆಂಬ ಗ್ರಾಮವು ಮೂರು ವಿಧ, ಷಡ್ಜಗ್ರಾಮ, ಮಧ್ಯಮಗ್ರಾಮ, ಗಾಂಧಾರಗ್ರಾಮ. ಇಂತಹ ಗ್ರಾಮಕ್ಕೂ ಕಾರಣಗಳಾದ ಸ್ವರಗಳು ಷಡ್ಜ, ಋಷಭ, ಗಾಂಧಾರ, ಮಧ್ಯಮ, ಪಂಚಮ, ನಿಷಾದ, ಧೈವತ, ಎಂದು ಏಳು ವಿಧವಾಗಿವೆ. (ಸ್ವರಗಳ ಆರೋಹಣ ಅವರೋಹಣರೂಪವಾದ) ಮೂರ್ಛನೆಗಳು ಇಪ್ಪತ್ತೊಂದು, ಮೇಲೆ ಹೇಳಿರುವ ಪ್ರತಿಗ್ರಾಮಗಳನ್ನೂ ಏಳು ಏಳು ಮೂರ್ಛನೆಗಳು ಆಶ್ರಯಿಸಿವೆ.

---

**1 ವ್ಯವಹಾರೇ ತ್ವಸೌ ತ್ರೇಧಾಹೃದಿಮಂದ್ರೋಽಭಿಜಾಯತೇ । ಕಂಠೇ ಮಧ್ಯೋಽಮೂರ್ಧ್ನಿ ತಾರೋ ದ್ವಿಗುಣಶ್ಚೋತ್ತರೋತ್ತರಃ || ಇತಿ ಸಂಗೀತ ರತ್ನಾಕರಃ ||**

**ಹರಿಣಾಶ್ವಾ, ಕಲೋಪನತಾ, ಶುದ್ಧಮಧ್ಯಮಾ, ಮಾರ್ಗೀ, ಪೌರವೀ, ಋಷ್ಯಕಾಚೇತಿ । ಏತಾಃ ಸಪ್ತಮಧ್ಯಮಗ್ರಾಮಿಣ್ಯಃ ಉತ್ತರಾ-ಸಂಜ್ಞಾಃ ॥**

**ಪ್ರಾಂಚಿನೀ, ಉತ್ತರಾಯತಾ, ಶುದ್ಧಷಡ್ಜಾ, ಮತ್ಸರೀ, ಕೃತಾ, ಅಶ್ವಕ್ರಾಂತಾ, ಉದ್ಗತಾ, ಚ ಏತಾಃ ಸಪ್ತ ಷಡ್ಜಗ್ರಾಮಿಕಾಃ, ಅಲಾಪೀ, ಕುಂತಿಮಾ, ಶ್ರದ್ಧಾ, ಉತ್ತರಾಷಡ್ಜಾ, ಪಂಚಾಯತಾ ............ ಏತಾಃ, ಸಪ್ತಗಾಂಧಾರಗ್ರಾಮಿಕಾಃ ॥**

**ಅಥೈಕೋನಪಂಚಾಶತ್ತಾನಾಃ, ಅಗ್ನಿಷ್ಟೋಮಿಕಃ, ಅತ್ಯಗ್ನಿಷ್ಟೋ-ಮಿಕಃ, ಪೌಂಡರೀಕಃ, ಆಶ್ವಮೇಧಿಕಃ, ರಾಜಸೂಯಿಕಃ, ಬಹು-ಸುವರ್ಣಿಕಃ, ಗೋಸವಿಕಃ, ಮಹಾವ್ರತಿಕಃ, ಬ್ರಹ್ಮತಾನಃ, ಪ್ರಾಜಾ-ಪತ್ಯಃ, ನಗಾಶ್ರಯಃ, ಯಜ್ಞಾಶ್ರಯಃ, ಗೋದಾನಿಕಃ, ಹಯ-ಕ್ರಾಂತಃ, ಅಜಕ್ರಾಂತಃ, ವಿಷ್ಣುಕ್ರಾಂತಃ ಆರಣ್ಯಃ, ಮತ್ತಕೋಕಿಲಃ, ಉಜ್ಜೀವಿಕಶ್ಚೇತಿ, ಏತೇ । ವಿಂಶತಿರ್ಮಧ್ಯಮಗ್ರಾಮಿಕಾಃ ॥**

---

ಇವುಗಳಲ್ಲಿ ಮಧ್ಯಮಗ್ರಾಮವನ್ನು ಸೌವೀರೀ ಹರಿಣಾಶ್ವಾ ಕಲೋಪನತಾ, ಶುದ್ಧ ಮಧ್ಯಮಾ, [1]ಮಾರ್ಗೀ ಪೌರವೀ, ಋಷ್ಯಕಾ ಎಂಬ ಅಭಿಧಾನಗಳುಳ್ಳ ಏಳು ಮೂರ್ಛನೆಗಳು ಆಶ್ರಯಿಸಿವೆ ಇವುಗಳಿಗೆ ಉತ್ತರಾ ಎಂದು ಸಂಜ್ಞೆ

ಪ್ರಾಂಚಿನೀ, ಉತ್ತರಾಯತಾ, ಶುದ್ಧಷಡ್ಜಾ, ಮತ್ಸರೀ, ಕೃತಾ, ಅಶ್ವಕ್ರಾನ್ತಾ, ಉದ್ಗತಾ ಈ ಏಳು ಮೂರ್ಛನೆಗಳು ಷಡ್ಜಗ್ರಾಮವನ್ನು ಆಶ್ರಯಿಸಿವೆ ಆಲಾಪೀ, ಕುಂತಿಮಾ, ಶ್ರದ್ಧಾ, ಉತ್ತರಾಷಡ್ಜಾ, ಪಂಚಾಯತಾ ಈ ಏಳು ಗಾಂಧಾರಗ್ರಾಮ ವನ್ನು ಆಶ್ರಯಿಸಿವ

ತಾನಗಳೂ ಸಹ ನಲವತ್ತೊಂಭತ್ತು ಅವುಗಳಲ್ಲಿ ಅಗ್ನಿಷ್ಟೋಮಿಕ, ಅತ್ಯಗ್ನಿ ಷ್ಟೋಮಿಕ, ಪೌಂಡರೀಕ, ಆಶ್ವಮೇಧಿಕ ರಾಜಸೂಯಿಕ, ಬಹುಸುವರ್ಣಿಕ ಗೋಸವಿಕ, ಮಹಾವ್ರತಿಕ, ಬ್ರಹ್ಮತಾನ, ಪ್ರಾಜಾಪತ್ಯ, ನಗಾಶ್ರಯ, ಯಜ್ಞಾ ಶ್ರಯ, ಗೋದಾನಿಕ, ಹಯಕ್ರಾಂತ, ಅಜಕ್ರಾಂತ, ವಿಷ್ಣುಕ್ರಾಂತ, ಆರಣ್ಯ, ಮತ್ತಕೋಕಿಲ, ಉಜ್ಜೀವಿಕ, ಈ ಇಪ್ಪತ್ತು ಮಧ್ಯಮಗ್ರಾಮಕ್ಕೆ ಸೇರಿರುವತಾನಗಳು

---

1 ಇಲ್ಲಿ ಹತ್ತೊಂಭತ್ತು ಮಾತ್ರ ಎಣಿಕೆಯಲ್ಲಿ ಸಿಕ್ಕುತ್ತವೆ

ಪ್ರಸ್ಥಾಪನಂ ಪೈಶಾಚಃ, ಜೀವನಃ, ಸಾವಿತ್ರಃ ಅರ್ಧಸಾವಿತ್ರಃ, ಸರ್ವತೋಭದ್ರಃ, ಸುವರ್ಣಃ, ವಿಷ್ಣುಃ, ಜಿಷ್ಣುಃ, ವಿಷ್ಣುವರಃ, ಶಾರದಃ, ವಿಜಯಃ, ಹಂಸಃ, ಜ್ಯೇಷ್ಠಃ, ಇತ್ಯೇತೇ ಚತುರ್ದಶ ಷಡ್ಜ-ಗ್ರಾಮಿಕಾಃ । ತುಂಬುರುಪ್ರಿಯಃ ಮಹಾಲಕ್ಷ್ಮಣಃ, ಗಂಧರ್ವಾನು-ಮತಃ, ಅಲಂಬುಸಪ್ರಿಯಃ, ನಾರದಪ್ರಿಯಃ, ಭೀಮಸೇನಪ್ರಿಯಃ, ವಿತಾನಃ, ಮಾತಂಗಃ, ಭಾರ್ಗವಪ್ರಿಯಃ, ಅಭಿರಾಮಃ, ಸಂಶ್ರಾವ್ಯಃ, ಕಿನ್ನರಪ್ರಿಯಃ, ಪುಣ್ಯಃ, ಮನೋಹರಃ, ಕಲ್ಯಾಣಕರಶ್ಚೇತಿ ಏತೇ ಪಂಚದಶ ಗಾಂಧಾರಮಾಶ್ರಿತಾಃ ॥

ಏತಚ್ಚತುರ್ವಿಧಂ ಸ್ವರಪದಲಯಾವಧಾನಯೋಗಾತ್। ಮೂರ್ಛ-ನಾಸ್ವಾದಿಮಧ್ಯಾನ್ತೇ ವಾದಿಸಂವಾದ್ಯನ್ವ್ಯವಾದಿ ಸಂಜ್ಞಾಃ ತಿಸ್ರೋ ವೃತ್ತಯಃ ॥ ಪೂರ್ವೋಕ್ತಾಶ್ಚ ನವರಸಾಃ ತತ್ರ ಹಾಸ್ಯಶೃಂಗಾರಯೋಃ ಮಧ್ಯಮಪಂಚಮೌ । ವೀರರೌದ್ರಾದ್ಭುತೇಷು ಷಡ್ಜಪಂಚಮೌ ।

---

ಪ್ರಸ್ಥಾಪನ, ಪೈಶಾಚ, ಜೀವನ, ಸಾವಿತ್ರ, ಅರ್ಧಸಾವಿತ್ರ, ಸರ್ವತೋಭದ್ರ, ಸುವರ್ಣ, ವಿಷ್ಣು, ಜಿಷ್ಣು, ವಿಷ್ಣುವರ, ಶಾರದ, ವಿಜಯ, ಹಂಸ, ಜ್ಯೇಷ್ಠ ಈ ಹದಿನಾಲ್ಕು ಷಡ್ಜಗ್ರಾಮಕ್ಕೆ ಸೇರಿಸುವ ತಾನಗಳು ತುಂಬುರುಪ್ರಿಯ ಮಹಾಲಕ್ಷ್ಮಣ, ಗಂಧರ್ವಾನುಮತ, ಅಲಂಬುಪ್ರಿಯ, ನಾರದಪ್ರಿಯ, ಭೀಮಸೇನ, ಪ್ರಿಯವಿತಾನ, ಮಾತಂಗ, ಭಾರ್ಗವಪ್ರಿಯ, ಅಭಿರಾಮ ಸಂಶ್ರಾವ್ಯ, ಕಿನ್ನರ ಪ್ರಿಯ, ಪುಣ್ಯ, ಮನೋಹರ, ಕಲ್ಯಾಣಕರ ಎಂಬ ಈ ಹನ್ನೆರಡು ತಾನಗಳು ಗಾಂಧಾರಗ್ರಾಮಕ್ಕೆ ಸೇರಿವೆ

ಈ ತಾನಗಳೂ ಸಹ ಸ್ವರ, ಪದ, ಲಯ, ಅವಧಾನಸಂಬಂಧದಿಂದ ಸ್ವರತಾನವೆಂದೂ ಪದಲಯಾದಿತಾನಗಳೆಂದೂ ನಾಲ್ಕುವಿಧವಾಗುತ್ತವೆ ಮೂರ್ಛನಗಳಲ್ಲಿ (ಸರಿಗಮಮುಂತಾದಸ್ವರಗಳ ಆರೋಹಾವರೋಹಣಗಳಲ್ಲಿ) ಆದಿಯಲ್ಲಿಯೂ ಮಧ್ಯ ಮತ್ತು ಅಂತ್ಯಗಳಲ್ಲಿಯೂ ವಾದಿ ಸಂವಾದಿ ಅನ್ವ್ಯವಾದಿ ಎಂಬ ಮೂರುಸಂಜ್ಞೆಗಳುಳ್ಳ ಮೂರು ವೃತ್ತಿಗಳಿವೆ ರಸಗಳು ಒಂಭತ್ತು ಎಂದು ನಾವು ಹಿಂದೆಯೇ ಹೇಳಿದ್ದೇವೆ ಆ ರಸಗಳಲ್ಲಿ ಹಾಸ್ಯ ಮತ್ತು ಶೃಙ್ಗಾರರಸಗಳ ಅಭಿವ್ಯಕ್ತಿಗೆ ಮಧ್ಯಮ ಮತ್ತು ಪಂಚಮಸ್ವರಗಳು ಅನುಕೂಲಿಸುತ್ತವೆ ವೀರ, ಅದ್ಭುತ, ರೌದ್ರ ಈ ರಸ

**ಕರುಣೇ ನಿಷಾದಗಾಂಧಾರೌ । ಬೀಭತ್ಸಭಯಾನಕಯೋರ್ಧೈವತಂ । ಶಾಂತೇ ಮಧ್ಯಮಂ । ತಥಾ ಲಯಾಃ ಹಾಸ್ಯಶೃಙ್ಗಾರಯೋರ್ಮಧ್ಯಮಾಃ । ಬೀಭತ್ಸಭಯಾನಕಯೋರ್ವಿಲಂಬಿತಃ । ವೀರರೌದ್ರಾದ್ಭುತೇಷು ದ್ರುತಃ ॥**

**ಚೋಕ್ಷಪ್ರಯೋಗಃ ಸ್ವರಾರಾಧನೇ ರೂಪಕೇಷು ಪ್ರಕರಣಾನುಗತಃ ಮನ್ಯುವ್ಯಪದೇಶೇನ ತೇ ಭವಂತಿ । ಭವಂತಿ ಚಾತ್ರಶ್ಲೋಕಾಃ—**

**ಗ್ರಹಾಂಶ ಸ್ತಾರಮಂದ್ರೇ ಚ ನ್ಯಾಸೋಽಪನ್ಯಾಸ ಏವಚ ।**
**ಅಲ್ಪತ್ವಂ ಚ ಬಹುತ್ವಂ ಚಷಾಡವೌಡವಿತೇ ತಥಾ ।**
**ಏವಮೇವ ಬುಧೈರ್ಜ್ಞೇಯಾ ಜಾತಯೋ ದಶಲಕ್ಷಣಾಃ ॥**

---

ಗಳಿಗೆ ಷಡ್ಜ ಮತ್ತು ಪಂಚಮಸ್ವರಗಳು, ಕರುಣರಸಕ್ಕ ನಿಷಾದ ಮತ್ತು ಗಾಂಧಾರ ಬೀಭತ್ಸ ಮತ್ತು ಭಯಾನಕ ರಸಗಳಿಗೆ ಧೈವತ, ಶಾಂತರಸಕ್ಕೆ ಮಧ್ಯಮ ಈ ರೀತಿ ಆಯಾಯ ರಸಾಭಿವ್ಯಕ್ತಿಗೆ ತಕ್ಕಂತೆ ಸ್ವರಗಳನ್ನು (ಆಯಾಯ ಸ್ವರಗಳ ಪ್ರಾಚುರ್ಯ ಉಳ್ಳರಾಗಗಳನ್ನು) ಉಪಯೋಗಿಸಬೇಕು. ಲಯಗಳೂ ಸಹ ಮಧ್ಯಮ ವಿಲಂಬಿತ ದ್ರುತಗಳೆಂದು ಮೂರುವಿಧ ಹಾಸ್ಯ ಮತ್ತು ಶೃಙ್ಗಾರರಸಗಳಲ್ಲಿ ವಿಲಂಬಿತಲಯವನ್ನೂ ವೀರ, ರೌದ್ರ, ಅದ್ಭುತ ಈ ರಸಗಳಲ್ಲಿ ದ್ರುತಲಯವನ್ನೂ ಉಪಯೋಗಿಸಬೇಕು

ಚೋಕ್ಷವೆಂಬ ಗೀತಾಭ್ಯಾಸವನ್ನು ಮುಂದ ಹೇಳುತ್ತಾರೆ ಇಂತಹ ಪ್ರಯೋಗವು ನಾಟಕಗಳಲ್ಲಿ ಆಯಾಯ ಪ್ರಕರಣಕ್ಕೆ ತಕ್ಕಂತೆ ರಸಾಭಿವ್ಯಕ್ತಿಯನ್ನುಂಟುಮಾಡಲು ಸ್ವರಸಂಯೋಗರೂಪದಲ್ಲಿ ನಡೆಯುತ್ತದೆ ಇವನ್ನು ನಾಟಕದಲ್ಲಿನ ಆಯಾಯ ಪಾತ್ರಗಳ ಕೋಪಾದಿಗಳಿಗೆ ತಕ್ಕಂತೆ ಸೂಚಿಸಲಾಗುತ್ತದೆ ಇಂತಹ ಸ್ವರಗಳ ವಿಷಯದಲ್ಲಿ ಕಲವು ಜಾತಿಗಳನ್ನು ಈ ಶ್ಲೋಕದಿಂದ ಹೇಳಿರುವರು ಗ್ರಹ, ಅಂಶ,

---

1 ಗ್ರಹಾಂಶತಾರಮಂದ್ರಾಶ್ಚ ನ್ಯಾಸಾಪನ್ಯಾಸಕೌ ತಥಾ। ಅಪಿ ಸನ್ಯಾಸವಿನ್ಯಾಸೌ ಬಹುತ್ವಂ ಚಾಲ್ಪತಾ ತತಃ। ಏತಾನ್ಯಂತರಮಾರ್ಗೇಣ ಸಹ ಲಕ್ಷ್ಮಾಣಿ ಜಾತಿಷು। ಷಾಡವೌಡವಿತೇ ಕ್ವಾಪೀತ್ಯೇವಮಾಹುಸ್ತ್ರಯೋದಶ। ಎಂದು ಸಂಗೀತರತ್ನಾಕರದಲ್ಲಿ ಹದಿಮೂರುವಿಧಗಳನ್ನು ನಿರೂಪಿಸಿರುವರು ಅಲ್ಲಿನ ವ್ಯಾಖ್ಯಾನದಲ್ಲಿ ಭರತಮತಂಗಾದಿ ಮತವನ್ನು ವಿಚಾರಿಸಿ ಅವರ ಮತದಲ್ಲಿ ಹತ್ತು ವಿಧ ಜಾತಿಗಳನ್ನು ನಿರ್ಣಯಿಸಿರುವರು ಈ ಭರತ ಮತಂಗಾದಿಮತವೇ ಈ ಗ್ರಂಥಕಾರರಿಗೆ ಸಮ್ಮತವೆಂದು ತೋರಿಬರುತ್ತದೆ

ಶ್ಲೋ|| [1]ಅಲಂಕಾರಾಶ್ಚ ಚತ್ವಾರೋ ಭವಂತಿ ವಸುಧಾಧಿಪ |
ಪ್ರಸನ್ನಾದಿಃ ಪ್ರಸನ್ನಾಂತಃ ಪ್ರಸನ್ನಾದ್ಯಂತ ಏವ ಚ |
ಪ್ರಸನ್ನಮಧ್ಯಶ್ಚ ತಥಾ ಕ್ರಮೇಣೈವಂ ವಿನಿರ್ದಿಶೇತ್ ||
ಅಪರಾಂತಕಮುಲ್ಲೋಪ್ಯಂ ಮಂದ್ರಕಃ ಪ್ರಕರೀ ತಥಾ |
ಓವೇಣಕಂಚರೋಬಿಂದುರುತ್ತರಂ ಗೀತಕಾನಿ ತು |
ಋಗ್ಗಾಥಾ ಪಾಣಿಕಾ ದಕ್ಷವಿಹಿತಾ ಬ್ರಹ್ಮಗೀತಿಕಾ |
ಗೀತಮೇತತ್ತದಭ್ಯಾಸಃ ಕಾರಣಾಚ್ಚೋಕ್ಷಸಂಜ್ಞಕಃ |
ಸಂಕ್ಷೇಪೇಣ ಮಯಾ ಪ್ರೋಕ್ತಂ ಸುರಾರಾಧನಕಾರಣಾತ್ |

---

ತಾರ, ಮಂದ್ರ, ನ್ಯಾಸ [2]ಉಪನ್ಯಾಸ, ಅಲ್ಪತ್ವ, ಬಹುತ್ವ, ಷಾಡವ, ಔಡವ, ಎಂಬ ಹತ್ತು ವಿಧವಾದ, ಜಾತಿಗಳು ಸ್ವರಗಳಲ್ಲಿವೆ ಎಂದು ಪಂಡಿತರು ತಿಳಿಯಬೇಕು

ಅಲಂಕಾರಗಳೂ ಸಹ ನಾಲ್ಕು ವಿಧವಾಗಿವೆ ಪ್ರಸನ್ನಾದಿ, ಪ್ರಸನ್ನಾಂತ ಪ್ರಸನ್ನಾದ್ಯಂತ, ಪ್ರಸನ್ನಮಧ್ಯ ಈ ನಾಲ್ಕು ಪ್ರಕಾರಗಳೂ ವರ್ಣಗಳ ಪೌರ್ವಾಪರ್ಯ ವ್ಯತ್ಯಾಸದಿಂದ ಹೀಗೆಯೇ ಮುಂದುವರಿಯುತ್ತವ

ಹೀಗೆಯೇ ಅಪರಾಂತಕ, ಉಲ್ಲೋಪ್ಯ, ಮಂದ್ರಕ, ಪ್ರಕರೀ, ಓವೇಣಕ, ರೋಬಿಂದು, ಉತ್ತರ ಇತ್ಯಾದಿ ಗೀತಗಳನ್ನೂ ತಿಳಿಯಬೇಕು ಗೀತಗಳಲ್ಲಿ ಋಕ್, ಗಾಥಾ, ಪಾಣಿಕಾ, ದಕ್ಷವಿಹಿತಾ, ಬ್ರಹ್ಮಗೀತಿಕಾ ಎಂಬ ಭೇದಗಳಿರುವುವು ಆಯಾಯ ರಸವ್ಯಕ್ತಿಗೆ ತಕ್ಕಂತೆ ಇಂತಹ ಗೀತಗಳ ಅಭ್ಯಾಸವೇ ಚೋಕ್ಷವೆನಿಸು ತ್ತದೆ ದೇವತೆಗಳ ಆರಾಧನಕ್ಕೆ ಉಪಯೋಗವಾಗುವ ಈ ಗೀತೆಗಳನ್ನು ಸಂಕ್ಷೇಪ ವಾಗಿ ನಿನಗೆ ಹೇಳಿರುವೆನು ಗೀತಜ್ಞನಾದವನು ತನ್ನ ಗೀತದಿಂದ ಪರಮಾತ್ಮನನ್ನು ಸಂತೋಷಪಡಿಸಿ ಪರಮಪದವನ್ನು ಹೊಂದುತ್ತಾನೆ ಅಂತಹ ಗೀತಜ್ಞನು ಒಂದು

---

1 ವಿಶಿಷ್ಟವರ್ಣಸಂದರ್ಭಮಲಂಕಾರಂ ಪ್ರಚಕ್ಷತೇ ಎಂದು ಸಂಗೀತರತ್ನಾಕರದಲ್ಲಿ ನಿರೂಪಿಸಲಾಗಿದೆ

2 ಅಪನ್ಯಾಸವೆಂದು ಸಂಗೀತರತ್ನಾಕರದಲ್ಲಿ ಪಾಠವಿದೆ

**ಗೀತಜ್ಞೋ ಯದಿ ಗೀತೇನ ನಾಪ್ನೋತಿ ಪರಮಂ ಪದಂ।**
**ದೇವಸ್ಯಾನುಚರೋ ಭೂತ್ವಾ ತೇನೈವ ಸಹ ಮೋದತೇ ।**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ**
**ವಜ್ರಸಂವಾದೇ ಗೀತಲಕ್ಷಣೋ ನಾಮ**
**ಅಷ್ಟಾದಶೋಽಧ್ಯಾಯಃ**

---

ವೇಳ ಪರಮಪದವನ್ನು ಹೊಂದದೆ ಇದ್ದಲ್ಲಿ ಆಯಾಯ ಗೀತಾದಿ ದೇವತೆಗೆ ಅನುಚರನಾಗಿಯಾದರೂ ಇದ್ದು ಅವನೊಡನೆ ಸುಖಿಸುತ್ತಾನೆ

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಗೀತಲಕ್ಷಣವೆಂಬ ಹದಿನೆಂಟನೆಯ
ಅಧ್ಯಾಯವು ಮುಗಿದಿದೆ

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಏಕೋನವಿಂಶೋಽಧ್ಯಾಯಃ ||

### || ಮಾರ್ಕಂಡೇಯ ಉವಾಚ ||

**ಅಥಾತೋದ್ಯವಿಧಾನಂ, ಚತುರ್ವಿಧಮಾತೋದ್ಯಂ, ತತಂ, ಸುಷಿರಂ, ಘನಮವನದ್ಧಂ ಚ। ತತಂ ವೀಣಾದಿ, ಸುಷಿರಂ, ವಂಶಾದಿ, ಘನಂ ತಾಲಾದಿ, ಅವನದ್ಧಂ ಮುರಜಾದಿ, ತತ್ರ ಸ್ವರಾಸ್ತುಲ್ಯಾಃ ಶಾರೀರಾ ವೈಣವಾಶ್ಚ ॥ ತದ್ವದ್ವಂಶಾಃ ಕಿಂತು ಯಥಾ ಶರೀರಾಣಾ-ಮಾರೋಹಾವರೋಹಣೇ ನ ತಥಾ ವೈಣವಾನಾಂ। ವಂಶಾನಾಂ ವಿಪರ್ಯಯಾತ್। ತಾಲಃ ಕಾಲಪ್ರಯೋಜ್ಯಃ ॥**

---

### ಹತ್ತೊಂಭತ್ತನೆಯ ಅಧ್ಯಾಯವು.

ಅನಂತರ ಮೃದಂಗವೇ ಮೊದಲಾದ ವಾದ್ಯವಿಧಾನವನ್ನು ಹೇಳುತ್ತೇನೆ ವಾದ್ಯಗಳು ನಾಲ್ಕುವಿಧ ತತ, ಸುಷಿರ, ಘನ, ಅವನದ್ಧ ಎಂಬುವೇ ವಾದ್ಯದ ಪ್ರಭೇದಗಳು ತತವೆಂದರೆ ವೀಣೆಯೇ ಮೊದಲಾದ ತಂತ್ರೀವಾದ್ಯ ಸುಷಿರ ಎಂದರೆ ಕೊಳಲೇ ಮೊದಲಾದ ಬಿದಿರಿನಿಂದ ಮಾಡಲ್ಪಟ್ಟ ವಾದ್ಯ ಘನ ಎಂದರೆ ತಾಳ ಝಲ್ಲರೀ ಮುಂತಾದುವು ಅವನದ್ಧ ಎಂದರೆ ಮದ್ದಲೆ ಮೊದಲಾದ ಚರ್ಮ ವಾದ್ಯ ಇವುಗಳಲ್ಲಿ ಬಿದಿರಿನಿಂದ ಮಾಡಲ್ಪಟ್ಟ ಕೊಳಲು ಮುಂತಾದ ವಾದ್ಯಗಳೂ ಸಹ ಶಾರೀರದಂತೆ ಸಪ್ತಸ್ವರ ಹೊಂದಿರುವುದರಲ್ಲಿ ಸಮಾನವೇ ಆಗಿವೆ ಆದರ ಶಾರೀರವಾದ ಸ್ವರಗಳಿಗಿರುವಂತೆ ಈ ವಾದ್ಯದ ಸ್ವರಗಳಿಗೆ ಆರೋಹಾವರೋಹಣ ವಿರುವುದಿಲ್ಲ ವ್ಯತ್ಯಸ್ತವಾಗಿರುತ್ತವೆ ತಾಲವೆಂಬ ವಾದ್ಯವು ಕಾಲಮಾನದಿಂದ ಉಂಟಾದುದು

**ಪಂಚಲಘ್ವಕ್ಷರೋಚ್ಚಾರಣಕಲಾಮಾತ್ರಾಃ। ತಿಸ್ರೋ ವೃತ್ತಯಃ। ಚಿತ್ರಾವೃತ್ತಿರ್ದಕ್ಷಿಣಾ। ದ್ವಿಧಾ ಮಾತ್ರಾ ಕಲಾ ಚಿತ್ರೇ। ಚತುರ್ಮಾತ್ರಾ ವೃತ್ತೌ। ಅಷ್ಟಮಾತ್ರಾ ದಕ್ಷಿಣಾಯಾಃ। ಅಷ್ಟಮಾತ್ರಾ ದಕ್ಷಿಣೇ ಅವಯಾ, ನಿಷ್ಕ್ರಾಮೋ, ವಿಕ್ಷೇಪಃ, ಪ್ರವೇಶಃ, ಶಮ್ಯಾತಾಲಃ, ಸನ್ನಿಪಾತಭೇದಃ, ಕಲಾಸಮೂಹೋ ಯುಕ್ತಃ॥**

**ಚಪುಟಸ್ಥಃ ಅಯುಕ್, ಚಂಚತ್ಪುಟಃ, ಪ್ಲುತಾಂತಃ, ಪಂಚಪಾಣಿಃ, ಷಟ್‌ಪಿತಾ ಪುತ್ರಕಃ ಇತಿ ಯಥಾಕ್ಷರಸ್ಥಃ। ತತ್ರ ಲಯಾಃ ದ್ರುತಮಧ್ಯವಿಲಂಬಿತಾಃ। ಲಯವತ್ತಾಲಃ। ಪ್ರಕರಣಂ ದ್ವಿವಿಧಂ। ಕುಲಕಂ ಚ್ಛೇದ್ಯಕಂ ಚ ॥**

ಐದು ಲಘ್ವಕ್ಷರಗಳನ್ನು ಉಚ್ಚರಿಸಲು ಬೇಕಾಗುವ ಕಲಾ ಎಂಬ ಅಲ್ಪಕಾಲವು ಮಾತ್ರೆ ಎನಿಸುತ್ತದೆ. ಚಿತ್ರಾ, ವೃತ್ತಿ ದಕ್ಷಿಣಾ ಎಂದು ವೃತ್ತಿಗಳೂ ಮೂರುವಿಧವಾಗಿವೆ ಅದರಲ್ಲಿ ಚಿತ್ರಾ ಎಂಬ ವೃತ್ತಿಯು ಮಾತ್ರಾ ಕಲಾ ಎಂದು ಎರಡುವಿಧ ವೃತ್ತಿಯು ನಾಲ್ಕುಮಾತ್ರೆಯುಳ್ಳದ್ದು ದಕ್ಷಿಣಾ ಎಂಬ ವೃತ್ತಿಯು ಎಂಟುಮಾತ್ರೆಯುಳ್ಳದ್ದು ಅವೂ ಸಹ ಅಷ್ಟಮಾತ್ರಾ, ದಕ್ಷಿಣಾ, ಅವಯಾ, ನಿಷ್ಕ್ರಾಮ, ವಿಕ್ಷೇಪ, ಪ್ರವೇಶ, ಶಂಪಾತಾಲ ಸನ್ನಿಪಾತಭೇದ ಎಂಬ ಹೆಸರಿನಿಂದ ಕರೆಯಲ್ಪಡುತ್ತವೆ ಕಲೆಗಳ ಸಮುದಾಯಕ್ಕೆ ಯುಕ್ತವೆಂದು ಹೆಸರು

[1]ಯುಕ್ತವೆಂಬ ಅಭಿಧಾನವುಳ್ಳ ಆ ಕಲಾಸಮೂಹವೂ ಚಪುಟಸ್ಥ, ಅಯುಕ್, ಚಂಚತ್ಪುಟ, ಪ್ಲುತಾಂತ, ಪಂಚಪಾಣಿ, ಷಟ್‌ಪಿತಾಪುತ್ರಕ ಎಂಬ ಬೇಧಗಳನ್ನು ಹೊಂದಿರುತ್ತದೆ ಈ ಭೇದಗಳೆಲ್ಲವೂ ಆಯಾಯ ಭೇದಕ್ಕೆ ಬೋಧಕವಾದ ಚಪುಟಸ್ಥವೇ ಮೊದಲಾದ ಹೆಸರಿನಲ್ಲಿರುವ ಅಕ್ಷರಗಳ ಲಘು, ಗುರು ವಿನ್ಯಾಸಕ್ಕೆ ಅನುಗುಣವಾಗಿರುತ್ತವೆ ದ್ರುತ, ಮಧ್ಯ, ವಿಲಂಬಿತ ಎಂದು ಲಯಗಳೂ ಮೂರು ವಿಧವಾಗಿರುತ್ತವೆ ಲಯಕ್ಕೆ ತಕ್ಕಂತೆ ತಾಲಪ್ರಕರಣವು ಕುಲಕಚ್ಛೇದ್ಯಕವೆಂದು ಎರಡು ವಿಧವಾಗಿದೆ

1 ಈ ಪ್ರಕರಣವೆಲ್ಲವೂ ಬಹಳ ಸ್ಥೂಲವಾಗಿ ಇಲ್ಲಿ ನಿರೂಪಿಸಲಾಗಿದೆ ಸಂಗೀತರತ್ನಾಕರಕ್ಕೆ ಇದು ಹೊಂದುವುದಿಲ್ಲ

**ಅಥಾವನದ್ಧಂ, ತತ್ರ ಪೌಷ್ಕರವತ್ಕ್ವಣಾನ್ವಿತಂ ಕರುಣಾನ್ವಿತಂ, ತತ್ರಷೋಡಶಾಕ್ಷರಾಣಿ ಕಖಗಘಟರಢಣತಥದಧಯರಲವ ಇತಿ, ತತ್ರ ಕಟರಥಲುಗಾದಿ ದಕ್ಷಿಣಮುಖೇ. ಘಧಮಾ ವಾಮೇ, ಗದಕಾರಾ ಮೂರ್ಧ್ನಿ, ಟಣಲಹಾ ಆಲಿಂಗೇ ಅ ಆ ಇ ಉ ಏ ಓ ಅ ಇ ಚ ಓ ಯಥಾ ಯೋಗಂ ಖಗಧಾನಾಂ ರೇಫೇಣ ಯೋಗಃ ।**

**ಕಹಭದಾನಾಂ ಣಲಥವಃ, । ಸಮಹಸ್ತನಿಪಾತಾಂಗುಲೀಪ್ರಚಲನೋರ್ಧ್ವವಾಮ್ಯೈಕಯೋಃ ಸಮಹಸ್ತನಿಪಾತಪ್ರದೇಶಿನೀ । ತದ್ವತ್ ಥಲ್ಲಾನಾಂಯೋಗಃ ಸಮಪಾಣ್ಯರ್ಧಪಾಣಿರದೀರ್ಘಪಾಣಿರೇಕಪಾ-**

---

ಅವನದ್ಧವೆಂದರೆ ಮೃದಂಗವೇ ಮೊದಲಾದ ಚರ್ಮವಾದ್ಯ— ಅವುಗಳಲ್ಲಿ ಪೌಷ್ಕರವೆಂದು ಹೇಳಿರುವ ಸಣ್ಣ ವಾದ್ಯದಂತೆ ಅವ್ಯಕ್ತವಾದ ಅಲ್ಪಧ್ವನಿಯಿಂದ ಕೂಡಿದ ವಾದ್ಯವು ಕರುಣರಸಾಭಿವ್ಯಂಜಕವಾದ ಗೀತಿಗಳಲ್ಲಿ ಉಪಯೋಗವಾಗುತ್ತದ ಅದರಲ್ಲಿ ಬಾರಿಸಬಹುದಾದ ಅಕ್ಷರಗಳು ಹದಿನಾರು ಕ ಖ ಗ ಘ ಟ ರ ಢ ಣ ಣ ತ ಥ ದ ಧ ಯ ರ ಲ ವ ಇವು ಇವುಗಳಲ್ಲಿ ಕ ಟ ರ ಥ ಇವು ವಾದ್ಯದ ಬಲ ಭಾಗದಲ್ಲಿಯೂ, ಘ ಧ ಮ ಇವು ಎಡಭಾಗದಲ್ಲಿಯೂ ಗ ದ ಇವು ಮೇಲ್ಭಾಗ ವಲ್ಲಿಯೂ, ಟ ಣ ಲ ಹಾ ಇವು ಆಲಿಂಗನ ಸ್ಥಲದಲ್ಲಿಯೂ, ಬಾರಿಸಲು ಅರ್ಹವಾಗುತ್ತವೆ ಅ, ಆ, ಇ, ಉ, ಏ, ಓ, ಅ, ಇ, ಓ ಇವು ಯಥಾರ್ಥವಾಗಿ ಆಯಾಯ ಸಂದರ್ಭಕ್ಕೆ ತಕ್ಕಂತೆ ಆಯಾಯ ಸ್ಥಾನಗಳಲ್ಲಿ ಬಾರಿಸಲ್ಪಡುವುವು ಖ, ಗ, ಧ ಇವುಗಳಿಗೆ ವಾದನ ಕಾಲದಲ್ಲಿ ರೇಫಾಕ್ಷರದಿಂದ ಸಂಯೋಗವು ಉಂಟಾಗುತ್ತದೆ

ಹಾಗೆಯೇ ಕ, ಹ, ಭ, ದ ಇವುಗಳಿಗೆ ಣ, ಲ, ಥ ಇವುಗಳ ಸಂಯೋಗ ಉಂಟಾಗುತ್ತದೆ ಇವುಗಳ ವಾದನವು ಎರಡು ಭಾಗದಲ್ಲಿಯೂ ಸಮವಾದ ಹಸ್ತದಿಂದ ಕೂಡಿರುವ ಬೆರಳುಗಳ ಚಾಲನದಿಂದ ಉಂಟಾಗುತ್ತದೆ ಎಡ ಮತ್ತು ಇತರ ಪಾರ್ಶ್ವದಲ್ಲಿ ಮೇಲುಭಾಗದ ಅರ್ಧದಲ್ಲಿ ಸಮಹಸ್ತವುಳ್ಳ ಹೆಬ್ಬೆಟ್ಟೇ ವಾದನ ಸಾಧನವಾಗುತ್ತದೆ ಥ, ಲ್ಲ ಇವುಗಳ ಸಂಬಂಧವೂ ಇದೇ ರೀತಿಯಾಗುತ್ತದೆ ಸಮಪಾಣಿ, ಅರ್ಧಪಾಣಿ, ಅದೀರ್ಘಪಾಣಿ, ಏಕಪಾಣಿ, ಎಂಬ ತಾಡನಗಳು ಎರಡು ಕೈಗಳ ಅಂಗುಷ್ಠಗಳಿಂದ ಉಂಟಾಗುತ್ತವೆ ಘ, ಧ, ಗ, ಡ, ರ ಇವು ಸಮಪಾಣಿ ತಾಡನಕ್ಕೆ

**ಣಿಃ ದ್ವಿಹಸ್ತಪ್ರದೇಶಿನೀಪ್ರಹತಾನಿ ಸಮಪಾಣಿಪ್ರಹತೋಪಕಾರಾಃ ಘಥಗಡರಾ, ಅಧ್ಯರ್ಧಪಾಣೌ ಕಥಕಾರಾ ॥ ಅಧ್ಯರ್ಧಪಾಣೌ ರಣಲಹಾ, ಸ್ನಹಾದ್ವಿಹಸ್ತೇನ ।**

**ತಲಪ್ರದೇಶಿನೀಪ್ರಹತೇ ಅಹಿತವಿತಸ್ತಾಲಿಪ್ತಗೋಮುಖೀಮಾರ್ಗಾಃ ಶೃಙ್ಗಾರಹಾಸ್ಯಯೋರಹಿತಃ । ವೀರರೌದ್ರಾದ್ಭುತೇಷು ವಿತಸ್ತಃ । ಕರುಣಶಾನ್ತಯೋರಾಲಿಪ್ತಃ । ಬೀಭತ್ಸಭಯಾನಕಯೋಃ ಗೋಮುಖೀ । ದರ್ದುರಪಣವಯೋರ್ಮೃದಂಗಾನುಗಮನಂ ಭವತಿ ।**

**ಭವನ್ತಿ ಚಾತ್ರ ಶ್ಲೋಕಾಃ—**

**ನೇಪಥ್ಯಭವನದ್ವಾರಿ ನರಾ ರಂಗಾಭಿವೀಕ್ಷಕಾಃ ।**
**ಮುರಜಾಃ ಪೃಷ್ಠತಸ್ತೇಷಾಂ ತದ್ವನ್ಮಾರ್ಜರಿಕಾ ಭವೇತ್ ॥**

---

ಉಪಕರಿಸುತ್ತವೆ ಕ, ಥ ಇವು ಅರ್ಧಪಾಣಿ ತಾಡನಕ್ಕೆ ಉಪಕಾರಿಗಳಾಗುತ್ತವೆ ರ, ಣ, ಲ, ಹ ಇವು ಅಧ್ಯರ್ಧಪಾಣಿಯಲ್ಲಿ ಸಹಾಯಕವಾಗುತ್ತವ ಸ್ನ, ಹಾ ಇವು ದ್ವಿಹಸ್ತ ತಾಡನಕ್ಕ ಉಪಕಾರಿಗಳಾಗುತ್ತವೆ

ಅಂಗೈಯ್ಯಿಂದಲೂ, ಅಂಗುಷ್ಠದಿಂದಲೂ ವಾದ್ಯವನ್ನು ಬಾರಿಸುವ ಕ್ರಮವು ಅಹಿತ, ವಿತಸ್ತ, ಆಲಿಪ್ತ, ಗೋಮುಖೀ ಎಂಬ ನಾಲ್ಕು ಮಾರ್ಗಗಳಾಗಿ ಆಗುತ್ತವೆ ಅವುಗಳಲ್ಲಿ ಅಹಿತವೆಂಬ ಮಾರ್ಗವು ಶೃಙ್ಗಾರ ಮತ್ತು ಹಾಸ್ಯರಸಗಳಿಗೆ ಅಭಿವ್ಯಂಜಕ ವಾಗುತ್ತದೆ ವಿತಸ್ತ ಎಂಬುದು ವೀರ, ರೌದ್ರ, ಅದ್ಭುತರಸಗಳಿಗೆ ಅನುಕೂಲ ವಾಗುತ್ತದೆ ಆಲಿಪ್ತ ಎಂಬುದು ಕರುಣ, ಶಾಂತರಸಗಳಿಗೆ ಉಪಕಾರಿಯಾಗುತ್ತದೆ ಗೋಮುಖೀ ಎಂಬುದು ಬೀಭತ್ಸ ಮತ್ತು ಭಯಾನಕರಸಗಳಿಗೆ ಅನುಕೂಲಿಸುತ್ತದೆ. ದರ್ದುರ, ಪಣವ ಎಂಬ ಚರ್ಮವಾದ್ಯಗಳಿಗೆ ಮೃದಂಗದ ಅನುಸರಣವೇ ಸ್ವಭಾವ—

ಈ ವಿಷಯದಲ್ಲಿ ಈ ಶ್ಲೋಕಗಳು ಉದಹರಿಸಲ್ಪಟ್ಟಿವೆ ನಟನರ್ತಕರ ಆವಾಸ ಸ್ಥಾನವಾದ ನೇಪಥ್ಯಗೃಹದ ಬಾಗಿಲಿನಲ್ಲಿ ರಂಗಸ್ಥಲಾಭಿಮುಖರಾಗಿ ನಟರು ಇರ ಬೇಕು ಮೃದಂಗ ಮತ್ತು ಮಾರ್ಜರಿಕಾ ವಾದ್ಯದವರು ಅವರ ಹಿಂಭಾಗದಲ್ಲಿರ ಬೇಕು ಆ ಮೃದಂಗ ವಾದ್ಯದವರ ಬಲಭಾಗದಲ್ಲಿ ದರ್ದುರ ಮತ್ತು ಪಣವ ವಾದ್ಯ

**ಯೋಮ್ಯತಸ್ಯಸ್ಯ ವಿಜ್ಞೇಯೋ ದರ್ದುರಃ ಪಣವಸ್ತಥಾ ।**
**ಉತ್ತರಾಭಿಮುಖೋ ಗಾತಾ ತಥಾ ದಕ್ಷಿಣತೋ ಭವೇತ್ ॥**
**ವಾಮತೋ ಗೈರಿಕಸ್ತಸ್ಯ ದಕ್ಷಿಣೇ ವಂಶವಾದಕೌ ।**
**ಗಾತುರೇವಾಭಿಮುಖ್ಯೇನ ಗಾಯಕಾನಾಂ ನಿವೇಶನಂ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ ವಜ್ರಸಂವಾದೇ ಆತೋದ್ಯವಿಧಿರ್ನಾಮೈಕೋನ ವಿಂಶೋಽಧ್ಯಾಯಃ**

---

ದವರು ಇರಬೇಕು ಅವರ ಬಲಪಾರ್ಶ್ವದಲ್ಲಿ ಗಾನಮಾಡುವವನು ಉತ್ತರಾಭಿಮುಖನಾಗಿರಬೇಕು ಆ ಗಾಯಕನ ಎಡಬಾಗದಲ್ಲಿ ಗೈರಿಕನೆಂಬ ವಾದ್ಯಗಾರನೂ ಬಲ ಭಾಗದಲ್ಲಿ ವೇಣುವಾದನ ಮಾಡುವವನೂ ಇರಬೇಕು ಗಾನಮಾಡುವವನ ಎದುರಿಗೆ ಇತರ ಉಪಗಾಯಕರೂ ಇರಬೇಕು

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ ವಜ್ರ ಸಂವಾದದಲ್ಲಿ ಆತೋದ್ಯವಿಧಿ ಎಂಬ ಹತ್ತೊಂಭತ್ತನೆಯ ಅಧ್ಯಾಯ ಮುಗಿದಿದೆ



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ವಿಂಶೋಽಧ್ಯಾಯಃ ||

ಪರಸ್ಯಾನುಕೃತಿರ್ನಾಟ್ಯಂ ನಾಟ್ಯಜ್ಞೈಃ ಕಥಿತಂ ನೃಪ ।
ತಸ್ಯ ಸಂಸ್ಕಾರಕಂ ನೃತ್ತಂ ಭವೇಚ್ಛೋಭಾವಿವರ್ಧನಂ || ೧ ||

ನೃತ್ಯಂ ತು ದ್ವಿವಿಧಂ ಪ್ರೋಕ್ತಂ ನಾಟ್ಯಲಾಸ್ಯಾಶ್ರಯಂ ಸದಾ ।
ದ್ವೈವಿಧ್ಯಂ ದ್ವಿವಿಧಸ್ಯಾಪಿ ಪುನರುಕ್ತಂ ನರಾಧಿಪ || ೨ ||

ಆಭ್ಯಂತರಂ ಚ ಬಾಹ್ಯಂ ಚ ಬಾಹ್ಯಂ ಲಕ್ಷಣವರ್ಜಿತಂ ।
ಆಭ್ಯಂತರಂ ಲಕ್ಷಣವನ್ಮಂಗಲ್ಯಂ ತತ್ಪ್ರಯೋಗತಃ || ೩ ||

---

### ಇಪ್ಪತ್ತನೆಯ ಅಧ್ಯಾಯವು

೧-೩ ವೇಷಭಾಷಾ ಚೇಷ್ಟಾದಿಗಳಿಂದ ಇತರರನ್ನು ಅನುಕರಿಸುವುದೇ ನಾಟ್ಯವೆಂದು ನಾಟ್ಯಶಾಸ್ತ್ರಾಭಿಜ್ಞರು ಹೇಳಿರುತ್ತಾರೆ ಅಂತಹ ನಾಟ್ಯಕ್ಕೆ ಬಹು ಮಟ್ಟಿಗೂ ರಮ್ಯತೆಯನ್ನುಂಟುಮಾಡುವ ಕರ್ಮಕ್ಕೆ ನೃತ್ಯವೆಂದು ಹೆಸರು ನೃತ್ಯವು ನಾಟ್ಯ ಮತ್ತು ಲಾಸ್ಯವೆಂಬ ವಿಷಯಭೇದದಿಂದ ಎರಡು ವಿಧವಾಗಿರುತ್ತದೆ ಈ ಎರಡೂ ಸಹ ಆಭ್ಯಂತರ ಬಾಹ್ಯವೆಂದು ಮತ್ತೂ ಎರಡೆರಡು ವಿಧವಾಗುತ್ತದೆ ಇದರಲ್ಲಿ ಬಾಹ್ಯವೆಂಬ ನೃತ್ಯಭೇದವು ಲಕ್ಷಣದೃಷ್ಟಿಯನ್ನು ಅಪೇಕ್ಷಿಸತಕ್ಕದ್ದಲ್ಲ ಆಭ್ಯಂತರವೆಂಬುದು ಲಕ್ಷಣದೃಷ್ಟಿಗೆ ಸೇರಿದುದು ಇದರ ಪ್ರಯೋಗವೇ ಬಹು ಮಟ್ಟಿಗೂ ಮಂಗಲಪ್ರದವೆಂದು ಹೇಳಲ್ಪಟ್ಟಿದೆ

ಲಾಸ್ಯಂ ಸ್ವಚ್ಛಂದತಃ ಕಾರ್ಯಂ ಮಂಡಪೇ ಯದಿ ವಾ ಬಹಿಃ ।
ನಾಟ್ಯಂ ಮಂಡಪ ಏವ ಸ್ಯಾನ್ಮಂಡಪಂ ದ್ವಿವಿಧಂ ಭವೇತ್ ॥ ೪ ॥

ಆಯತಂ ಚತುರಸ್ರಂ ತು ದ್ವಾತ್ರಿಂಶದ್ಧಸ್ತಸಮ್ಮಿತಂ ।
ಚತುರಸ್ರಂ ನ ಕರ್ತವ್ಯಮಾಯತಂ ದ್ವಿಗುಣಾಯತಂ ॥ ೫ ॥

ಹೀನಾಧಿಕಂ ನ ಕರ್ತವ್ಯಂ ದೃಷ್ಟಾದೃಷ್ಟಾ ಶುಭಪ್ರದಂ ।
ಹೀನೇ ಭವತಿ ಸಮ್ಮರ್ದೋ ವಿಸ್ತೀರ್ಣೇ ನಾಟ್ಯಗೇಯಯೋಃ ॥ ೬ ॥

ವ್ಯಕ್ತಿರ್ನೈವೋಪಪದ್ಯೇತ ತಸ್ಮಾತ್ತೌ ಪರಿವರ್ಜಯೇತ್ ।
ಆದಾವೇವ ತು ಕರ್ತವ್ಯಂ ತ್ರಿದಶಾನಾಂ ತು ಪೂಜನಂ ॥ ೭ ॥

ಪೂಜನಂ ಜರ್ಜರಸ್ಯಾಪಿ ವಾಸ್ತುದೈವತಪೂಜನಂ ।
ಏವಂ ಕೃತ್ವಾ ತತೋ ನಾಟ್ಯಂ ನಾಂದೀಪೂರ್ವಕಮಿಷ್ಯತೇ ॥ ೮ ॥

---

೪–೬ ಲಾಸ್ಯವೆಂಬ ನೃತ್ಯಭೇದವನ್ನು ನಾಟ್ಯಮಂಟಪದಲ್ಲಾಗಲಿ, ಇತರ ಸ್ಥಲದಲ್ಲಿಯಾಗಲೀ, ಇಚ್ಛೆಬಂದಂತೆ ಪ್ರಯೋಗಿಸಬಹುದು ನಾಟ್ಯವನ್ನು ಮಾತ್ರ ಮಂಡಪದಲ್ಲಿಯೇ ಪ್ರಯೋಗಿಸಬೇಕು ಅಂತಹ ನಾಟ್ಯಮಂಡಪವೂ ಎರಡು ವಿಧವಾಗಿದೆ ಮಂಡಪವನ್ನು ಮೂವತ್ತೆರಡು ಮೊಳ ಉದ್ದ ಮತ್ತು ಅಗಲ ಉಳ್ಳದ್ದಾಗಿ ಚಚ್ಚೌಕವಾಗಿ ರಚಿಸಬೇಕು ಇಂತಹ ಚಚ್ಚೌಕ ಮಂಡಪಗಳನ್ನು ದ್ವಿಗುಣ ವಿಸ್ತಾರ ಉಳ್ಳದ್ದಾಗಿ ನಿರ್ಮಿಸಬಾರದು ನಿರ್ದಿಷ್ಟಪ್ರಮಾಣಕ್ಕಿಂತ ಹೆಚ್ಚಾಗಿ ಯಾಗಲಿ, ಕಡಿಮೆಯಾಗಿ ಆಗಲಿ ರಚಿಸಬಾರದು ಹಾಗ ರಚಿಸಿದಲ್ಲಿ ಅದು ದೃಷ್ಟ ಹಾಗೂ ಅದೃಷ್ಟವಾದ ದೋಷಗಳಿಗೆ ಎಡೆಯಾಗುತ್ತದ ಪರಿಣಾಮವು ಕಡಿಮೆ ಯಾದಲ್ಲಿ ಬಹಳ ಇಕ್ಕಟ್ಟಾಗಿ ನಾಟ್ಯಪ್ರಯೋಗಕ್ಕೆ ದೃಷ್ಟದೋಷವೇ ಉಂಟಾಗುತ್ತದೆ. ಬಹಳ ವಿಸ್ತಾರವಾಗಿ ರಚಿಸಿದಲ್ಲಿ ನಾಟ್ಯದ ಮತ್ತು ಗಾನದ ಅಭಿವ್ಯಕ್ತಿಗೇ ಕುಂದಕ ಬರುತ್ತದೆ ಆದುದರಿಂದ ಹೀನವಾದ ಮತ್ತು ಅಧಿಕವಾದ ಪರಿಮಾಣದಿಂದ ನಾಟ್ಯಮಂಡಪವನ್ನು ರಚಿಸಬಾರದು

೭–೮ ಆ ಮಂಡಪದಲ್ಲಿ ಮೊದಲೇ ದೇವತೆಗಳ ಪೂಜೆಯನ್ನು ಮಾಡಬೇಕು ಅನಂತರ ಜರ್ಜರವೇ ಮೊದಲಾದ ವಾದ್ಯಗಳ ಪೂಜಯನ್ನೂ ಅನಂತರ ವಾಸ್ತುದೇವತಾ ಪೂಜೆಯನ್ನೂ ಸಹ ಮಾಡಬೇಕು. ಈ ರೀತಿ ಮಾಡಿದ ನಂತರ ನಾಂದೀಪ್ರಯೋಗ ಪೂರ್ವಕವಾಗಿ ನಾಟ್ಯವನ್ನು ಪ್ರಾರಂಭಿಸಬೇಕು ಅನಂತರ

ತತೋ ಜವನಿಕಾಕ್ಷೇಪೈಃ ಪ್ರತಿಪಾತ್ರಪ್ರವೇಶನಂ ।
ಪ್ರವೇಶನಿರ್ಗಮೌ ಕಾರ್ಯೌ ಕೃತ್ವಾ ಕಾರ್ಯಸ್ಯ ಸೂಚನಂ ॥ ೯ ॥

ಪುಷ್ಪಾಂಜಲಿಃ ಪ್ರದಾತವ್ಯಃ ನಾಟ್ಯಾನ್ತೇ ವಾಸ್ತುಪೂಜನಂ ।
ಪಾಠ್ಯೇ ಗೀತೇ ಸಮಾಸಕ್ತಃ ಪಾತ್ರತುಲ್ಯಃ ಪರಿಕ್ರಮಃ ॥ ೧೦ ॥

ಚತುಷ್ಕಲೋ ನಾಯಕಾನಾಂ ಮಧ್ಯಾನಾಂ ತ್ರಿಕಲೋ ಭವೇತ್ ।
ದ್ವಿಕಲಶ್ಚಾಧಮಾನಾಂ ಸ್ಯಾನ್ಮಧ್ಯಮೋ ನೃಪಕರ್ಮಣಿ ॥ ೧೧ ॥

ಏಕಾಧಿಕೋನಂ ಸರ್ವೇಷಾಂ ಕರ್ತವ್ಯಂ ಕಾರ್ಯಯೋಗತಃ ।
ದೇವಾ ಧೀರೋದ್ಧತಾ ಜ್ಞೇಯಾ ಉದ್ಧತಾ ದಾನವಾದಯಃ ॥ ೧೨ ॥

ನೃಪಾಶ್ಚ ಧೀರಲಲಿತಾ ಧೀರಾಸ್ತದನುಜೀವಿನಃ ।
ಪ್ರಶಾನ್ತಧೀರಾ ಋಷಯಃ ಪ್ರಶಾನ್ತಾಸ್ತತ್ಪದಾನುಗಾಃ ॥ ೧೩ ॥

---

ಎಲ್ಲಾ ಪಾತ್ರಗಳನ್ನೂ ತೆರೆಯನ್ನು ಎತ್ತುವುದರ ಮೂಲಕ ಪ್ರವೇಶಮಾಡಿಸಬೇಕು. ಪಾತ್ರಗಳ ಪ್ರವೇಶ ಮತ್ತು ನಿರ್ಗಮಗಳನ್ನು ಸೂಚನಪೂರ್ವಕವಾಗಿಯೇ ಮಾಡ ಬೇಕು ಪುಷ್ಪಾಂಜಲಿಯನ್ನೂ ಪ್ರಯೋಗಿಸಿ ನಾಟ್ಯವಾದನಂತರ ಪುನಃ ವಾಸ್ತು ದೇವತಾಪೂಜೆಯನ್ನು ಮಾಡಬೇಕು

೧೦-೧೩ ಪಾಠ್ಯದ ವಿಷಯದಲ್ಲಿಯೂ ಗೀತಗಳ ವಿಷಯದಲ್ಲಿಯೂ ಆಯಾಯ ಸಮಯಕ್ಕೆ ತಕ್ಕಂತೆ ನಿರತರಾಗಿರುವ ನಟರು ಪಾತ್ರದ ಸ್ವಭಾವಕ್ಕೆ ತಕ್ಕಂತೆ ರಂಗಸ್ಥಾನದಲ್ಲಿ ವ್ಯವಹರಿಸಬೇಕು ಸಾಮಾನ್ಯವಾದ ನಾಟಕೀಯ ಕಾರ್ಯ ಗಳಲ್ಲಿ ನಾಯಕರ ಗೀತಾದಿಗಳು ನಾಲ್ಕು ಕಲೆಗಳಿಂದ ಪೂರ್ಣವಾಗಿಯೂ ಮಧ್ಯ ವರ್ಗದವರ ಆ ನಾಟ್ಯಾದಿಗಳು ಮೂರು ಕಲೆಗಳುಳ್ಳದ್ದಾಗಿಯೂ ಅಧಮರ ಗೀತಾದಿ ಗಳು ಎರಡು ಕಲೆಯುಳ್ಳದ್ದಾಗಿಯೂ ಇರಬೇಕು ಇವು ಆಯಾಯ ಕಾರ್ಯಕ್ಕೆ ತಕ್ಕಂತೆ ಒಂದೊಂದು ಕಲೆ ಹೆಚ್ಚಾಗಿಯೋ ಕಡಮೆಯಾಗಿಯೋ ಇರಬಹುದು. ದೇವತೆಗಳು ಯಾವಾಗಲೂ ಧೀರೋದ್ಧತರೆಂದೇ ತಿಳಿಯಬೇಕು ದಾನವರೇ ಮೊದ ಲಾದವರು ಉದ್ಧತರೆಂದೂ, ದೊರೆಗಳು ಧೀರಲಲಿತರೆಂದೂ, ದೊರೆಗಳ ಅನುಚರರು ಧೀರರೆಂದೂ, ಋಷಿಗಳು ಪ್ರಶಾಂತಿಯಿಂದ ಕೂಡಿದ ಧೀರರೆಂದೂ, ಅವರ ಅನು ಚರರು ಪ್ರಶಾಂತರೇ ಎಂದೂ ತಿಳಿಯಬೇಕು

ಧೀರೋದಾತ್ತಾಸ್ತಥಾ ವಿಪ್ರಾಃ ಉದಾತ್ತಾ ವಣಿಜೋ ಮತಾಃ ।
ಏವಂ ವಿಧಾಶ್ಚ ಕಥಿತಾ ಏತೇಷಾಮೇವ ಯೋಗತಃ ॥ ೧೪ ॥

ಆಹಾರ್ಯಃ ಸಾತ್ವಿಕಶ್ಚೈವ ವಾಚಿಕೋಽಙ್ಗಿಕ ಏವ ಚ ।
ಚತುಷ್ಪ್ರಕಾರೋಽಭಿನಯಃ ಕರ್ತವ್ಯೋ ನಾಟ್ಯಕರ್ಮಣಿ ॥ ೧೫ ॥

ಆಹಾರ್ಯಃ ಪ್ರತಿಶೀರ್ಷಾದಿಃ ವಿಕೃತೋ ವೇಶ ಉಚ್ಯತೇ ।
ಧೀರೋದ್ಧತಾನಾಂ ವೇಶಸ್ಸ್ಯಾನ್ನಚಾತ್ಯರ್ಥಸಮುಲ್ಬಣಃ ॥ ೧೬ ॥

ಉದ್ಧತಶ್ಚೋದ್ಧತಾನಾಂ ಸ್ಯಾದ್ರಾಜ್ಞಾಂ ಲಲಿತ ಇಷ್ಯತೇ ।
ಪ್ರತಿನಾಯಕವೇಶಸ್ತು ಕರ್ತವ್ಯಶ್ಚ ತಥೋದ್ಧತಃ ॥ ೧೭ ॥

ಅನ್ಯೇಷಾಂ ಸದೃಶೋ ವೇಶೋ ದೇಶಕರ್ಮಾಶ್ರಯೋ ಭವೇತ್ ।
ಅಶ್ವಾದಯಶ್ಚ ಕರ್ತವ್ಯಾಃ ಚರ್ಮಕಾಷ್ಠಾದಿಭಿಸ್ಸಮಾಃ ॥ ೧೮ ॥

---

೧೪-೧೬ ಹಾಗೆಯೇ ಬ್ರಾಹ್ಮಣರು ಧೀರೋದಾತ್ತರಾಗಿಯೂ, ವೈಶ್ಯರು ಉದಾತ್ತರಾಗಿಯೂ, ಇವರ ಸಂಬಂಧ ಹೊಂದಿದವರೂ ಇವರ ಗುಣಕ್ಕೆ ಸದೃಶರಾಗಿಯೂ ಇರಬೇಕು ಅನುಕರಣರೂಪವಾದ ಅಭಿನಯವು ಆಹಾರ್ಯ, ಸಾತ್ವಿಕ, ವಾಚಿಕ, ಆಂಗಿಕವೆಂದು ನಾಲ್ಕು ಪ್ರಕಾರವಾಗುತ್ತದೆ. ನಾಟಕಗಳಲ್ಲಿಯೂ ಇದೇ ರೀತಿ ಅಭಿನಯವನ್ನು ಏರ್ಪಡಿಸಬೇಕು ಆಹಾರ್ಯವೆಂದರೆ ಅನುಕರಣೀಯರಾದ ನಾಯಕಾದಿಗಳಿಗೆ ಸದೃಶವಾದ ಭೂಷಣ ಮತ್ತು ವೇಷಗಳ ಧಾರಣ ಧೀರೋದ್ಧತರಾದ ನಾಯಕರನ್ನು ಅಭಿನಯಿಸುವಾಗ ಬಹಳ ಮಟ್ಟಿಗೂ ಉಲ್ಬಣವಾದ ವೇಷವನ್ನು ಧರಿಸಬಾರದು

೧೭-೧೮ ಉದ್ಧತರಾದವರ ಅಭಿನಯವನ್ನು ಮೃದುವಾದ ಲಲಿತವೇಷದಿಂದಲೂ, ಪ್ರತಿನಾಯಕನ ವೇಷವನ್ನು ಉದ್ಧತಕ್ರಮದಿಂದಲೂ ಪ್ರಕಾಶಪಡಿಸಬೇಕು ಇತರ ಪಾತ್ರಗಳಿಗೆ ಅರವರ ದೇಶ ಮತ್ತು ಕಾರ್ಯ ಇವಕ್ಕೆ ತಕ್ಕ ವೇಷಗಳಿರಬೇಕು ಕುದುರೆ ಮೊದಲಾದವುಗಳನ್ನೂ ಚರ್ಮ ಮರ ಇತ್ಯಾದಿ ವಸ್ತುಗಳಿಂದ ಆಯಾಯ ಪ್ರಾಣಿಗಳಂತೆಯೇ ಮಾಡಿ ತೋರ್ಪಡಿಸಬೇಕು.

**ಅತಃಪರಂ ಪ್ರವಕ್ಷ್ಯಾಮಿ ಸಾತ್ತ್ವಿಕಾಭಿನಯಂ ತವ ।**
**ಅಶ್ರುಪ್ರಪಾತರೋಮಾಂಚಸ್ವೇದನಂ ಸ್ಪಂದನಂ ತಥಾ　　॥ ೧೯ ॥**

**ತಥಾ ಚ ವರ್ಣವಿನ್ಯಾಸೈಃ ಸಾತ್ವಿಕಾಭಿನಯೋ ಭವೇತ್ ।**
**ವಾಚಿಕೋ ವಾಚಯಾ ಪ್ರೋಕ್ತೋ ವಕ್ಷ್ಯಾಮ್ಯಾಂಗಿಕಮುತ್ತರೇ　॥ ೨೦ ॥**

**ನಾಟ್ಯನೃತ್ತಂ ತು ಕರ್ತವ್ಯಂ ಹರ್ಷಸ್ಥಾನೇ ಸದಾ ಬಹು ।**
**ಶೋಕಸ್ಥಾನೇ ನ ಕರ್ತವ್ಯಂ ಕಿಂಚಿದ್ವಾಕಾರಯೇತ್ತತಃ　　॥ ೨೧ ॥**

**ಚತುರ್ಧಾ ರೇಚಕಂ ಪ್ರೋಕ್ತಂ ಕಟಿಪಾದಾಂಘ್ರಿಕಾಶ್ರಯಂ ।**
**ಚಾತಕಾನ್ಯಾ ಮಹಾಚಾರೀ ಚಾರೀ ಚ ದ್ವಿವಿಧಾ ಮತಾ　　॥ ೨೨ ॥**

**ಸುಕುಮಾರಾಙ್ಗವಾಕ್ಚೇಷ್ಟಾ ಚಾರೀ ಭವತಿ ಯಾದವ ।**
**ಏತೈರಭ್ಯರ್ಥಿತೈರ್ಜ್ಞೇಯಾ ಮಹಾಚಾರೀ ನರೇಶ್ವರ　　॥ ೨೩ ॥**

---

೧೯-೨೦. ಇನ್ನು ಮುಂದ ಸಾತ್ವಿಕಾಭಿನಯವನ್ನು ನಿನಗೆ ಹೇಳುತ್ತೇನೆ ಕಣ್ಣೀರು, ರೋಮಾಂಚ, ಬೆವರು ಕಂಪ ಇವು ಮಾನಸಿಕವಾದ ವಿಕಾರದಿಂದ ಉಂಟಾಗುವುದರಿಂದ ಸಾತ್ವಿಕಾಭಿನಯಗಳಾಗುತ್ತವೆ ಶುಭ್ರವಾದ ವರ್ಣವಿನ್ಯಾಸ ದಿಂದಲೂ ಸಹ ಇಂತಹ ಸಾತ್ವಿಕಾಭಿನಯವು ನಾಟ್ಯದಲ್ಲಿ ಸಂಭವಿಸುತ್ತದೆ ವಾಚಿಕಾ ಭಿನಯವೆಂದರೆ ವಾಗ್ವ್ಯಾಪಾರದಿಂದ ಪ್ರಕಾಶಗೊಳಿಸಲಾಗುವ ಅಭಿನಯ ಆಂಗಿ ಕಾಭಿನಯವನ್ನು ಮುಂದೆ ಹೇಳುತ್ತೇವೆ

೨೧-೨೩. ನಾಟಕಗಳಲ್ಲಿ ಹರ್ಷವನ್ನು ತೋರ್ಪಡಿಸುವ ಸಂದರ್ಭಗಳಲ್ಲಿ ನಾಟ್ಯರೂಪವಾದ ನೃತ್ಯವನ್ನು ಬಹಳವಾಗಿ ಪ್ರದರ್ಶಿಸಬೇಕು ಶೋಕವನ್ನು ತೋರ್ಪಡಿಸುವ ಸಂದರ್ಭದಲ್ಲಿ ಮಾತ್ರ ಅಂತಹ ನೃತ್ತವನ್ನು ತೋರ್ಪಡಿಸಬಾರದು ಅಲ್ಪಸ್ವಲ್ಪವಾಗಿಯಾದರೂ ತೋರ್ಪಡಿಸಬೇಕು ರೇಚಕವೆಂಬ ನೃತ್ತವು ಸೊಂಟ ಮತ್ತು ಕಾಲಿನ ಪಾದಗಳಿಂದ ಉಂಟಾಗುವ ಪ್ರಯೋಗಕ್ರಮದಿಂದ ನಾಲ್ಕುವಿಧ ವಾಗುತ್ತದೆ ಚಾತಕಾ, ಅನ್ಯಾ, ಮಹಾಚಾರೀ, ಚಾರೀ ಎಂಬ ಆ ನಾಲ್ಕು ವಿಧಗಳಲ್ಲಿ ಚಾರೀ ಎಂಬುದೇ ಎರಡು ಬೇಧಗಳಾಗಿ ಪರಿಣಮಿಸಿರುತ್ತದೆ ಸುಕು ಮಾರಕ್ರಮದಿಂದ ಕೂಡಿದ ಅವಯವ, ವಾಕ್ಕು, ಚೇಷ್ಟಾ ಇವುಗಳಿಂದ ಪ್ರಯೋಗಿ ಸಲ್ಪಟ್ಟ ಆ ನೃತ್ಯವೇ ಚಾರೀ ಎನ್ನಿಸಿಕೊಳ್ಳುತ್ತದೆ ಇವುಗಳಿಂದಲೇ ಅಭಿವೃದ್ಧಿ ಹೊಂದಿದ ಆ ನೃತ್ತವೇ ಮಹಾಚಾರಿ ಎನ್ನಿಸಿಕೊಳ್ಳುತ್ತದೆ

**ಮಂಡಲಾನಿ ದಶೈವಾಸ್ಯ ಚಾರೀಸಂಯೋಗಜಾನಿ ತು ।**
**ಅತಿಕ್ರಾಂತಂ ವಿಚಿತ್ರಂ ಚ ತಥಾ ಲಲಿತಸಂಚರಂ ॥ ೨೪ ॥**

**ಸೂಚೀವಿದ್ಧಂ ದಂಡಪಾದಂ ವಿಕೃತಾಲಾತಸಂಜ್ಞಿತೇ ।**
**ವಾಮಬದ್ಧಂ ಸಲಲಿತಂ ಕ್ರಾಂತಂ ಚಾಕಾಶಗಾನಿ ತು ॥ ೨೫ ॥**

**ಮಂಡಲಾನಿ ದಶಾನ್ಯಾನಿ ಶೃಣು ಭೌಮಾನಿ ಪಾರ್ಥಿವ ।**
**ಭ್ರಮರಾಸ್ಕಂದಿತೇ ಸ್ಯಾತಾಂ ಮಾರ್ದವಂ ಚ ತತಃ ಪರಂ ॥ ೨೬ ॥**

**ಸಮಾ ಸರಿತಮಿತ್ಯಾಹುರೇಡಕಾಕ್ರೀಡಿತಂ ಯಥಾ ।**
**ಅಡ್ಡಿತಂ ಶಕಟಾಖ್ಯಂ ಚ ತಥಾಹಾರ್ಯಮಿತಿ ಸ್ಮೃತಂ ॥ ೨೭ ॥**

**ಪಿಷ್ಟಕುಬ್ಜಂ ಚ ವಿಜ್ಞೇಯಂ ತಥಾ ಚಾಪಗತಂ ಪುನಃ ।**
**ಅಥಾಙ್ಗಹಾರಾನ್ವಕ್ಷ್ಯಾಮಿ ನಾಮತಸ್ತಾನ್ನಿಬೋಧ ಮೇ ॥ ೨೮ ॥**

**ಸ್ಥಿರಹಸ್ತೋಂಗಹಾರಸ್ತು ತಥೈವಾಕ್ಷಿಪ್ತಕಃ ಸ್ಮೃತಃ ।**
**ಉದ್ಘಾಟಿತಸ್ತೃತೀಯಸ್ಸ್ಯಾತ್ತಥಾ ಚಾನ್ಯೋಽಪರಾಜಿತಃ ॥ ೨೯ ॥**

---

೨೪-೨೫ ಈ ನೃತ್ತಕ್ಕೆ ಚಾರೀ ಎಂಬ ನೃತ್ತದ ಸಂಯೋಗದಿಂದ ಹತ್ತು ಮಂಡಲಗಳಾಗುತ್ತವೆ. ಅವೂ ಸಹ ಅತಿಕ್ರಾಂತ, ವಿಚಿತ್ರ, ಲಲಿತ, ಸಂಚರ, ಸೂಚೀವಿದ್ಧ, ದಂಡಪಾದ, ವಿಕೃತ, ಅಲಾತ, ವಾಮಬದ್ಧ, ಲಲಿತ, ಕ್ರಾಂತ, ಎಂದು ಕರೆಯಲ್ಪಡುತ್ತವೆ ಇವು ಆಕಾಶದಲ್ಲಿ ಅಭಿನಯಿಸಲ್ಪಡತಕ್ಕವು

೨೬-೨೭ ಇವುಗಳಲ್ಲದೆ ಭೂಮಿಯಲ್ಲಿ ಅಭಿನಯಿಸಲು ಅರ್ಹಗಳಾದ ಇನ್ನೂ ಹತ್ತು ಮಂಡಲಗಳಿವೆ ಅವನ್ನೂ ಹೇಳುತ್ತೇನೆ ಕೇಳು ಭ್ರಮರ, ಆಸ್ಕಂದಿತ, ಮಾರ್ದವ. ಸಮಾಸರಿತ, ಏಡಕಕ್ರೀಡಿತ, ಅಡ್ಡಿತ, ಶಕಟಾಖ್ಯ ಆಹಾರ್ಯ, ಪಿಷ್ಟಕುಜ್ಜ, ಚಾಪಗತ. ಇವೇ ಅಂತಹಮಂಡಲಗಳು

೨೮-೩೪ ಅಂಗವಿಕ್ಷೇಪದಿಂದ ಅಭಿನಯಿಸಲು ಅರ್ಹವಾದ ನಾಟ್ಯಗಳನ್ನು ನಾಮನಿರ್ದೇಶನಪೂರ್ವಕವಾಗಿ ಹೇಳುತ್ತೇನೆ ಕೇಳು ಸ್ಥಿರಹಸ್ತ, ಆಕ್ಷಿಪ್ತಕ, ಉದ್ಘಾಟಿತ, ಅಪರಾಜಿತ, ಮತ್ತಾಕ್ರೀಡ, ವಿಷ್ಕಂಭ, ಸ್ವಸ್ತಿಕರೇಚಿತ, ವೃಶ್ಚಿಕಾವ

**ಮತ್ತಾಕ್ರೀಡೋಽಥವಿಷ್ಕಂಭಃ ತಥಾಂಸ್ವಸ್ತಿಕರೇಚಿತಃ ।**
**ವೃಶ್ಚಿಕಾಪಸೃತಶ್ಚೈವ ತಲಮುಂದಾ ಚ ಸರ್ಪಿತಃ ॥ ೩೦ ॥**

**ಮತಲ್ಲೀ ಸ್ಖಲಿತಶ್ಚೈವಂ ಭ್ರಮರಃ ಪಾರ್ಶ್ವಸ್ವಸ್ತಿಕಃ ।**
**ಮದಾದ್ವಿಲಸಿತಶ್ಚೈವ ವಿಕ್ಷಿಪ್ತೋ ಗತಿಮಂಡಲಃ ॥ ೩೦ ॥**

**ವೈಶಾಖರೇಚಿತಶ್ಚೈವ ಪರಿವೃತ್ತಕರೇಚಿತಃ ।**
**ಉದ್ವರ್ತಕಃ ಪರಿಚ್ಛಿನ್ನೋ ರೇಚಕೋಽಥ ಬಲಾಹಕಃ ॥ ೩೨ ॥**

**ಸಂಭ್ರಾಂತೋ ವಾಙ್ಗಿಕಶ್ಚೈವ ಇತಿ ಕ್ರೀಡೋ ಹ್ಯಲಾತಕಃ ।**
**ವಿದ್ಯುದ್ಭ್ರಾಂತಃ ಪರಾವೃತ್ತಃ ಪಾರ್ಶ್ವಚ್ಛೇದಸಮನ್ವಿತಃ ॥ ೩೩ ॥**

**ಆಕ್ಷಿಪ್ತೋ ರೇಚಿತಶ್ಚೈವ ಸೌಮ್ಯೋಽಥ ಕರಿತಸ್ತಥಾ ।**
**ಸೂಚೀವಿದ್ಧೋಽಪವಿದ್ಧಶ್ಚ ವಿಲಾಪೋಽವನಿಕುಟ್ಟಿತಃ ॥ ೩೪ ॥**

**[1]ಷಟ್‌ತ್ರಿಂಶದೇತೇ ಸಂಪ್ರೋಕ್ತಾ ಹ್ಯಂಗಹಾರಾ ಯದೂತ್ತಮ ।**
**ಏತೇಷಾಂ ಸಂಪ್ರವಕ್ಷ್ಯಾಮಿ ಕಾರಣಾನಿ ಯಥಾಕ್ರಮಂ ।**
**ಹಸ್ತಪಾದಪ್ರಚಾರಶ್ಚ ಯಥಾ ಯೋಜ್ಯಃ ಪ್ರಯೋಕ್ತೃಭಿಃ ॥ ೩೫ ॥**

---

ಸೃತ, ತಲಮುಂದಾ, ಸರ್ಪಿತ, ಮತಲ್ಲೀಸ್ಖಲಿತ, ಭ್ರಮರ, ಪಾರ್ಶ್ವಸ್ವಸ್ತಿಕ, ಮದಾದ್ವಿಲಸಿತ, ವಿಕ್ಷಿಪ್ತ, ಗತಿಮಂಡಲ, ವೈಶಾಖರೇಚತ, ಪರಿವೃತ್ತಕರೇಚಿತ, ಉದ್ವರ್ತಕ, ಪರಿಚ್ಛಿನ್ನ, ರೇಚಕ, ಬಲಾಹಕ, ಸಂಭ್ರಾಂತ, ವಾಂಗಿಕ, ಅಲಾತಕ, ವಿದ್ಯುದ್ಭ್ರಾಂತ, ಪರಾವೃತ್ತ, ಪಾರ್ಶ್ವಚ್ಛೇದಸಮನ್ವಿತ, ಆಕ್ಷಿಪ್ತ, ರೇಚಿತ ಸೌಮ್ಯ, ಕರಿತ, ಸೂಚೀವಿದ್ಧ, ಅಪವಿದ್ಧ, ವಿಲಾಪ, ಅವನಿಕುಟ್ಟಿತ ಈ ರೀತಿ ನಾಮಧೇಯವುಳ್ಳ ಅಂಗವಿಕ್ಷೇಪಾಭಿನಯಗಳು ಮೂವತ್ತಾರು ಎಂದು ಹೇಳಲ್ಪಟ್ಟಿವೆ

೩೫–೩೬. ಇವುಗಳಿಗೆ ಕಾರಣಗಳನ್ನೂ ಇವನ್ನು ಪ್ರಯೋಗಿಸುವವರು ಹಸ್ತಪಾದಾದಿಗಳನ್ನು ಯಾವರೀತಿ ಯೋಜಿಸಬೇಕು ಎಂಬುದನ್ನೂ ಯಥಾಕ್ರಮವಾಗಿ ಹೇಳುತ್ತೇನೆ ಅಂಗವಿಕ್ಷೇಪರೂಪವಾದ ಈ ನಾಟ್ಯಗಳಿಗೆ ಯಾವ ಅವಯವ ವಿನ್ಯಾಸವೇ ಕಾರಣವಾಗುತ್ತದೆಯೋ ಅದನ್ನೇ ಕಾರಣವೆಂದು ಹೇಳುತ್ತಾರೆ

1 ಭರತಮುನಿಯು ನಾಟ್ಯಶಾಸ್ತ್ರದಲ್ಲಿ ಮೂವತ್ತೆರಡು ಎಂದು ನಾಮನಿರ್ದೇಶಪೂರ್ವಕ ವರ್ಣಿಸಲಾಗಿದ

**ಸರ್ವೇಷಾಮಂಗಹಾರಾಣಾಂ ನಿಷ್ಪತ್ತಿಃ ಕಾರಣಂ ಭವೇತ್ |**
**ತಾನ್ಯಹಂ ಸಂಪ್ರವಕ್ಷ್ಯಾಮಿ ನಾಮಭಿಃ ಕರ್ಮಭಿಸ್ತಥಾ || ೩೬ ||**

**ಹಸ್ತಪಾದಸಮಾಯೋಗೋ ನೃತ್ತಸ್ಯ ಕರಣಂ ಭವೇತ್ |**
**ದ್ವೇನೃತ್ತಕರಣೇ ಚೈವ ಭವೇತಾಂ ನೃಪಮಾತೃಕಾ || ೩೭ ||**

**ತ್ರಿಭಿಃ ಕಲಾಪಕಶ್ಚೈವ ಚತುರ್ಭಿಃ ಖಂಡಕಃ ಸ್ಮೃತಃ |**
**ಪಂಚೈವ ಕರಣಾನಿ ಸ್ಯುಃ ಸಂಘಾತಕ ಇತಿ ಸ್ಮೃತಃ || ೩೮ ||**

**ಷಡ್ಭಿರ್ವಾ ಸಪ್ತಭಿರ್ವಾಪಿ ಅಷ್ಟಭಿರ್ನವಭಿಸ್ತಥಾ |**
**ಕರಣೈರಿಹ ಸಂಯುಕ್ತಾ ಅಂಗಹಾರಾ ಇತಿ ಸ್ಮೃತಾಃ || ೩೯ ||**

---

ಅಂತಹ ಕಾರಣಗಳನ್ನೆಲ್ಲಾ ಆಯಾಯ ವ್ಯಾಪಾರಗಳೊಡನೆ ನಾಮನಿರ್ದೇಶ ಪೂರ್ವಕವಾಗಿ ಹೇಳುತ್ತೇನೆ

೩೭–೩೯ ಹಸ್ತಪಾದಗಳ ವ್ಯಾಪಾರವೇ ನೃತ್ತಕ್ಕೆ ಕಾರಣವಾಗುತ್ತದೆ ನೃತ್ಯಕಾಲದಲ್ಲಿ ಹಸ್ತಪಾದಾದಿಗಳಿಗೆ ಒಂದು ಕಡೆಯಿಂದ ಮತ್ತೊಂದು ಕಡೆಗೆ ಉಂಟಾಗುವ ಕ್ರಿಯಾವಿಶೇಷಕ್ಕೆ ಕರಣವೆಂದು ಹೆಸರು ಇದು ಸರ್ವನೃತ್ತದಲ್ಲಿಯೂ ಸಮಾನವಾದುದರಿಂದ ಇದನ್ನು ಮಾತೃಕಾ ಎಂದು ಕರೆಯುತ್ತಾರೆ ಮೂರು ಕರಣಗಳಿಂದ ಉಂಟಾಗುವ ನೃತ್ತಕ್ಕೆ ಕಾಲಾಪಕವೆಂದೂ, ನಾಲ್ಕು ಕರಣಗಳಿಂದ ಉಂಟಾಗುವ ನೃತ್ತಕ್ಕೆ ಖಂಡಕ ಎಂದೂ, ಸಂಘಾತಕವೇದೂ ಕರಣಗಳು ಐದೇ ವಿಧವಾಗಿವೆ ಹೀಗೆಯೇ ಆರು, ಏಳು, ಎಂಟು, ಒಂಭತ್ತು ಕರಣಗಳಿಂದಲೂ ನೃತ್ತಗಳು ಉದ್ಭವಿಸುತ್ತವೆ ಇವುಗಳಿಗೂ ಅಂಗಹಾರವೆಂದೂ ಹೆಸರು

೪೦–೪೨ ಇವುಗಳ ನಾಮಗಳನ್ನೆಲ್ಲಾ ಮುಂದೆ ಹೇಳುತ್ತೇನೆ ತಾಲ, ಪುಷ್ಪಾಪವಿದ್ಧ, ಲೀನಸ್ವಸ್ತಿಕರೇಚಿತ, ಮಂಡಲ, ಸ್ವಸ್ತಿಕ, ಊರುವೃತ್ತ, ನಿಕುಂಡಕ,

ಏತೇಷಾಂ ಚೈವ ವಕ್ಷ್ಯಾಮಿ ನಾಮಾನ್ಯಹಮತಃಪರಂ ।
ತಾಲಪುಷ್ಪಾಪವಿದ್ಧೇ ದ್ವೇ ಲೀನಸ್ಸ್ವಸ್ತಿಕರೇಚಿತಂ ॥ ೪೦ ॥

ಮಂಡಲಂ ಸ್ವಸ್ತಿಕಂ ಚೈವ ಊರುವೃತ್ತಂ ನಿಕುಂಡಕಂ ।
ಸೂಚೀವಿದ್ಧಂ ಕಟಿಚ್ಛಿನ್ನಮರ್ಧರೇಚಿತಮೇವ ಚ ॥ ೪೧ ॥

ವಕ್ಷಃಸ್ವಸ್ತಿಕಮುತ್ಪನ್ನಂ ಸ್ವಸ್ತಿಕಂ ಪೃಷ್ಠಗಂ ಪುನಃ ।
ದಿಕ್‌ಸ್ವಸ್ತಿಕಮಲಾತಾಖ್ಯಮರ್ಧಸೂಚೀಕಟೀಸಮಂ ॥ ೪೨ ॥

ಆಕ್ಷಿಪ್ತರೇಚಿತಂ ಕ್ಷಿಪ್ರಮರ್ಧಸ್ವಸ್ತಿಕಸಂಚಿತಂ ।
ಭುಜಂಗತ್ರಾಸಿತಂ ಚೈವ ಊರ್ಧ್ವಜಾನು ನಿಕುಂಚಿತಂ ॥ ೪೩ ॥

ಮತ್ತಲ್ಲೀ ತ್ವರ್ಧಮತ್ತಲ್ಲೀ ಸ್ಯಾದ್ರೇಚಕನಿಕುಂಟಕಂ ।
ಪರಾವಿದ್ಧಂ ತಟಿದ್ಭ್ರಾಂತಂ ವಲಿತಂ ಚೂರ್ಣಿತಂ ತಥಾ ॥ ೪೪ ॥

ಲಲಿತಂ ದಂಡಪಕ್ಷಂ ಚ ಭುಜಂಗತ್ರಸ್ತರೇಚಿತಂ ।
ನೂಪುರಂ ರೇಚಿತಂ ಚೈವ ಭ್ರಮರಂ ಚತುರಂ ತಥಾ ॥ ೪೫ ॥

ಭುಜಂಗಾಂಚಿತಮನ್ಯತ್ಸ್ಯಾಚ್ಛಿನ್ನಂ ವೃಶ್ಚಿಕರೇಚಿತಂ ।
ಲತಾವೃಶ್ಚಿಕಮನ್ಯತ್ಸ್ಯಾಚ್ಛಿನ್ನವೃಶ್ಚಿಕಕುಟ್ಟಿತಂ ॥ ೪೬ ॥

ವೃಶ್ಚಿಕಂ ವ್ಯಸಿತಂ ಚೈವ ಸೂಚೀವಿದ್ಧಕಮೇವ ಚ
ಲಲಾಟತಿಲಕಂ ಚೈವ ಕುಂಚಿತಂ ಚಕ್ರಮಂಡಲಂ ॥ ೪೭ ॥

---

ಸೂಚೀವಿದ್ಧ, ಕಟಿಚ್ಛಿನ್ನ, ಅರ್ಧರೇಚಿತ, ವಕ್ಷಃಸ್ವಸ್ತಿಕ, ಉತ್ಪನ್ನ, ಪೃಷ್ಠಗಸ್ವಸ್ತಿಕ, ದಿಕ್‌ಸ್ವಸ್ತಿಕ, ಅಲಾತ, ಅರ್ಧಸೂಚೀ, ಕಟೀಸಮ ಮತ್ತು—

೪೩–೫೩ ಆಕ್ಷಿಪ್ತರೇಚಿತ, ಕ್ಷಿಪ್ರ, ಅರ್ಧಸ್ವಸ್ತಿಕ, ಸಂಚಿತ, ಭುಜಂಗ ತ್ರಾಸಿತ, ಊರ್ಧ್ವಜಾನು, ನಿಕುಂಚಿತ, ಮತ್ತಲ್ಲೀ, ಅರ್ಧಮತ್ತಲ್ಲೀ, ರೇಚಕ ನಿಕುಂಟಕ, ಪರಾವಿದ್ಧ, ತಡಿದ್ಭ್ರಾಂತ, ವಲಿತ, ಚೂರ್ಣಿತ, ಲಲಿತ, ದಂಡಪಕ್ಷ, ಭುಜಂಗತ್ರಸ್ಥರೇಚಿತ, ನೂಪುರ, ರೇಚಿತ, ಭ್ರಮರ, ಚತುರ, ಭುಜಂಗಾಂಚಿತ, ಛಿನ್ನ, ವೃಶ್ಚಿಕರೇಚಿತ, ಲತಾವೃಶ್ಚಿಕ, ವೃಶ್ಚಿಕಕುಟ್ಟಿತ, ವೃಶ್ಚಿಕ, ವ್ಯಂಸಿತ, ಸೂಚೀವಿದ್ಧಕ, ಲಲಾಟತಿಲಕ, ಕುಂಚಿತ, ಚಕ್ರಮಂಡಲ, ಉರೋಮಂಡಲ,

**ಉರೋಮಂಡಲಮಾಕ್ಷಿಪ್ತಂ ಲತಾಲಸಿತಮರ್ಗಲಂ ।**
**ವಿಕ್ಷಿಪ್ತಂ ಭ್ರಮಿತಂ ಚೈವ ವಿಲಾಸಂ ವಾನರಪ್ಲುತಂ ॥ ೪೮ ॥**

**ಪರಿವೃತ್ತಂ ನಿವೃತ್ತಂ ಚ ಪಾರ್ಶ್ವಾಕ್ರಾಂತಂ ನಿಕುಂಚಿತಂ ।**
**ಅತಿಕ್ರಾಂತಮವಕ್ರಾಂತದೋಲಾಪಾದವಿವರ್ತಿತೇ ॥ ೪೯ ॥**

**ನಾಗಪ್ರಕ್ರೀಡಿತಂ ಚೈವ ವಿಪ್ಲುತಂ ಗರುಡಪ್ಲುತಂ ।**
**ಗಂಡಸೂಚೀ ಪರಿಕ್ಷಿಪ್ತಂ ಪಾರ್ಶ್ವಜಾನುಕಮೇವ ಚ ॥ ೫೦ ॥**

**ಗೃಹಾವಲೀನಕಂ ಲೀನಂ ವಿಷ್ಣುಕ್ರಾಂತಮಜಪ್ಲುತಂ ।**
**ಆಕ್ರಾಂತಂ ಮಂಡಿತಂ ಚೈವ ಮಯೂರಲಸಿತಂ ನಸಂ ॥ ೫೧ ॥**

**ಸರ್ಪಿತಂ ದಂಡಪಾದಂ ಚ ಹರಿಣಪ್ಲುತಮೇವ ಚ ।**
**ಪ್ರೇಂಖೋಲಿತಂ ನಿತಂಬಂ ಚ ಸ್ಖಲಿತಂ ಕರಿಹಸ್ತಕಂ ॥ ೫೨ ॥**

**ಅಸರ್ಪಿತತಲಂ ಚೈವ ಸಿಹ್ಮವಿಕ್ರೀಡಿತಂ ತಥಾ ।**
**ವೃಷಭಕ್ರೀಡಿತಂ ಚೈವ ಗಂಗಾವತರಣಂ ತಥಾ ॥ ೫೩ ॥**

---

ಆಕ್ಷಿಪ್ತ, ಲತಾಲಸಿತ, ಅರ್ಗಲ, ವಿಕ್ಷಿಪ್ತ, ಭ್ರಮಿತ, ವಿಲಾಸ, ವಾನರಪ್ಲುತ, ಪರಿವೃತ್ತ, ನಿವೃತ್ತ, ಪಾರ್ಶ್ವಾಕ್ರಾನ್ತ, ನಿಕುಂಚಿತ, ಅತಿಕ್ರಾನ್ತ, ಅವಕ್ರಾನ್ತ, ದೋಲಾಪಾದ, ವಿವರ್ತಿತ, ನಾಗಪ್ರಕ್ರೀಡಿತ, ವಿಪ್ಲುತ, ಗರುಡಪ್ಲುತ, ಗಂಡಸೂಚೀ, ಪರಿಕ್ಷಿಪ್ತ, ಪಾರ್ಶ್ವಜಾನುಕ, ಗೃಹಾವಲೀನಕ, ಲೀನ, ವಿಷ್ಣುಕ್ರಾಂತ, ಅಜಪ್ಲುತ, ಆಕ್ರಾಂತ, ಮಂಡಿತ, ಮಯೂರಲಸಿತ, ನಸ, ಸರ್ಪಿತ, ದಂಡಪಾದ, ಹರಿಣಪ್ಲುತ, ಪ್ರೇಂಖೋಲಿತ, ನಿತಂಬ, ಸ್ಖಲಿತ, ಕರಿಹಸ್ತಕ, ಅಸರ್ಪಿತತಲ, ಸಿಹ್ಮವಿಕ್ರೀಡಿತ, ವೃಷಭಕ್ರೀಡಿತ, ಗಂಗಾವತರಣ ಎಂದು ನೂರ ಎಂಟು ಕರಣಗಳಿರುವುವು

---

1 ಇದು ಭರತಮುನಿಯಿಂದ ಹೇಳಲ್ಪಟ್ಟಿಲ್ಲ

[1]ಅಷ್ಟೋತ್ತರಶತಂ ಚೈವ ಕರಣಾನಾಂ ಪ್ರಕೀರ್ತಿತಂ ।
ಸುಕುಮಾರಂ ತಥಾವಿದ್ಧಂ ವೃತ್ತಂ ದ್ವಿವಿಧಮುಚ್ಯತೇ || ೫೪ ||

ಉದ್ಧೂತಂ ಪುರುಷಪ್ರಾಯಂ ಸ್ತ್ರೀಪ್ರಾಯಂ ಸುಕುಮಾರಕಂ ।
ದೇವಚಿಹ್ನಕೃತಾಕಾರಾ ಪಿಂಡೀ ಭವತಿ ಪಾರ್ಥಿವ || ೫೫ ||

ಭಾರತೀ ಸಾತ್ವತೀ ಚೈವ ಕೌಶಿಕ್ಯಾರಭಟೀ ತಥಾ ।
ಚತಸ್ರೋ ವೃತ್ತಯಃ ಪ್ರೋಕ್ತಾ ವಾಕ್ಪ್ರಧಾನಾ ತು ಭಾರತೀ || ೫೬ ||

ತಥಾ ವೀರರಸಪ್ರಾಯಾ ವಿಜ್ಞೇಯಾ ಸಾತ್ವತೀ ನೃಪ ।
ತಥಾ ರೌದ್ರಪ್ರಚಾರಾ ಚ ಭವತ್ಯಾರಭಟೀ ಸದಾ || ೫೭ ||

---

೫೪-೫೯ ಈ ನಾಟ್ಯಗಳಲ್ಲಿ ಪ್ರಯೋಗಿಸುವ ವ್ಯವಹಾರವು ಸುಕುಮಾರವೆಂದೂ, ಆವಿದ್ಧವೆಂದೂ ಎರಡು ಬಗೆಯಾಗಿರುತ್ತವೆ. ಆವಿದ್ಧವೆಂಬುದು ಕೇವಲ ಪುರುಷರ ಪ್ರಯೋಗಕ್ಕೇ ಅರ್ಹವಾದುದು ಸುಕುಮಾರಕವೆಂಬುದು ಕೇವಲ ಸ್ತ್ರೀಯರಿಂದ ಕೂಡಿದ ನಾಟ್ಯದಲ್ಲಿಯೇ ಪ್ರಯೋಗಕ್ಕೆ ಅರ್ಹವಾಗುತ್ತದೆ ದೇವತೆಗಳ ಚಿಹ್ನೆ, ಆಕಾರ ಇವುಗಳಿಂದ ಕೂಡಿದ ನಾಟ್ಯ ವ್ಯಾಪಾರವು ಪಿಂಡೀ ಎಂದು ಕರೆಯಲ್ಪಡುತ್ತದೆ ಭಾರತೀ, ಸಾತ್ವತೀ, ಕೈಶಿಕೀ, ಆರಭಟೀ ಎಂದು ವೃತ್ತಿಗಳು ನಾಲ್ಕು ವಿಧ, ವಾಗ್ವ್ಯಾಪಾರದಿಂದ ಅಭಿನಯಿಸತಕ್ಕದ್ದು ಭಾರತೀ, ವೀರರಸಕ್ಕೆ ಅನುಗುಣವಾಗುವಂತೆ ಅಭಿನಯಿಸಲು ಅರ್ಹವಾದ್ದು ಸಾತ್ವತೀ, ಆರಭಟೀ ಎಂಬುದು ರೌದ್ರರಸದಿಂದ ಕೂಡಿದ ಅಭಿನಯಕ್ಕೆ ಅನುಗುಣವಾಗುತ್ತದ ಕೌಶಿಕೀ ಎಂಬುದು ಶೃಙ್ಗಾರ ಮತ್ತು ಹಾಸ್ಯರಸ ಪ್ರಚುರವಾದ ನಾಟ್ಯದಲ್ಲಿ ಅಭಿನಯಕ್ಕೆ

---

1 ಇಲ್ಲಿ ನೂರ ಎಂಟು ಎಂದು ಹೇಳಿದ್ದರೂ ಎಣಿಸಿದಲ್ಲಿ ಕಡಿಮೆ ಇವೆ ನಾಟ್ಯಶಾಸ್ತ್ರದಲ್ಲಿ ಈ ಸಂಖ್ಯೆಯು ಸರಿಹೋಗುತ್ತದೆ ಇಲ್ಲಿ ಮಾತ್ರ ಅನೇಕ ಕರಣಗಳು ಬಿಟ್ಟುಹೋಗಿವೆ ಎಂದು ತೋರುತ್ತದೆ ಕೆಲವು ಹೆಸರುಗಳೂ ಬದಲಾಗಿವೆ

**ಶೃಙ್ಗಾರಹಾಸ್ಯಬಹುಲಾ ತಥಾ ಭವತಿ ಕೌಶಿಕೀ ।**
**ಆವನ್ತೀ ದಾಕ್ಷಿಣಾತ್ಯಾ ಚ ತಥಾ ಚೈವಾರ್ಧಮಾಗಧೀ ॥ ೫೮ ॥**

**ಪಂಚಾಲೀ ಮಧ್ಯಮಾ ಚೇತಿ ವೃತ್ತಿಃ ಸಾ ತು ಚತುರ್ವಿಧಾ ।**
**ವೇಷಭಾಷಾನುಕರಣಂ ತಥಾ ಚಾರಪ್ರವರ್ತನಂ ॥ ೫೯ ॥**

**ಪ್ರವೃತ್ತಿರಿತಿ ವಿಖ್ಯಾತಾ ವೃತ್ತೀನಾಮಾಶ್ರಯಾಸ್ತು ತಾಃ ।**
**ನಾಟ್ಯಲೋಕಾಶ್ರಯಾ ಧರ್ಮಿಧರ್ಮಾಶ್ಚ ದ್ವಿವಿಧಾ ಮತಾ ॥ ೬೦ ॥**

**ಸಿದ್ಧಿಶ್ಚ ದ್ವಿವಿಧಾ ನಾಟ್ಯೇ ದೈವಿಕೀ ಮಾನುಷೀ ತಥಾ ।**
**ವ್ಯಾಯಾಮಾನ್ಮಾನುಷೀ ತತ್ರ ದೈವೀ ದೇವಪ್ರಸಾದಜಾ ॥ ೬೧ ॥**

**ರಸೇನ ಭಾವೇನ ಸಮನ್ವಿತಂ ಚ**
**ತಾಲಾನುಗಂ ಕಾವ್ಯರಸಾನುಗಂ ಚ ।**

---

ಅರ್ಧಮಾಗುತ್ತದೆ ಆವಂತೀ, ದಾಕ್ಷಿಣಾತ್ಯಾ, ಅರ್ಧಮಾಗಧೀ, ಮಧ್ಯಮ ಪಾಂಚಾಲೀ ಎಂದು ಬೇರ ವೃತ್ತಿಗಳೂ ನಾಲು ವಿಧವಾಗಿರುತ್ತವೆ ಆಯಾಯ ದೇಶಕಾಲಗಳಿಗೆ ತಕ್ಕಂತೆ ಅನುಕರಿಸುವುದು ಆಯಾಯ ಆಕಾರಗಳನ್ನು ಪ್ರಕಾಶ ಗೊಳಿಸುವುದು ಇದಕ್ಕೆ ಪ್ರವೃತ್ತಿ ಎಂದು ಹೆಸರು ಇಂತಹ ಅನೇಕ ಪ್ರವೃತ್ತಿ ಗಳನ್ನು ಆಶ್ರಯಿಸಿ ಮೇಲೆ ಹೇಳಿರುವ ವೃತ್ತಿಗಳು ಪ್ರಕಾಶಗೊಳ್ಳುತ್ತವೆ

೬೦-೬೨ ನಾಟ್ಯದಲ್ಲಿ ಪ್ರದರ್ಶಿಸಲಾಗುವ ಕೆಲವು ವಸ್ತುಗಳ ಧರ್ಮಗಳು ನಾಟ್ಯಾಶ್ರಯವೆಂದೂ ಲೋಕಾಶ್ರಯವೆಂದೂ ಎರಡು ವಿಧವಾಗಿವೆ ಹಾಗೆಯೇ ನಾಟ್ಯದಲ್ಲಿ ನಟರು ಹೊಂದಬಹುದಾದ ಸಿದ್ಧಿಯೂ ಸಹ ದೈವೀ ಎಂದೂ ಮಾನುಷೀ ಎಂದೂ ಎರಡು ವಿಧವಾಗಿದೆ ಅವುಗಳಲ್ಲಿ ಪುನಃ ಪುನಃ ಅಭ್ಯಾಸದಿಂದ ಉಂಟಾಗ ಬಹುದಾದ ಸಿದ್ಧಿಯು ಮಾನುಷೀ ಎನಿಸುತ್ತದೆ ದೈವಾನುಗ್ರಹದಿಂದಲೇ ಉಂಟಾದ (ಶಾರೀರ ಸೌಖ್ಯವೇ ಮೊದಲಾದುವು) ದೈವೀ ಎನಿಸಿಕೊಳ್ಳುತ್ತದೆ ಇಂತಹನೃತ್ತವು ರಸಭಾವಗಳಿಗೆ ಅನುಗುಣವಾಗಿಯೂ, ತಾಲಕ್ಕೆ ಸರಿಯಾಗಿಯೂ, ಆ ಕಾವ್ಯದಲ್ಲಿ ಮುಖ್ಯವಾಗಿರುವ ರಸಕ್ಕೆ ಪರಿಪೋಷಕವಾಗಿಯೂ, ಗೀತದ ಹೊಂದಿಕೆಗೆ

**ಗೀತಾನುಗಂ ನೃತ್ತಮುಶಂತಿ ಧನ್ಯಂ**
**ಸುಖಪ್ರದಂ ಧರ್ಮವಿವರ್ಧನಂ ಚ**　　　|| ೬೨ ||

**ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ**
**ವಜ್ರಸಂವಾದೇ ಸಾಮಾನ್ಯವರ್ಣನೋ ನಾಮ**
**ವಿಂಶೋऽಧ್ಯಾಯಃ**

---

ತಕ್ಕಂತೆಯೂ ಇದ್ದಲ್ಲಿ ಇದು ಸುಖಪ್ರದವೆಂತಲೂ, ಧರ್ಮಾಭಿವೃದ್ಧಿಗೆ ಕಾರಣ ವಂತಲೂ, ಶ್ಲಾಘ್ಯವೆಂತಲೂ ಗೀತಜ್ಞರು ಹೇಳುತ್ತಾರೆ

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯ ಖಂಡದಲ್ಲಿ ಮಾರ್ಕಂಡೇಯ
ವಜ್ರ ಸಂವಾದದಲ್ಲಿ ಸಾಮಾನ್ಯವರ್ಣನವೆಂಬ ಇಪ್ಪತ್ತನೆಯ
ಅಧ್ಯಾಯ ಮುಗಿದಿದೆ



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಏಕವಿಂಶೋಽಧ್ಯಾಯಃ ||

### || ಮಾರ್ಕಂಡೇಯ ಉವಾಚ ||

**ಸಮಾಕುಂಚಿತಕೇ ಚೈವ ಪ್ರಸಾರಿತವಿವರ್ತಿತೇ ।**
**ಉದ್ವಾಹಿತಂ ನತಂ ಷೋಢಾ ಶಯ್ಯಾಸ್ಥಾನಾನಿ ನಿರ್ದಿಶೇತ್ || ೧ ||**

**ಉತ್ತಾನಿತಂ ಮುಖಂ ಚೈವ ಸ್ರಸ್ತಮುಕ್ತಕರಂ ತಥಾ ।**
**ಸಮಂ ವಾಮಪ್ರಸುಪ್ತಸ್ಯ ಸ್ಥಾನಕಂ ತು ವಿಧೀಯತೇ || ೨ ||**

**ಸರ್ವೈರಾಕುಂಚಿತೈರಂಗೈಃ ಶಯ್ಯಾವಿದ್ಧೇ ಚ ಜಾನುನೀ ।**
**ಸ್ಥಾನಮಾಕುಂಚಿತಂ ನಾಮ ಗೀತಾನ್ತೇ ತತ್ ಪ್ರಯೋಜಯೇತ್ || ೩ ||**

---

### ಇಪ್ಪತ್ತೊಂದನೆಯ ಅಧ್ಯಾಯವು.

೧-೨ ಮಾರ್ಕಂಡೇಯರು ಹೇಳುತ್ತಾರೆ –ಸಮ, ಆಕುಂಚಿತಕ, ಪ್ರಸಾರಿತ, ವಿವರ್ತಿತ, ಉದ್ವಾಹಿತ, ನತ ಎಂಬ ಆರು ಶಯ್ಯಾಸ್ಥಾನಗಳನ್ನು ಅಭಿನಯಗಳಲ್ಲಿ ನಿರ್ದೇಶಿಸಬೇಕು ಇವುಗಳಲ್ಲಿ ಮುಖವು ಅಂತರಕನಾಗಿದ್ದು (ಮೇಲ್ಮುಖವಾಗಿ) ಕೈಗಳು ಧಾರಾಳವಾಗಿ ಚಾಚಲ್ಪಟ್ಟು, ಎಡಮಗ್ಗುಲಾಗಿ ಮಲಗಿರುವ ಸನ್ನಿವೇಶವು ಸಮವೆಂಬ ಮೊದಲನೆಯ ಶಯ್ಯಾಸ್ಥಾನಕವಾಗುತ್ತದೆ

೩-೪ ಎಲ್ಲಾ ಅವಯವಗಳನ್ನೂ ಸಂಕುಚಿತಗಳಾಗಿ, ಮಾಡಿ ಎರಡು ಮಂಡಿಗಳನ್ನೂ ಹಾಸಿಗೆಯ ಮೇಲೆ ಊರಿ ಮಾಡುವ ನಾಟ್ಯಕ್ಕೆ ಆಕುಂಚಿತವೆಂದು ಹೆಸರು ಇದನ್ನು ಗೀತದ ಅವಸಾನದಲ್ಲಿ ಪ್ರಯೋಗಿಸಬೇಕು ಒಂದು ಭುಜ

**ಏಕಂ ಭುಜಂ ಸಮಾಧಾಯ ಸಂಪ್ರಸಾರಿತಜಾನುಕಂ ।**
**ಸ್ಥಾನಂ ಪ್ರಸಾರಿತಂ ನಾಮ ಸುಖಸುಪ್ತಸ್ಯ ಕಾರಯೇತ್ ॥ ೪ ॥**

**ಅಧೋಮುಖೇ ಸ್ಥಿತಂ ಚೈವ ವಿವರ್ತಿತಮಿತಿ ಸ್ಮೃತಂ ।**
**ಶಸ್ತ್ರಕ್ಷತೇ ಮೃತೇ ಕ್ಷಿಪ್ತಮತ್ತೋನ್ಮತ್ತೇಷು ತದ್ಭವೇತ್ ॥ ೫ ॥**

**ಅಂಸೋಪರಿ ಶಿರಃ ಕೃತ್ವಾ ಕುರ್ಯುರ್ಯರಕ್ಷೋಭಮೇವ ಚ ।**
**ಉದ್ವಾಹಿತಂ ತು ವಿಜ್ಞೇಯಂ ಲೀಲಾಯಾಃ ಶಂಸನೇ ಪ್ರಭೋ ॥ ೬ ॥**

**ತಸ್ಯಾಂ ಯದೇತತ್ಪ್ರಸೃತೇ ತು ಜಂಘೇ**
**ಪ್ರಸ್ರಸ್ತೌ ಕರೌ ತಂ ನತಮುದ್ದಿಶಂತಿ ।**

---

ವನ್ನು ತಲೆದಿಂಬಿನಂತೆ ಇಟ್ಟುಕೊಂಡು ಮಂಡಿಗಳನ್ನೂ ದೀರ್ಘವಾಗಿ ನೀಡಿ ಮಾಡುವ ನಾಟ್ಯಕ್ಕೆ ಪ್ರಸಾರಿತವೆಂದು ಹೆಸರು ಸುಖಸ್ವಾಪ ಹೊಂದಿರುವವನನ್ನು ಅಭಿನಯಿಸುವಾಗ ಈ ಸ್ಥಾನವನ್ನು ಪ್ರಯೋಗಿಸಬೇಕು

೫–೭ ಬಗ್ಗಿದ ಮುಖದಿಂದ ಕೂಡಿದ ಸ್ಥಿತಿಯು ವಿವರ್ತಿತವೆನಿಸಿಕೊಳ್ಳುತ್ತದೆ. ಶಸ್ತ್ರದಿಂದ ಹೊಡೆಯಲ್ಪಟ್ಟು ಮತ್ತು ಮೃತಿಯನ್ನು ಹೊಂದಿಯೂ, ಎಸೆಯಲ್ಪಟ್ಟ ಮತ್ತು ಮದ್ಯಪಾನಾದಿಗಳಿಂದ ಮತ್ತನಾಗಿ, ಮತ್ತು ಹುಚ್ಚುಹಿಡಿದೂ ಇರುವವರನ್ನು ಅಭಿನಯಿಸುವಾಗ ಈ ಸ್ಥಾನವನ್ನು ಪ್ರಯೋಗಿಸಬೇಕು ಭುಜದ ಮೇಲ್ಭಾಗದಲ್ಲಿ ಬಾಗಿದ ತಲೆಯನ್ನಿಟ್ಟು ಮನಸ್ಸಿನ ಕ್ಷೋಭವಿಲ್ಲದೆ ಮಾಡುವ ನಾಟ್ಯವು ಉದ್ವಾಹಿತವೆಂದು ತಿಳಿಯಬೇಕು ವಿಲಾಸವನ್ನು ಪ್ರಕಾಶಗೊಳಿಸುವಾಗ ಇದನ್ನು ಉಪಯೋಗಿಸಬೇಕು ಅಂತಹ ಲೀಲಾಪ್ರಸಂಗದಲ್ಲಿ ಮೊಣಕಾಲನ್ನು ನೀಡಿ ಶಿಥಿಲವಾದ ಕೈಗಳನ್ನು ನೀಡಿದಲ್ಲಿ ಇಂತಹ ನಾಟ್ಯವು ನತವೆನಿಸುತ್ತದೆ ಇದರ

ಆಲಸ್ಯಖೇದಶ್ರಮಮೋಕ್ಷಣೇಷು
ಕಾರ್ಯಸ್ತು ತಸ್ಯಾಭಿನಯಪ್ರಯೋಗಃ ॥ ೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಶಯ್ಯಾಸನಸ್ಥಾನವರ್ಣನೋ
ನಾಮೈಕವಿಂಶತಿತಮೋಽಧ್ಯಾಯಃ

---

ಅಭಿನಯವನ್ನು ಆಲಸ್ಯ, ಶ್ರಮ, ದುಃಖ ಇವುಗಳ ಬಿಡುಗಡೆಯುಂಟಾದ ಕಾಲದಲ್ಲಿ ಉಪಯೋಗಿಸಬೇಕು

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯ ಖಂಡದ ಮಾರ್ಕಂಡೇಯ
ವಜ್ರ ಸಂವಾದದಲ್ಲಿ ಶಯ್ಯಾಸನ ಸ್ಥಾನವರ್ಣನವೆಂಬ
ಇಪ್ಪತ್ತೊಂದನೆಯ ಅಧ್ಯಾಯ ಮುಗಿದಿದೆ

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ದ್ವಾವಿಂಶತಿತಮೋಽಧ್ಯಾಯಃ ||

### || ಮಾರ್ಕಂಡೇಯ ಉವಾಚ ||

**ಸ್ವಸ್ಥ ಮಂದಾಲಸಕ್ಲಾಂತಂ ಸ್ವಸ್ಥಾಲಸಮಥಾಪಿ ಚ ।**
**ವಿಷ್ಕಂಭಿತಂ ಮುಕುಟಕಂ ಮುಕ್ತಜಾನು ತಥಾ ಸಮಂ || ೧ ||**

**ಜಾನೂಗತಂ ವಿಮುಕ್ತಂ ಚ ಸ್ಥಾನಕಾನ್ಯುಪವೇಶನೇ ।**
**ವಿಷ್ಕಂಭಿತಾಂಚಿತೌ ಪಾದೌ ವಕ್ಷಃ ಕಿಂಚಿತ್ಸಮುನ್ನತಂ || ೨ ||**

**ಹಸ್ತೌ ಕಟ್ಯೂರುವಿನ್ಯಸ್ತೌ ಸ್ವಸ್ಥೇ ಸ್ವಸ್ಥೋಪವೇಶನೇ ।**
**ಏಕಃ ಪ್ರಸಾರಿತಃ ಪಾದಸ್ತ್ವನ್ಯಶ್ಚೈವಾಸನಾಶ್ರಿತಃ || ೩ ||**

---

### ಇಪ್ಪತ್ತೆರಡನೆಯ ಅಧ್ಯಾಯವು.

೧ ಮಾರ್ಕಂಡೇಯರು ಹೇಳುತ್ತಾರೆ ಸ್ವಸ್ಥ, ಮಂದಾಲಸ, ಕ್ಲಾಂತ, ಸ್ವಸ್ಥಾಲಸ, ವಿಷ್ಕಂಭಿತ, ಮುಕುಟಕ, ಮುಕ್ತಜಾನು, ಸಮ, ಜಾನೂಗತ, ವಿಮುಕ್ತ, ಇವು ಕುಳಿತುಕೊಳ್ಳುವ ವಿಧಾನವನ್ನು ಅಭಿನಯಿಸಲು ಸ್ಥಾನಗಳು

೨-೪ ಪಾದಗಳೆರಡೂ ಸ್ವಲ್ಪ ಬಗ್ಗಿಸಲ್ಪಟ್ಟು ಒಂದಾಗಿ ಜೋಡಿಸಿಯೂ, ಎದೆಯನ್ನು ಸ್ವಲ್ಪ ಮುಂದಕ್ಕೆ ಚಾಚಿಯೂ ಹಸ್ತಗಳೆರಡೂ ಸೊಂಟ, ಮತ್ತು ತೊಡೆಯ ಮೇಲೆ ಕ್ರಮವಾಗಿ ಇಡಲ್ಪಟ್ಟಿದ್ದಲ್ಲಿ ಅಂತಹ ನಾಟ್ಯವಿಶೇಷವು ಸ್ವಸ್ಥವೆಂಬ ಉಪವೇಶನಸ್ಥಾನವೆಂದು ಕರೆಯಲ್ಪಡುತ್ತದೆ ಒಂದುಪಾದವನ್ನು ನೀಡಿಯೂ, ಮತ್ತೊಂದು ಪಾದವನ್ನು ಆಸನದ ಮೇಲೆ ಇಟ್ಟು ಪಾರ್ಶ್ವಪ್ರದೇಶವು ಬಗ್ಗಿಸಲ್ಪಟ್ಟಿದ್ದರೆ ಅಂತಹ ಸ್ಥಾನವುಮಂದಾಲಸವೆನಿಸುತ್ತದೆ ಚಿಂತಿಸುವ ಕಾಲದಲ್ಲಿಯೂ, ಆಶೆಯನ್ನು

ಪಾರ್ಶ್ವಗಂ ನತಂ ತಥಾ ಕಾರ್ಯಂ ಸ್ಥಾನಂ ಮನ್ದಾಲಸಂ ತು ತತ್ ।
ಚಿಂತಾಯಾಂ ತು ತಥೌತ್ಸುಕ್ಯೇ ನಿರ್ವೇದೇ ವಿರಹೇ ತಥಾ ॥ ೪ ॥

ವಿಷಾದೇಷು ಸದಾ ದೇಯಂ ಸ್ಥಾನಮೇತತ್ಪ್ರಯೋಕ್ತೃಭಿಃ ।
ಚಿಬುಕಾಪಾಶ್ರಿತೌ ಹಸ್ತೌ ಬಾಹುಶೀರ್ಷಾಂಚಿತಂ ಶಿರಃ ॥ ೫ ॥

ಸರ್ವಾಭಿನಯನಂ ಚೈವ ವಿಜ್ಞೇಯಂ ಕ್ಲಾಂತನಾಮಕಂ ।
ಬಲಿನಾ ನಿಗೃಹೀತಸ್ಯ ರಿಪುಣಾ ಖಂಡಿತಸ್ಯ ಚ ॥ ೬ ॥

ಶೋಕಗ್ಲಾನಸ್ಯ ಚ ತಥಾ ಸ್ಥಾನಮೇತದ್ವಿನಿರ್ದಿಶೇತ್ ।
ಗ್ರಹೌ ಹಸ್ತೌ ವಿಮುಕ್ತಂ ಚ ಶರೀರಮಲಸಂ ತಥಾ ॥ ೭ ॥

ಖೇದಾಲಸಂ ತಥಾ ಚಕ್ಷುಃ ಯತ್ರ ಸ್ವಸ್ಥಾಲಸಂ ತು ತತ್ ।
ಶ್ರಮೇ ಗ್ಲಾನೌ ಮದೇ ಚೈವ ಮೂರ್ಛಾಯಾಂ ವ್ಯಥಿತೇ ತಥಾ ॥ ೮ ॥

---

ಪ್ರಕಾಶಪಡಿಸುವ ಕಾಲದಲ್ಲಿಯೂ, ನಿರ್ವೇದಹೊಂದಿದ ಸಮಯದಲ್ಲಿಯೂ ವಿರಹಕಾಲದಲ್ಲಿಯೂ, ವ್ಯಸನಕಾಲದಲ್ಲಿಯೂ ಸಹ ನಟರು ಈ ಸ್ಥಾನವನ್ನೇ ಪ್ರಯೋಗಿಸಬೇಕು

೫-೬ ಎರಡು ತೋಳುಗಳಿಂದಲೂ ತಲೆಯನ್ನು ಸುತ್ತಿಗಟ್ಟಿ ಕೈಗಳಿಂದ ಕೆನ್ನೆಗಳನ್ನು ಸ್ಪರ್ಶಮಾಡುತ್ತಾ ಶೋಕಕ್ಕೆ ತಕ್ಕ ಇತರ ಅಭಿನಯಗಳನ್ನೂ ಪ್ರಕಾಶ ಗೊಳಿಸುವ ಸ್ಥಾನಕ್ಕೆ ಕ್ಲಾಂತವೆಂದು ಹೆಸರು ಬಲಿಷ್ಠನಾದ ಶತ್ರುವಿನಿಂದ ಆಕ್ರಮಿಸ ಲ್ಪಟ್ಟಿರುವವನ, ಮತ್ತು ಶತ್ರುಗಳಿಂದ ಪರಾಜಿತನಾಗಿರುವವನ ಮತ್ತು ದುಃಖದಿಂದ ಬಳಲಿರುವವನ ಅಭಿನಯವನ್ನು ಈ ಸ್ಥಾನಪ್ರಯೋಗದಿಂದ ತೋರಿಸಬೇಕು

೭-೮ ಹಸ್ತಗಳು ಸಂಗ್ರಹದಿಂದ ಕೂಡಿ, ಶರೀರವು ಬಳಲಿ, ಶ್ರಮದಿಂದ ಕಣ್ಣುಗಳೂ ಜಡವಾಗಿದ್ದಲ್ಲಿ ಅಂತಹ ಸ್ಥಾನವು ಸ್ವಸ್ಥಾಲಸವೆನಿಸುತ್ತದೆ. ಮಾರ್ಗ ಶ್ರಮ, ಅದರಿಂದುಂಟಾದ ದೇಹಗ್ಲಾನಿ, ಮದ್ಯಾದಿಸೇವನದಿಂದುಂಟಾದ ಮದ, ಮೂರ್ಛೆ, ವ್ಯಥಾ, ಚಿತ್ತಭ್ರಮ, ಪ್ರಾಣಭಯ ಇಂತಹ ಸಂದರ್ಭಗಳಲ್ಲಿ ಈ ಸ್ಥಾನ ವನ್ನು ಪ್ರಯೋಗಿಸಬೇಕು

**ಮೋಹೇ ಪ್ರಾಣಭಯೇ ಚೈವ ಸ್ಥಾನಮೇತತ್ಪ್ರಯೋಜಯೇತ್ ।**
**ವಿಷ್ಕಂಭಿತಾಂಚಿತೌ ಪಾದೌ ಕುರು ವಿಷ್ಕಂಭಿತೌ ಭುಜೌ ॥ ೯ ॥**

**ನಿಮೀಲಿತಂ ತಥಾ ಚಕ್ಷುಃ ಸ್ಥಾನಂ ವಿಷ್ಕಂಭಿತಂ ತು ತತ್ ।**
**ಸ್ವವಕ್ಷೋಗತಯಾ ದೃಷ್ಟ್ಯಾ ಯೋಗೇ ಧ್ಯಾನೇ ವಿಧೀಯತೇ ॥ ೧೦ ॥**

**ಸ್ವಭಾವಸಂಸ್ಥಯಾ ಚೈವ ಸಭ್ಯಾನಾಮುಪವೇಶನೇ ।**
**ಸಮೌ ಪಾದೌ ಸಮಾಧಾಯ ಸಮಂ ಯದುಪದಿಶ್ಯತೇ ॥ ೧೧ ॥**

**ಅಸ್ಪೃಷ್ಟಭೂತಲಂ ಚೈವ ಜ್ಞೇಯಂ ಮುಕುಟಕಾಸನಂ ।**
**ಪಿತ್ರ್ಯೇ ಸಮಾಧೌ ಜಪ್ಯೇ ಚ ಹೋಮಾದಿಕರಣೇಷು ಚ ॥ ೧೨ ॥**

**ಏತತ್ ಸ್ಥಾನಂ ವಿಧಾತವ್ಯಂ ಯಥಾಗಮನಕರ್ಮಣಿ ।**
**ಏಕಂ ಜಾನು ಯದಾಸ್ಯೇ ಚ ಮಹೀಸ್ಪೃಷ್ಟೇ ವಿಧೀಯತೇ ॥ ೧೩ ॥**

---

೯-೧೨ ಪಾದಗಳೆರಡೂ ಬಗ್ಗಿಸಿ ಸೇರಿಸಲ್ಪಡಬೇಕು ಭುಜಗಳೂ ಬಗ್ಗಿಸಲ್ಪಡಬೇಕು ಕಣ್ಣುಗಳು ಮುಚ್ಚಿರಬೇಕು ಈ ಸ್ಥಾನವು ವಿಷ್ಕಂಭಿತವೆಂದು ಹೇಳಲ್ಪಡುತ್ತದೆ. ಮುಚ್ಚಿರುವ ಕಣ್ಣುಗಳ ದೃಷ್ಟಿಯು ಸೂಕ್ಷ್ಮವಾಗಿ ಅಧೋಮುಖವಾಗಿರುವುದರಿಂದ ತನ್ನ ಹೃದಯವನ್ನೇ ಹೊಂದಿರುವ ಈ ದೃಷ್ಟಿಯು ಧ್ಯಾನದ ವಶೆಯಲ್ಲಿಯೂ ಯೋಗಕಾಲದಲ್ಲಿಯೂ ಉಪಯೋಗಕರವಾಗಿರುವುದರಿಂದ ಈ ಸ್ಥಾನವನ್ನು ಈ ವಿಷಯದಲ್ಲಿಯೇ ಪ್ರಯೋಗಿಸಬೇಕು ಸ್ವಾಭಾವಿಕವಾಗಿ ಸಭ್ಯರು ಕುಳಿತುಕೊಳ್ಳುವ ರೀತಿಯಿಂದ ಪಾದಗಳನ್ನು ಸಮವಾಗಿಟ್ಟು ಕುಳಿತಲ್ಲಿ ಆ ಸ್ಥಾನವು ಸಮವೆಂದೆನಿಸುವುದು. ಪಾದಗಳಿಂದ ಭೂಮಿಯ ಸ್ಪರ್ಶ ಹೊಂದದೇ ಕುಳಿತುಕೊಳ್ಳುವ ರೀತಿಯು ಮುಕುಟಕಾಸನವೆಂದು ತಿಳಿಯಬೇಕು ಈ ಆಸನವನ್ನು ಪಿತೃಕರ್ಮ ನಡೆಸುವಾಗಲೂ, ಯೋಗಸಮಾಧಿಯಲ್ಲಿರುವಾಗಲೂ, ಜಪ ಕಾಲದಲ್ಲಿಯೂ, ಹೋಮಾದಿಗಳನ್ನು ನಡೆಸುವಾಗಲೂ ಇತರ ಶಾಸ್ತ್ರೋಕ್ತ ಕರ್ಮಗಳನ್ನಾಚರಿಸುವಾಗಲೂ ಅಭಿನಯದಿಂದ ಪ್ರದರ್ಶಿಸಬೇಕು

೧೩-೧೪ ಒಂದು ಮಂಡಿಯನ್ನು ಮುಖ ಭಾಗದಲ್ಲಿಯೂ, ಮತ್ತೊಂದನ್ನು ಭೂಮಿಯ ಮೇಲೆಯೂ ವಿನ್ಯಾಸಮಾಡಿದಲ್ಲಿ, ಅದು ಮುಕ್ತಜಾನುಕವೆಂಬ ಆಸನವಾಗುತ್ತದೆ ಈ ಆಸನವನ್ನು ನಾಯಕನಿಂದ ಅಥವಾ ನಾಯಿಕೆಯಿಂದ ಅಪ್ರೀತಿಗೊಳಿಸಲ್ಪಟ್ಟ ಪ್ರಿಯಪ್ರೇಯಸಿಯರ ಸಮಾಧಾನ ಕಾಲದಲ್ಲಿ ಅಥವಾ ಅಪರಾಧ

**ಜ್ಞಾತವ್ಯಂ ಭೂಮಿಪಶ್ರೇಷ್ಠ ಮುಕ್ತಜಾನುಕಮಾಸನಂ ।**
**ಏತತ್ ಕೃತವ್ಯಲೀಕಾನಾಂ ಪ್ರಿಯಾಣಾಂ ಸಂಪ್ರಸಾದನೇ ॥ ೧೪ ॥**

**ಮಜ್ಜನೇ ಕುಟಿಲಾನಾಂ ಚ ತಥಾ ಭೂಮ್ಯನುಲೇಪನೇ ।**
**ಮಹೀಗತಾಭ್ಯಾಂ ಜಾನುಭ್ಯಾಂ ಸ್ಥಾನಂ ಜಾನುಗತಂ ಭವೇತ್ ॥ ೧೫ ॥**

**ರಾಜ್ಞಾಂ ವಿಜ್ಞಾಪನೇ ಕಾರ್ಯಂ ಸುರಾಣಾಂ ಚೈವ ಪೂಜನೇ ।**
**ಭೂಮೌ ಯದೂರ್ಧ್ವಪತನಂ ತದ್ವಿಮುಕ್ತಮಿತಿ ಸ್ಮೃತಂ ॥ ೧೬ ॥**

**ಪ್ರಹಾರತಃ ಪ್ರಯೋಕ್ತವ್ಯಮಾವೇಶೇ ಕ್ರಂದನೇ ತಥಾ ।**
**ಭದ್ರಾಸನಂ ತು ದೇವಾನಾಂ ರಾಜ್ಞಾಂ ಸಿಹ್ಮಾಸನಂ ಭವೇತ್ ॥ ೧೭ ॥**

**ರೂಪ್ಯಾಸನಂ ತು ದಾತವ್ಯಂ ಸಾಂವತ್ಸರಪುರೋಧಸೋಃ ।**
**ವೇತ್ರಾಸನಮಮಾತ್ಯಾನಾಂ ಮಂತ್ರಿಣಾಂ ತು ತಥಾ ಭವೇತ್ ॥ ೧೮ ॥**

---

ದಿಂದಾಗಲಿ, ಅನೃತದಿಂದಾಗಲಿ ಮೋಸಗೊಳಿಸಲ್ಪಟ್ಟ ಇಷ್ಟಜನರ ಆಶ್ವಾಸನ ಕಾಲದಲ್ಲಿಯೂ, ಸ್ನಾನ ಕಾಲದಲ್ಲಿಯೂ, ಕುಟಿಲರ ವ್ಯವಹಾರ ಕಾಲದಲ್ಲಿಯೂ, ಭೂಮಿಯನ್ನು ಸಾರಿಸುವ ಅಥವಾ ಲೇಪಿಸುವ ಕಾಲದಲ್ಲಿಯೂ ಸಹ ಪ್ರಯೋಗಿಸಬೇಕು

೧೫-೧೮ ಎರಡು ಮಂಡಿಗಳನ್ನೂ ಭೂಮಿಯ ಮೇಲೆ ಊರಿ ಪ್ರಯೋಗಿಸುವ ಆಸನಕ್ಕೆ ಜಾನುಗತವೆಂದು ಹಸರು. ರಾಜರುಗಳಲ್ಲಿ ವಿಜ್ಞಾಪನೆ ಮಾಡುವಾಗಲೂ, ದೇವತೆಗಳನ್ನು ಪೂಜಿಸುವಾಗಲೂ ಈ ಸ್ಥಾನವನ್ನು ಪ್ರಯೋಗಿಸಬೇಕು ಭೂಮಿಯಿಂದ ಮೇಲಕ್ಕೆ ಹಾರಿ ಪ್ರಯೋಗಿಸುವ ಆಸನಕ್ಕೆ ವಿಮುಕ್ತವೆಂದು ಹೆಸರು ಇದನ್ನು ಬಾಣವೇ ಮೊದಲಾದುವುಗಳಿಂದ ಪ್ರಹಾರ ಹೊಂದಿದಾಗಲೂ, ಆವೇಶ ಕಾಲದಲ್ಲಿಯೂ, ಘಟ್ಟಿಯಾಗಿ ರೋದನಮಾಡುವ ಕಾಲದಲ್ಲಿಯೂ ಪ್ರಯೋಗಿಸಬೇಕು ದೇವತೆಗಳಿಗೆ ಭದ್ರಾಸನವನ್ನೂ, ರಾಜರಿಗೆ ಸಿಹ್ಮಾಸವನ್ನೂ, ಜ್ಯೋತಿಷಿಕ, ಮತ್ತು ಪುರೋಹಿತರಿಗೆ ರೂಪ್ಯಾ (ಬೆಳ್ಳಿ) ಸನವನ್ನೂ. ಅಮಾತ್ಯ ಮತ್ತು ಮಂತ್ರಿಗಳಿಗೆ ವೇತ್ರಾಸನ (ಬೆತ್ತದ ಆಸನ)ವನ್ನೂ ಉಪಯೋಗಿಸಬೇಕು

**ಮುಂದಾಸನಂ ತು ದಾತವ್ಯಂ ಸೇನಾನೀಯುವರಾಜಯೋಃ ।**
**ಮುನೀನಾಂ ಚ ದ್ವಿಜಾನಾಂ ಚ ತಥಾ ಸಬ್ರಹ್ಮಚಾರಿಣಾಂ　　॥ ೧೯ ॥**

**ಬೃಸೀ ದೇಯಾ ಮಹಾರಾಜ ಯೇ ಚಾನ್ಯೇ ನಿಯಮೇ ಸ್ಥಿತಾಃ ।**
**ಸ್ಥಾನೀಯಾಃ ಪುರುಷಾ ಯೇ ಚ ಮುಖ್ಯಾಃ ಪೌರಾಶ್ಚ ಯೇ ತಥಾ ॥ ೨೦ ॥**

**ವಣಿಜಶ್ಚ ತಥಾ ಮುಖ್ಯಾಸ್ತೇಷಾಂ ಭವತಿ ಪೀಠಿಕಾ ।**
**ವೇಶಸ್ತ್ರೀಣಾಂ ಕುಮಾರಾಣಾಂ ತಥಾ ಭೃತ್ಯಜನಸ್ಯ ಚ　　॥ ೨೧ ॥**

**ಮಸೂರಕಂ ತು ದಾತವ್ಯಂ ಶೇಷೇ ಭೂಮ್ಯಾಸನಂ ಭವೇತ್ ।**
**ಸಿಹ್ಮಾಸನಂ ವಿನಾ ರಾಜನ್ ಗೃಹೇ ಸ್ವಚ್ಛಂದಮಾಸನಂ　　॥ ೨೨ ॥**

**ನೈಕಾಸನಂ ಸ್ಯಾದ್ಗುರುಣಾ ತು ರಾಜನ್**
**ರಥೇ ಗಜೇ ವಾಪಿ ಶಿಲಾತಲೇ ಚ ।**

---

೧೯-೨೦　ಸೇನಾಪತಿ ಮತ್ತು ಯುವರಾಜ ಇವರಿಗೆ ಮುಂದಾಸನವನ್ನೂ, ಮುನಿಗಳಿಗೂ, ಬ್ರಾಹ್ಮಣರಿಗೂ ಸಮಾನರಾದ ಮಿತ್ರರಿಗೂ ಬೃಸಿ ಎಂಬ ದರ್ಭಾಸನವನ್ನೂ ನಿಯಮಪರರಾದ ಇತರರಿಗೂ ದರ್ಭಾಸನವನ್ನೂ ಉಪಯೋಗಿಸಬೇಕು. ಮುಖ್ಯಸ್ಥಾನದಲ್ಲಿ ಅಧಿಕೃತರಾಗಿರುವ ಪುರುಷರಿಗೂ, ನಗರದ ಮುಖ್ಯ ಜನರಿಗೂ, ಪ್ರಧಾನ ವರ್ತಕರಿಗೂ ಸಾಮಾನ್ಯವಾದ ಪೀಠವನ್ನು ಪಯೋಗಿಸಬೇಕು

೨೧-೨೩　ವೇಶ್ಯಾಸ್ತ್ರೀಯರಿಗೂ, ಕುಮಾರರಿಗೂ, ಭೃತ್ಯರಿಗೂ ಮಂಗಲವಾದ ಆಸನವನ್ನು ಉಪಯೋಗಿಸಬೇಕು ಇತರರಿಗೆ ಭೂಮಿಯಲ್ಲೇ ಆಸನವನ್ನು ಏರ್ಪಡಿಸಬೇಕು　ರಾಜನು ಸಿಂಹಾಸನವನ್ನು ಬಿಟ್ಟು ಮನೆಯಲ್ಲಿರುವಾಗ ತನ್ನ ಇಚ್ಛಬಂದ ಆಸನವನ್ನು ಆಶ್ರಯಿಸಬಹುದು ರಾಜನಿಗೆ ರಥದಲ್ಲಿಯಾಗಲಿ ಆನೆಯ ಮೇಲಾಗಲಿ ಕಲ್ಲಿನ ಆಸನದಲ್ಲಿಯಾಗಲಿ ಗುರುವಿನೊಡನೆ ಏಕಾಸನವನ್ನು ಏರ್ಪಡಿಸ

**ನೈಕಾಸನೇ ಸ್ಯಾದ್ಗುರುಣಾ ತು ದೋಷೋಽ-**
**ಥವಾತಿದೀರ್ಘೇ ಫಲಕೇ ಚ ನಿತ್ಯಂ ॥ ೨೩ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ**
**ವಜ್ರಸಂವಾದೇ ಆಸನವರ್ಣನೋ ನಾಮ**
**ದ್ವಾವಿಂಶತಿತಮೋಽಧ್ಯಾಯಃ**

---

ಬಾರದು ಅಥವಾ ಉದ್ದವಾದ ಹಲಗೆಯಂತಿರುವ ಅಂತಹ ಆಸನದಲ್ಲಿ ಏಕಾಸನ ವನ್ನು ಏರ್ಪಡಿಸಿದರೂ ಬಾಧಕವಿಲ್ಲ

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ ವಜ್ರ
ಸಂವಾದದಲ್ಲಿ ಆಸನವರ್ಣನವೆಂಬ ಇಪ್ಪತ್ತೆರಡನೆಯ
ಅಧ್ಯಾಯ ಮುಗಿದಿದೆ.



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ತ್ರಯೋವಿಂಶತಿತಮೋಽಧ್ಯಾಯಃ ||

|| ಮಾರ್ಕಂಡೇಯ ಉವಾಚ ||

**ವೈಷ್ಣವಂ ಸಮಪಾದಂ ಚ ವೈಶಾಖಂ ಮಂಡಲಂ ತಥಾ ।**
**ಪ್ರತ್ಯಾಲೀಢಮಥಾಲೀಢಂ ಷಟ್ ಪುಂಸಾಂ ಸ್ಥಾನಕಾನಿ ತು || ೧ ||**

**ಸ್ವಭಾವಸಂಶ್ರಿತಃ ಪಾದಃ ತ್ರ್ಯಂಶಃ ಪಕ್ಷಗತೋಽಪರಃ ।**
**ಕಿಂಚಿದಂಚಿತಜಂಘಶ್ಚ ವೈಷ್ಣವಂ ಸ್ಥಾನಮುಚ್ಯತೇ || ೨ ||**

### ಇಪ್ಪತ್ತಮೂರನೆಯ ಅಧ್ಯಾಯವು.

೧-೨ ಮಾರ್ಕಂಡೇಯರು ಹೇಳುತ್ತಾರೆ —ವೈಷ್ಣವ, ಸಮಪಾದ, ವೈಶಾಖ, ಮಂಡಲ, ಪ್ರತ್ಯಾಲೀಢ, ಆಲೀಢ, ಎಂಬ ಆರು ಸ್ಥಾನಗಳಿವೆ ಇವು ಪುರುಷರು ನಿಲ್ಲುವ ಸನ್ನಿವೇಶಗಳು ಈ ಸ್ಥಾನಗಳ ಲಕ್ಷಣಗಳನ್ನನುಸರಿಸಿ ನಾಟ್ಯದಲ್ಲಿ ಆಯಾಯ ಪುರುಷಪಾತ್ರಗಳಿಗೆ ಸ್ಥಾನಗಳನ್ನು ಕಲ್ಪಿಸಬೇಕು ಮೂರು ಅಂಶಗಳಿಂದ ಕೂಡಿ ಸ್ವಾಭಾವಿಕವಾದ ಸ್ಥಿತಿಯಲ್ಲಿ ಒಂದು ಪಾದವಿದ್ದು ಮತ್ತೊಂದು ಪಾದವು ಪಾರ್ಶ್ವದಲ್ಲಿ ಇಡಲ್ಪಟ್ಟು ಮೊಣಕಾಲಿನ ಪ್ರದೇಶವು ಸ್ವಲ್ಪಮಟ್ಟಿಗೆ ಕುಗ್ಗಿದ್ದಲ್ಲಿ ಇದು ವೈಷ್ಣವಸ್ಥಾನವೆನಿಸುವುದು

ಸ್ಥಾನೇನಾನೇನ ಕರ್ತವ್ಯಃ ಸಂಲಾಪಸ್ತು ಸ್ವಭಾವತಃ ।
ಸಮಪಾದಂ ತು ವಿಜ್ಞೇಯಂ ಸಮ್ಯೆಸ್ತಾಲಾಂತ್ರೈಃ ಪದೈಃ ॥ ೩ ॥

ಸ್ವಸ್ವಭಾಸೌಷ್ಠವೋಪೇತಂ ರುದ್ರಬ್ರಹ್ಮಾದಿದೈವತಂ ।
ಅನೇನ ಕಾರ್ಯಂ ಸ್ಥಾನೇನ ವಿಪ್ರಮಂಡಲಕಾರಣಂ ॥ ೪ ॥

ಬಲಾನಾಂ ಪಕ್ಷಿಣಾಂ ಚೈವ ವರಕೌತುಕಮೇವ ಚ ।
ಸ್ವಸ್ಥಾನಂ ಸ್ಯಂದನಸ್ಥಾನಾಂ ವಿಮಾನಸ್ಥಾಯಿನಾಮಪಿ ॥ ೫ ॥

ಲಿಂಗಸ್ಥಾನಾಂ ವ್ರತಸ್ಥಾನಾಂ ಸ್ಥಾನಮೇವ ತತ್ಪ್ರಯೋಜಯೇತ್ ।
ದ್ವೌ ತಾಲಾವರ್ಧತಾಲಂ ಚ ಪಾದಯೋರಂತರಂ ಭವೇತ್ ॥ ೬ ॥

ಅಂಚಿತೇ ಯತ್ರ ಜಂಘೇ ತು ಪದೌ ಪಕ್ಷಸ್ಥಿತೌ ತಥಾ ।
ವೈಶಾಖಂ ನಾಮ ತತ್ಸ್ಥಾನಂ ಸ್ಕಂದಶ್ಚಾತ್ರ ದೇವತಾ ॥ ೭ ॥

---

೩–೫ ಈ ವೈಷ್ಣವಸ್ಥಾನವನ್ನಾಶ್ರಯಿಸಿ ಸ್ವಾಭಾವಿಕವಾದ ಸಲ್ಲಾಪವನ್ನು ನಡೆಸಬೇಕು. ಒಂದು ತಾಲಪ್ರಮಾಣದಷ್ಟು ಅಂತರವುಳ್ಳ ಸಮಪದವೇ ಸಮಪಾದ ವೆನಿಸುತ್ತದೆ. ತನ್ನದೇ ಆದ ಕಾಂತಿಸೌಷ್ಠವದಿಂದ ಕೂಡಿದ ಈ ಸ್ಥಾನವು ಬ್ರಹ್ಮ ರುದ್ರಾದಿಗಳನ್ನೇ ಅಧಿದೇವತೆಯನ್ನಾಗಿ ಹೊಂದಿದೆ ಈ ಸ್ಥಾನದಿಂದ ಬ್ರಾಹ್ಮಣ ಪ್ರದಕ್ಷಿಣಾದಿ ಕಾರ್ಯವನ್ನು ಮಾಡಬೇಕು ಬಲಗಳಿಗೂ ಪಕ್ಷಿಗಳಿಗೂ ಇದು ಬಹಳ ಕುತೂಹಲಕಾರಿಯಾದ ಸ್ಥಾನ ರಥದಲ್ಲಿ ಕೂಡುವವರಿಗೂ, ವಿಮಾನಾ ರೋಹಿಗಳಿಗೂ ಅವರವರಿಗೆ ನಿಯಮಿತವಾಗಿರುವ ಸ್ಥಾನಗಳೇ ಅನ್ವಯಿಸುತ್ತವೆ

೬–೮ ಬ್ರಹ್ಮಚರ್ಯವೇ ಮೊದಲಾದ ಆಶ್ರಮಚಿಹ್ನೆಯಿಂದ ಕೂಡಿದವ ರಿಗೂ, ವ್ರತದಲ್ಲಿರುವವರಿಗೂ, ಸ್ವವ್ಯವಹಾರದಲ್ಲಿ ಈ ಸ್ಥಾನವನ್ನೇ ಪ್ರಯೋಗಿಸ ಬೇಕು ಪಾದಗಳಿಗೆ ಎರಡೂವರೆ ತಾಲದಷ್ಟು ಅಂತರವಿದ್ದು ಮೊಣಕಾಲುಗಳು ಕೂಡಿ ಕಾಲುಗಳು ಪಾರ್ಶ್ವದಲ್ಲಿದ್ದಲ್ಲಿ ಇದು ವೈಶಾಖವೆಂಬ ಸ್ಥಾನವಾಗುತ್ತವೆ ಇದಕ್ಕೆ ಷಣ್ಮುಖನೇ ಅಧಿದೇವತೆ ಈ ಸ್ಥಾನದಿಂದ ಅಶ್ವಾರೋಹಣವನ್ನು ನಡೆಸ

**ಸ್ಥಾನೇನಾನೇನ ಕರ್ತವ್ಯಮಶ್ವಾನಾಂ ವಾಹನಂ ಬುಧೈಃ ।**
**ವ್ಯಾಯಾಮೋ ನಿರ್ಗಮಶ್ಚೈವ ಪ್ರವೇಶೋ ಧನುಷಸ್ತಥಾ ॥ ೮ ॥**

**ಅತಃಪರಂ ಮಂಡಲಂ ಸ್ಯಾತ್ತ್ರೀಂಸ್ತಾಲಾಂತರಮೇವ ಚ ।**
**ಕಟೀ ಜಾನುಸಮಾ ಯತ್ರ ಪಾದೌ ಪಕ್ಷಸ್ಥಿತೌ ಯಥಾ ॥ ೯ ॥**

**ಧನುರ್ವಜ್ರಪ್ರಹರಣಂ ಮಂಡಲೇನ ಪ್ರಯೋಜಯೇತ್ ।**
**ವಾಹನಂ ಕುಂಜರಾಣಾಂ ತು ನೃತ್ತಂ ಚೋದ್ವಹನಕ್ರಿಯಾ ॥ ೧೦ ॥**

**ಅಧೌ ಚ ದಕ್ಷಿಣಂ ಪಾದಂ ಪಂಚತಾಲಂ ಪ್ರಸಾರಯೇತ್ ।**
**ಆಲೀಢಂ ನಾಮ ತತ್ ಸ್ಥಾನಂ ರುದ್ರಕಾಲ್ಯತ್ರ ದೈವತಂ ॥ ೧೧ ॥**

**ಅನೇನ ಕಾರ್ಯಾ ಸ್ಥಾನೇನ ಸರ್ವತ್ರೋದ್ಧರಣಕ್ರಿಯಾ ।**
**ರೌದ್ರಪಾದಪ್ರಚಾರಸ್ತು ಸಂಗ್ರಾಮಸ್ಯ ನಿರೂಪಣಂ ॥ ೧೨ ॥**

---

ಬೇಕು ಧನುರ್ವಿದ್ಯೆಯ ಅಭ್ಯಾಸ, ಪ್ರವೇಶ ಮತ್ತು ನಿರ್ಗಮನ ಇವನ್ನು ಈ ಸ್ಥಾನದಿಂದ ತೋರಿಸಬೇಕು

೯–೧೦ ಅನಂತರ ಮಂಡಲವೆಂಬ ಸ್ಥಾನವನ್ನು ಹೇಳುತ್ತೇನೆ ಪಾದಗಳು ಮೂರು ತಾಳಪ್ರಮಾಣದ ಅಂತರದಿಂದ ಕೂಡಿ ಪಾರ್ಶ್ವದಲ್ಲಿದ್ದು ಸೊಂಟವು ಮಂಡಿಗೆ ಸಮವಾಗಿದ್ದಲ್ಲಿ ಇದು ಮಂಡಲವೆಂಬ ಸ್ಥಾನವಾಗುತ್ತದೆ ಧನುಸ್ಸಿನಿಂದ ಅಥವಾ ವಜ್ರಾಯುಧದಿಂದ ಪ್ರಹರಿಸುವ ಸಂದರ್ಭದಲ್ಲಿ ಈ ಸ್ಥಾನವನ್ನು ಪ್ರಯೋಗಿಸಬೇಕು ಆನೆಗಳ ಆರೋಹಣ, ನೃತ್ಯ ಮತ್ತು ಉದ್ವಾಹಕ್ರಿಯೆ ಇವುಗಳನ್ನು ಈ ಸ್ಥಾನದಿಂದ ತೋರಿಸಬೇಕು

೧೧–೧೨ ಮೊದಲು ಬಲಗಾಲನ್ನು ಐದುತಾಲ ಪರಿಮಾಣದಷ್ಟು ನೀಡಬೇಕು ಇದಕ್ಕೆ ಆಲೀಢವೆಂದು ಹೆಸರು ರುದ್ರಕಾಲಿಯೇ ಇದರ ಅಧಿದೇವತೆ ಈ ಸ್ಥಾನದಿಂದ ಎಲ್ಲಾ ಸಮಯದಲ್ಲಿಯೂ ಮೇಲಕ್ಕೆತ್ತುವ ಕಾರ್ಯವನ್ನು ಮಾಡಬೇಕು ರೌದ್ರವೆಂಬ ಪಾದವಿನ್ಯಾಸವು ಯುದ್ಧದಲ್ಲಿ ಸಹಕಾರಿಯಾಗುತ್ತದೆ

ಸಿಹ್ಮಾದ್ಯಭಿನಯಂ ಚೈವ ಶಕ್ತಸಂಧಾನಮೇವ ಚ ।
ಖಡ್ಗಯುದ್ಧೇ ನಿಯುದ್ಧೇ ಚ ಮಂಡಲಭ್ರಮಣೇ ತಥಾ ॥ ೧೩ ॥

ಉತ್ತರೋತ್ತರಸಂಜಲ್ಪೇ ರೋಷಾಮರ್ಷ ಸಮುದ್ಭವೇ ।
ಮಲ್ಲಾನಾಂ ಚೈವ ಸಂಸ್ಫೋಟೇ ಶತ್ರೂಣಾಂ ಚ ನಿರೂಪಣೇ ॥ ೧೪ ॥

ತಥಾಭಿದ್ರವಣಂ ಚೈವ ಶಸ್ತ್ರಾಣಾಂ ಚ ವಿಮೋಕ್ಷಣಂ ।
ಅಂಚಿತಂ ದಕ್ಷಿಣಂ ಕೃತ್ವಾ ವಾಮಂ ಪಾದಂ ಪ್ರಸಾರ್ಯ ಚ ॥ ೧೫ ॥

ಆಲೀಢಂ ಪರಿವರ್ತಾನ್ತೇ ಪ್ರತ್ಯಾಲೀಢಮಿತಿ ಸ್ಮೃತಂ ।
ಪ್ರತ್ಯಾಲೀಢಂ ತು ವಿಜ್ಞೇಯಂ ಸ್ಥಾನಂ ಚ ನವದೈವತಂ ॥ ೧೬ ॥

ಆಲೀಢೇನೋದಿತಂ ಶಸ್ತಂ ಪ್ರತ್ಯಾಲೀಢಂ ನ ಮೋಚಯೇತ್ ।
ಅತಃಪರಂ ಪ್ರವಕ್ಷ್ಯಾಮಿ ಸ್ತ್ರೀಣಾಂ ಸ್ಥಾನತ್ರಯಂ ನೃಪ ॥ ೧೭ ॥

---

ಸಿಹ್ಮನೇ ಮುಂತಾದ ಕ್ರೂರಪ್ರಾಣಿಗಳ ಅಭಿನಯಮಾಡುವಾಗಲೂ, ಸಮರ್ಥನೊಡನೆ ಸಂಧಾನಮಾಡಿಕೊಳ್ಳುವ ಕಾಲದಲ್ಲಿಯೂ, ಖಡ್ಗಗಳಿಂದ ಮಾಡುವ ಯುದ್ಧದಲ್ಲಿಯೂ, ಬಾಹುಯುದ್ಧದಲ್ಲಿಯೂ, ಮಂಡಲಾಕಾರವಾದ ಭ್ರಮಣವನ್ನು ಮಾಡುವಾಗಲೂ, ಮೇಲಿಮೇಲೆ ವಾಗ್ವಾದ ನಡೆಸುವಾಗಲೂ, ಕೋಪ ಮತ್ತು ಹೆಚ್ಚಾದ ಕೋಪ ಇವು ಉಂಟಾಗುವ ಕಾಲದಲ್ಲಿಯೂ, ಜಟ್ಟಿಗಳು ಪರಸ್ಪರ ಆಸ್ಫೋಟನ ಮಾಡುವ ಕಾಲದಲ್ಲಿಯೂ, ಶತ್ರುಗಳ ಸ್ಥಿತಿಯನ್ನು ತೋರಿಸುವ ಕಾಲದಲ್ಲಿಯೂ, ಭಯಸಂಭ್ರಮಾದಿಗಳಿಂದ ಓಡಿಹೋಗುವಾಗಲೂ, ಶಸ್ತ್ರಗಳನ್ನು ತ್ಯಾಗಮಾಡುವಾಗಲೂ ಈ ಸ್ಥಾನವನ್ನೇ ಉಪಯೋಗಿಸಬೇಕು ಈ ವಿಧವಾದ ಆಲೀಢವೇ ವ್ಯತ್ಯಸ್ತವಾಗಿ ಪ್ರಯೋಗಿಸಿದಲ್ಲಿ ಅಂದರ ಬಲಗಾಲನ್ನು ಮಡಿಸಿ ಎಡಗಾಲನ್ನು ನೀಡಿದ್ದೇ ಆದರೆ ಪ್ರತ್ಯಾಲೀಢವೆನಿಸಿಕೊಳ್ಳುತ್ತದ ಈ ಪ್ರತ್ಯಾಲೀಢಕ್ಕೆ ಒಂಭತ್ತು ದೇವತೆಗಳಿರುತ್ತಾರ ಎಂದು ತಿಳಿಯಬೇಕು

೧೭-೧೯ ಆಲೀಢದಿಂದಲೇ ಪ್ರಾರಂಭಿಸಬೇಕು ಇದೇ ಪ್ರಶಸ್ತ ಅನಂತರ ಪ್ರಯೋಗಿಸಿದ ಪ್ರತ್ಯಾಲೀಢವನ್ನು ಬಿಡಬಾರದು ಇನ್ನು ಮುಂದ ಸ್ತ್ರೀಯರ ವಿಷಯದಲ್ಲಿ ಪ್ರಯೋಗಾರ್ಹವಾದ ಮೂರು ಸ್ಥಾನಗಳನ್ನು ಹೇಳುತ್ತೇನೆ. ಆಯತ,

**ಆಯತಂ ಚಾವಹಿತ್ಥಂ ಚ ಹಯಕ್ರಾಂತಮಥಾಪಿ ಚ ।**
**ಏಕಶ್ಚಾನುಯುತೋ ಯತ್ರ ಪಾದೌ ವಿರಚಿತಃ ಸಮಃ ॥ ೧೮ ॥**

**ತಾಲಮಾತ್ರಾನ್ತರನ್ಯಸ್ತಃ ತ್ರ್ಯಶ್ರಃ ಪಕ್ಷಗತೋಽಪರಃ ।**
**ಪ್ರಸನ್ನಮಾನನಮುರಃ ಸಮಂ ಯತ್ರ ಸಮುನ್ನತಂ ॥ ೧೯ ॥**

**ನತೌ ನಿತಂಬಗೌ ಹಸ್ತೌ ಸ್ಥಾನಂ ಜ್ಞೇಯಂ ತದಾಯತಂ ।**
**ರಙ್ಗಾವತರಣೇ ಹ್ಯೇತತ್ತಥಾ ಪುಷ್ಪಾಂಜಲೌ ಭವೇತ್ ॥ ೨೦ ॥**

**ಪಾದೋ ವಿರಚಿತಃ ತ್ರ್ಯಶ್ರಃ ತವನ್ಯೋಽಪಸೃತಃ ಸಮಃ ।**
**ಪಾದಾಸ್ತಾಲಾಂತರನ್ಯಸ್ತಾಸ್ತ್ರಿಕಮೀಷತ್ಸಮುನ್ನತಂ ॥ ೨೧ ॥**

**ಅವಹಿತ್ಥಂ ಸಮಾಖ್ಯಾತಂ ಸ್ಥಾನಮೇತನ್ನರೋತ್ತಮ ।**
**ವಿಲಾಸಲೀಲಾಲಾವಣ್ಯಶೃಙ್ಗಾರಾತ್ಮನಿರೂಪಣೇ ॥ ೨೨ ॥**

---

ಅವಹಿತ್ಥ, ಹಯಕ್ರಾಂತ ಎಂಬವೇ ಆ ಸ್ಥಾನಗಳು. ಒಂದು ಪಾದವು ಸೇರಿದಂತೆ ಇದ್ದು ಮತ್ತೊಂದು ಪಾದವು ತಾಲಪ್ರಮಾಣಮಾತ್ರಾಂತರದಿಂದ ಕೂಡಿ ಸಮವಾಗಿ ಅಂಗಾಲಿನ ಮೂರು ಭಾಗಗಳಿಂದಲೂ ಪಕ್ಕದಲ್ಲಿ ಇಡಲ್ಪಟ್ಟಿದ್ದಲ್ಲಿ ಮತ್ತು ಮುಖವು ಪ್ರಸನ್ನವಾಗಿದ್ದು ಎದೆಯು ಸಮವಾಗಿ ಮುಂದಕ್ಕೆ ಚಾಚಲ್ಪಟ್ಟಿದ್ದು ಹಸ್ತಗಳೆರಡೂ ಕಟಿಪಶ್ಚಾದ್ಭಾಗದಲ್ಲಿ ಬಗ್ಗಿಸಿ ನೀಡಲ್ಪಟ್ಟಿದ್ದಲ್ಲಿ ಈ ಸ್ಥಾನವು ಆಯತವೆಂದು ಕರೆಯಲ್ಪಡುತ್ತದೆ.

೨೦-೨೨ ಈ ಸ್ಥಾನವನ್ನು ರಂಗಸ್ಥಲಕ್ಕೆ ಇಳಿಯುವಾಗಲೂ, ಪುಷ್ಪಾಂಜಲಿಯನ್ನು ಮಾಡುವಾಗಲೂ ಉಪಯೋಗಿಸಬೇಕು. ಒಂದು ಪಾದವು ಮೂರುಭಾಗದಿಂದಲೂ ಮಟ್ಟವಾಗಿಡಲ್ಪಟ್ಟು ಮತ್ತೊಂದು ಪಾದವು ಸ್ವಲ್ಪ ಸರಿದಿರಬೇಕು. ಹೀಗೆ ಎರಡುಪಾದಗಳೂ ತಾಲಮಾತ್ರದ ಅಂತರದಿಂದ ಕೂಡಿ ಬೆನ್ನುಮೂಳೆಯ ಕೆಳಭಾಗವು ಸ್ವಲ್ಪ ಉನ್ನತವಾಗಿದ್ದಲ್ಲಿ ಈ ಸ್ಥಾನಕ್ಕೆ ಅವಹಿತ್ಥವೆಂದು ಹೆಸರು. ಇದನ್ನು ವಿಲಾಸ, ಲೀಲಾವಿಶೇಷಗಳು, ಲಾವಣ್ಯ, ಶೃಂಗಾರ ಇವುಗಳ ಸ್ವರೂಪವನ್ನು ಪ್ರದರ್ಶಿಸುವಾಗಲೂ ವರನ ಮಾರ್ಗವನ್ನು ನಿರೀಕ್ಷಿಸುವಾಗಲೂ ಪ್ರಯೋಗಿಸಬೇಕು.

ಸ್ಥಾನಮೇತತ್ಪ್ರಯೋಕ್ತವ್ಯಂ ವರಮಾರ್ಗಾವಲೋಕನೇ ।
ಸಮುತ್ಥಿತೋ ಯತ್ರಪಾದಸ್ತ್ವನ್ಯಃ ಪಾದಸ್ತಲಾಚಿತಃ ॥ ೨೩ ॥

ತಾಲೈರನಿಯತೈರೇಷ ಸ್ಥಾನಕೋ ಹಿ ವಿಧೀಯತೇ ।
ಸೂಚೀವಿದ್ಧಮವಿದ್ಧಂ ವಾ ತದಶ್ವಕ್ರಾಂತಮಿಷ್ಯತೇ ॥ ೨೪ ॥

ಶಾಖಾವಲಂಬೇ ಸ್ತಬಕೋಚ್ಚಯೇ ಚ
ವಿಘೂರ್ಣನೇತ್ರಾಸನಸಂಪ್ರಲಾಪೇ ।
ಸ್ವಭಾವಸಂಲಾಪವಿಧೌ ಚ ಕಾರ್ಯಂ
ಸ್ಥಾನಂ ತ್ವಿದಂ ಯಾದವವಂಶಮುಖ್ಯ ॥ ೨೫ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ ವಜ್ರಸಂವಾದೇ ಉತ್ಥಿತಾದಿಸ್ಥಾನಕವರ್ಣನೋ ನಾಮ ತ್ರಯೋವಿಂಶತಿತಮೋಽಧ್ಯಾಯಃ

೨೩–೨೪ ಒಂದು ಪಾದವು ಸಮನಾಗಿ ಊರಲ್ಪಟ್ಟಿದ್ದು ಮತ್ತೊಂದು ಪಾದವು ಸ್ವಲ್ಪಮಟ್ಟಿಗೆ ಅಧೋಭಾಗದಲ್ಲಿ ಭೂಮಿಯ ಸ್ಪರ್ಶಹೊಂದಿ ಸೂಚೀವಿದ್ಧವೆಂಬ ನಾಟ್ಯಕ್ರಮದಿಂದ ಅಥವಾ ಅನ್ಯಥಾ ಭಾವದಿಂದ ಕೂಡಿ ತಾಲಪ್ರಮಾಣವು ಅನಿಯತವಾಗಿದ್ದಲ್ಲಿ ಇದಕ್ಕೆ ಅಶ್ವಕ್ರಾಂತವೆಂದು ಹೆಸರು ಈ ಸ್ಥಾನವನ್ನು ಮರದ ಕೊಂಬೆಗಳನ್ನು ಅವಲಂಭಿಸುವಾಗಲೂ, ಗೊಂಚಲುಗಳನ್ನು ಸೇರಿಸಿ ಸ್ವೀಕರಿಸುವಾಗಲೂ, ಕಣ್ಣುಗಳನ್ನು ತಿರುಗಿಸಿ ಆಸನದಲ್ಲಿ ಕುಳಿತು ಆಕ್ರೋಶದಿಂದ ಮಾತನಾಡುವಾಗಲೂ, ಸ್ವಾಭಾವಿಕವಾಗಿ ಸಲ್ಲಾಪಮಾಡುವಾಗಲೂ ಸಹ ಉಪಯೋಗಿಸಬೇಕು

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯ ಖಂಡದಲ್ಲಿ ಮಾರ್ಕಂಡೇಯ ವಜ್ರ ಸಂವಾದದಲ್ಲಿ ಉತ್ಥಿತಾದಿಸ್ಥಾನವರ್ಣನವೆಂಬ ಇಪ್ಪತ್ತಮೂರನೆಯ ಅಧ್ಯಾಯ ಮುಗಿದಿದೆ

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಚತುರ್ವಿಂಶತಿತಮೋಽಧ್ಯಾಯಃ ||

### || ಮಾರ್ಕಂಡೇಯ ಉವಾಚ ||

**ಶಿರಸಃ ಪ್ರಥಮಂ ಕರ್ಮ ಗದತೋ ಮೇ ನಿಬೋಧ ತತ್ |**
**ಸ್ವಭಾವಾದೃಜುನೋವಾಮಕ್ಷೇಪೇಣಾಕಸ್ಮಿತಂ ಸಕೃತ್ || ೧ ||**

**ಸಂಜ್ಞೋಪದೇಶಪೃಚ್ಛಾಸು ಸ್ವಭಾವಾಭಾಷಣೇ ಭವೇತ್ |**
**ಬಹುಶಃ ಕಥಿತಂ ಯಚ್ಚ ತದಾ ಕಂಪಿತಮಿಷ್ಯತೇ || ೨ ||**

**ರೋಷತರ್ಜನತರ್ಕೇಷು ಪ್ರತಿಜ್ಞಾಸು ಚ ದೃಶ್ಯತೇ |**
**ಶಿರಸೋ ರೇಚನಂ ಯತ್ತು ಶನೈಸ್ತದ್ಧುತಮಿಷ್ಯತೇ || ೩ ||**

---

೧–೨ ಮಾರ್ಕಂಡೇಯರು ಅಂಗವರ್ಣನ ಪ್ರಕರಣವನ್ನು ಪ್ರಾರಂಭಿಸುತ್ತಾರೆ ತಲೆಯ ಚಲನಾದಿ ವ್ಯಾಪಾರಗಳಿಂದ ಉಂಟಾಗಬಹುದಾದ ಅಭಿನಯಗಳನ್ನು ಮೊದಲು ಹೇಳುತ್ತೇನೆ ಕೇಳು, ಸ್ವಾಭಾವಿಕವಾಗಿ ಋಜುಗತಿಯುಳ್ಳ ಮುಖವನ್ನು ಆಕಸ್ಮಿಕವಾಗಿ ಎಡಭಾಗಚಲನದಿಂದ ಯೋಜಿಸಿದಲ್ಲಿ ಇಂತಹ ಶಿರೋವ್ಯಾಪಾರಕ್ಕೆ ಆಕಂಪಿತವೆಂದು ಹೆಸರು ಈ ಅಭಿನಯವು ಸಂಜ್ಞೆಮಾಡುವಾಗಲೂ, ಉಪದೇಶ ಮತ್ತು ಪ್ರಶ್ನೆಮಾಡುವಾಗಲೂ, ಸ್ವಾಭಾವಿಕವಾದ ಸಂಭಾಷಣೆಯ ಕಾಲದಲ್ಲಿಯೂ ಹೆಚ್ಚಾಗಿ ಮಾತನಾಡುವಾಗಲೂ ಉಂಟಾಗುತ್ತದೆ

೩–೪ ರೋಷಕಾಲದಲ್ಲಿಯೂ, ಗದರಿಸುವಾಗಲೂ, ಊಹಿಸುವಾಗಲೂ, ಪ್ರತಿಜ್ಞಾಕಾಲದಲ್ಲಿಯೂ ಇದು ಸಂಭವಿಸುತ್ತದೆ ತಲೆಯನ್ನು ಸ್ವಲ್ಪ ಮೆಲ್ಲಗೆ ವಕ್ರಮಾಡಿದಲ್ಲಿ ಈ ಅಂಗಚಲನೆಗೆ ಯುತವೆಂದು ಹೆಸರು ಇದು ವಿಷಾದ, ಆಶ್ಚರ್ಯ

**ವಿಷಾದೆ ವಿಸ್ಮಯೇ ಚೈವ ಪ್ರತಿಷೇಧೆ ತದಿಷ್ಯತೇ ।**
**ವಿಧುತಂ ನಾಮತಃ ಪ್ರೋಕ್ತಂ ತಥಾ ಪಾರ್ಶ್ವವಿಕಂಪನೈಃ ॥ ೪ ॥**

**ಶೀತಗ್ರಸ್ತೆ ಜ್ವರಾರ್ತೆ ಚ ಮತ್ತೆ ಚ ಜ್ವರಿತೆ ಭವೇತ್ ।**
**ಮಂಡಲಾರಂಭಜೆ ಚೈವ ಭವೇತ್ತು ಪರಿಗರ್ಹಿತಂ । ॥ ೫ ॥**

**ಸಾಧನೆ ವಿಸ್ಮಯೆ ಹರ್ಷೆ ಲೀಲಾಯಾಂ ಚ ತದಿಷ್ಯತೆ**
**ಸಕೃದುದ್ವಾಹಿತಂ ಚೋರ್ಧ್ವಂ ತದುದ್ವಾಹೀತಮಿಷ್ಯತೆ ॥ ೬ ॥**

**ಉಚ್ಛ್ರಾಯೆ ದರ್ಶನೆ ಗರ್ವೆ ತತ್ತಥೋರ್ಧ್ವನಿರೀಕ್ಷಣೇ ।**
**ಆಕ್ಷಿಪ್ತಂ ಸಕೃದೇವ ಸ್ಯಾದಪವ್ರತಮಧೋಗತಂ ॥ ೭ ॥**

**ಸಂದೇಹಾಲಾಪಸಂಜ್ಞಾಸು ತತ್ತಥಾ ವಾಹನಾದಿಷು ।**
**ಕಿಂಚಿತ್ಪಾರ್ಶ್ವನತಗ್ರೀವಂ ಶಿರೋವಿಜ್ಞೇಯಮಂಚಿತಂ ॥ ೮ ॥**

---

ನಿಷೇಧ ಇಂತಹ ಸಂದರ್ಭದಲ್ಲಿ ಉಂಟಾಗುತ್ತದ ತಲೆಯನ್ನು ದೇಹದ ಪಾರ್ಶ್ವಗಳೊಡನೆ ತಿರುಗಿಸಿದಲ್ಲಿ ಇದು ವಿಧುತವೆನಿಸುತ್ತದೆ ಇದು ಶೀತದಿಂದ ಕೂಡಿಯೂ, ಜ್ವರಗ್ರಸ್ತನಾಗಿಯೂ ಮದ ಹೊಂದಿದವನ ಮತ್ತು ಜ್ವರದಿಂದ ಪೀಡಿತನಾಗಿರುವವನ ಚೇಷ್ಟಾರೂಪದಿಂದ ಅಭಿನಯಿಸಲ್ಪಡುತ್ತದ ಮಂಡಲಾಕಾರವಾಗಿ ಸುತ್ತುವ ವ್ಯಾಪಾರವು ಪರಿಗರ್ಹಿತವೆನಿಸುತ್ತದೆ ಇದು ಕಾರ್ಯಸಿದ್ಧಿಯ ಕಾಲದಲ್ಲಿಯೂ, ಆಶ್ಚರ್ಯಕಾಲದಲ್ಲಿಯೂ, ಹರ್ಷಕಾಲದಲ್ಲಿಯೂ, ವಿಲಾಸಕಾಲದಲ್ಲಿಯೂ ಸಹ ಉಂಟಾಗುತ್ತದೆ

೬–೮ ತಲೆಯನ್ನು ಸ್ವಲ್ಪ ಮೇಲಕ್ಕೆ ಎತ್ತಿದಲ್ಲಿ ಇದು ಉದ್ವಾಹಿತವೆನಿಸುತ್ತದೆ ದೇಹವನ್ನು ದೀರ್ಘಮಾಡುವ ಕಾಲದಲ್ಲಿಯೂ, ನೋಡುವಾಗಲೂ, ಗರ್ವಕಾಲದಲ್ಲಿಯೂ, ಮೇಲೆ ನೋಡುವಾಗಲೂ ಇದು ಉಂಟಾಗುತ್ತದೆ ಹಾಗೆಯೇ ತಲೆಯನ್ನು ಸ್ವಲ್ಪ ಕೆಳಮುಖವಾಗಿ ಮಾಡಿದಲ್ಲಿ ಇದಕ್ಕೆ ಅಪವ್ರತವೆಂದು ಹೆಸರು ಇದು ಸಂದೇಹ ಕಾಲದಲ್ಲಿಯೂ, ಸಲ್ಲಾಪ ಕಾಲದಲ್ಲಿಯೂ, ಸಂಜ್ಞೆಮಾಡುವಾಗಲೂ, ವಾಹನಾದಿಗಳಲ್ಲೂ ಉಂಟಾಗುತ್ತದೆ ತಲೆಯನ್ನು ದೇಹದ ಒಂದು ಪಾರ್ಶ್ವದ ಕಡೆಗೆ ಕತ್ತನ್ನು ಬಗ್ಗಿಸಿ ವಕ್ರವಾಗಿ ಮಾಡಿದಲ್ಲಿ ಇದಕ್ಕೆ ಅಂಚಿತವೆಂದು ಹೆಸರು ಇದು ಮೂರ್ಛೆ ಹೊಂದಿರುವವನ, ಮತ್ತು ವ್ಯಥೆ ಹೊಂದಿರುವವನ, ಮತ್ತು ಬಹಳ ದುಃಖ ಹೊಂದಿರುವವನ ಅಭಿನಯ ಕಾಲದಲ್ಲಿ ಉಂಟಾಗುತ್ತದೆ

**ಮೂರ್ಚ್ಛಿತೇ ವ್ಯಥಿತೇ ಚೈವ ಸಂಚಿತೇ ದುಃಖಿತೇ ಭವೇತ್ ।**
**ಉತ್ಕ್ಷಿಪ್ತಬಾಹುಶಿಖರಂ ತಥಾಚಿತಶಿರೋಧರಂ　　॥ ೯ ॥**

**ನಿಕುಂಚಿತಂ ಚ ತದ್ಗರ್ವೇ ವಿಲಾಸೇ ಚ ಪ್ರಯೋಜಯೇತ್ ।**
**ಪರಾವೃತ್ತೇ ಪರಾವೃತ್ತಂ ಕಾರ್ಯಂ ಪೃಷ್ಠನಿರೀಕ್ಷಣೇ　　॥ ೧೦ ॥**

**ಉತ್ಕ್ಷಿಪ್ತಂ ಚಾಪಿ ವಿಜ್ಞೇಯಮುನ್ಮುಖಾವಸ್ಥಿತಂ ಶಿರಃ ।**
**ಆಶುದಿವ್ಯಾರ್ಥಯೋಗೇ ಚ ಕಾರ್ಯಂ ತಚ್ಚ ಪ್ರಯೋಕ್ತೃಭಿಃ　　॥ ೧೧ ॥**

**ಅಧೋಮುಖಸ್ಥಿತಂ ಚಾಪಿ ಬುಧಾಃ ಪ್ರಾಹುರಧೋಗತಂ ।**
**ಲಜ್ಜಾಯಾಂ ಚ ಪ್ರಯಾಣೇ ಚ ದುಃಖೇ ತಚ್ಚ ಪ್ರಯೋಜಯೇತ್　　॥೧೨॥**

**ಸರ್ವತೋ ಲೋಲನಾಚ್ಚೈವ ಪರಿಲೋಲಿತಮುಚ್ಯತೇ ।**
**ವ್ಯಾಧಿತೇ ಮೂರ್ಚ್ಛಿತೇ ಮತ್ತೇ ಭವೇತ್ತು ಪರಿಲೋಲಿತಂ　　॥ ೧೩ ॥**

---

೯–೧೧. ಒಂದು ಭುಜದ ಶಿಖರವನ್ನು ಮೇಲಕ್ಕೆ ಎತ್ತಿ ಕುತ್ತಿಗೆಯನ್ನು ಬಗ್ಗಿಸಿದಲ್ಲಿ, ನಿಕುಂಚಿತವೆಂಬ ಅಂಗಕ್ರಿಯೆಯುಂಟಾಗುತ್ತದೆ ಇದನ್ನು ಗರ್ವ ಕಾಲದಲ್ಲಿಯೂ, ವಿಲಾಸಕಾಲದಲ್ಲಿಯೂ ಪ್ರಯೋಗಿಸಬೇಕು ಕುತ್ತಿಗೆಯನ್ನು ಹಿಂದೆ ತಿರುಗಿಸಿದಲ್ಲಿ, ಪರಾವೃತ್ತವೆಂಬ ಅಂಗಕ್ರಿಯೆಯುಂಟಾಗುತ್ತದೆ ಇದನ್ನು ಹಿಂಭಾಗವನ್ನು ನೋಡುವಾಗ ಪ್ರಯೋಗಿಸಬೇಕು ಕುತ್ತಿಗೆಯನ್ನು ಮುಂಭಾಗಕ್ಕೆ ಮಾಡಿ ತಲೆಯನ್ನು ಮುಂದಕ್ಕೆ ಚಾಚಿದಲ್ಲಿ ಉತ್ಕ್ಷಿಪ್ತವೆಂಬ ಅಂಗಕ್ರಿಯೆ ಯುಂಟಾಗುತ್ತದೆ ಇದನ್ನು ತ್ವರೆಯ ಕಾಲದಲ್ಲಿಯೂ ದಿವ್ಯವಾದ ಅರ್ಥಲಾಭ ಉಂಟಾಗುವಾಗಲೂ ಪ್ರಯೋಗಿಸಬೇಕು

೧೨–೧೩. ಅಧೋಮುಖದಿಂದ ನಿಲ್ಲುವಿಕೆಯನ್ನು ಪಂಡಿತರು ಅಧೋಗತ ವೆಂದು ಹೇಳುತ್ತಾರೆ ಇದನ್ನು ನಾಚಿಗೆಗೊಳ್ಳುವ ಕಾಲದಲ್ಲಿಯೂ, ಪ್ರಯಾಣ ಕಾಲದಲ್ಲಿಯೂ, ದುಃಖ ಕಾಲದಲ್ಲಿಯೂ ಪ್ರಯೋಗಿಸಬೇಕು ತಲೆಯು ಎಲ್ಲಾ ಕಡೆಯಲ್ಲೂ ತಿರುಗಿದಲ್ಲಿ ಪರಿಲೋಲಿತವೆಂಬ ಅಂಗಕ್ರಿಯೆಯಾಗುತ್ತದೆ ಇದನ್ನು ವ್ಯಾಧಿಗ್ರಸ್ತನ, ಮತ್ತು ಮೂರ್ಛಿತನಾದವನ, ಹಾಗೂ ಮದ ಹೊಂದಿದವನ ವ್ಯಾಪಾರವನ್ನು ಅಭಿನಯಿಸುವಾಗ ಪ್ರಯೋಗಿಸಬೇಕು ಇದುವರಿಗೆ ಶಿರೋ ವ್ಯಾಪಾರದಿಂದ ಉಂಟಾಗುವ ಅಂಗಕ್ರಿಯೆಗಳನ್ನು ನಿನಗೆ ಹೇಳಿದ್ದಾಯಿತು

**ಏತತ್ತು ಶಿರಸಃ ಕರ್ಮ ಕಥಿತಂ ತೇ ನರಾಧಿಪ ।**
**ಅಂಚಿತಂ ರೇಚಿತಂ ಮುಕ್ತಂ ವಿವೃತಂ ಚತುರಂ ತಥಾ ॥ ೧೪ ॥**

**ಪ್ರಸಾರಿತಂ ತಥಾ ಸ್ತಬ್ಧಂ ಗ್ರೀವಾಕರ್ಮಣಿ ನಿರ್ದಿಶೇತ್ ।**
**ಅಂಚಿತಂ ಕಿಂಚಿದೇಕಾಂಶ ಲೋಲನಾದ್ರೇಚಿತಂ ತು ತತ್ ॥ ೧೫ ॥**

**ರೇಚಿತಂ ಭ್ರಮಣಾನ್ಮುಕ್ತಂ ವಿವೃತಂ ಚಲಿತಂ ಚ ತತ್ ।**
**ಮಧುರಂ ಚತುರಂ ಪ್ರೋಕ್ತಮಾಯತಂ ಸ್ಯಾತ್ಪ್ರಸಾರಿತಂ ॥ ೧೬ ॥**

**ಸ್ತಬ್ಧಂ ಸ್ತಬ್ಧಂ ತಥಾ ಪ್ರೋಕ್ತಂ ಶಿರಃ ಕರ್ಮಾನುಗಾಮಿ ಚ ।**
**ಅಂಚಿತಂ ಸ್ಯಾದ್ವಿಲಾಸಾದೌ ರೇಚಿತಂ ಮಂಡಲೇಕ್ಷಣೇ ॥ ೧೭ ॥**

**ಮುಕ್ತಂ ಮೂರ್ಚ್ಛಾದಿಯೋಗೇಷು ವಿವೃತ್ತಂ ಲಲಿತಾದಿಷು ।**
**ಸೌಮ್ಯಭಾವೇ ತು ಚತುರಂ ದೃಷ್ಟ್ವಾ ಕಾರ್ಯಂ ಪ್ರಸಾರಿತಂ ॥ ೧೮ ॥**

---

೧೪-೧೬ ಅಂಚಿತ, ರೇಚಿತ, ಮುಕ್ತ, ವಿವೃತ, ಚತುರ, ಪ್ರಸಾರಿತ, ಸ್ತಬ್ಧ ಇವು ಕುತ್ತಿಗೆಯ ವ್ಯಾಪಾರದಿಂದ ಉಂಟಾಗುವ ಅಂಗಕ್ರಿಯೆಗಳು ಅಂಚಿತವೆಂಬುದು ಕುತ್ತಿಗೆಯನ್ನು ಕೊಂಚ ಅಂಶದಿಂದ ವಕ್ರತೆಯುಂಟುಮಾಡಿದಲ್ಲಿ ಉಂಟಾಗುತ್ತದೆ ಭ್ರಮಣವಿಲ್ಲದಿರುವುದೇ ರೇಚಿತ, ಚಲಿತವಾದಲ್ಲಿ ವಿವೃತ, ರಮ್ಯವಾದ ಅಂಗಕ್ರಿಯೆಯೇ ಚತುರವೆನಿಸುತ್ತದೆ ವಿಸ್ತಾರಮಾಡಿದಲ್ಲಿ ಪ್ರಸಾರಿತವೆನಿಸುತ್ತದೆ

೧೭-೧೮ ಆಯಾಯ ಕಾರ್ಯಕ್ಕೆ ತಕ್ಕಂತೆ ಶಿರಸ್ಸಿನ ಸ್ತಂಭೀಭಾವವು ಸ್ತಬ್ಧವೆಂದು ಹೇಳಲ್ಪಡುತ್ತದೆ ಇವುಗಳಲ್ಲಿ ಅಂಚಿತವೆಂಬುದನ್ನು ವಿಲಾಸವಿಷಯದಲ್ಲಿಯೂ, ರೇಚಿತವೆಂಬುದನ್ನು ಮಂಡಲದೃಷ್ಟಿಯಿಂದ ನೋಡುವಾಗಲೂ, ಮುಕ್ತವೆಂಬುದನ್ನು ಮೂರ್ಚ್ಛಾದಿಕಾಲಗಳಲ್ಲಿಯೂ, ವಿವೃತ್ತವೆಂಬುದನ್ನು ಶೃಂಗಾರ ಸಂದರ್ಭದಲ್ಲಿಯೂ, ಚತುರವೆಂಬುದನ್ನು ಸೌಮ್ಯಸ್ವಭಾವವನ್ನು ತೋರ್ಪಡಿಸುವಾಗಲೂ, ಪ್ರಸಾರಿತವೆಂಬುದನ್ನು ಕಟಾಕ್ಷಕಾಲದಲ್ಲಿಯೂ ಪ್ರಯೋಗಿಸಬೇಕು

ಸ್ತಬ್ಧಂ ಶೀತೇಽಥವಾ ವ್ಯಾಧಾವವಿಕಾರಿ ಸ್ವಭಾವತಃ ।
ವಿಬುದ್ಧಂ ವಿನಿವೃತ್ತಂ ಚ ನಿಭುಗ್ನಂ ಭುಗ್ನಮೇವ ಚ || ೧೯ ||

ವಿವೃತ್ತಂ ಚ ತಥೈವರ್ಜುಕರ್ಮಣ್ಯಸ್ಯ ವಿನಿರ್ದಿಶೇತ್ ।
ವ್ಯಾವೃತ್ತಂ ಸ್ಯಾದ್ವಿಬುದ್ಧಾಖ್ಯಂ ನಿವೃತ್ತಂ ಪಿಹಿತಂ ಭವೇತ್ || ೨೦ ||

ಅವಾಙ್ಮುಖಮವಾಭುಗ್ನಂ ನಿಭುಗ್ನಂ ಚೋರ್ಧ್ವಗಂ ತು ತತ್ ।
ಭುಗ್ನಂ ಸ್ಯಾದಾನತಂ ಕಿಂಚಿನ್ನಿವೃತ್ತಂ ವಿವೃತಂ ಭವೇತ್ || ೨೧ ||

ಋಜುಸ್ವಭಾವಸಂಸ್ಥಂ ಚ ತಯೋಃ ಕರ್ಮಾಣಿ ಚಕ್ಷ್ಮತೇ ।
ವಿರುದ್ಧವಾರಣೇ ಕಾರ್ಯಂ ನ್ಯೈವಮಿತ್ಯೇವಮಾದಿಷು || ೨೨ ||

ವಿನಿವೃತ್ತಮಸೂಯಾಯಾಮೀರ್ಷ್ಯಾಕೋಪಕೃತೇಷು ಚ ।
ವಿಭುಗ್ನಂ ಚಾಪಿ ವಿಜ್ಞೇಯಂ ಗಂಭೀರಾಲೋಕನಾದಿಷು || ೨೩ ||

---

೧೯–೨೦ ಯಾವ ವಿಕಾರವೂ ಇಲ್ಲದ ಸ್ವಾಭಾವಿಕವಾದ ಸ್ಥಿತಿಯು ಸ್ತಬ್ಧ ವೆನಿಸುತ್ತದೆ ಶೀತಕಾಲದಲ್ಲಿಯೂ, ವ್ಯಾಧಿಯಲ್ಲಿಯೂ ಇದನ್ನು ಪ್ರಯೋಗಿಸ ಬೇಕು, ಮತ್ತು ವಿಬುದ್ಧ, ವಿನಿವೃತ್ತ, ನಿಭುಗ್ನ, ಭುಗ್ನ, ವಿವೃತ್ತ ಇವೂ ಸಹ ಇವರ ಋಜುವ್ಯಾಪಾರಸಂದರ್ಭದಲ್ಲಿ ಪ್ರಯೋಗಿಸಲಾಗುತ್ತವೆ ಇವುಗಳಲ್ಲಿ ಹಿಂದಕ್ಕೆ ತಿರುಗಿಸುವಿಕೆಯೆಂಬ ಅಂಗಕ್ರಿಯೆಗೆ ವಿಬುದ್ಧವೆಂದೂ, ಕಣ್ಣುಮುಚ್ಚಿ ಕೊಂಡು ನಡಸುವ ಅಂಗಕ್ರಿಯೆಗೆ ನಿವೃತ್ತವೆಂದೂ, ಅಧೋಮುಖವಾಗಿ ಮಾಡುವ ಅಂಗಕ್ರಿಯೆಗೆ ಆಭುಗ್ನವೆಂದೂ, ಮೇಲ್ಮುಖತೆಗೆ ನಿಭುಗ್ನವೆಂದೂ, ಸ್ವಲ್ಪ ಕೆಳಮುಖ ವಾದಲ್ಲಿ ಭುಗ್ನವೆಂದೂ, ಹಾಗೆಯೇ ಸ್ವಲ್ಪ ತಿರುಗಿಸಿದಲ್ಲಿ ವಿವೃತವೆಂದೂ ಆಗುತ್ತವೆ

೨೧–೨೩ ಇವುಗಳ ವ್ಯಾಪಾರಗಳು ಋಜುವಾಗಿಯೂ, ಕೆಲವು ಸ್ವಾಭಾವಿಕ ವಾಗಿಯೂ ಇರುತ್ತವೆ ಎಂದು ಹೇಳಲಾಗಿದೆ ವಿರುದ್ಧವಾದ ವಿಷಯವನ್ನು ಹೀಗೆ ಮಾಡಕೂಡದು ಎಂದು ತಡೆಯುವ ಸಂದರ್ಭದಲ್ಲಿಯೂ, ಅಸೂಯಾಕಾಲದಲ್ಲಿಯೂ ಅಸೂಯೆಯಿಂದುಂಟಾದ ಕೋಪವ್ಯಾಪಾರಗಳಲ್ಲಿಯೂ ಸಹ ವಿವೃತ್ತವೆಂಬ ಅಂಗಕ್ರಿಯೆಯು ಉಪಯೋಗಿಸಲ್ಪಡುವುದು ವಿಭುಗ್ನವೆಂಬುದು ಗಂಭೀರವಾದ ನೋಟದಲ್ಲಿ ವಿನಿಯೋಗಿಸಲ್ಪಡುತ್ತದೆ

ಭುಗ್ನಂ ತು ಲಜ್ಜಿತೇ ಯೋಜ್ಯಂ ಯತೀನಾಂ ತು ಸ್ವಭಾವತಃ ।
ನಿವೃತ್ತಂ ಚಾಪಿ ಕರ್ತವ್ಯಂ ಹಾಸ್ಯಶೋಕಭಯಾದಿಷು ॥ ೨೪ ॥

ಋಜುಸ್ವಭಾವಸಂಸ್ಥಾನೇ ಕರ್ತವ್ಯಂ ಯದುನಂದನ ।
ಆಭುಗ್ನಮಥ ನಿರ್ಭುಗ್ನಂ ತಥಾಚೈವ ಪ್ರಕಂಪಿತಂ ॥ ೨೫ ॥

ಉದ್ವಾಹಿತಂ ಸಮಂ ಚೈವ ಪಂಚಧೋರಃ ಪ್ರಕೀರ್ತಿತಂ ।
ಧಾರ್ಯತೇ ಯಚ್ಚ ನಿರ್ಭುಗ್ನಂ ತದಾಭುಗ್ನಂ ಪ್ರಕೀರ್ತಿತಂ ॥ ೨೬ ॥

ಶಸ್ತ್ರಕ್ಷತೇ ವಿಘಾತೇ ಚ ಹೃದ್ರೋಗೇ ಚ ತದಿಷ್ಯತೇ ।
ಸ್ತಬ್ಧಂ ಚ ನಿಮ್ನಪೃಷ್ಠಂ ಚ ನಿರ್ಭುಗ್ನಂ ನಾಮ ತತ್ ಸ್ಮೃತಂ ॥ ೨೭ ॥

ಸ್ತಂಭೇ ಸವಿಸ್ಮಯೇ ಮಾನೇ ವಿಷಾದೇ ಚ ತಥೇಷ್ಯತೇ ।
ಉರಸಸ್ತೂರ್ಧ್ವವಿಕ್ಷೇಪಃ ಪ್ರಕಂಪಿತಮಿಹೋಚ್ಯತೇ ॥ ೨೮ ॥

---

೨೪-೨೫ ಭುಗ್ನವೆಂಬುದನ್ನು ಲಜ್ಜೆಯುಳ್ಳವನ ವಿಷಯದಲ್ಲಿ ಯೋಜಿಸಬೇಕು ಯತಿಗಳ ವಿಷಯದಲ್ಲಿ ಮಾತ್ರ ಸ್ವಾಭಾವಿಕವಾದ ಸ್ಥಿತಿಯಲ್ಲಿ ಯೋಜಿಸಬೇಕು ನಿವೃತ್ತವೆಂಬುದನ್ನು ಋಜುವಾಗಿಯೂ, ಸ್ವಾಭಾವಿಕವಾಗಿಯೂ ಇರುವ ಸ್ಥಿತಿಯಲ್ಲಿಯೂ, ಹಾಸ್ಯ, ಶೋಕ, ಭಯ ಇಂತಹ ಸಂದರ್ಭಗಳಲ್ಲಿಯೂ ಉಪಯೋಗಿಸಬೇಕು ಆಭುಗ್ನ, ನಿರ್ಭುಗ್ನ, ಪ್ರಕಂಪಿತ, ಉದ್ವಾಹಿತ, ಸಮ ಎಂಬ ಈ ಅಂಗಕ್ರಿಯೆಗಳು ತಡೆಯುವಿಕೆಯಲ್ಲಿ ಹೇಳಲ್ಪಟ್ಟಿವೆ

೨೬-೨೮ ತಲೆಯನ್ನು ಕೆಳಮುಖವಾಗಿ ಬಗ್ಗಿಸಿಕೊಂಡು ತಡದು ಸಹಿಸುವ ಸ್ಥಿತಿಗೆ ಆಭುಗ್ನವೆಂದು ಹೆಸರು ಇದು ಶಸ್ತ್ರದಿಂದ ಗಾಯಹೊಂದಿದ ಕಾಲದಲ್ಲಿಯೂ, ಪರಸ್ಪರ ಘಾತದಲ್ಲಿಯೂ, ಹೃದಯರೋಗವಿರುವಾಗಲೂ ಉಪಯೋಗಿಸಲ್ಪಡುತ್ತದೆ. ಬೆನ್ನನ್ನು ತಗ್ಗಿಸಿ ಸ್ತಬ್ಧತೆಯಿಂದ ತಡೆಯುವ ಸ್ಥಿತಿಗೆ ನಿರ್ಭುಗ್ನವೆಂದು ಹೆಸರು ಇದನ್ನು ನಿರ್ವ್ಯಾಪಾರಕಾಲದಲ್ಲಿಯೂ, ಆಶ್ಚರ್ಯ, ಮಾನ ದುಃಖ ಇವುಗಳನ್ನು ತೋರ್ಪಡಿಸುವಾಗಲೂ ಉಪಯೋಗಿಸಬೇಕು ಎದೆಯನ್ನು ಮೇಲ್ಮುಖವಾಗಿ ಮಾಡುವ ಅಂಗಕ್ರಿಯೆಗೆ ಪ್ರಕಂಪಿತವೆಂದು ಹೇಳಲಾಗುತ್ತದೆ ಇದನ್ನು ಹಾಸ್ಯಕಾಲದಲ್ಲಿಯೂ, ಸಂತೋಷದಲ್ಲಿಯೂ ಶ್ರಮ, ವ್ಯಾಧಿ, ಭಯ ಇವುಗಳಲ್ಲಿಯೂ ಪ್ರಯೋಗಿಸಬೇಕು

ಹಸಿತೇ ರುಚಿತೇ ಕಾರ್ಯಂ ಶ್ರಮೇ ವ್ಯಾಧಿಭಯೇ ತಥಾ ।
ಉದ್ವಾಹಿತಂ ಯದೂರ್ಧ್ವಂ ತು ತದುದ್ವಾಹಿತಮುಚ್ಯತೇ ॥ ೨೯ ॥

ಊರ್ಧ್ವಂ ನಿಗಮಿತೇ ಕಾರ್ಯಂ ಜೃಂಭಿತೇಷು ಪ್ರಯೋಗತಃ ।
ಚತುರಸ್ರಂ ಸಮಂ ನಾಮ ವಿಜ್ಞೇಯಂ ಸೌಷ್ಠವೇಷು ತತ್ ॥ ೩೦ ॥

ಸಮುನ್ನತಂ ನತಂ ಚೈವ ಪ್ರಸಾರಿತವಿವರ್ತಿತೇ ।
ತಥಾಪಸೃತಮೇವಂ ಹಿ ಪಾರ್ಶ್ವಯೋಃ ಕರ್ಮ ಪಂಚಧಾ ॥ ೩೧ ॥

ಕಟಿಪಾರ್ಶ್ವಭುಜಾಂಸಾಂತೈರುನ್ನತೈಃ ಸ್ಯಾತ್ಸಮುನ್ನತಂ ।
ಕಟೀ ಯತ್ರ ಸುನಿರ್ಭುಗ್ನಾ ಪಾರ್ಶ್ವಂ ತದ್ವಿನತಂ ಭವೇತ್ ॥ ೩೨ ॥

ಪ್ರಸಾರಣಾದುಭಯತಃ ಪಾರ್ಶ್ವಯೋಃ ಸ್ಯಾತ್ಪ್ರಸಾರಿತಂ ।
ಪರಿವರ್ತನಾತ್ತ್ರಿಕಸ್ಯಾಪಿ ವಿವರ್ತಿತಮಿಹೇಷ್ಯತೇ ॥ ೩೩ ॥

ಅಸ್ಯ ಚೈವೋಪಗಮನಾದ್ಭವೇದಪಸೃತಂ ಪುನಃ ।
ನತಂ ತ್ವಪಸೃತೇ ಕಾರ್ಯಂ ಚೋನ್ನತಂ ತೂಪಸರ್ಪಿತೇ ॥ ೩೪ ॥

---

೨೯–೩೧ ಕತ್ತನ್ನು ಮೇಲ್ಮುಖವಾಗಿ ಮಾಡುವ ಅಂಗವ್ಯಾಪಾರಕ್ಕೆ ಉದ್ವಾಹಿತವೆಂದು ಹೆಸರು ಇದನ್ನು ಕಾರ್ಯವನ್ನು ಮುಗಿಸುವ ಕಾಲದಲ್ಲಿಯೂ, ಆಕಳಿಸುವ ಕಾಲದಲ್ಲಿಯೂ ಪ್ರಯೋಗಿಸಬೇಕು ನಾಲ್ಕು ಕಡೆಗಳಿಗೂ ಒಂದೇ ಸಮವಾಗಿ ಮಾಡುವ ಕುತ್ತಿಗೆಯ ವ್ಯಾಪಾರಕ್ಕೆ ಸಮವೆಂದು ಹೆಸರು ಇದನ್ನು ಕ್ರಿಯಾಸೌಷ್ಠವಕಾಲದಲ್ಲಿ ಪ್ರಯೋಗಿಸಬೇಕು ಸಮುನ್ನತ, ನತ, ಪ್ರಸಾರಿತ, ವಿವರ್ತಿತ, ಅಪಸೃತ ಎಂಬ ಈ ಐದು ಕರ್ಮಗಳು ಪಾರ್ಶ್ವಗಳ ಕ್ರಿಯೆಗಳಾಗುತ್ತವೆ

೩೨–೩೪ ಸೊಂಟ, ಪಾರ್ಶ್ವ, ಭುಜದ ಮೇಲ್ಭಾಗ ಇವನ್ನು ಉನ್ನತಿಗೊಳಿಸಿ ಮಾಡುವ ಪಾರ್ಶ್ವಾಂಗಕ್ರಿಯೆಗೆ ಸಮುನ್ನತವೆಂದು ಹೆಸರು ಸೊಂಟವು ಬಹಳ ಕುಗ್ಗಿದಲ್ಲಿ ಅಂತಹ ಪಾರ್ಶ್ವಕ್ರಿಯೆಗೆ ವಿನತವೆಂದು ಹೆಸರು ಎರಡು ಪಾರ್ಶ್ವಗಳನ್ನೂ ವಿಸ್ತಾರಮಾಡಿದಲ್ಲಿ ಪ್ರಸಾರವೆನಿಸುತ್ತದೆ ಬೆನ್ನಿನ ಕೆಳಭಾಗವನ್ನು ತಿರುಗಿಸಿದಲ್ಲಿ ಅದೂ ವಿವರ್ತಿತವೆನಿಸುತ್ತದೆ ಅದನ್ನು ಪುನಃ ಮೊದಲಿದ್ದಂತೆಯೇ ಹೊಂದಿದಲ್ಲಿ ಅಪಸೃತವಾಗುತ್ತದೆ ಈ ಅಪಸೃತದಲ್ಲಿ ಪಾರ್ಶ್ವಪ್ರದೇಶವು ಬಗ್ಗಿಸಲ್ಪಡಬೇಕು ಉಪಸರ್ಪಿತದಲ್ಲಿ ಎತ್ತರಿಸಲ್ಪಡಬೇಕು

ಪ್ರಸಾರಿತೇ ಪ್ರಹರ್ಷಾದೌ ತ್ರಾಸೇ ಚಾಪಸೃತೇ ಪುನಃ ।
ವಿವರ್ತಿತಂ ವಿವರ್ತೇ ಚ ಕಾರಣಂ ಪಾರ್ಶ್ವಮುಚ್ಯತೇ ॥ ೩೫ ॥

ಕ್ಷಾಮಂ ನಿಮ್ನಂ ಚ ಪೂರ್ಣಂ ಚ ಸಂಪ್ರೋಕ್ತಮುದರಂ ತ್ರಿಧಾ ।
ಕ್ಷಾಮಂ ತು ಹಸಿತೇ ಕಾರ್ಯಂ ತಥಾ ಚೈವ ವಿಜೃಂಭಿತೇ ॥ ೩೬ ॥

ವ್ಯಾಧಿತೇ ತಪಸಿ ಶ್ರಾಂತೇ ಕ್ಷುಧಾರ್ತೇ ನಿಮ್ನಮೇವ ಚ ।
ಪೂರ್ಣಂ ನಿಃಶ್ವಸಿತೇ ಚೈವ ಹ್ಯಾರೋಗ್ಯೇ ಲಲಿತಂ ತಥಾ ॥ ೩೭ ॥

ಪ್ರಕಂಪಿತಾ ಚ ಛಿನ್ನಾ ಚ ನಿವೃತ್ತಾ ರೇಚಿತಾ ತಥಾ ।
ಉದ್ವಾಹಿತಾ ಚೈವ ಕಟಿರ್ನೃತ್ತೇ ಪಂಚವಿಧಾ ಸ್ಮೃತಾ ॥ ೩೮ ॥

ತಿರ್ಯಗ್ಗತಾಗತಾ ಕ್ಷಿಪ್ರಂ ವಿಜ್ಞೇಯಾ ವಪ್ರಕಂಪಿತಾ ।
ಮಧ್ಯಸ್ಥವಲನಾಚ್ಚೈವ ಛಿನ್ನಾ ಸಂಪರಿಕೀರ್ತಿತಾ ॥ ೩೯ ॥

---

೩೫-೩೭ ಪ್ರಸಾರಿತವೆಂಬ ಅಂಗಕ್ರಿಯೆಯಲ್ಲಿಯೂ, ಹರ್ಷಾದಿಸಂದರ್ಭದಲ್ಲೂ, ಭಯದಲ್ಲಿಯೂ, ಅಪಸೃತವೆಂಬ ಅಂಗಕ್ರಿಯೆಯಲ್ಲಿಯೂ, ವಿವರ್ತದಲ್ಲಿಯೂ, ಪಾರ್ಶ್ವವಿವರ್ತನವೇ ಕಾರಣವಾಗುತ್ತದೆ ಉದರದ (ಹೊಟ್ಟೆಯ) ಕ್ರಿಯೆಯು ಕ್ಷಾಮ, ನಿಮ್ನ, ಪೂರ್ಣವೆಂದು ಮೂರು ವಿಧವಾಗಿರುತ್ತದೆ ಕ್ಷಾಮವೆಂಬ ಕ್ರಿಯೆಯನ್ನು ನಗುವ ಮತ್ತು ಆಕಳಿಸುವ ಪ್ರಸಂಗದಲ್ಲಿಯೂ, ನಿಮ್ನವೆಂಬ ಕ್ರಿಯೆಯನ್ನು ವ್ಯಾಧಿಗ್ರಸ್ತನಾದ ಮತ್ತು ತಪಸ್ಸಿನಲ್ಲಿ ನಿರತನಾಗಿರುವವನ ಮತ್ತು ಶ್ರಮಪಟ್ಟಿರುವವನ ಹಾಗೂ ಹಸಿವಿನಿಂದ ದುಃಖಗೊಂಡಿರುವವನ ಅಭಿನಯ ಸಂದರ್ಭದಲ್ಲಿ ಪ್ರಯೋಗಿಸಬೇಕು ಪೂರ್ಣವೆಂಬ ಅಂಗಕ್ರಿಯೆಯನ್ನು ನಿಃಶ್ವಾಸಕಾಲದಲ್ಲಿಯೂ, [1]ಲಲಿತವೆಂಬುದನ್ನು ಆರೋಗ್ಯಕಾಲದಲ್ಲಿಯೂ ಪ್ರಯೋಗಿಸಬೇಕು

೩೮-೪೦ ಪ್ರಕಂಪಿತಾ, ಛಿನ್ನಾ, ನಿವೃತ್ತಾ, ರೇಚಿತಾ, ಉದ್ವಾಹಿತಾ, ಎಂಬ ಐದು ವ್ಯಾಪಾರಗಳಿಂದ ನೃತ್ತದಲ್ಲಿ ಆಸಕ್ತವಾದ ಸೊಂಟದ ಕ್ರಿಯೆಯೂ ಐದು ವಿಧವಾಗುತ್ತದೆ. ತ್ವರಿತದಿಂದ ಅಡ್ಡವಾಗಿ ಉಂಟಾಗುವ ಸೊಂಟದ ಗಮನಾಗಮನಕ್ರಿಯೆಯು ಪ್ರಕಂಪಿತಾ ಎಂದು ಕರೆಯಲ್ಪಡುತ್ತದೆ ಸಾಮಾನ್ಯವಾದ

---

[1] ಇಲ್ಲಿ ಲಲಿತವೆಂಬ ಅಂಗಕ್ರಿಯೆಯು ಹಿಂದೆ ಹೇಳಿರುವ ಗಣನೆಯಲ್ಲಿ ಸೇರಿಲ್ಲ

ಪರಾಙ್ಮುಖಸ್ಯಾಭಿಮುಖೀ ನಿವೃತ್ತಾ ಪರಿಕೀರ್ತಿತಾ ।
ಸರ್ವತೋ ಭ್ರಮಣಾಚ್ಚೈವ ರೇಚಿತೇತ್ಯಭಿಧೀಯತೇ ॥ ೪೦ ॥

ನಿಶ್ಚಿತೋದ್ವಾಹನಾಚ್ಚೈವ ತಥೈವೋದ್ವಾಹಿತಾ ಮತಾ ।
ನೀಚವಾಮನಕುಬ್ಜಾನಾಂ ಗತೌ ಕಾರ್ಯಾ ಪ್ರಕಂಪಿತಾ ॥ ೪೧ ॥

ವ್ಯಾಯಾಮೇ ತ್ವಥ ಸಂಪ್ರಾಪ್ತೇ ವ್ಯಾವೃತ್ತಪ್ರೇಕ್ಷಿತೇಷು ಚ ।
ಛಿನ್ನಾ ಕಾರ್ಯಾ ಕಟಿಸ್ತಜ್ಜ್ಞೈಃ ನಿವೃತ್ತಾ ವರ್ತಿತೇಷು ಚ ॥ ೪೨ ॥

ರೇಚಿತಾ ರೇಚಿತೇ ಕಾರ್ಯಾ ಅನ್ಯಾ ಲೀಲಾಗತೇ ತ್ರಿಧಾ ।
ಕಂಪನಂ ವಲನಂ ಚೈವ ಸ್ತಂಭನೋದ್ವರ್ತನೇ ತಥಾ ॥ ೪೩ ॥

ವಿವರ್ತನಂ ಚ ಪಂಚೈವ ಊರ್ವೋಃ ಕರ್ಮಾಣಿ ನಿರ್ದಿಶೇತ್ ।
ನಮನೋನ್ನಮನೇ ಸ್ಯಾತಾಂ ಮಹೀಪೃಷ್ಠೇಽದ್ಭುತೇ ಯದಾ ॥ ೪೪ ॥

---

ಅಂತಹ ಗತಾಗತಕ್ರಿಯೆಯು ಛಿನ್ನಾ ಎನಿಸುತ್ತದೆ ಪರಾಙ್ಮುಖನಾದವನಿಗೆ ಅಭಿಮುಖವಾದ ಅಂತಹ ಕ್ರಿಯೆಯು ನಿವೃತ್ತಾ ಎಂದು ಹೇಳಲ್ಪಡುತ್ತದೆ ಎಲ್ಲಾ ಕಡೆಯಲ್ಲಿಯೂ, ಭ್ರಮಣ ಉಂಟಾದಲ್ಲಿ ರೇಚಿತವೆನಿಸುತ್ತದೆ ಒಂದೇ ರೀತಿಯಲ್ಲಿ ಸ್ಥಿರವಾದ ಅಂತಹ ಧಾರಣವು ಉದ್ವಾಹಿತಾ ಎನಿಸುತ್ತದ

೪೧-೪೨ ಪ್ರಕಂಪಿತಾ ಎಂಬ ಕಟಿಯ ಕ್ರಿಯೆಯನ್ನು ನೀಚಜನರ ಮತ್ತು ಸ್ವಾಭಾವಿಕವಾಗಿ ಕುಳ್ಳರಾಗಿರುವವರ ಮತ್ತು ಸ್ವಲ್ಪಮಟ್ಟಿಗೆ ವ್ಯಾಧ್ಯಾದಿಗಳಿಂದ ಕುಳ್ಳಾಗಿರುವವರ ಗಮನವನ್ನು ಅಭಿನಯಿಸುವ ಸಂದರ್ಭದಲ್ಲಿ ಪ್ರಯೋಗಿಸಬೇಕು ವ್ಯಾಯಾಮಕಾಲದಲ್ಲಿಯೂ ಹಿಂದೆ ತಿರುಗಿನೋಡುವಾಗಲೂ, ಛಿನ್ನಾ ಕಟಿಕ್ರಿಯೆಯನ್ನು ಪ್ರಯೋಗಿಸಬೇಕು ಬಾರಿಬಾರಿಗೂ ನಡೆಸುವ ಕ್ರಿಯೆಯಲ್ಲಿ ನಿವೃತ್ತಾ ಎಂಬ ವ್ಯಾಪಾರವನ್ನೂ ಚಲನಕಾಲದಲ್ಲಿ ರೇಚಿತಾ ಎಂಬುದನ್ನೂ, ವಿಲಾಸ ಗಮನದಲ್ಲಿ ಉದ್ವಾಹಿತ ಎಂಬ ಕ್ರಿಯೆಯನ್ನೂ ಪ್ರಯೋಗಿಸಬೇಕು ಇದು ಮೂರು ವಿಧವಾಗಿರುತ್ತದೆ

೪೩-೪೪ ತೊಡೆಗಳ ವ್ಯಾಪಾರದಿಂದ ಉಂಟಾಗುವ ಅಂಗಕ್ರಿಯೆಗಳು ಕಂಪನ, ವಲನ, ಸ್ತಂಭನ, ಉದ್ವರ್ತನ, ವಿವರ್ತನ ಎಂದು ಐದುವಿಧವಾಗುತ್ತವೆ ಭೂಮಿಯ ಮೇಲೆ ನಿಂತು ಆಶ್ಚರ್ಯವನ್ನು ಅನುಭವಿಸುವಾಗ ತೊಡೆಗಳಲ್ಲಿ ಮೇಲಕ್ಕೂ ಕೆಳಕ್ಕೂ ನಮನೋನ್ನಮನ ವ್ಯಾಪಾರವು ಸಂಭವಿಸಿದಲ್ಲಿ ಆಗ ಕಾಲಿನತುದಿಯಿಂದ

ಸ್ಥಿತಾ ಪಾದತಲಾಗ್ರೇಣ ಕಂಪಿತಂ ತತ್ತ್ವದಿಷ್ಯತೇ ।
ಗಚ್ಛೇದಭ್ಯಂತರಂ ಜಾನು ಶನೈರ್ಯದ್ವಲಿತಂ ತು ತತ್ ॥ ೪೫ ॥

ಸ್ತಂಭನಂ ಚಾಪಿ ವಿಜ್ಞೇಯಮಪವೃತ್ತಕ್ರಿಯಾಕುಲಂ ।
ವಲಿತಾವಿದ್ಧಭಾವಂ ಸ್ಯಾದುದ್ವರ್ತನಮಥಾಪಿ ಚ ॥ ೪೬ ॥

ಪಾರ್ಷ್ಣಿರಭ್ಯಂತರಂ ಗಚ್ಛೇದ್ಯತ್ರ ತತ್ರ ವಿವರ್ತಿತಂ ।
ಗತಿಷ್ವಧಮಪಾತ್ರಾಣಾಂ ಕಂಪಿತಂ ಸಂಪ್ರಯೋಜಯೇತ್ ॥ ೪೭ ॥

ವಲನಂ ಚೈವ ಕರ್ತವ್ಯಂ ಸ್ತ್ರೀಣಾಂ ಸ್ವೈರಪರಿಕ್ರಮೇ ।
ಭೀಮೋ[1]ರ್ಧಸವಿಷಾದೇಷು ಸ್ತಂಭನಂ ಸಂಪ್ರಯೋಜಯೇತ್ ॥ ೪೮ ॥

ವ್ಯಾಯಾಮೇ ತಾಂಡವೇ ಚೈವ ಕಾರ್ಯಮುದ್ವರ್ತನಂ ತಥಾ ।
ವಿವರ್ತನಂ ಚ ಕರ್ತವ್ಯಂ ಸಂಕ್ರಮಾದಿಪರಿಕ್ರಮೇ ॥ ೪೯ ॥

---

ನಿಲ್ಲುವಿಕೆಯೇ ಕಂಪಿತವೆಂದು ಹೇಳಲಾಗುತ್ತದೆ ಒಂದು ಮಂಡಿಯನ್ನು ಮೆಲ್ಲಗೆ ಮತ್ತೊಂದು ತೊಡೆಯ ಸಮೀಪಕ್ಕೆ ಸೇರಿಸಿದುದೇ ಆದರೆ ಅದು ವಲಿತವೆಂಬ ಊರು ಕ್ರಿಯೆಯಾಗುತ್ತದೆ ತಿರುಗುವ ಕ್ರಿಯೆಯಿಂದ ಕೂಡಿದಲ್ಲಿ ಸ್ತಂಭನವೆನಿಸುತ್ತದೆ ಒಂದು ಕಡೆಗೆ ತಿರುಗೋಣದರಿಂದ ಕೌಟಿಲ್ಯವನ್ನು ಹೊಂದಿದಲ್ಲಿ ಉದ್ವರ್ತನವೆನಿಸು ತ್ತದೆ ಒಂದು ಪಾದದ ಹರಡಿನ ಹಿಂಭಾಗವು ಮತ್ತೊಂದು ತೊಡೆಯ ಸಮೀಪ ಹೊಂದಿದಲ್ಲಿ ವಿವರ್ತಿತವೆನಿಸುತ್ತದೆ

೪೭–೪೯ ಅಧಮಪಾತ್ರಗಳ ಗಮನಗಳಲ್ಲಿ ಕಂಪಿತವನ್ನು ಅಭಿನಯಿಸ ಬೇಕು ಸ್ತ್ರೀಯರ ಸ್ವಚ್ಛಂದಸಂಚಾರಗಳಲ್ಲಿ ವಲನವನ್ನು ಅಭಿನಯಿಸಬೇಕು ಭಯ, ಮೋಹ, ವಿಷಾದಸಂದರ್ಭದಲ್ಲಿ ಸ್ತಂಭನವನ್ನು ಪ್ರಯೋಗಿಸಬೇಕು ವ್ಯಾಯಾಮಕಾಲದಲ್ಲಿಯೂ ನರ್ತನದಲ್ಲಿಯೂ ಉದ್ವರ್ತನವನ್ನು ಪ್ರಯೋಗಿಸಬೇಕು ದುರ್ಗಪ್ರದೇಶಗಳ ಸಂಚಾರದಲ್ಲಿ ವಿವರ್ತನವನ್ನು ಪ್ರಯೋಗಿಸಬೇಕು

---

1 ಇಲ್ಲಿ ಪಾಠವು ಅಶುದ್ಧವಾಗಿದೆ

**ಆವರ್ತಿತಂ ನತಂ ಕ್ಷಿಪ್ತಂ ಚೋದ್ವಾಹಿತಮಥಾಪಿ ಚ ।**
**ಪರಿವೃತ್ತಂ ತಥಾ ಪಂಚ ಜಂಘಾಕರ್ಮಾಣಿ ನಿರ್ದಿಶೇತ್ ॥ ೫೦ ॥**

**ಆವರ್ತಿತಂ ತು ವ್ಯತ್ಯಾಸಾದ್ವಾಮದಕ್ಷಿಣಜಂಘಯೋಃ ।**
**ಜಾನ್ವೋರಾಕುಂಚನಾಚ್ಚೈವ ನತಂ ಜ್ಞೇಯಂ ಪ್ರಯೋಕ್ತೃಭಿಃ ॥ ೫೧ ॥**

**ವಿಕ್ಷೇಪಾಚ್ಚೈವ ಜಂಘಾಯಾಃ ಕ್ಷಿಪ್ತಮಿತ್ಯಭಿಧೀಯತೇ ।**
**ಉದ್ವಾಹಿತಂ ತು ವಿಜ್ಞೇಯಮೂರೂದ್ವಾಹನಕರ್ಮಣಾ ॥ ೫೨ ॥**

**ಪ್ರತೀಪನಯನಂ ಯತ್ರ ಪರಿವೃತ್ತಂ ತದಿಷ್ಯತೇ ।**
**ಆವರ್ತನಂ ಪ್ರಯೋಕ್ತವ್ಯಂ ವಿದೂಷಕಪರಿಕ್ರಮೇ ॥ ೫೩ ॥**

**ನತಂ ಚಾಪಿ ಹಿ ಕರ್ತವ್ಯಂ ಸ್ಥಾನಾಸನಗತಾದಿಷು ।**
**ಕ್ಷಿಪ್ತಂ ವ್ಯಾಯಾಮಯೋಗೇಷು ತಾಂಡವೇಷು ಪ್ರಯೋಜಯೇತ್ ॥೫೪॥**

---

೫೦–೫೨ ಆವರ್ತಿತ, ನತ, ಕ್ಷಿಪ್ತ, ಉದ್ವಾಹಿತ, ಪರಿವೃತ್ತ ಎಂಬ ಐದು ವ್ಯಾಪಾರಗಳನ್ನು ಮೊಣಕಾಲಿನ ಕರ್ಮಗಳೆಂದು ತಿಳಿಯಬೇಕು ಎಡ ಮತ್ತು ಬಲಭಾಗದ ಮೊಣಕಾಲುಗಳನ್ನು ವ್ಯತ್ಯಾಸಮಾಡಿ ನಿಂತಲ್ಲಿ ಇದು ಆವರ್ತಿತವೆಂಬ ಜಂಘಾಕರ್ಮವಾಗುತ್ತದೆ ಮಂಡಿಯನ್ನು ಕುಗ್ಗಿಸಿ ನಿಂತಲ್ಲಿ ನತವೆಂದು ತಿಳಿಯಬೇಕು. ಅದೇ ಮೊಣಕಾಲನ್ನು ಮೇಲಕ್ಕೆ ಎತ್ತಿದಲ್ಲಿ ಕ್ಷಿಪ್ತವೆನಿಸುತ್ತದೆ ತೊಡೆಯೊಡನೆ ಮೇಲಕ್ಕೆ ಎತ್ತಿದಲ್ಲಿ ಉದ್ವಾಹಿತವಾಗುತ್ತದೆ ಪರಾಙ್ಮುಖವಾಗಿ ತಿರುಗಿಸಿದಲ್ಲಿ ಪರಿವೃತ್ತವೆನಿಸುತ್ತದೆ

೫೩–೫೭ ಆವರ್ತನವೆಂಬ ಜಂಘಾಕರ್ಮವನ್ನು ವಿದೂಷಕನ ಸಂಚಾರಕಾಲದಲ್ಲಿಯೂ, ನತವೆಂಬುದನ್ನು ಕುಳಿತುಕೊಳ್ಳುವ ಮತ್ತು ನಿಲ್ಲುವ ಮತ್ತು ಗಮಿಸುವ ಕಾಲದಲ್ಲಿಯೂ, ಕ್ಷಿಪ್ತವೆಂಬುದನ್ನು ವ್ಯಾಯಾಮ ಮತ್ತು ಯೋಗವಿಷಯಲ್ಲಿಯೂ, ನರ್ತನದಲ್ಲಿಯೂ ಸಹ ಪ್ರಯೋಗಿಸಬೇಕು ಉದ್ವಾಹಿತವೆಂಬುದನ್ನು

ತಥಾಚೋದ್ಘಾಹಿತಂ ಕಾರ್ಯಂ ಆವಿದ್ಧಗಮನಾದಿಷು ।
ತಾಂಡವಾದೌ ಪ್ರಯೋಕ್ತವ್ಯಂ ಪರಿವೃತ್ತಂ ಪ್ರಯೋಕ್ತೃಭಿಃ ॥ ೫೫ ॥

ಉದ್ಘಾಟಿತಸಮಶ್ಚೈವ ಪಾದಾಗ್ರತಲಸಂಚರಃ ।
ಅಂಚಿತಃ ಕುಂಚಿತಶ್ಚೈವ ಪಾದಃ ಪಂಚವಿಧಃ ಸ್ಮೃತಃ ॥ ೫೬ ॥

ಸ್ಥಿತ್ವಾ ಪಾದತಲಾಗ್ರೇಣ ಪಾರ್ಷ್ಣಿರ್ಭೂಮೌ ನಿಪಾತ್ಯತೇ ।
ಯಸ್ಯ ಪಾದಸ್ಯ ಕರಣಾತ್ಸ ಉದ್ಘಾಟಿತ ಉಚ್ಯತೇ ॥ ೫೭ ॥

ಕಾರ್ಯೋಽನುರಕ್ತಕರಣೇ ಪ್ರಚಾರೇ ಲಲಿತೇ ತಥಾ ।
ಸ್ವಭಾವರಚಿತೋ ಭೂಮೌ ಸಮಸ್ಥಾನಃ ಸಮಃ ಸ್ಮೃತಃ ॥ ೫೮ ॥

ಏಷ ಕಾರ್ಯಃ ಸದಾ ಪಾದಃ ಸ್ವಭಾವಾಭಿನಯಾಶ್ರಯಃ ।
ಉತ್ಕ್ಷಿಪ್ತಾ ತು ಭವೇತ್ಪಾರ್ಷ್ಣಿಃ ಪಾದೇಽಗ್ರತಲಸಂಚರೇ ॥ ೫೯ ॥

---

ಕುಟಿಲವಾದ ಗತಿಯಲ್ಲೂ, ಪರಿವೃತ್ತವನ್ನು ತಾಂಡವವೆಂಬ ನರ್ತನ ಕಾಲದಲ್ಲಿಯೂ, ನಟರು ಪ್ರಯೋಗಿಸಬೇಕು ಉದ್ಘಾಟಿತ, ಸಮ, ಪಾದಾಗ್ರತಲಸಂಚಾರ, ಅಂಚಿತ, ಕುಂಚಿತ ಎಂದು ಪಾದ ಕ್ರಿಯೆಯು ಐದು ವಿಧವಾಗಿದೆ

೫೭-೬೦ ಒಂದು ಪಾದದ ಅಗ್ರಭಾಗದಿಂದ ನಿಂತು ಮತ್ತೊಂದು ಪಾದದ ಹಿಂಭಾಗವನ್ನು ಭೂಮಿಯಲ್ಲಿಯೂ ಊರಿದರೆ ಇಂತಹ ಪಾದಕ್ರಿಯೆಯು ಉದ್ಘಾಟಿತವೆನಿಸುತ್ತದೆ ಈ ಅಭಿನಯವನ್ನು ಅನುರಾಗ ಪ್ರಕಾಶನ ಕಾಲದಲ್ಲಿಯೂ, ವಿಲಾಸ ಸಂಚಾರ ಕಾಲದಲ್ಲಿಯೂ ಪ್ರಯೋಗಿಸಬೇಕು ಸ್ವಾಭಾವಿಕ ಸ್ಥಿತಿಯಿಂದ ಭೂಮಿಯಲ್ಲಿ ಸಮವಾಗಿ ಪಾದವಿನ್ಯಾಸ ಉಂಟಾದಲ್ಲಿ ಇದಕ್ಕೆ ಸಮವೆಂದು ಹೆಸರು. ಈ ಅಭಿನಯವನ್ನು ಸ್ವಾಭಾವಿಕ ಸ್ಥಿತಿಯನ್ನು ತೋರ್ಪಡಿಸುವಾಗ ಪ್ರಯೋಗಿಸಬೇಕು ಒಂದು ಪಾದದ ಅಗ್ರಭಾಗದಿಂದ ನಿಂತು ಹಿಂಭಾಗವು ಮೇಲಕ್ಕೆ ಎತ್ತಲ್ಪಟ್ಟಿರಬೇಕು ಇದಕ್ಕೆ ಪಾದಾಗ್ರತಲಸಂಚರವೆಂದು ಹೆಸರು. ಮಂಡಲಾಕಾರವಾಗಿ ಭ್ರಮಿಸಿ ನೆಲದಲ್ಲಿಡಲ್ಪಟ್ಟ ಮತ್ತೊಂದು ಪಾದದಿಂದ ವಿಲಾಸ ತಾಡನ

**ನಿಕ್ಷಿಪ್ತರೇಚಿತೇ ಭ್ರಾಂತೇ ಪಾದೇ ಯಸ್ತಾಡಿತೋ ಭವೇತ್ ।**
**ಲಲಿತ ಶ್ಚಾಯಮೇವಸ್ಯಾತ್ಪಾದೋ ರೇಚಿತಸಂಜ್ಞಿತಃ　　॥ ೬೦ ॥**

**ವಿಷಪ್ರಧಾನಸಂಚಾರೇ ಲಲಿತೋದ್ವಾಹಿತಂ ಭವೇತ್ ।**
**ಉತ್ಕ್ಷಿಪ್ತಾಗ್ರತಲಃ ಪಾದಃ ಕಥಿತಸ್ತು ತಥಾಂಚಿತಃ　　॥ ೬೧ ॥**

**ನಾನಾಭ್ರಮಣಕಾಲೇಷು ಕಾರ್ಯಃ ಪಾದೋಽಯಮಂಚಿತಃ ।**
**ಪಾದಃ ಕುಂಚಿತಮಧ್ಯೋಽಯಂ ಭವೇತ್ಕುಂಚಿತಸಂಜ್ಞಿತಃ　　॥ ೬೨ ॥**

**ಅತಿಕ್ರಾಂತಾಭಿಗಮನೇ ಪಾದಮೇತಂ ಪ್ರಯೋಜಯೇತ್ ।**
**ಏಕಪಾದಪ್ರಚಾರೋ ಯಃ ಸ ಚಾರೀತ್ಯೇವ ಸಂಜ್ಞಿತಃ　　॥ ೬೩ ॥**

**ದ್ವಿಪಾದಕ್ರಮಣಂ ಯತ್ರ ಕರಣಂ ನಾಮ ತದ್ಭವೇತ್ ।**
**ಕರಣಾನಾಂ ಸಮಾಯೋಗಃ ಖಂಡ ಇತ್ಯಭಿಧೀಯತೇ　　॥ ೬೪ ॥**

---

ಉಂಟಾದಲ್ಲಿ ಈ ವಿನ್ಯಾಸವೇ ರೇಚಿತವೆಂದೂ ಹೇಳಲ್ಪಡುತ್ತದ ಇದೇ ಮುಖ್ಯ ಸಂಚಾರವಾದಲ್ಲಿ ಲಲಿತೋದ್ವಾಹಿತವೆಂದು ಹೇಳಲ್ಪಡುತ್ತದೆ

೬೧–೬೫ ಪಾದದ ಮುಂಭಾಗವನ್ನು ಮೇಲಕ್ಕೆ ಎತ್ತಿದಲ್ಲಿ ಅದು ಅಂಚಿತವೆಂಬ ಪಾದಕ್ರಿಯೆಯಾಗುತ್ತದೆ ಈ ಅಂಚಿತವೆಂಬ ಪಾದನ್ಯಾಸವನ್ನು ನಾನಾವಿಧವಾದ ಭ್ರಮಣ ಕಾಲಗಳಲ್ಲಿ ಪ್ರಯೋಗಿಸಬೇಕು ಪಾದದ ಮಧ್ಯಭಾಗವನ್ನು ವಕ್ರಮಾಡಿದಲ್ಲಿ ಕುಂಚಿತವೆಂಬ ಪಾದಕ್ರಿಯೆಯಾಗುತ್ತದೆ ಅತಿಕ್ರಾಂತನಾದವನನ್ನು ಹಿಂಬಾಲಿಸಿ ಹೋಗುವಾಗ ಈ ಪಾದನ್ಯಾಸವನ್ನು ಪ್ರಯೋಗಿಸಬೇಕು ಒಂದೇ ಪಾದದಿಂದ ಉಂಟಾಗುವ ಸಂಚಾರಕ್ಕೆ ಚಾರೀ ಎಂದು ಹೆಸರು ಎರಡು ಪಾದದಿಂದಲೂ ಉಂಟಾಗುವ ಸಂಚಾರಕ್ಕೆ ಕರಣವೆಂದು ಹೆಸರು ಅನೇಕ ಕರಣಗಳ ಗುಂಪಿಗೆ ಖಂಡವೆಂದು ಹೆಸರು ಎರಡು ಅಥವಾ ಮೂರು ಮತ್ತು ನಾಲ್ಕು ಪಾದನ್ಯಾಸದಿಂದ ಕೂಡಿರುವ ಸಂಚಾರಕ್ಕೆ ಮಂಡಲವೆಂದು ಹೆಸರು ಇಲ್ಲಿಯವರೆಗೆ

ದ್ವಾಭ್ಯಾಂ ತ್ರಿಭಿರ್ವಾ ಯದಿವಾ ಚತುರ್ಭಿಃ
ಯುಕ್ತಂ ಭವೇನ್ಮಂಡಲಮೇವ ನಾಮ್ನಾ ।
ಇತ್ಯಂಗಕರ್ಮಾಭಿಹಿತಂ ಬ್ರವೀಮಿ
ನಿಬೋಧ ರಾಜಂಸ್ತ್ವಮುಪಾಂಗಕರ್ಮ ॥ ೬೫ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಅಂಗವರ್ಣನಂ ನಾಮ
ಚತುರ್ವಿಂಶತಿತಮೋಽಧ್ಯಾಯಃ

---

ಅಂಗಕರ್ಮಗಳನ್ನು ಈ ರೀತಿ ಹೇಳಿರುವೆನು ಇನ್ನು ಮುಂದೆ ಉಪಾಂಗಕರ್ಮಗಳನ್ನು ಹೇಳುತ್ತೇನೆ ಅದನ್ನೂ ಸಾವಧಾನವಾಗಿ ಕೇಳು—

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ಮೂರನೆಯ ಖಂಡದಲ್ಲಿ ಮಾರ್ಕಂಡೇಯ
ವಜ್ರ ಸಂವಾದದಲ್ಲಿ ಅಭಿಧಾನಕೋಶದಲ್ಲಿ ಅಂಗವರ್ಣನವೆಂಬ
ಇಪ್ಪತ್ತನಾಲ್ಕನೆಯ ಅಧ್ಯಾಯ ಮುಗಿದಿದೆ



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಪಂಚವಿಂಶತಿತಮೋಽಧ್ಯಾಯಃ ||

|| ಮಾರ್ಕಂಡೇಯ ಉವಾಚ ||

**ಕಾಂತಾ ಭಯಾನಕಾ ಹಾಸ್ಯಾ ಕರುಣಾಹ್ಯದ್ಭುತಾ ತಥಾ ।**
**ರೌದ್ರಾ ವೀರಾ ಚ ಬೀಭತ್ಸಾ ಶಾನ್ತಾ ಚ ರಸದೃಷ್ಟಯಃ || ೧ ||**

**ಸ್ನಿಗ್ಧಾ ಹೃಷ್ಟಾ ಚ ಜಿಹ್ಮಾ ಚ ಕ್ರುದ್ಧಾ ಭೀತಾ ಚ ಲಜ್ಜಿತಾ ।**
**ತೃಪ್ತಾಥ ವಿಸ್ಮಿತಾ ಸೌಮ್ಯಾ ಸ್ಥಾಯಿಭಾವೇಷು ದೃಷ್ಟಯಃ || ೨ ||**

**ಮಲಿನಾಕೇಕರಾ ಶ್ರಾನ್ತಾ ಚಾಭಿತಪ್ತಾಥ ವಿಪ್ಲುತಾ || ೩ ||**

---

### ಇಪ್ಪತ್ತೈದನೆಯ ಅಧ್ಯಾಯ.

೧-೨ ಮಾರ್ಕಂಡೇಯರು ಹೇಳುತ್ತಾರೆ —ಕಾಂತಾ, ಭಯಾನಕಾ, ಹಾಸ್ಯಾ, ಕರುಣಾ, ಅದ್ಭುತಾ, ರೌದ್ರಾ, ವೀರಾ, ಬೀಭತ್ಸಾ, ಶಾನ್ತಾ ಎಂದು ರಸಗಳಿಗೆ ಅಭಿವ್ಯಂಜಕವಾದ ಇತರ ದೃಷ್ಟಿಭೇದಗಳುಂಟು ಹಾಗೆಯೇ ಸ್ನಿಗ್ಧಾ, ಹೃಷ್ಟಾ, ಜಿಹ್ಮಾ, ಕ್ರುದ್ಧಾ, ಭೀತಾ, ಲಜ್ಜಿತಾ, ತೃಪ್ತಾ, ವಿಸ್ಮಿತಾ, ಸೌಮ್ಯಾ, ಇವು ಆಯಾಯ ಸ್ಥಾಯಿಭಾವಗಳಿಗೆ ಅಭಿವ್ಯಂಜಕವಾದ ದೃಷ್ಟಿಗಳು ಮತ್ತು

೩-೪ ಮಲಿನಾ, ಆಕೇಕರಾ, ಶ್ರಾನ್ತಾ, ಅಭಿತಪ್ತಾ, ವಿಪ್ಲುತಾ, ವಿಷಣ್ಣಾ, ತ್ರಸ್ತಾ, ಅಶೋಕಾ, ನಿಮೀಲಿತಾ, ವಿಭ್ರಾಂತಾ, ಕುಂಚಿತಾ, ಶೂನ್ಯಾ, ಮುಕ್ತುಲಾ,

**ವಿಷಣ್ಣಾ ಶಂಕಿತಾ ಚೈವ ತ್ರಸ್ತಾ ಶೋಕಾ ನಿಮೀಲಿತಾ ।**
**ವಿಭ್ರಾನ್ತಾ ಕುಂಚಿತಾ ಶೂನ್ಯಾ ಮುಕ್ತುಲಾ ಚ ವಿತರ್ಕಿತಾ ।**
**ಮದಿರಾ ಲಲಿತಾ ಗ್ಲಾನಾ ಇತ್ಯೇವಂ ದೃಷ್ಟಿಸಂಗ್ರಹಃ ॥ ೪ ॥**

**ಷಟ್‌ತ್ರಿಂಶದ್ದೃಷ್ಟಯೋ ಹ್ಯೇತಾ ನಾಮತೋಽಭಿಹಿತಾಮಯಾ ।**
**ಸಭ್ರೂಕ್ಷೇಪಕಟಾಕ್ಷಾ ತು ಕಾನ್ತಾ ಜ್ಞೇಯಾ ಸಮಂಜಸೀ ॥ ೫ ॥**

**ಉದ್ವೃತ್ತಪುಟಪಕ್ಷ್ಮಾಗ್ರಾ ಚಲತ್ತಾರಾ ಭಯಾನಕಾ ।**
**ಕಿಂಚಿದಾ ಕುಂಚಿತಪುಟಾ ಹಾಸ್ಯಾವಿಭ್ರಾನ್ತತಾರಕಾ ॥ ೬ ॥**

**ಪತಿತೋರ್ಧ್ವಪುಟಾ ಸಾಸ್ರಾ ಕರುಣಾ ನಷ್ಟತಾರಕಾ ।**
**ಕಿಂಚಿತ್ಕುಂಚಿತಪಕ್ಷ್ಮಾಗ್ರಾ ಕಿಂಚಿದುದ್ವೃತ್ತತಾರಕಾ ॥ ೭ ॥**

**ಸಮಾ ವಿಕಸಿತಾ ಚೈವ ಸಾದ್ಭುತಾ ದೃಷ್ಟಿರಿಷ್ಯತೇ ।**
**ಉದ್ಭೂತಾ ಕಥಿತಾ ರೌದ್ರಾ ಭ್ರುಕುಟೀಕುಟಿಲಾ ತಥಾ ॥ ೮ ॥**

---

ವಿತರ್ಕಿತಾ, ಮದಿರಾ, ಲಲಿತಾ, ಗ್ಲಾನಾ, ಎಂಬ ದೃಷ್ಟಿಗಳೂ ಉಂಟು ಇವನ್ನೂ, ಇಲ್ಲಿ ಸಂಗ್ರಹವಾಗಿ ತಿಳಿಸಲಾಗಿದೆ

೫-೬ ಈ ರೀತಿ ಮೂವತ್ತಾರು ದೃಷ್ಟಿಗಳನ್ನೂ ನಾಮನಿರ್ದೇಶಪೂರ್ವಕವಾಗಿ ಹೇಳಿದ್ದೇನೆ. ಇನ್ನುಮುಂದೆ ಇವುಗಳ ಲಕ್ಷಣಗಳನ್ನು ಹೇಳುತ್ತೇನೆ ಹುಬ್ಬುಗಳ ಚಲನದಿಂದ ಕೂಡಿದ ರಮ್ಯವಾದ ಕಟಾಕ್ಷವು ಕಾನ್ತಾ ಎಂಬ ದೃಷ್ಟಿಯಾಗುತ್ತದೆ ರೆಪ್ಪೆಗಳೂ ಅವುಗಳ ಮುಂಭಾಗಗಳೂ, ಮೇಲ್ಮುಖವಾಗಿದ್ದು ಗುಡ್ಡೆಗಳು ತ್ವರಯಿಂದ ಓಡಾಡುತ್ತಿದ್ದಲ್ಲಿ ಇದು ಭಯಾನಕಾ ಎಂಬ ದೃಷ್ಟಿಯಾಗುತ್ತದ ಸ್ವಲ್ಪಮುಚ್ಚಿದ ರೆಪ್ಪೆಗಳಿಂದ ಕೂಡಿ ಗುಡ್ಡೆಗಳು ಅಲುಗುತ್ತಿದ್ದಲ್ಲಿ ಹಾಸ್ಯಾ ಎಂಬ ದೃಷ್ಟಿಯಾಗುತ್ತದ ರೆಪ್ಪೆಗಳ ಮುಂಭಾಗವು ಕೆಳಮುಖವಾಗಿದ್ದಲ್ಲಿ ಕಣ್ಣೀರಿನಿಂದ ಕೂಡಿಯೂ ಗುಡ್ಡೆಗಳು ಕಾಣಿಸದೆಯೂ ಇರುವ ಆ ದೃಷ್ಟಿಯು ಕರುಣಾ ಎನಿಸುತ್ತದೆ

೭-೧೦ ರೆಪ್ಪೆಯ ಮುಂಭಾಗವು ಸ್ವಲ್ಪ ಸಂಕುಚಿತವಾಗಿದ್ದು ಸ್ವಲ್ಪಮಟ್ಟಿಗೆ ಗುಡ್ಡೆಗಳು ಓಡಾಡುತ್ತಿದ್ದು ಸಮವಾದ ವಿಕಾಸವನ್ನು ಹೊಂದಿರುವ ದೃಷ್ಟಿಯು ಅದ್ಭುತಾ ಎನಿಸುತ್ತದೆ ಬಹುಮಟ್ಟಿಗೂ ಪ್ರಕಾಶಹೊಂದಿ ಹುಬ್ಬುಗಳಿಂದ ವಕ್ರವಾಗಿದ್ದಲ್ಲಿ ರೌದ್ರಾ ಎಂದು ಹೇಳಲ್ಪಡುತ್ತದೆ ಮಧ್ಯಭಾಗದಲ್ಲಿ ವಿಕಾಸದಿಂದ ಕೂಡಿ,

ಉತ್ಫುಲ್ಲಮಧ್ಯಾ ವೀರಾ ತು ಕಥಿತಾ ಸಮತಾರಕಾ ।
ಬೀಭತ್ಸಾ ಕಥಿತಾ ದೃಷ್ಟಿಃ ಅಪಾಙ್ಗಕ್ಷಿಪ್ತತಾರಕಾ　　॥ ೯ ॥

ಧ್ಯಾನಾದನಿಮಿಷಾ ಶಾನ್ತಾ ಹ್ಯಧೋಮಾರ್ಗವಿಚಾರಿಣೀ ।
ವ್ಯಾಕೋಶಮಧ್ಯಾ ಮಧುರಾ ಸ್ನಿಗ್ಧಾ ಪ್ರಹಸಿತಾ ಮತಾ　　॥ ೧೦ ॥

ಉತ್ಫುಲ್ಲಮಧ್ಯಾ ಪ್ರಚಲಾ ಹೃಷ್ಟಾ ಪರ್ಯನ್ತವೀಕ್ಷಿಣೀ ।
ಜಿಹ್ಮಾಧೋಗತತಾರಾ ಚ ಗೂಢಾ ಮಗ್ನಾ ನಿರೀಕ್ಷಿಣೀ　　॥ ೧೧ ॥

ಭ್ರುಕುಟೀಕುಟಿಲಾ ಕ್ರುದ್ಧಾ ತಥಾ ನಿಸ್ತಬ್ಧತಾರಕಾ ।
ಆಕುಂಚಿತಾ ಲಜ್ಜಿತಾ ಸ್ಯಾತ್ತಥಾ ನಿಶ್ಚಲತಾರಕಾ　　॥ ೧೨ ॥

ಸತ್ತ್ವಮುದ್ಗಿರತೀವೇಷ್ಟಾ ತೃಪ್ತಾ ವಿಕಸಿತಾ ಭವೇತ್ ।
ಸಮಾ ವಿಕಸಿತಾಪಾಂಗಾ ವಿಸ್ಮಿತಾ ಸಾ ನಿಗದ್ಯತೇ　　॥ ೧೩ ॥

---

ಗುಡ್ಡೆಗಳು ಸಮವಾಗಿದ್ದಲ್ಲಿ ವೀರಾ ಎನಿಸುತ್ತದೆ ಗುಡ್ಡೆಗಳು ಕಡೆಗಣ್ಣಿನಲ್ಲಿಯೇ ನೇರಿರುವ ದೃಷ್ಟಿಯು ಭೀಭತ್ಸಾ ಎನಿಸುತ್ತದೆ ಧ್ಯಾನದಿಂದ ಎವೆಯಿಕ್ಕದೆ ಅಧೋಮುಖವಾಗಿ ವಿಚಾರದಿಂದ ಕೂಡಿದಲ್ಲಿ ಶಾನ್ತಾ ಎನಿಸುತ್ತದೆ ದೃಷ್ಟಿಯ ಮಧ್ಯಭಾಗವು ವಿಕಾಸದಿಂದಿದ್ದು ರಮ್ಯವಾಗಿಯೂ ಮಂದಹಾಸದಿಂದ ಕೂಡಿಯೂ ಇದ್ದಲ್ಲಿ ಇದು ಸ್ನಿಗ್ಧಾ ಎನಿಸುತ್ತದ

೧೧-೧೩ ಮಧ್ಯಭಾಗವು ಹೆಚ್ಚಾದ ವಿಕಾಸದಿಂದ ಕೂಡಿದ್ದು ಚಲಿಸುತ್ತಾ ಸುತ್ತಲೂ ಪ್ರಸರಿಸಿರುವ ದೃಷ್ಟಿಯು ಹೃಷ್ಟಾಎನಿಸುತ್ತದೆ ಅಪ್ರಕಾಶವಾಗಿಯೂ, ಲೀನವಾಗಿಯೂ ಇರುವ ಅಧೋಮುಖವಾದ ಗುಡ್ಡೆಗಳಿಂದ ಕೂಡಿ ವೀಕ್ಷಿಸುವ ದೃಷ್ಟಿಯು ಜಿಹ್ಮಾ ಎನಿಸುತ್ತದೆ ವಕ್ರವಾದ ಹುಬ್ಬುಗಳಿಂದ ಕೂಡಿ ಸ್ತಬ್ಧವಾದ ಗುಡ್ಡೆಗಳುಳ್ಳ ದೃಷ್ಟಿಯು ಕ್ರುದ್ಧಾ ಎನಿಸುತ್ತದೆ ಸಂಕುಚಿತವಾಗಿಯೂ ನಿಶ್ಚಲವಾದ ಗುಡ್ಡೆಗಳಿಂದ ಕೂಡಿಯೂ ಇರುವ ದೃಷ್ಟಿಯು ಲಜ್ಜಿತಾ ಎನಿಸುತ್ತದೆ ಸತ್ವಗುಣಕ್ಕೆ ಪ್ರಕಾಶಕವಾಗಿಯೂ, ವಿಕಸಿತವಾಗಿಯೂ, ಹಿತವಾಗಿಯೂ ಇರುವ ದೃಷ್ಟಿಯು ತೃಪ್ತಾ ಎನಿಸುತ್ತದೆ

ಸಮಾ ಸೌಮ್ಯಾ ವಿನಿರ್ದಿಷ್ಟಾ ತಥಾ ಚ ಸಮತಾರಕಾ ।
ಆಕುಂಚಿತಪುಟಾಭೀತಾ ರೂಕ್ಷಾ ವ್ಯಾವೃತ್ತತಾರಕಾ ॥ ೧೪ ॥

ಪುಟೌ ಪ್ರಸ್ಫುರಿತೌ ಯಸ್ಯಾ ಮಲಿನಾ ಸಾ ನಿಗದ್ಯತೇ ।
ಆಕುಂಚಿತಪುಟಾ ಯಾ ತು ದೃಷ್ಟಿರಾಕೇಕರಾ ಭವೇತ್ ॥ ೧೫ ॥

ಕಿಂಚಿದುನ್ನಾಮಿತಪುಟಾ ಶ್ರಾನ್ತಾ ಸಾ ತು ವಿಧೀಯತೇ ।
ಅಭಿತಪ್ತಾ ತಥಾ ಮಂದಾ ಮಂದತಾರಾಪುಟಾ ತು ಯಾ ॥ ೧೬ ॥

ವಿಪ್ಲುತಾ ವಿಪ್ಲುತಾ ಪ್ರೋಕ್ತಾ ಸಾಸ್ರಾ ವಿಸ್ಫುರಿತಾ ಚ ಯಾ ।
ಕಿಂಚಿನ್ನಿಷ್ಟಬ್ಧತಾರಾ ತು ವಿಷಣ್ಣಾ ದೃಷ್ಟಿರುಚ್ಯತೇ ॥ ೧೭ ॥

ಅನವಸ್ಥಿತತಾರಾ ಚ ಶಂಕಿತಾ ಪರಿಕೀರ್ತಿತಾ ।
ರೂಕ್ಷಾ ಲಲಿತತಾರಾ ಚ ತ್ರಸ್ತಾಖ್ಯಾ ಸಭಯಾ ಭವೇತ್ ॥ ೧೮ ॥

---

೧೪–೧೭ ಸಮವಾದ ಗುಡ್ಡೆಗಳಿಂದ ಕೂಡಿದ ಸಮದೃಷ್ಟಿಗೆ ಸೌಮ್ಯಾ ಎಂದು ಹೆಸರು ರೆಪ್ಪೆಗಳು ವಕ್ರವಾಗಿದ್ದು ಗುಡ್ಡೆಗಳು ತಿರುಗುತ್ತಾ ಭಯಂಕರವಾದ ದೃಷ್ಟಿಯು ಭೀತಾ ಎನಿಸುತ್ತದೆ ರೆಪ್ಪೆಗಳು ಸ್ಫುರಿಸುತ್ತಿದ್ದಲ್ಲಿ ಆ ದೃಷ್ಟಿಯು ಮಲಿನಾ ಎನಿಸುತ್ತದೆ ಸಂಕುಚಿತವಾದ ರೆಪ್ಪೆಗಳಿಂದ ಕೂಡಿದ ದೃಷ್ಟಿಯು ಆಕೇಕರಾ ಎನಿಸುತ್ತದೆ ಅದೇ ರೆಪ್ಪೆಗಳು ಸ್ವಲ್ಪ ಮೇಲಕ್ಕೆ ತೆರೆಯಲ್ಪಟ್ಟಿದ್ದಲ್ಲಿ ಶ್ರಾಂತಾ ಎಂಬ ದೃಷ್ಟಿಯಾಗುತ್ತದೆ ಗುಡ್ಡೆಗಳೂ, ರೆಪ್ಪೆಗಳೂ ಜಡವಾಗಿದ್ದು ಮಂದವಾದ ದೃಷ್ಟಿಯು ಅಭಿತಪ್ತಾ ಎನಿಸುತ್ತದೆ ಕಣ್ಣೀರಿನಿಂದ ಕೂಡಿ ಚಲಿತವಾದ ರೆಪ್ಪೆಗಳುಳ್ಳ ದೃಷ್ಟಿಗೆ ವಿಪ್ಲುತಾ ಎಂದು ಹೆಸರು ಸ್ವಲ್ಪಮಟ್ಟಿಗೆ ಸ್ತಬ್ಧವಾಗಿರುವ ಗುಡ್ಡೆಗಳಿಂದ ಕೂಡಿದ ದೃಷ್ಟಿಯು ವಿಷಣ್ಣಾ ಎನಿಸುತ್ತದೆ

೧೮–೨೦ ಅವ್ಯವಸ್ಥಿತಚಲನವುಳ್ಳ ಗುಡ್ಡೆಗಳಿಂದ ಕೂಡಿದ ದೃಷ್ಟಿಯು ಶಂಕಿತಾ ಎನಿಸುತ್ತದೆ ಭಯದಿಂದ ಕೂಡಿ ಪ್ರಸನ್ನವಾದ ಗುಡ್ಡೆಗಳಿದ್ದು ಅಶಾಂತ

---

1 ಇದು ಕ್ರುದ್ಧಾ ಎಂಬ ದೃಷ್ಟಿಯ ನಿರೂಪಣವಾದನಂತರ ಕ್ರಮಕ್ಕೆ ತಕ್ಕಂತೆ ಹಿಂದೆಯೇ ಸೇರಿರಬೇಕು

**ಉತ್ಫುಲ್ಲಾ ತು ವಿಶೋಕಾಖ್ಯಾ ತಥಾ ಚ ನಿಮಿಷೇಕ್ಷಣಾ ।**
**ಅನವಸ್ಥಿತನೇತ್ರಾ ಚ ವಿಭ್ರಾನ್ತಾ ಭ್ರಾನ್ತತಾರಕಾ　　॥ ೧೯ ॥**

**ಕುಂಚಿತಾ ಕುಂಚಿತಾ ದೃಷ್ಟಿಃ ಕಿಂಚಿದಂಚಿತತಾರಕಾ ।**
**ಸ್ಥಿರತಾರಾಪುಟಾ ಶೂನ್ಯಾ ಸಂಕ್ಷುಬ್ಧಾ ಸಮದರ್ಶನಾ　　॥ ೨೦ ॥**

**ಪ್ರಸ್ಪಂದಮಾನಪಕ್ಷ್ಮಾಗ್ರಾ ಮುಕುಲಾ ಮುಕ್ತಲಾ ಭವೇತ್ ।**
**ಉದ್ವೃತ್ತಪುಟಪಕ್ಷ್ಮಾ ತು ವಿತರ್ಕಾ ಸ್ತಬ್ಧತಾರಕಾ　　॥ ೨೦ ॥**

**ಉತ್ಫುಲ್ಲಾ ಮದಿರಾ ನಾಮ ತಥಾ ವಲಿತತಾರಕಾ ।**
**ಪುಲ್ಲಿತಾಂತಾ ಸಲಾವಣ್ಯಾ ಸಸ್ಮಿತಾ ಲಲಿತಾ ಮತಾ　　॥ ೨೨ ॥**

---

ವಾದ ದೃಷ್ಟಿಯು ತ್ರಸ್ತಾ ಎನಿಸುತ್ತದೆ ಸಂತೋಷದಿಂದ ಅರಳಿದ ದೃಷ್ಟಿಯು ಅಶೋಕಾ ಎನಿಸುತ್ತದೆ ರೆಪ್ಪೆಮುಚ್ಚಿದ ದೃಷ್ಟಿಗೆ ನಿಮೀಲಿತಾ ಎಂದು ಹೆಸರು ಕಣ್ಣುಗಳು ಅವ್ಯವಸ್ಥಿತವಾಗಿದ್ದು ಗುಡ್ಡೆಗಳು ತಿರುಗುತ್ತಿದ್ದಲ್ಲಿ ಆ ದೃಷ್ಟಿಯು ವಿಭ್ರಾಂತಾ ಎನಿಸುತ್ತದೆ ಸ್ವಲ್ಪಮಟ್ಟಿಗೆ ಮೇಲ್ಮುಖವಾದ ಗುಡ್ಡೆಗಳಿಂದ ಕೂಡಿ ಸಂಕುಚಿತವಾದ ದೃಷ್ಟಿಯು ಕುಂಚಿತಾ ಎನಿಸುತ್ತದೆ ಸ್ಥಿರವಾದ (ಚಲನವಿಲ್ಲದ) ಗುಡ್ಡೆಗಳಿಂದಲೂ ರೆಪ್ಪೆಗಳಿಂದಲೂ ಕೂಡಿ ಕ್ಷೋಭದಿಂದ ಸಮದೃಷ್ಟಿಯುಳ್ಳ ದೃಷ್ಟಿಯು ಶೂನ್ಯಾ ಎನಿಸುತ್ತದೆ

೨೧-೨೨ ಅದುರುತ್ತಿರುವ ರೆಪ್ಪೆಯ ಅಗ್ರಭಾಗದಿಂದ ಕೂಡಿ ಮೊಗ್ಗಿನಂತೆ ಸಂಕುಚಿತವಾಗಿದ್ದಲ್ಲಿ ಮುಕ್ತಲಾ ಎಂಬ ದೃಷ್ಟಿಯಾಗುತ್ತದೆ ಗುಡ್ಡೆಗಳು ನಿಶ್ಚಲವಾಗಿದ್ದು ಮೇಲ್ಮುಖವಾದ ರೆಪ್ಪೆಗಳುಳ್ಳದ್ದಾಗಿದ್ದರೆ ವಿವರ್ತಾ ಎಂಬ ದೃಷ್ಟಿಯಾಗುತ್ತದೆ ಚಲಿತವಾದ ಗುಡ್ಡೆಗಳಿಂದ ಕೂಡಿ ವಿಕಾಸಹೊಂದಿರುವ ದೃಷ್ಟಿಯು ಮದಿರಾ ಎನಿಸುತ್ತದೆ ಕಡೆಗಣ್ಣಿನ ಭಾಗಗಳು ವಿಕಾಸಹೊಂದಿದ್ದು ಮಂದಹಾಸದಿಂದ ಕೂಡಿದ ರಮ್ಯವಾದ ದೃಷ್ಟಿಯು ಲಲಿತಾ ಎನಿಸುತ್ತದೆ ರೆಪ್ಪೆಗಳಿಲ್ಲದೆ ಸಂಕುಚಿತವಾದ ದೃಷ್ಟಿಯು ಗ್ಲಾನಾ ಎನಿಸುತ್ತದೆ.

ಪ್ರಲೂನಪಕ್ಷ್ಮಾ ಸಾ ಸಾಗ್ರಾ ಗ್ಲಾನಾಖ್ಯಾ ಮುಕುಲೀಕೃತಾ ।
ಕಾಂತಾ ದೃಷ್ಟಿಃ ಕಟಾಕ್ಷೇ ತು ಘಾತನೇ ತು ಭಯಾನಕಾ ॥ ೨೩ ॥

ಹಾಸ್ಯಾ ಹಾಸ್ಯೇ ಚ ವಿಜ್ಞೇಯಾ ಕರುಣಾ ಕರುಣೇ ರಸೇ ।
ತ್ವದ್ಭುತೇ ಚಾದ್ಭುತಾ ಕಾರ್ಯಾ ರೌದ್ರೀ ರೌದ್ರೀ ವಿಧೀಯತೇ ॥ ೨೪ ॥

ವೀರಾ ವೀರೇ ಚ ಕರ್ತವ್ಯಾ ಬೀಭತ್ಸಾ ಚ ಜುಗುಪ್ಸಿತೇ ।
ಶಾನ್ತಾ ಶಾನ್ತೇ ತು ನಿರ್ದಿಷ್ಟಾ ಸ್ನಿಗ್ಧಾ ಸ್ನಿಗ್ಧಾವಲೋಕನೇ ॥ ೨೫ ॥

ಹೃಷ್ಟಾ ಹೃಷ್ಟೇ ತು ಕರ್ತವ್ಯಾ ಜಿಹ್ಮಾ ಕಾರ್ಯಾಭ್ಯಸೂಯಿತೆ ।
ಕ್ರುದ್ಧಾ ಕ್ರುದ್ಧೇ ತು ನಿರ್ದಿಷ್ಟಾ ಭೀತಾ ಭೀತೇ ತಥಾ ಭವೇತ್ ॥ ೨೬ ॥

ಲಜ್ಜಿತೇ ಲಜ್ಜಿತಾಖ್ಯಾ ಸ್ಯಾದ್ದೃಪ್ತೋತ್ಸಾಹಗತೇಷು ಚ ।
ವಿಸ್ಮಿತಾ ವಿಸ್ಮಯೇ ದೃಷ್ಟಿಃ ಸೌಮ್ಯಾ ಸೌಮ್ಯಾವಲೋಕನೇ ॥ ೨೭ ॥

ಮಲಿನಾ ವಿರಹೇ ಕಾರ್ಯಾ ಸಂಭೋಗೇಽಽಕೇಕರಾ ಭವೇತ್ ।
ಶ್ರಾನ್ತಾ ಶ್ರಾನ್ತಸ್ಯ ಕರ್ತವ್ಯಾ ನಿರ್ವೇದೇತ್ವಭಿತಪ್ತಕಾ ॥ ೨೮ ॥

---

೨೩–೨೬ ದರ್ಶನಕಾಲದಲ್ಲಿ ಕಾಂತಾ ಎಂಬ ದೃಷ್ಟಿಯನ್ನೂ, ಘಾತಕಾಲದಲ್ಲಿ ಭಯನಕದೃಷ್ಟಿಯನ್ನೂ, ಹಾಸ್ಯರಸದಲ್ಲಿ ಹಾಸ್ಯದೃಷ್ಟಿಯನ್ನು ಕರುಣರಸದಲ್ಲಿ ಕರುಣಾ ದೃಷ್ಟಿಯನ್ನೂ, ಅದ್ಭುತರಸದಲ್ಲಿ ಅದ್ಭುತಾ ಎಂಬ ದೃಷ್ಟಿಯನ್ನೂ, ರೌದ್ರರಸದಲ್ಲಿ ರೌದ್ರೀ ದೃಷ್ಟಿಯನ್ನೂ ಉಪಯೋಗಿಸಬೇಕು ಹಾಗೆಯೇ ವೀರರಸದಲ್ಲಿ ವೀರಾ ಎಂಬ ದೃಷ್ಟಿಯನ್ನೂ ಜುಗುಪ್ಸೆಯ ಕಾಲದಲ್ಲಿ ಬೀಭತ್ಸಾ ದೃಷ್ಟಿಯನ್ನೂ, ಶಾಂತ ರಸದಲ್ಲಿ ಶಾಂತಾ ಎಂಬ ದೃಷ್ಟಿಯನ್ನೂ, ಸಸ್ನೇಹಾವಲೋಕನ ಕಾಲದಲ್ಲಿ ಸ್ನಿಗ್ಧಾ ಎಂಬ ದೃಷ್ಟಿಯನ್ನೂ ಸಂತೋಷಕಾಲದಲ್ಲಿ ಹೃಷ್ಟಾ ಎಂಬ ದೃಷ್ಟಿಯನ್ನೂ, ಅಸೂಯಾ ಸಂದರ್ಭದಲ್ಲಿ ಜಿಹ್ಮಾ ಎಂಬ ದೃಷ್ಟಿಯನ್ನೂ, ಕ್ರೋಧಕಾಲದಲ್ಲಿ ಕ್ರುದ್ಧಾ ದೃಷ್ಟಿಯನ್ನೂ ಭಯಕಾಲದಲ್ಲ ಭೀತಾ ಎಂಬ ದೃಷ್ಟಿಯನ್ನೂ ಪ್ರಯೋಗಿಸಬೇಕು

೨೭ ೨೦ ನಾಚಿಕಗೊಳ್ಳುವ ಪ್ರಸಂಗಗಳಲ್ಲಿ ಲಜ್ಜಿತಾ ದೃಷ್ಟಿಯನ್ನೂ, ಉತ್ಸಾಹಪೂರಿತವಾದ ಗಮನಗಳಲ್ಲಿ ದೃಪ್ತಾ ಎಂಬ ದೃಷ್ಟಿಯನ್ನೂ, ಆಶ್ಚರ್ಯ ಸಂದರ್ಭದಲ್ಲಿ ವಿಸ್ಮಿತಾದೃಷ್ಟಿಯನ್ನೂ, ಸೌಮ್ಯದರ್ಶನಕಾಲದಲ್ಲಿ ಸೌಮ್ಯಾದೃಷ್ಟಿಯನ್ನೂ, ವಿರಹಕಾಲದಲ್ಲಿ ಮಲಿನಾ ಎಂಬ ದೃಷ್ಟಿಯನ್ನೂ ಸಂಭೋಗದಲ್ಲಿ ಆಕೇಕರಾ ಎಂಬ ದೃಷ್ಟಿಯನ್ನೂ, ಶ್ರಮಾಭಿನಯನಕಾಲದಲ್ಲಿ ಶ್ರಾನ್ತಾದೃಷ್ಟಿಯನ್ನೂ, ನಿರ್ವೇದ

ವಿಪ್ಲುತಾಖ್ಯಾ ತು ದೈನ್ಯೇಸ್ಯಾದ್ವಿಷಾದೇ ತು ವಿಷಣ್ಣಿಕಾ ।
ಶಂಕಿತೇ ಶಂಕಿತಾ ಚೈವ ತ್ರಸ್ತೇ ತ್ರಸ್ತಾ ವಿಧೀಯತೇ ॥ ೨೯ ॥

ಜ್ಞಾನೇ ವಿಶೋಕಾ ಚ ತಥಾ ಸ್ಪರ್ಶೇ ಕಾರ್ಯಾ ನಿಮೀಲಿತಾ ।
ವಿಭ್ರಾಂತಾ ವಿಭ್ರಮೇ ಕಾರ್ಯಾ ಕುಂಚಿತಾ ಸೂಕ್ಷ್ಮದರ್ಶನೇ ॥ ೩೦ ॥

ಚಿನ್ತಾನ್ವಿತಸ್ಯ ಶೂನ್ಯಾ ಸ್ಯಾನ್ಮುಕ್ತಲಾ ಘ್ರಾಣಕರ್ಮಣಿ ।
ವಿತರ್ಕೇ ತು ವಿತರ್ಕಾ ಸ್ಯಾ ನ್ಮಂದೇ ತು ಮದಿರಾ ಭವೇತ್ ॥ ೩೧ ॥

ಸ್ತ್ರೀಣಾಂ ಹೇಲಾಸು ಲಲಿತಾ ಗ್ಲಾನೇ ಗ್ಲಾನಾ ವಿಧೀಯತೇ ।
ಉನ್ಮೇಷಶ್ಚ ನಿಮೇಷಶ್ಚ ಪ್ರಾಸಾರಿತವಿವರ್ತಿತೇ ॥ ೩೨ ॥

ಆಕುಂಚಿತಂ ಸಮಂ ಚೈವ ಸ್ಫುರಿತಂ ಪಿಹಿತಂ ತತಃ ।
ತಾಡಿತಂ ಪುಟಯೋಃ ಕರ್ಮ ನವಧಾ ಪರಿಕೀರ್ತಿತಂ ॥ ೩೩ ॥

ಕಾಲದಲ್ಲಿ ಅಭಿತಪ್ತಾ ದೃಷ್ಟಿಯನ್ನೂ ದೈನ್ಯಕಾಲದಲ್ಲಿ ವಿಪ್ಲುತಾ ದೃಷ್ಟಿಯನ್ನೂ, ವಿಷಾದದಲ್ಲಿ ನಿಷಣ್ಣಾದೃಷ್ಟಿಯನ್ನೂ, ಶಂಕಾಸಂದರ್ಭದಲ್ಲಿ ಶಂಕಿತಾದೃಷ್ಟಿಯನ್ನೂ, ಭಯಕಾಲದಲ್ಲಿ ತ್ರಸ್ತಾದೃಷ್ಟಿಯನ್ನೂ, ಜ್ಞಾನಕಾಲದಲ್ಲಿ ವಿಶೋಕಾದೃಷ್ಟಿಯನ್ನೂ, ಸ್ಪರ್ಶಕಾಲದಲ್ಲಿ ನಿಮೀಲಿತಾ ದೃಷ್ಟಿಯನ್ನೂ, ಭ್ರಮಕಾಲದಲ್ಲಿ ವಿಭ್ರಾಂತಾ ದೃಷ್ಟಿಯನ್ನೂ, ಸೂಕ್ಷ್ಮದರ್ಶನ ಕಾಲದಲ್ಲಿ ಕುಂಚಿತಾ ಎಂಬ ದೃಷ್ಟಿಯನ್ನೂ ಪ್ರಯೋಗಿಸಬೇಕು

೩೧–೩೩ ಚಿಂತೆಯಿಂದ ಕೂಡಿರುವವನ ವಿಷಯದಲ್ಲಿ ಶೂನ್ಯಾ ಎಂಬ ದೃಷ್ಟಿಯನ್ನು ಅಭಿನಯಿಸಬೇಕು ಮೂಸಿನೋಡುವಾಗ ಮುಕ್ತಲಾ ಎಂಬ ದೃಷ್ಟಿಯನ್ನು ಉಪಯೋಗಿಸಬೇಕು ಬಹುವಾಗಿ ಊಹಿಸುವ ಸಂದರ್ಭದಲ್ಲಿ ವಿತರ್ಕಾ ದೃಷ್ಟಿಯನ್ನೂ. ಜಡತೆಯ ಅಭಿನಯಕಾಲದಲ್ಲಿ ಮದಿರಾ ದೃಷ್ಟಿಯನ್ನೂ, ಸ್ತ್ರೀಯರ ವಿಲಾಸಕಾಲದಲ್ಲಿ ಲಲಿತಾ ಎಂಬ ದೃಷ್ಟಿಯನ್ನೂ, ಶ್ರಮದಿಂದ ಗ್ಲಾನಿಯನ್ನು ಹೊಂದಿದವನ ವಿಷಯದಲ್ಲಿ ಗ್ಲಾನಾ ಎಂಬ ದೃಷ್ಟಿಯನ್ನೂ ಉಪಯೋಗಿಸಬೇಕು ಕಣ್ಣುಗಳ ರೆಪ್ಪೆಗಳ ವ್ಯಾಪಾರವು ಉನ್ಮೇಷ, ನಿಮೇಷ, ಪ್ರಸಾರಿತ, ನಿವರ್ತಿತ, ಆಕುಂಚಿತ, ಸಮ, ಸ್ಫುರಿತ, ಪಿಹಿತ, ತಾಡಿತ ಎಂದು ಒಂಭತ್ತು ವಿಧವಾಗಿವೆ

ಸಮಾಗಮಃ ಪುಟಾನಾಂ ಯಃ ಸ ನಿಮೇಷ ಇತಿ ಸ್ಮೃತಃ ।
ವಿಶ್ಲೇಷಶ್ಚೈವ ಯಸ್ತಾಭ್ಯಾಂ ಸ ಉನ್ಮೇಷಃ ಪ್ರಕೀರ್ತಿತಃ ॥ ೩೪ ॥

ಪ್ರಸಾರಿತೌ ಪುಟೌ ಯತ್ರ ಭವೇತ್ತದ್ಧಿ ವಿವರ್ತಿತಂ ।
ಆಕುಂಚಿತಾಭ್ಯಾಂ ತಾಭ್ಯಾಂ ತು ಜ್ಞೇಯಮಾಕುಂಚಿತಂ ಬುಧೈಃ ॥ ೩೫ ॥

ಸ್ವಭಾವಪುಟಸಂಸ್ಥಾನಂ ಸಮಂ ತದ್ಧಿ ಪ್ರಕೀರ್ತಿತಂ ।
ಪುಟೌ ಪ್ರಸ್ಫುರಿತೌ ಯತ್ರ ಸ್ಫುರಿತಂ ತದಿಹೋಚ್ಯತೇ ॥ ೩೬ ॥

ಪುಟಾವಪಿಹಿತೌ ಯತ್ರ ಪಿಹಿತಂ ನಾಮ ತದ್ಭವೇತ್ ।
ಸ್ರಸ್ತಮೂಲೌ ಪುಟೌ ಯತ್ರ ತದ್ಧಿ ತಾಡಿತಮುಚ್ಯತೇ ॥ ೩೭ ॥

ಗಂಧೇಸ್ಪರ್ಶೇ ತಥಾನಿಷ್ಟೇ ಜ್ಞೇಯಮಾಕುಂಚಿತಂ ಬುಧೈಃ ।
ವಿಸ್ಮಯೋರ್ಥೇ ತಥಾ ವೀರೇ ತಚ್ಚ ಕಾರ್ಯಂ ಪ್ರಸಾರಿತಂ ॥ ೩೮ ॥

ಶೃಂಗಾರೇ ತು ಸಮಂ ಕಾರ್ಯಂ ಅಭಿಘಾತೇऽವತಾಡಿತಂ ।
ಸ್ತ್ರೀಣಾಂ ಪ್ರಣಯರೋಷೇಷು ಸ್ಫುರಿತಂ ತದಿಹೇಷ್ಯತೇ ॥ ೩೯ ॥

---

೩೪-೩೬ ರೆಪ್ಪೆಗಳೆರಡೂ ಸೇರುವಿಕೆಯೇ ನಿಮೇಷವೆನಿಸುತ್ತದೆ ಅವುಗಳ ವಿಶ್ಲೇಷವೇ ಉನ್ಮೇಷವೆನಿಸುತ್ತವೆ ಹಾಗೆಯೇ ರೆಪ್ಪೆಗಳು ವಿಸ್ತರಿಸಲ್ಪಟ್ಟಲ್ಲಿ ಅದು ವಿವರ್ತಿತವಾಗುತ್ತದೆ ವಕ್ರವಾಗಿ ಮಾಡಿದಲ್ಲಿ ಆಕುಂಚಿತವೆಂದೂ ಹೇಳಲಾಗುತ್ತದ ರೆಪ್ಪೆಗಳು ಸ್ವಾಭಾವಿಕವಾದ ಸಮಸ್ಥಿತಿಯಲ್ಲಿದ್ದರೆ ಅದೇ ಸಮವೆಂದು ಪ್ರಸಿದ್ಧಿ ಹೊಂದಿದೆ ಅಂತಹ ರೆಪ್ಪೆಗಳು ಅದುರುತ್ತಿದ್ದಲ್ಲಿ ಅದಕ್ಕೆ ಸ್ಫುರಿತವೆಂದು ಹೆಸರು

೩೭-೩೯ ರೆಪ್ಪೆಗಳು ಮುಚ್ಚಲ್ಪಟ್ಟಿದ್ದಲ್ಲಿ ಪಿಹಿತವೆನಿಸುತ್ತದೆ ರೆಪ್ಪೆಗಳ ಬುಡವು ಶಿಥಿಲವಾಗಿದ್ದಲ್ಲಿ ಅದು ತಾಡಿತವೆನಿಸುತ್ತದೆ ಅನಭಿಮತವಾದ ಗಂಧ ಸ್ಪರ್ಶಗಳ ಅನುಭವ ಕಾಲದಲ್ಲಿ ಆಕುಂಚಿತವೆಂಬ ರೆಪ್ಪೆಯ ವ್ಯಾಪಾರವನ್ನು ಪ್ರಯೋಗಿಸಬೇಕು ಆಶ್ಚರ್ಯದ ಸಂದರ್ಭದಲ್ಲಿಯೂ, ವೀರರಸಲ್ಲಿಯೂ ಪ್ರಸಾರಿತ ವೆಂಬ ಅಂಗಕ್ರಿಯೆಯನ್ನು ಉಪಯೋಗಿಸಬೇಕು ಶೃಂಗಾರದಲ್ಲಿ ಸಮವೆಂಬ ಕ್ರಿಯೆಯನ್ನೂ, ಅಭಿಘಾತ ಉಂಟಾದಾಗ ಅವತಾಡಿತವನ್ನೂ, ಸ್ತ್ರೀಯರ ಪ್ರಣಯ ಕಾಲದ ರೋಷಸಂದರ್ಭದಲ್ಲಿ ಸ್ಫುರಿತವನ್ನೂ, ಶೀತದ ಸಂದರ್ಭದಲ್ಲಿಯೂ, ಗಾಳಿ ಹೆಚ್ಚಾದ ಬೇಗೆ, ಮಳೆ ಇಂತಹ ಸಂದರ್ಭದಲ್ಲಿಯೂ ಸಹ ಪಿಹಿತವೆಂಬ ಅಂಗಕ್ರಿಯೆ ಯನ್ನೂ ಪ್ರಯೋಗಿಸಬೇಕು

**ಶೀತೇ ವಾತೋಷ್ಣವರ್ಷೇಷು ಪಿಹಿತಂ ಕಾರ್ಯಮೇವ ತು ।**
**ಕ್ರೋಧೇ ವಿವರ್ತಿತಂ ಕಾರ್ಯಂ ನಿಮೇಷೋನ್ಮೇಷಯೋಃ ಸಮಂ ॥೪೦॥**

**ವಲನಂ ಭ್ರಮಣಂ ಚೈವ ಚಲನಂ ಸಂಪ್ರವೇಶನಂ ।**
**ವಿವರ್ತಿತಂ ಪಾತನಂ ತು ವಿಜ್ಞೇಯಂ ನಿಷ್ಕ್ರಮಂ ತಥಾ ॥ ೪೧ ॥**

**ಉದ್ವರ್ತಃ ಪ್ರಾಕೃತಂ ಚೈವ ತಾರಕಾಕರ್ಮ ಚೇಷ್ಯತೇ ।**
**ಮಂಡಲಾವರ್ತನಂ ಮಧ್ಯೇ ಪುಟಯೋಃ ಭ್ರಮಣಂ ಸ್ಮೃತಂ ॥ ೪೨ ॥**

**ವಲನಂ ಗಮನಂ ತಿರ್ಯಕ್ಚಲನಾಚ್ಚಲಿತಂ ಭವೇತ್ ।**
**ಅಭ್ಯಂತರಗತೆ ಆಕರ್ಷಃ ಪ್ರವೇಶಾತ್ಸಂಪ್ರವೇಶನಂ ॥ ೪೩ ॥**

**ತಥಾಪಾಂಗಸಂಚಾರಾದ್ವಿವರ್ತಿತಮುದಾಹೃತಂ ।**
**ಪಾತನಂ ಸ್ರಸ್ತಭಾವಶ್ಚ ನಿಷ್ಕ್ರಮಾನ್ನಿಷ್ಕ್ರಮಂ ತಥಾ ॥ ೪೪ ॥**

---

೪೦-೪೧　ಕ್ರೋಧದಲ್ಲಿ ವಿವರ್ತಿತವನ್ನೂ, ನಿಮಿಷೋನ್ಮೇಷ ಕಾಲದಲ್ಲಿ ಸಮವೆಂಬ ಕ್ರಿಯೆಯನ್ನೂ ಪ್ರಯೋಗಿಸಬೇಕು ವಲನ, ಭ್ರಮಣ, ಚಲನ, ಸಂಪ್ರಣಾಶನಂ, ವಿವರ್ತಿತ, ಪಾತನ, ನಿಷ್ಕ್ರಮ, ಉದ್ವರ್ತ, ಪ್ರಾಕೃತ ಇವು ತಾರಕಾಕರ್ಮ ಕಣ್ಣಿನ ಗುಡ್ಡೆಗಳ ವ್ಯಾಪಾರವೆಂದು ಹೇಳಲಾಗಿದೆ

೪೨-೪೪　ರೆಪ್ಪೆಗಳ ಮಧ್ಯದಲ್ಲಿ ಗುಡ್ಡೆಗಳು ಮಂಡಲಾಕಾರವಾಗಿ ಸುತ್ತಿದಲ್ಲಿ ಭ್ರಮಣವೆನಿಸುತ್ತದೆ ಗುಡ್ಡೆಯು ಅಡ್ಡಲಾಗಿ ಚಲಿಸಿದಲ್ಲಿ ವಲನವೆನಿಸುತ್ತದೆ ವಲನದಿಂದಲೇ ಚಲಿತವೆಂಬ ಕ್ರಿಯೆಯುಂಟಾಗುತ್ತದೆ ಸಮೀಪ ಪ್ರದೇಶದಿಂದ ಗುಡ್ಡೆಯನ್ನು ಆಕರ್ಷಿಸಿದಲ್ಲಿ ಅದು ಸಂಪ್ರವೇಶವೆನಿಸುತ್ತದೆ ಕಡೆಗಣ್ಣಿನಲ್ಲಿ ಗುಡ್ಡೆಯು ಸಂಚರಿಸಿದಲ್ಲಿ ವಿವರ್ತಿತವೆನಿಸುತ್ತದೆ. ಗುಡ್ಡೆಗಳನ್ನು ಕೆಳಮುಖವಾಗಿ ಜೋಲಿಸಿದಲ್ಲಿ ಪಾತನವೆನಿಸುತ್ತದೆ ಪ್ರಾಂತಭಾಗಕ್ಕೆ ಹೊರಡಿಸುವುದೇ ನಿಷ್ಕ್ರಮವೆನಿಸುತ್ತದೆ ಉದ್ವರ್ತನದಿಂದ ಹಿಂದೆ ತಿರುಗಿದ ಸ್ವಾಭಾವಿಕ ಸ್ಥಿತಿಗೆ ಪ್ರಾಕೃತವೆಂದು ಹೆಸರು.

ಉದ್ವರ್ತನಾತ್ಪರಾವೃತ್ತಿಃ ಪ್ರಾಕೃತಂ ತು ಸ್ವಭಾವತಃ ।
ಹಾಸ್ಯೇ ತು ವಲನಂ ಕಾರ್ಯಂ ಮದೇ ಭ್ರಮಣಮೇವ ಚ ॥ ೪೫ ॥

ವೀರೇ ರಸೇ ಸ್ಯಾಚ್ಚಲನಂ ಬೀಭತ್ಸೇ ಸಂಪ್ರವೇಶನಂ ।
ವಿವರ್ತಿತಂ ತು ಶೃಂಗಾರೇ ಪಾತನಂ ಕರುಣೇ ರಸೇ ॥ ೪೬ ॥

ಭಯಾನಕೇ ನಿಷ್ಕ್ರಮಣಂ ವೀರೇ ಚೋದ್ವರ್ತನಂ ತಥಾ ।
ಪ್ರಾಕೃತಂ ಶೇಷಭಾವೇ ತು ಯಥಾ ಯೋಗಂ ಪ್ರಯೋಜಯೇತ್ ॥ ೪೭ ॥

ಸಮಂ ಸಾಚೀಕೃತಂ ಚ ಸ್ಯಾದನುವೃತ್ತಮತಃ ಪರಂ ।
ಆಲೋಕಿತಂ ಚೋಲ್ಲೋಕಿತಮವಲೋಕಿತಮೇವ ಚ ॥ ೪೮ ॥

ಸಮತಾರಂ ಚ ಸೌಮ್ಯಂ ಚ ದೃಷ್ಟಿಕರ್ಮ ಸಮಂ ಭವೇತ್ ।
ಪಕ್ಷ್ಮಾಂತರ್ಗತತಾರಂ ಚ ಸಾಚೀಕೃತಮಿಹೋಚ್ಯತೇ ॥ ೪೯ ॥

---

೪೫-೪೭ ಹಾಸ್ಯರಸಾಭಿನಯದಲ್ಲಿ ವಲನವನ್ನು ಪ್ರಯೋಗಿಸಬೇಕು ಮದವನ್ನು ಅಭಿನಯಿಸುವಾಗ ಭ್ರಮಣವನ್ನು ಉಪಯೋಗಿಸಬೇಕು ವೀರ ರಸಾಭಿನಯದಲ್ಲಿ ಚಲನವನ್ನು ಉಪಯೋಗಿಸಬೇಕು ಬೀಭತ್ಸರಸದಲ್ಲಿ ಸಂಪ್ರವೇಶನವನ್ನೂ, ಶೃಂಗಾರರಸದಲ್ಲಿ ವಿವರ್ತಿತವನ್ನೂ, ಕರುಣರಸದಲ್ಲಿ ಪಾತನವನ್ನೂ, ಭಯಾನಕರಸದಲ್ಲಿ ನಿಷ್ಕ್ರಮಣವನ್ನೂ, ವೀರರಸದಲ್ಲಿ ಉದ್ವರ್ತನವನ್ನೂ, ದಾಸ ಭಾವವನ್ನು ಪ್ರಕಾಶಪಡಿಸುವ ಕಾಲದಲ್ಲಿ ವ್ರಾಕೃತವನ್ನೂ ಈ ರೀತಿ ತಾರಕಾಕರ್ಮಗಳನ್ನು ಆಯಾಯ ರಸಕ್ಕೆ ಅನುಗುಣವಾಗುವ ರೀತಿಯಲ್ಲಿ ಅಭಿನಯಿಬೇಕು

೪೮-೫೧ ಸಮ, ಸಾಚೀಕೃತ, ಅನುವೃತ್ತ, ಆಲೋಕಿತ, ಉಲ್ಲೋಕಿತ, ಅವಲೋಕಿತ, ಸಮತಾರ, ಸೌಮ್ಯ ಇವೆಲ್ಲವೂ ದೃಷ್ಟಿಯ ವ್ಯಾಪಾರಗಳು ಕಣ್ಣಿನ ಗುಡ್ಡೆಗಳು ರೆಪ್ಪೆಯ ಒಳಭಾಗದಲ್ಲಿಯೇ ಅಪ್ರಕಾಶದಿಂದ ಕೂಡಿದಲ್ಲಿ ಅಂತಹ ದೃಷ್ಟಿಯ ವ್ಯಾಪಾರವು ಸಾಚೀಕೃತವೆಂದು ಹೇಳಲ್ಪಡುತ್ತದೆ ಒಂದಾನೊಂದು ವಸ್ತುವಿನ ರೂಪವನ್ನೇ ನೋಡುವುದರಲ್ಲಿ ಆಸಕ್ತವಾದ ದೃಷ್ಟಿಯ ವ್ಯಾಪಾರವು ಅನುವೃತ್ತವೆನಿಸುತ್ತದೆ ತ್ವರೆಯಿಂದ ವಸ್ತುವನ್ನು ನೋಡುವಿಕೆಯು ಆಲೋಕಿತ

ರೂಪನಿರ್ವರ್ಣನಾಯುಕ್ತಮನುವೃತ್ತಮಿತಿ ಸ್ಮೃತಂ ।
ಸಹಸಾ ದರ್ಶನಂ ಯತ್ಸ್ಯಾತ್ತದಾಲೋಕಿತಮಿಷ್ಯತೇ ॥ ೫೦ ॥

ಊರ್ಧ್ವಮುಲ್ಲೋಕಿತಂ ಜ್ಞೇಯಂ ಸರ್ವತೋಲೋಕಿತಂ ತಥಾ ।
[1]ವಿಲೋಕಿತಂ ತು ಪಾರ್ಶ್ವಾಭ್ಯಾಂ ಪೃಷ್ಠತಶ್ಚಾವಲೋಕಿತಂ ॥ ೫೧ ॥

ದೃಷ್ಟೀನಾಮನುಗಂ ಚೈವ ಭ್ರುವೋಃ ಕರ್ಮ ಪ್ರಯೋಜಯೇತ್ ।
ಯಥಾ ನೇತ್ರಂ ಪ್ರಸರ್ಪೇದ್ಧಿ ನಾನಾಭಾವರಸಾಶ್ರಯಂ ॥ ೫೨ ॥

ನೇತ್ರಸ್ಯಾನುಕ್ರಮೇಣೈವ ಭ್ರುವೋಸ್ತು ಚಲನಂ ಭವೇತ್ ।
ಉತ್ಕ್ಷೇಪಃ ಪತನಂ ಚೈವ ಭ್ರುಕುಟೀ ಚತುರಂ ತಥಾ ॥ ೫೩ ॥

ನಿಕುಂಚಿತಂ ಕುಂಚಿತಂ ಚ ತಥಾ ಸ್ವಾಭಾವಿಕಂ ಭವೇತ್ ।
ಭ್ರುವೋರುದ್ಗಮಮುತ್ಕ್ಷೇಪಃ ಪಾತನಂ ಪತನಂ ಭವೇತ್ ॥ ೫೪ ॥

---

ವೆನಿಸುತ್ತದೆ ಮೇಲ್ಮುಖವಾದ ದೃಷ್ಟಿಯ ವ್ಯಾಪಾರವು ಉಲ್ಲೋಕಿತವೆನಿಸುತ್ತದೆ. ಎಲ್ಲಾ ಕಡೆಯಲ್ಲಿಯೂ ಉಂಟಾದ ದೃಷ್ಟಿಯ ವ್ಯಾಪಾರವೂ ಸಹ ಉಲ್ಲೋಕಿತವೆಂದೇ ಹೇಳಲ್ಪಡುತ್ತದೆ ಪಾರ್ಶ್ವಗಳನ್ನು ನೋಡುವಿಕೆಯು ವಿಲೋಕಿತವೆನಿಸುತ್ತದೆ. ಹಿಂಭಾಗದ ನೋಟವು ಅವಲೋಕಿತವೆನಿಸುತ್ತದೆ

೫೨-೫೪ ಹುಬ್ಬುಗಳ ವ್ಯಾಪಾರವನ್ನು ದೃಷ್ಟಿವ್ಯಾಪಾರಕ್ಕೆ ಅನುಗುಣವಾಗಿ ಪ್ರಯೋಗಿಸಬೇಕು ನಾನಾವಿಧವಾದ ರಸ ಮತ್ತು ಭಾವಗಳಿಗೆ ತಕ್ಕಂತೆ ಹೇಗೆ ಕಣ್ಣು ಪ್ರಸರಿಸುವುದೋ ಆ ಕಣ್ಣಿನ ನೋಟಕ್ಕೆ ತಕ್ಕಂತೆಯೇ ಹುಬ್ಬುಗಳ ಚಲನೆಯೂ ಉಂಟಾಗುತ್ತದೆ ಉತ್ಕ್ಷೇಪ, ಪತನ, ಭ್ರುಕುಟೀ, ಚತುರ, ನಿಕುಂಚಿತ, ಕುಂಚಿತ, ಇವೂ ಸ್ವಾಭಾವಿಕವಾದ ಇತರ ಕ್ರಿಯೆಗಳೂ ಹುಬ್ಬಿನಲ್ಲಿ ಉಂಟಾಗುತ್ತವೆ ಹುಬ್ಬುಗಳನ್ನು ಮೇಲಕ್ಕೆ ಹಾರಿಸುವಿಕೆಯೇ ಉತ್ಕ್ಷೇಪವೆನಿಸುತ್ತದೆ ಕೆಳಮುಖವಾಗಿ ಮಾಡುವುದೇ ಪತನವೆನಿಸುತ್ತದೆ

---

1 ಇದನ್ನು ಹಿಂದಿನ ಗಣನೆಯಲ್ಲಿ ಸೇರಿಸಿರುವದಿಲ್ಲ

ದ್ವಯೋರ್ಮೂಲೋರ್ಧ್ವವಿಕ್ಷೇಪಾತ್ ಭ್ರುಕುಟೀ ಪರಿಕೀರ್ತಿತಾ ।
ಚತುರಃ ಕಿಂಚಿದುಚ್ಛ್ವಾಸಾನ್ಮಧುರಾಯತಯಾ ಭ್ರುವಾ ॥ ೫೫ ॥

ಏಕಸ್ಯಾ ಉಭಯೋರ್ವಾಪಿ ಸ್ಯಾದುದ್ಭಗ್ನಂ ನಿಕುಂಚಿತಂ ।
ಏಕಸ್ಯಾ ಲಲಿತೋದ್ಯೋಗಾದ್ರೇಚಿತಂ ನಾಮಕೀರ್ತಿತಂ ॥ ೫೬ ॥

ಯಥಾಸ್ಥಿತೇ ಸ್ವಭಾವಸ್ಥೇ ಭ್ರುವೋಃ ಕರ್ಮ ನಿಬೋಧ ಮೇ ।
ಸಮುತ್ಕ್ಷೇಪಸ್ತು ಲೀಲಾಯಾ ಕಾರುಣ್ಯಾತ್ಪತನಂ ಭವೇತ್ ॥ ೫೭ ॥

ಕ್ರೋಧೇ ಚ ಭ್ರುಕುಟೀಜ್ಞೇಯಾ ಶೃಂಗಾರೇ ಚತುರಂ ತಥಾ ।
ಕ್ಷಾಮಂ[1] ಕೃಶಂ ತು ವಿಜ್ಞೇಯಂ ಫುಲ್ಲಂ ವಿಕಸಿತಂ ಭವೇತ್ ॥ ೫೮ ॥

ಸಂಪೂರ್ಣಂ ಪೂರ್ಣಮಿತ್ಯುಕ್ತಂ ಕಂಪಿತಂ ಪರಿಧೂನಿತಂ ।
ಶೃಂಗಭಿನ್ನಂ ಕುಂಚಿತಕಂ ಸರೋಮಾಂಚಂ ತಥಾವಿಧಂ ॥ ೫೯ ॥

---

೫೫–೫೭ ಎರಡು ಹುಬ್ಬುಗಳ ಮೂಲಭಾಗವನ್ನು ಮೇಲ್ಮುಖವಾಗಿ ಹಾರಿಸಿದಲ್ಲಿ ಭ್ರುಕುಟೀ ಎನಿಸುತ್ತದೆ ಮಧುರವಾದ ರೀತಿಯಿಂದ ಸ್ವಲ್ಪ ವಿಸ್ತಾರಮಾಡಿದಲ್ಲಿ ಅಂತಹ ಕರ್ಮವು ಚತುರವೆನಿಸುತ್ತದೆ ಒಂದೇ ಹುಬ್ಬನ್ನು ಅಥವಾ ಎರಡನ್ನೂ ವಕ್ರತೆಯಿಂದ ಮುರಿದಲ್ಲಿ ನಿಕುಂಚಿತವೆನಿಸುತ್ತದೆ ಒಂದೇ ಹುಬ್ಬಿನ ರಮ್ಯವಾದ ಸನ್ನಿವೇಶವು ರೇಚಿತವೆನಿಸುತ್ತದೆ (ಇಲ್ಲಿ ಕುಂಚಿತವೆಂದಿರಬೇಕು) ಹುಬ್ಬುಗ ಸ್ವಾಭಾವಿಕ ಸ್ಥಿತಿಯಲ್ಲಿಯೂ ಅವುಗಳ ವ್ಯಾಪಾರವನ್ನು ಮುಂದ ಹೇಳುತ್ತೇನ ಉತ್ಕ್ಷೇಪವನ್ನು ವಿಲಾಸಕಾಲದಲ್ಲಿಯೂ, ಪತನವನ್ನು ಕರುಣರಸಸಂದರ್ಭದಲ್ಲಿಯೂ, ಕೋಪದಲ್ಲಿ ಭ್ರುಕುಟಿಯನ್ನೂ, ಶೃಂಗಾರರಸಾಭಿನಯದಲ್ಲಿ ಚತುರವನ್ನೂ ಪ್ರಯೋಗಿಸಬೇಕು

೫೮–೬೦ ಕ್ಷಾಮವೆಂಬುದು ಕೃಶತ್ವಕ್ಕೆ ಸೂಚಕವಾಗುತ್ತದೆ ಫುಲ್ಲವೆಂಬುದು ವಿಕಾಸಕ್ಕೆ ಸೂಚಕವಾಗುತ್ತದೆ ಸಂಪೂರ್ಣವೆಂಬುದು ಪೂರ್ಣತೆಗೆ ಸೂಚಕವಾಗುತ್ತದೆ ಹೀಗೆಯೇ ಕಂಪಿತ, ಪರಿಧೂನಿತ, ಶೃಂಗಭಿನ್ನ, ಕುಂಚಿತಕ, ಸರೋಮಾಂಚ ಕುಂಚಿತಕ, ಪ್ರಾಕೃತ, ಮಂದ, ಇವೂ ಸಹ ಸ್ವಭಾವಸ್ಥಕ್ರಿಯೆಗಳೆಂದು ಪಂಡಿತರು

---

1 ಹಿಂದೆ ಕುಂಚಿತವೆಂದು ಹೇಳಲಾಗಿದ ಇಲ್ಲಿಯೂ ಅದೇ ರೀತಿ ಪಾಠವಿರಬಹುದೆಂದು ತೋರುತ್ತದೆ

ಪ್ರಾಕೃತಂ ತು ಸ್ವಭಾವಸ್ಥಂ ಮಂದಂ ಪ್ರೋಕ್ತಂ ಮನೀಷಿಭಿಃ ।
ಕ್ಷಾಮಂ ದುಃಖೇ ತು ಕರ್ತವ್ಯಂ ಫುಲ್ಲಂ ಹರ್ಷೇ ಪ್ರಯೋಜಯೇತ್ ॥

ಪೂರ್ಣಂ ತುಷ್ಟೇ ತು ಕರ್ತವ್ಯಂ ತಥಾ ರೋಷೇ ಚ ಕಂಪಿತಂ ।
ಹಾಸ್ಯೇ ತ್ವಾಕುಂಚಿತಂ ಸ್ಪರ್ಶೇ ಸರೋಮಾಂಚಂ ವಿಧೀಯತೇ ॥ ೬೧ ॥

ಪ್ರಾಕೃತಂ ತು ಸ್ವಭಾವಸ್ಥಂ ತ್ವರ್ಥಯೋಗೇನ ಯೋಜಯೇತ್ ।
ನತಾ ಮಂದಾ ವಿಕೃಷ್ಟಾ ಚ ಸೋಚ್ಛ್ವಾಸಾ ಕೂಣಿತಾನತಾ ॥ ೬೨ ॥

ಸ್ವಾಭಾವಿಕೇ ಚ ಕರ್ತವ್ಯಾ ಪ್ರಯೋಗೇ ನಾಸಿಕಾ ಬುಧೈಃ ।
ನಸಾನತಾ ತು ವಿಜ್ಞೇಯಾ ಮಂದಾ ನತಪುಟಾ ಭವೇತ್ ॥ ೬೩ ॥

ವಿಕೃಷ್ಟಾ ಕುಂಚಿತಾ ಚೋರ್ಧ್ವಂ ಸೋಚ್ಛ್ವಾಸಾ ವಾಯುಪೂರಿತಾ ।
ಸಂಕೂಣನಾತ್ಕೂಣಿತಾ ಸ್ಯಾತ್ಸ್ವಭಾವಸ್ಥಾ ಸ್ವನಾಸಿಕಾ ॥ ೬೪ ॥

---

ಹೇಳಿರುವರು ಕ್ಷಾಮವೆಂಬುದನ್ನು ದುಃಖದಲ್ಲಿಯೂ ಫುಲ್ಲವೆಂಬುದನ್ನು ಹರ್ಷದಲ್ಲಿಯೂ ಪ್ರಯೋಗಿಸಬೇಕು ಹಾಗೆಯೇ,

೬೧-೬೩ ಪೂರ್ಣವೆಂಬುದನ್ನು ಸಂತೋಷಕಾಲದಲ್ಲಿಯೂ, ಕಂಪಿತವನ್ನು ರೋಷಕಾಲದಲ್ಲಿಯೂ, ಆಕುಂಚಿತವನ್ನು ಹಾಸ್ಯಕಾಲದಲ್ಲಿಯೂ, ಸರೋಮಾಂಚಕುಂಚಿತವನ್ನು ಸ್ಪರ್ಶಕಾಲದಲ್ಲಿಯೂ ಪ್ರಯೋಗಿಸಬೇಕು ಸ್ವಾಭಾವಿಕವಾದ ಪ್ರಾಕೃತವನ್ನು ಅಭಿನೇಯಾರ್ಥಕ್ಕೆ ತಕ್ಕಂತೆ ಪ್ರಯೋಗಿಸಬೇಕು ಸ್ವಾಭಾವಿಕ ಕ್ರಿಯೆಯಲ್ಲಿ ನತಾ, ಮಂದಾ, ವಿಕೃಷ್ಟಾ ಸೋಚ್ಛ್ವಾಸಾ, ಕೂಣಿತಾ, ಆನತಾ, ಇವನ್ನು ನಾಸಿಕಾಕ್ರಿಯೆಯಲ್ಲಿ ಅಭಿನಯಿಸಬೇಕು ಮೂಗು ಬಗ್ಗಿರೋಣವೇ ನತವೆನಿಸುತ್ತದೆ ಮೂಗಿನ ಹೊಳ್ಳೆಗಳು ಅಧೋಮುಖವಾಗಿದ್ದಲ್ಲಿ ಮಂದಾ ಎನಿಸುತ್ತದ

೬೪-೬೫ ನಾಸಿಕೆಯು ಮೇಲ್ಮುಖವಾಗಿ ಮಾಡಲ್ಪಟ್ಟಿದ್ದಲ್ಲಿ ವಿಕೃಷ್ಟಾ ಎನಿಸುತ್ತದ ವಾಯುವಿನಿಂದ ತುಂಬಲ್ಪಟ್ಟಿದಲ್ಲಿ ಸೋಚ್ಛ್ವಾಸಾ ಎನಿಸುತ್ತದ ವಕ್ರವಾಗಿ ಮಾಡಲ್ಪಟ್ಟಿದಲ್ಲಿ ಕೂಣಿತಾ ಎನಿಸುತ್ತದೆ. ಇವು ಸ್ವಾಭಾವಿಕವಾದ ನಾಸಿಕಾಕ್ರಿಯೆಗಳು ನತಾ ಎಂಬುದನ್ನು ಪ್ರೀತಿಪಡುವ ವಿಷಯದಲ್ಲಿಯೂ ಮಂದಾ

ನತಾ ತು ರುಚಿತೇ ಕಾರ್ಯಾ ಮಂದಾ ಶೋಕೇ ವಿಧೀಯತೇ ।
ತೀವ್ರಗಂಧೇ ವಿಕೃಷ್ಟಾ ತು ಸೋಚ್ಛ್ವಾಸಾ ತು ತಥಾ ಪ್ರಿಯೇ ॥ ೬೫ ॥

ವಿಕೂಣಿತಾ ಜುಗುಪ್ಸಾಯಾಂ ಶೇಷಾ ಸ್ವಾಭಾವಿಕೀ ಮತಾ ।
ಕುಟ್ಟನಂ ಖಂಡನಂ ಛಿನ್ನಂ ಮುಕ್ಕಿತಂ ಸಮತಾ ತಥಾ ॥ ೬೬ ॥

ಜಿಹ್ವಾಧರೋಷ್ಠಮರ್ದಂ ಚ ದಂತಕರ್ಮಾಣಿ ಕಾರಯೇತ್ ।
ಕುಟ್ಟನಂ ಭಕ್ತವಚ್ಛೇದಂ ಖಂಡನಂ ತು ವಿಘಟ್ಟನಂ ॥ ೬೭ ॥

ಛಿನ್ನಂ ನಿಕೃತಮೇವ ಸ್ಯಾನ್ಮುಕ್ಕಿತಂ ವಿದ್ಧಮೇವ ಚ ।
ವ್ಯಾಧೌ ತು ಕುಟ್ಟನಂ ಕಾರ್ಯಂ ಉತ್ಸಾಹೇ ಖಂಡನಂ ಭವೇತ್ ॥ ೬೮ ॥

ಛಿನ್ನಂ ಕ್ರೋಧೇ ಪರಂ ಹಾಸ್ಯೇ ಸಮಂ ಶೇಷೇಷು ಕಾರಯೇತ್ ।
ವಿವರ್ತನಂ ತಥಾ ಕಂಪೋ ವಿಸರ್ಗೋಥವಿಗೂಹನಂ ॥ ೬೯ ॥

---

ಎಂಬುದನ್ನು ದುಃಖದಲ್ಲಿಯೂ, ವಿಕೃಷ್ಟಾ ಎಂಬುದನ್ನು ಉಗ್ರಗಂಧದಲ್ಲಿಯೂ ಪ್ರಿಯವಾದ ವಿಷಯದಲ್ಲಿ ಸೋಚ್ಛ್ವಾಸಾ ಎಂಬುದನ್ನೂ ವಿಕೂಣಿತಾ ಎಂಬುದನ್ನು ಜಿಗುಪ್ಸೆಯಲ್ಲಿಯೂ ಪ್ರಯೋಗಿಸಬೇಕು ಉಳಿದ ಕ್ರಿಯೆಗಳೆಲ್ಲವೂ ಸ್ವಾಭಾವಿಕವೆಂದೇ ಹೇಳಲ್ಪಟ್ಟಿವೆ

೬೬-೬೮ ಕುಟ್ಟನ, ಖಂಡನ, ಛಿನ್ನ, ಮುಕ್ಕಿತಾ, ಜಿಹ್ವಾಧರೋಷ್ಠಮರ್ದ, ಇವು ದಂತಕರ್ಮಗಳಾಗುತ್ತವೆ (ಹಲ್ಲಿನ ವ್ಯಾಪಾರಗಳು) ಕುಟ್ಟನವೆಂದರೆ ಅನ್ನಾದಿಗಳನ್ನು ಮರ್ದಿಸಿ ಚೂರ್ಣಮಾಡುವಂತೆ ಪದಾರ್ಥವನ್ನೂ ಕತ್ತರಿಸುವಿಕೆ, ಖಂಡನವೆಂದರೆ ಘಟ್ಟನ, ಛಿನ್ನವೆಂದರೆ ಅವಸ್ಥಾಂತರವನ್ನುಂಟುಮಾಡುವಿಕೆ, ಮುಕ್ಕಿತವೆಂದರೆ ಆಘಾತಮಾಡುವಿಕೆ, ಇವುಗಳಲ್ಲಿ ವ್ಯಾಧಿಯಕಾಲದಲ್ಲಿ ಕುಟ್ಟನವನ್ನೂ, ಉತ್ಸಾಹ ಕಾಲದಲ್ಲಿ ಖಂಡನವನ್ನೂ, ಕೋಪಕಾಲದಲ್ಲಿ ಛಿನ್ನವನ್ನೂ, ಮುಕ್ಕಿತವನ್ನು ಹಾಸ್ಯದಲ್ಲಿಯೂ, ಇತರ ಸಂದರ್ಭಗಳಲ್ಲಿ ಸಮವನ್ನೂ, ಪ್ರಯೋಗಿಸಬೇಕು

೬೯-೭೨. ವಿವರ್ತನ, ಕಂಪ, ವಿಸರ್ಗ, ವಿಗೂಹನ, ಸಮುದ್ಗ, ಇವು ಅಧರ ಕರ್ಮಗಳು, (ತುಟಿಯ ವ್ಯಾಪಾರಗಳು) ಕಟಬಾಯಿಗಳಿಂದ ವಕ್ರತೆಯನ್ನು ತೋರಿ

**ಸಂದಷ್ಟಶ್ಚ ಸಮುದ್ಗಶ್ಚ ಕರ್ಮಾಣ್ಯಧರಜಾನಿ ಚ ।**
**ಸೃಕ್ಪ್ರಸುವಕ್ರಕರಣಂ ವಿವರ್ತಿತಮಿತಿ ಸ್ಮೃತಂ　　　॥ ೭೦ ॥**

**ವೇಪನಂ ಚಾಪಿ ವಿಜ್ಞೇಯಮಧರಸ್ಯ ತು ಕಂಪನೇ ।**
**ಯೋ ನಿಷ್ಕ್ರಮೋಽಧರಸ್ಯಾಥ ಸ ವಿಸರ್ಗ ಇತಿ ಸ್ಮೃತಃ　　　॥ ೭೧ ॥**

**ಅಂತಃಪ್ರವೇಶನಂ ಚೈವ ವಿನಿಗೂಹಿತಮುಚ್ಯತೇ ।**
**ದಂತೋಷ್ಠಪೀಡನಾಚ್ಚೈವ ಸಂದಷ್ಟಕಮಿತಿ ಸ್ಮೃತಂ　　　॥ ೭೨ ॥**

**ಪಿಂಡಿತಾಭ್ಯುದ್ಗತಶ್ಚೈವ ಸಮುದ್ಗಕ ಇತಿ ಸ್ಮೃತಃ ।**
**ವಿವರ್ತಿತಮಸೂಯಾಯಾಂ ರೋಷೇ ಕಂಪಿತಮಿಷ್ಯತೇ ।**
**ಭಯಾನಕೇ ವಿಸರ್ಗಶ್ಚ ಕರ್ಷಣೇಽಥ ನಿಗೂಹನಂ　　　॥ ೭೩ ॥**

**ತತೋನ್ಮಾಥವಿಕಾರೇಷು ಸಂದಷ್ಟಂ ವೀರರೌದ್ರಯೋಃ ।**
**ಸಮುದ್ಗಮನುಕಂಪಾಯಾಂ ಶೇಷೇ ಕಾರ್ಯಂ ಸ್ವಭಾವಜಂ　　　। ೭೪ ॥**

---

ಸುಕಿಕಗೆ ವಿವರ್ತಿತವೆಂದು ಹೆಸರು ತುಟಿಯನ್ನು, ನಡುಗಿಸಿದಲ್ಲಿ ಕಂಪವೆನಿಸುತ್ತದೆ ಕಳತುಟಿಯನ್ನು ಮುಂದ ಚಾಚಿದಲ್ಲಿ ವಿಸರ್ಗವೆನ್ನಿಸುತ್ತದೆ ಒಳಕ್ಕೆ ಎಳೆದು ಕೊಂಡಲ್ಲಿ ವಿಗೂಹಿತವೆನಿಸುತ್ತದ ಮೇಲಿನ ತುಟಿಯನ್ನೂ ಹಲ್ಲುಗಳನ್ನೂ ಕಚ್ಚಿದಲ್ಲ ಸಂದಷ್ಟಕವೆನಿಸುತ್ತದೆ

೭೩-೭೫ ತುಟಿಗಳನ್ನು ಒಟ್ಟುಗೂಡಿಸಿ ಮುಂದಕ್ಕೆ ಚಾಚಿದಲ್ಲಿ ಸಮುದ್ಗಕ ವೆನಿಸುತ್ತದ ವಿವರ್ತಿತವೆಂಬ ಅಧರಕ್ರಿಯೆಯನ್ನು ಅಸೂಯೆಯಲ್ಲಿಯೂ, ಕಂಪಿತ ವನ್ನು ರೋಷಕಾಲದಲ್ಲಿಯೂ, ವಿಸರ್ಗವನ್ನು ಭಯಾನಕ ರಸಾಭಿನಯದಲ್ಲಿಯೂ, ನಿಗೂಹನವನ್ನು ಎಳೆಯುವಾಗಲೂ, ವಾದ್ಯ, ವಾದನ ಮತ್ತು ಉನ್ಮಾದವಿಕಾರ ಮತ್ತುವೀರರೌದ್ರರಸಾಭಿನಯ ಸಂದರ್ಭಗಳಲ್ಲಿ ಸಂಕಷ್ಟವನ್ನೂ, ದಯಾಕಾಲದಲ್ಲಿ ಸಮುದ್ಗಕವನ್ನೂ ಉಪಯೋಗಿಸಬೇಕು ಉಳಿದವು ಸ್ವಾಭಾವಿಕ ಕ್ರಿಯೆಗೆ ಸೇರಿದುವು ಎಲ್ಲೈ ಧೊರೆಯೇ. ಈ ರೀತಿ ಉಪಾಂಗ ಕರ್ಮಗಳನ್ನು ನಾನು ಸಂಕ್ಷೇಪ ದಿಂದ ನಿನಗೆ ಹೇಳಿರುವೆನು ನೃತ್ಯವು ಇಂತಹ ಉಪಾಂಗಕರ್ಮಗಳನ್ನೇ ಹಚ್ಚಾಗಿ

**ಉಪಾಂಗಕರ್ಮಾಭಿಹಿತಂ ತಥೈತ**
**ನ್ಮಯಾ ಸಮಾಸೇನ ನರೇಂದ್ರಚಂದ್ರ ।**
**ಕಾರ್ಯಃ ಪ್ರಯತ್ನೋತ್ರ ಸದಾ ಬುಧೇನ**
**ಯಸ್ಮಾದುಪಾಙ್ಗಾಶ್ರಯಮೇವ ನೃತ್ಯಂ ॥ ೭೫ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ**
**ವಜ್ರಸಂವಾದೇ ಉಪಾಂಗಿಕವರ್ಣನೋ ನಾಮ**
**ಪಂಚವಿಂಶತಿತಮೋಽಧ್ಯಾಯಃ**

ಆಶ್ರಯಿಸಿರುವುದರಿಂದ ಇವುಗಳ ಅಭ್ಯಾಸ ಮತ್ತು ಅಭಿನಯ ವಿಷಯಗಳಲ್ಲಿ ಪಂಡಿತನಾದವನು ಯಾವಾಗಲೂ ಪ್ರಯತ್ನಶಾಲಿಯಾಗಿಯೇ ಇರಬೇಕು

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ತೃತೀಯ ಖಂಡದಲ್ಲಿ ಮಾರ್ಕಂಡೇಯ
ವಜ್ರ ಸಂವಾದದಲ್ಲಿ ಉಪಾಂಗಿಕವರ್ಣನವೆಂಬ ಇಪ್ಪತ್ತೈದನೆಯ
ಅಧ್ಯಾಯ ಮುಗಿದಿದೆ



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### ಷಡ್ವಿಂಶತಿತಮೋಽಧ್ಯಾಯಃ

**|| ಮಾರ್ಕಂಡೇಯ ಉವಾಚ ||**

**ಪತಾಕಸ್ತ್ರಿಪತಾಕಶ್ಚ ತಥಾ ವೈ ಕರ್ತರೀಮುಖಃ |**
**ಅರ್ಧಚಂದ್ರೋಽಥ್ಯಟಾಲಶ್ಚ ಶುಕ ತುಂಡಸ್ತಥಾಪರಃ || ೧ ||**

**ಮುಷ್ಟಿಶ್ಚ ಶಿಖರಾಖ್ಯಶ್ಚ ಕಪಿತ್ಥಃ ಕಟಕಾಮುಖಃ |**
**ಸೂಚ್ಯರ್ಧಃ ಪದ್ಮಕೋಶಶ್ಚ ಮೃಗಶಿರ್ಷೋ ಮೃಗಸ್ಯ ಚ || ೨ ||**

**ಲಾಂಗೂಲಃ ಕಾಲಪದ್ಮಶ್ಚ ಚತುರೋ ಭ್ರಮರಸ್ತಥಾ |**
**ಹಂಸಾಸ್ಯೋ ಹಂಸಪಕ್ಷಶ್ಚ ಸಂದಂಶೋ ಮುಕುಲಸ್ತಥಾ || ೩ ||**

---

### ಇಪ್ಪತ್ತಾರನೆಯ ಅಧ್ಯಾಯವು

೧-೩ ಮಾರ್ಕಂಡೇಯರು ಹೇಳುತ್ತಾರೆ —ಪರಸ್ಪರ ಸಂಯೋಗವಿಲ್ಲದ ಒಂಟಿಯಾದ ಕೈಯ್ಯಿನ ವ್ಯಾಪಾರವು ಪತಾಕ, ತ್ರಿಪತಾಕ, ಕರ್ತರೀಮುಖ, ಅರ್ಧಚಂದ್ರ, ಅಟಾಲ, (ಶುಕ)ತುಂಡ, ಮುಷ್ಟಿ, ಶಿಖರ, ಕಪಿತ್ಥ, ಕಟಕಾಮುಖ ಸೂಚ್ಯರ್ಧ, ಪದ್ಮಕೋಶ, ಮೃಗಶೀರ್ಷ, ಮೃಗಲಾಂಗೂಲ ಕಾಲಪದ್ಮ ಚತುರ, ಭ್ರಮರ, ಹಂಸಾಸ್ಯ, ಹಂಸಪಕ್ಷ, ಸಂದಂಶ, ಮುಕುಲ, ಎಂದು ಇಪ್ಪತ್ತೆರಡು ವಿಧವಾಗಿರುತ್ತದೆ

ಅಸಂಯುತಾಃ ಕರಾಹ್ಯೇತೇ ದ್ವಾವಿಂಶತಿರುದಾಹೃತಾಃ ।
ಅಥ ಸಂಯುಕ್ತಕೋ ಹಸ್ತಾನ್ಗದತಸ್ತಾನ್ನಿಬೋಧ ಮೇ ॥ ೪ ॥

ಅಂಜಲಿಶ್ಚ ಕಪೋತಶ್ಚ ಕರ್ಕಟಃ ಸ್ವಸ್ತಿಕಸ್ತಥಾ ।
ಖಟಕೋ ವರ್ಧಮಾನಶ್ಚ ಉತ್ಸಂಗೋ ನಿಷಿದಸ್ತಥಾ ॥ ೫ ॥

ದೋಲಃ ಪುಷ್ಪಪುಟಶ್ಚೈವ ತಥಾ ಮಕರ ಏವ ಚ ।
ಗಜದಂತೋಽವಹಿತ್ಥಶ್ಚ ವರ್ಧಮಾನಸ್ತಥೈವ ಚ ॥ ೬ ॥

ಏತೇ ವೈ ಸಂಯುತಾ ಹಸ್ತಾ ಮಯಾ ಪ್ರೋಕ್ತಾಸ್ತ್ರಯೋದಶ ।
ನೃತ್ತಹಸ್ತಾ ನತಶ್ಚೈವ ಭೂಯೋನಾಮ್ನಿ ನಿಬೋಧತ ॥ ೭ ॥

ಚತುರಸ್ರಸ್ತಥಾವೃತ್ತ ಸ್ತಥಾ ಲಘುಮುಖೌ ಸ್ಮೃತೌ ।
ತಥಾ ಚೈವ ತು ವಿಜ್ಞೇಯೌ ಹ್ಯರಾಲಖಟಿಕಾಮುಖೌ ॥ ೮ ॥

ಆವಿದ್ಧವಕ್ರಸೂಚ್ಯಾಖ್ಯೌ ರೇಚಿತಾವರ್ಧರೇಚಿತೌ ।
ಅವಹಿತ್ಥಃ ಪಲ್ಲವಿತೋ ನಿತಂಬಃ ಕೇಶವರ್ಧನೌ ॥ ೯ ॥

ಲತಾಖ್ಯೌ ಕರಿಹಸ್ತೌ ಚ ಪಕ್ಷೋದ್ಯೋತಾಽರ್ಧವರ್ಧಿತೌ ।
ಜ್ಞೇಯೌ ಗರಡಪಕ್ಷೌ ಚ ದಂಡಪಕ್ಷೌ ತಥೈವ ಚ ॥ ೧೦ ॥

---

೪-೬　ಎರಡು ಕೈಗಳೂ ಸೇರಿ ಉಂಟಾಗುವ ಹಸ್ತ ವ್ಯಾಪಾರವು ಅಂಜಲಿ, ತಪೋತ, ಕರ್ಕಟ, ಸ್ವಸ್ತಿಕ, ಖಟಕ, ವರ್ಧಮಾನ, ಉತ್ಸಂಗ, ನಿಷಿಧ, ದೋಲ, ಪುಷ್ಪಪುಟ, ಮಕರ, ಗಜದಂತ, ಅವಹಿತ್ಥ ಎಂದು ಹದಿಮೂರು ವಿಧವಾಗುತ್ತದ ಇವು ನಾನು ಹೇಳಿರುವ ಪ್ರಭೇದಗಳು

೭-೧೩　ನೃತ್ಯಕ್ಕೆ ಉಪಯೋಗಕರಗಳಾದ ಆಯಾಯ ಹಸ್ತವಿನ್ಯಾಸವನ್ನು ಅವುಗಳ ನಾಮನಿರ್ದೇಶದಿಂದ ಹೇಳುತ್ತೇನೆ　ಚತುರಸ್ರ, ಆವೃತ್ತ, ಲಘುಮುಖ ವೆಂಬ ಹಸ್ತದ್ವಯ, ಅರಾಲಕಟಿಕಾಮುಖ, ಆವಿದ್ಧ, ಸೂಚೀಮುಖ, ರೇಚಿತ, ಅರ್ಧ ರೇಚಿತ, ಅವಹಿತ್ಥ, ಪಲ್ಲವಿತ, ನಿತಂಬ, ಕೇಶವರ್ಧನವೆಂಬ ಹಸ್ತದ್ವಯ, ಲತಾಖ್ಯ, ಕರಿಹಸ್ತವೆಂಬ ಹಸ್ತದ್ವಯ, ಪಕ್ಷದ್ಯೋತ, ಅರ್ಧವರ್ಧಿತವೆಂಬ ಹಸ್ತದ್ವಯ, ಗರುಡ ಪಕ್ಷ ದಂಡಪಕ್ಷಗಳೆಂಬ ಹಸ್ತದ್ವಯ, ಊರ್ಧ್ವಮಂಡಲಜ, ಪಾರ್ಶ್ವಮಂಡಲಜವೆಂಬ

ಊರ್ಧ್ವಮಂಡಲಜೌ ಚೈವ ಪಾರ್ಶ್ವಮಂಡಲಜಾವಪಿ ।
ಪಾರ್ಶ್ವಾರ್ಧಮಂಡಲೌ ಚೈವ ಉರೋಮಂಡಲಕೌ ತಥಾ ॥ ೧೧ ॥

ಇಷ್ಟಸ್ವಸ್ತಿಕಕಾವನ್ಯೌ ತಥಾ ವೈ ಪದ್ಮಕೋಶಿಕೌ ।
ಅಲಿಪಲ್ಲವಸಂಜ್ಞೌ ಚ ತಥಾ ಚೋಲ್ಬನಸಂಜ್ಞಿತೌ ॥ ೧೨ ॥

ಲಲಿತೌ ವಲಿತೌ ಚೈವ ಜ್ಞೇಯೌ ನೃತ್ಯಕರಾಃ ಸದಾ ।
ಅತಃಪರಂ ಪ್ರವಕ್ಷ್ಯಾಮಿ ಕರಾಣಾಂ ಕರ್ಮಲಕ್ಷಣಂ ॥ ೧೩ ॥

ಪ್ರಸಾರಿತಾಗ್ರಾ ಸಹಿತಾ ಯಸ್ಯಾಂಗುಲ್ಯೋ ಭವಂತಿ ಹಿ ।
ಕುಂಚಿತಶ್ಚ ತಥಾಂಗುಷ್ಠಃ ಸಪತಾಕ ಇತಿ ಸ್ಮೃತಃ ॥ ೧೪ ॥

ಏಷ ಪ್ರಹಾರಗ್ರಹಣೇ ರೋದನೇ ಸ್ಯಾತ್ಪ್ರತಾಪನೇ ।
ಚಲಿತಾಂಗುಲಿರಪ್ಯೇಷ ವಾಯುವೃಷ್ಟಿನಿರೂಪಣೇ ॥ ೧೫ ॥

---

ಹಸ್ತದ್ವಯ, ಪಾರ್ಶ್ವಾರ್ಧಮಂಡಲ, ಉರೋಮಂಡಲಕವೆಂಬ ಹಸ್ತದ್ವಯ, ಇಷ್ಟ ಸ್ವಸ್ತಿಕಗಳೆಂಬ ಹಸ್ತದ್ವಯ, ಪದ್ಮಕೋಶಿಕವೆಂಬ ಹಸ್ತದ್ವಯ ಅಲಿಪಲ್ಲವಗಳೆಂಬ ಹಸ್ತದ್ವಯ, ಉಲ್ಬನವೆಂಬ ಹಸ್ತದ್ವಯ, ಲಲಿತ ವಲಿತಗಳೆಂಬ ಹಸ್ತದ್ವಯ, ಇವೆಲ್ಲವೂ ನೃತ್ಯಕರಗಳೆಂದು ತಿಳಿಯಬೇಕು ಇನ್ನು ಮುಂದ ಈ ಕರವಿನ್ಯಾಸಗಳ ಲಕ್ಷಣಗಳನ್ನು ಹೇಳುತ್ತೇನೆ

೧೪-೧೬ ಯಾವ ಕರವಿನ್ಯಾಸದಲ್ಲಿ ಬೆರಳುಗಳೆಲ್ಲವೂ ಒಂದಾಗಿ ಸೇರಿದ್ದು ಮುಂಭಾಗಕ್ಕೆ ಚಾಚಲ್ಪಟ್ಟಿರುವುವೋ ಅಂಗುಷ್ಠವು ಮಾತ್ರ ಒಗ್ಗಿಸಲ್ಪಟ್ಟಿರುವುದೋ ಅಂತಹ ಕರವಿನ್ಯಾಸವು ಪತಾಕಾ ಎನಿಸುತ್ತದೆ ಇದನ್ನು ಮತ್ತೊಬ್ಬರಿಂದ ಪ್ರಹಾರ ಉಂಟಾದಲ್ಲಿ ಅದನ್ನು ಸ್ವೀಕರಿಸುವಾಗಲೂ ಮತ್ತು ಅದನ್ನು ತಡೆಯುವಾಗಲೂ ಬೆಂಕಿಯ ಮೇಲೆ ಕಾಯಿಸುವಾಗಲೂ, ಅಭಿನಯಿಸಬೇಕು ಈ ಕರವಿನ್ಯಾಸದಲ್ಲಿ ಬೆರಳುಗಳು ಸೇರಿರದೆ ಚಲಿತವಾಗಿ ಬೇರೆ ಬೇರೆಯಾಗಿಯೂ ಇರುವುದುಂಟು ಹಾಗಿದಲ್ಲಿ ಈ ವಿನ್ಯಾಸವನ್ನು ಗಾಳಿಯ, ಮತ್ತು ಮಳೆಯ ಅಭಿನಯಕಾಲದಲ್ಲಿ ಪ್ರಯೋಗಿಸಬೇಕು ಇದು ಉತ್ಸಾಹಕಾಲದಲ್ಲಿ ಮೇಲ್ಮುಖವಾಗಿಯೂ ಛತ್ರಿಯೋ

**ಊರ್ಧ್ವಗಶ್ಚ ತಥೋತ್ಸಾಹೇ ಛತ್ರಾದಿಷ್ವಪ್ಯಧೋಮುಖಃ ।**
**ಪುಷ್ಕರಪ್ರಹಿತಸ್ತಾಲೇ ಸಮಃ ಪ್ರಚಲಿತಾಂಗುಲಿಃ || ೧೬ ||**

**ಪಕ್ಷ್ಮೋತ್ಕ್ಷೇಪೇ ರೇಚಿತಕ ಉತ್ಕ್ಷಿಪ್ತಶ್ಚೈವ ಧಾರಣೇ ।**
**ಅಸ್ಯೈಕಾನಾಮಿಕಾ ವಕ್ರಾ ತ್ರಿಪತಾಕಾ ತಥಾ ಭವೇತ್ || ೧೭ ||**

**ಆವಾಹನೇ ಪ್ರಯುಂಜೀತ ಮುಕುಟಾಭಿನಯೇಪ್ಯುತ ।**
**ಅಚಲಾಂಗುಲಿರಪ್ಯೇಷ ಲಘುಪಕ್ಷಿನಿರೂಪಣೇ || ೧೮ ||**

**ತಯಾನಾಮಿಕಯಾ ಕಾರ್ಯಂ ತಥೈವಾಶ್ರುಪ್ರಮಾರ್ಜನಂ ।**
**ಮಂಗಲಸ್ಪರ್ಶನಂ ಕಾರ್ಯಂ ಶಿರಸಶ್ಚನಿವೇಶನಂ || ೧೯ ||**

**ಶ್ರೋತ್ರಸಂವರಣಂ ಚೈವ ಕಾರ್ಯಂ ಭೂಮಿಮುಖೇನ ತು ।**
**ಭುಜಂಗಾನಾಮಭಿನಯಂ ಭ್ರಮರಾಣಾಂ ತಥೈವ ಚ || ೨೦ ||**

ಮೊದಲಾದುವುಗಳನ್ನು ಧರಿಸುವಾಗ ಅಧೋಮುಖವಾಗಿಯೂ ಮದ್ದಲೆ ಮೊದಲಾದುವನ್ನೂ ತಾಲವನ್ನು ಪ್ರಯೋಗಿಸುವಾಗಲೂ ಸಹ ಅಧೋಮುಖವಾಗಿ ಸಮವಾದ ಮತ್ತು ಚಲಿತವಾದ ಬೆರಳುಗಳಿಂದ ಕೂಡಿರುತ್ತದೆ

೧೭-೨೦ ರೆಪ್ಪೆಗಳನ್ನು ಅದುರಿಸುವಾಗಲೂ, ರೇಚಿತವೆಂಬ ಭ್ರಮಣಕಾಲದಲ್ಲಿಯೂ, ಭಾರವನ್ನು ಧರಿಸುವಾಗಲೂ ಇದು ಮೇಲಕ್ಕೆತ್ತಲ್ಪಡುತ್ತದೆ ಈ ಹಸ್ತನ್ಯಾಸವು ಕಿರುಬೆರಳಿನ ಪಕ್ಕದ ಅನಾಮಿಕಾ ಎಂಬ ಬೆರಳು ವಕ್ರವಾಗಿದಲ್ಲಿ (ಅಂದರ ತರ್ಜನೀ ಮಧ್ಯಮ ಕನಿಷ್ಠಿಕಾ ಇವು ನೇರವಾಗಿದ್ದಲ್ಲಿ) ತ್ರಿಪತಾಕಾ ಎನಿಸುತ್ತದೆ ಇದನ್ನು ದೇವತಾವಾಹನಕಾಲದಲ್ಲಿಯೂ, ಕಿರೀಟವನ್ನು ಧರಿಸುವ ಅಭಿನಯುವಲ್ಲಿಯೂ ಪ್ರಯೋಗಿಸಬೇಕು ಇದು ಗತಿಲಾಘವವುಳ್ಳ ಪಕ್ಷಿಯನ್ನು ಅಭಿನಯಿಸುವಕಾಲದಲ್ಲಿ ಅಲುಗಾಡದಿರುವ ಬೆರಳುಗಳಿಂದಲೂ ಕೂಡಿರುತ್ತದೆ ಈ ಹಸ್ತದ ವಕ್ರವಾದ ಅನಾಮಿಕಾ ಎಂಬ ಬೆರಳುಗಳಿಂದ ಕಣ್ಣೀರನ್ನು ಒರಕೊಳ್ಳುವ ಮತ್ತು ಮಂಗಲ ವಸ್ತುವನ್ನು ಸ್ಪರ್ಶಮಾಡುವ, ತಲೆಯನ್ನು (ದಿಂಬು ಮೊದಲಾದವುಗಳ ಮೇಲೆ) ಒರಗಿಸುವ, ಮತ್ತು (ಅಹಿತ ಶಬ್ದವನ್ನು ಕೇಳುವಾಗ) ಕಿವಿಯನ್ನು ಮುಚ್ಚಿಕೊಳ್ಳುವ, ಅಭಿನಯಗಳನ್ನು ಭೂಮಿಗೆ ಬಗ್ಗಿ ಪ್ರಯೋಗಿಸಬೇಕು, ಹಾವುಗಳು ಮತ್ತು ದುಂಬಿಯೇ ಮೊದಲಾದವುಗಳ ಅಭಿನಯುವನ್ನೂ ಸಹ ಇದರಿಂದಲೇ ಪ್ರದರ್ಶಿಸಬೇಕು

ತ್ರಿಪತಾಕಾ ಯದಾ ಹಸ್ತೇ ಭವೇತ್ಪೃಷ್ಠಾವಲೋಕಿನೀ ।
ತರ್ಜನೀ ತು ತದಾ ಜ್ಞೇಯಃ ಕರ್ತರೀಮುಖಸಂಜ್ಞಿತಃ　　॥ ೨೧ ॥

ಕಾರ್ಯೋಯಂ ಪರಿವಾರೇಷು ಭಿನ್ನಶ್ಚ ಪತನೇಷು ಚ ।
ಅನಾಮಿಕಾ ತು ಸಾಂಗುಷ್ಠಾ ಅರ್ಧಚಂದ್ರಃ ಕರೇ ಭವೇತ್　　॥ ೨೨ ॥

ಬಾಲಚಂದ್ರಾಭಿನಯನೇ ಬಾಲಸ್ಯಾಥರವೇಸ್ತಥಾ ।
ಮೇಖಲಾಂ ಜಘನೇ ಚೈವ ಕುರ್ಯಾಚ್ಛಾನೇನ ಕುಂಡಲಂ　　॥ ೨೩ ॥

ಖಂಡಪ್ರದೇಶಿನೀ ಕಾರ್ಯಾ ಅಂಗುಲ್ಯಃ ಕುಂಚಿತಾಸ್ತಥಾ ।
ಶೇಷಾ ಭಿನ್ನೋರ್ಧ್ವವಲಿತಾ ಹ್ಯಟಾಲೋಂಗುಲಯಃ ಕರೇ　　॥ ೨೪ ॥

ಗಾಂಭೀರ್ಯಸತ್ವಶೌಂಡೀರ್ಯ ಕೇಶಸಂಗ್ರಹಣಾದಿಷು ।
ಸ್ವೇದಸ್ಯ ಚಾಪನಯನೇ ಶೇಷೇ ಚೈವ ಕರೋ ಭವೇತ್　　॥ ೨೫ ॥

---

೨೧-೨೫　ಈ ತ್ರಿಪತಾಕವೆಂಬ ಕರವಿನ್ಯಾಸವು ಹಿಂಭಾಗಕ್ಕೆ ಅಭಿಮುಖವಾದ ತರ್ಜನೀ ಬೆರಳಿನಿಂದ ಕೈಯ್ಯಿನಿಂದ ತೋರಿಸಲ್ಪಟ್ಟಲ್ಲಿ ಇದಕ್ಕೆ ಕರ್ತರೀಮುಖವೆಂದು ಹೆಸರು ಈ ವಿನ್ಯಾಸವನ್ನು ತನ್ನ ಪರಿವಾರದ ವಿಷಯದಲ್ಲಿಯೂ ಬೆರಳುಗಳು ಶಿಥಿಲವಾಗಿರುವಾಗ ಪತನಕಾಲದಲ್ಲಿಯೂ ಸ್ಪಷ್ಟವಾಗಿ ಪ್ರಯೋಗಿಸಬೇಕು. ಹಸ್ತವಿನ್ಯಾಸದಲ್ಲಿ ಅನಾಮಿಕೆಯು ಅಂಗುಷ್ಠದೊಡನೆ ಕೂಡಿದ್ದಲ್ಲಿ ಇದು ಅರ್ಧಚಂದ್ರವೆನಿಸುತ್ತದೆ ಈ ಹಸ್ತವಿನ್ಯಾಸದಿಂದ, ಬಾಲಚಂದ್ರನ ಅಭಿನಯವನ್ನೂ ಬಾಲಸೂರ್ಯನ ಅಭಿನಯವನ್ನೂ, ವಡ್ಯಾಣಧಾರಣವನ್ನೂ, ಕುಂಡಲಧಾರಣವನ್ನೂ ಪ್ರಯೋಗಿಸಬೇಕು ಯಾವ ಹಸ್ತವಿನ್ಯಾಸದಲ್ಲಿ ಅಂಗುಷ್ಠವು ಕುಳ್ಳಾಗಿದ್ದು ಕೆಲವು ಬೆರಳುಗಳು ವಕ್ರವಾಗಿಯೂ, ಉಳಿದ ಕೆಲವು ಬೆರಳುಗಳು ಮೇಲ್ಮುಖವಾಗಿಯೂ ಇದ್ದು ಅಗಲಿದ್ದಲ್ಲಿ ಅಟಾಲವೆಂಬ ನೃತ್ತಕರವಾಗುತ್ತದೆ ಇದನ್ನು ಗಾಂಭೀರ್ಯ, ಬಲ, ದಕ್ಷತೆ, ಕೇಶಗ್ರಹಣ, ಇತ್ಯಾದಿ ಸಂದರ್ಭದಲ್ಲಿಯೂ, ಬೆವರನ್ನು ಒರಸಿಕೊಳ್ಳುವಾಗಲೂ, ಇತರ ಕೆಲವು ಸಂದರ್ಭಗಳಲ್ಲಿಯೂ ಪ್ರಯೋಗಿಸಬೇಕು

ಅಟಾಲಃ ಶುಕತುಂಡಶ್ಚ ವಕ್ರಿತಾನಾಮಿಕಾಂಗುಲಿಃ ।
ನಾಹಂ ತ್ವಮಿತ್ಯಥೈತೇನ ನಿತ್ಯಂ ಚಾಭಿನಯೇದ್ಬುಧಃ ॥ ೨೬ ॥

ಅಂಗುಲ್ಯೋ ಯಸ್ಯ ಹಸ್ತಸ್ಯ ತಲಮಧ್ಯೇಽಗ್ರಸಂಸ್ಥಿತಾಃ ।
ತಾಸಾಮುಪರಿ ಚಾಂಗುಷ್ಠಃ ಸ ಮುಷ್ಟಿರಿತಿ ಸಂಜ್ಞಿತಃ ॥ ೨೭ ॥

ಏಷ ಪ್ರಹಾರೇ ವ್ಯಾಯಾಮೇ ನಿರ್ದಯಸ್ತನಪೀಡನೇ ।
ಸಂಧಾರಣೇಽಸಿಯಷ್ಟ್ಯೋಶ್ಚ ಗ್ರಹಣೇ ಕುಂತದಂಡಯೋಃ ॥ ೨೮ ॥

ಊರ್ಧ್ವಾಂಗುಷ್ಠೋಯಮೇವಸ್ಯಾತ್ತ್ವರಃ ಶಿಖರಸಂಜ್ಞಿತಃ ।
ಏಷ ರಶ್ಮಿಗ್ರಹೇ ಕಾರ್ಯಶ್ಚಾಪಾಂಕುಶಧನುರ್ಗ್ರಹೇ ॥ ೨೯ ॥

ಮುಷ್ಟಿಮಧ್ಯಗತೋಂಗುಷ್ಠಃ ಕಪಿತ್ಥ ಇತಿ ಕೀರ್ತಿತಃ ।
ಅನೇನಾಭಿನಯಃ ಕಾರ್ಯೋ ಮಧ್ಯೇ ಚಕ್ರೇ ಶರೇ ತಥಾ ॥ ೩೦ ॥

---

೨೬–೨೮ ಈ ಅಟಾಲವೆಂಬ ಹಸ್ತವಿನ್ಯಾಸವೇ ವಕ್ರವಾದ (ಬಗ್ಗಿಸಲ್ಪಟ್ಟ) ಅನಾಮಿಕೆಯಿಂದ ಕೂಡಿದ್ದಲ್ಲಿ ಶುಕತುಂಡವೆನಿಸುತ್ತದೆ ಇದನ್ನು ನಾನಲ್ಲ ನೀನೇ ಇದನ್ನು ಮಾಡಿದವನು ಇತ್ಯಾದಿ ಅಗ್ರಹೋಕ್ತಿಗಳಲ್ಲಿ ಪ್ರಯೋಗಿಸಬೇಕು ಯಾವ ಹಸ್ತವಿನ್ಯಾಸದಲ್ಲಿ ಬೆರಳುಗಳೆಲ್ಲವೂ ಅಗ್ರಭಾಗದಿಂದ ಕೈಯ್ಯಿನ ಮಧ್ಯಭಾಗದಲ್ಲಿ ನೇರಿರುತ್ತವೆಯೋ ಆ ಬೆರಳುಗಳ ಮೇಲೆ ಅಂಗುಷ್ಠವು ದೃಢವಾಗಿ ಕೂಡಿರುವುದೋ ಅದು ಮುಷ್ಟಿ ಎನಿಸುತ್ತದೆ ಇದು ಪ್ರಹಾರಕಾಲದಲ್ಲಿಯೂ, ವ್ಯಾಯಾಮಕಾಲದಲ್ಲಿಯೂ ನಿರ್ದಯತೆಯಿಂದ ಎದೆಯನ್ನು ಮರ್ದಿಸುವಾಗಲೂ, ಕತ್ತಿ, ದೊಣ್ಣೆ ಮುಂತಾದುವನ್ನು ಧರಿಸುವಾಗಲೂ, ಕುಂತ ಮತ್ತು ದೊಣ್ಣೆಗಳನ್ನು ಗ್ರಹಿಸುವಾಗಲೂ ಪ್ರಯೋಗಿಸಲು ಅರ್ಹವಾಗುತ್ತದೆ

೨೯-೩೨ ಈ ಮುಷ್ಟಿಯೇ ಅಂಗುಷ್ಠವು ಮೇಲ್ಮುಖವಾಗಿದ್ದಲ್ಲಿ ಶಿಖರವೆನಿಸುತ್ತದೆ ಇದನ್ನು ಲಗಾಮು ಹಿಡಿಯುವಾಗಲೂ, ಧನುಸ್ಸು, ಅಂಕುಶ ಮುಂತಾದ ಆಯುಧಗಳನ್ನು ಧರಿಸುವಾಗಲೂ ಪ್ರಯೋಗಿಸಬೇಕು ಈ ಅಂಗಷ್ಠವು ಮುಷ್ಟಿಯ ಮಧ್ಯಭಾಗವನ್ನು ಹೊಂದಿದ್ದಲ್ಲಿ ಕಪಿತ್ಥವೆಂಬ ಕರವಿನ್ಯಾಸವಾಗುತ್ತದೆ ಇದರಿಂದ ಸೊಂಟದಲ್ಲಿ ಕೈ ಇಡುವಾಗಲೂ, ಚಕ್ರ, ಬಾಣ, ಇವನ್ನು ಧರಿಸುವಾಗಲೂ

**ಉತ್ಕ್ಷಿಪ್ತವಕ್ರಾ ತು ಯದಾನಾಮಿಕಾ ಸಕನೀಯಸೀ ।**
**ಅಸ್ಯೈವ ತು ಕಪಿತ್ಥಸ್ಯ ತತಃ ಸ್ಯಾತ್ ಕಟಕಾಮುಖಃ ॥ ೩೧ ॥**

**ಹೋತ್ರೇ ಛತ್ರಗ್ರಹೇ ಚೈವ ಕರ್ಷಣೇ ವ್ಯಜನೇ ತಥಾ ।**
**ಸ್ರಗ್ದಾಮಧಾರಣೇ ಕಾರ್ಯೋ ಹ್ಯಸಂಕೋಚೋಸ್ಯ ಸಂಗ್ರಹಃ ॥ ೩೨ ॥**

**ಪ್ರಸೃತಾ ತರ್ಜನೀ ಚಾತ್ರ ಯದಾ ಸೂಚೀಮುಖಸ್ತದಾ ।**
**ನಿಷ್ಪಾದನೇ ಚಾಭಿನಯೋ ನೇತ್ರ ಶಕ್ರಮಹೇಶಯೋಃ ॥ ೩೩ ॥**

**ಅಸ್ಯಾಂಗುಲ್ಯಸ್ತು ವಿಪುಲಾಃ ಸಹಾಂಗುಷ್ಠೇನ ಕುಂಚಿತಾಃ ।**
**ಊರ್ಧ್ವಾ ಹಂಸನಖಸ್ಯೈವ ಸಭವೇತ್ಪದ್ಮಕೋಶಕಃ ॥ ೩೪ ॥**

**ಶ್ಲಿಷ್ಟೋಂಗುಷ್ಠೋ ನಿಮ್ನಮಧ್ಯಃ ಪತಾಕೋಹಿಶಿರೋ ಭವೇತ್ ।**
**ಸಲಿಲಸ್ಯ ಪ್ರದಾನೇ ತು ಕಾರ್ಯೋ ನೇನ ಚ ಸೂಚನಾ ॥ ೩೫ ॥**

---

ಅಭಿನಯಿಸಬೇಕು ಕಪಿತ್ಥವೆಂಬ ಈ ಕರವಿನ್ಯಾಸವೇ ಕಿರುಬೆರಳಿನೊಡನೆ ಅನಾಮಿಕೆಯು ವಕ್ರವಾಗಿರದೆ ಋಜುವಾಗಿದ್ದಲ್ಲಿ ಕಟಕಾಮುಖವಾಗುತ್ತದೆ ಇದನ್ನು ಹೋಮ ಮಾಡುವಾಗಲೂ, ಛತ್ರಿಯನ್ನು ಧರಿಸುವಾಗಲೂ ಮೌರ್ವಿಯೇ ಮೊದಲಾದುದನ್ನು ಸೆಳೆಯುವಾಗಲೂ, ಬೀಸುವಾಗಲೂ, ಹೂಮಾಲೆಯನ್ನು ಧರಿಸುವಾಗಲೂ ಸಹ ಯಥೇಚ್ಛವಾಗಿ ಪ್ರಯೋಗಿಸಬಹುದು

೩೩–೩೫ ಈ ಕಟಕಾಮುಖದಲ್ಲಿ ತರ್ಜನೀ ಬೆರಳು ಚಾಚಿ ನಿಂತಲ್ಲಿ ಅದು ಸೂಚೀ[2]ಮುಖವೆನಿಸುತ್ತದೆ ಇದನ್ನು ಇಂದ್ರ ಮಹೇಶ್ವರ ಇವರ ನೇತ್ರನಿರ್ಮಾಣ ಸಂದರ್ಭದಲ್ಲಿ ಅಭಿನಯಿಸಬೇಕು ಈ ಹಸ್ತದಲ್ಲಿ ದೀರ್ಘವಾದ ಬೆರಳುಗಳು ಅಂಗುಷ್ಠದೊಡನೆ ಹಂಸನಖಗಳಂತೆ ಮೇಲ್ಮುಖವಾಗಿ ವಕ್ರೀಕರಿಸಲ್ಪಟ್ಟಲ್ಲಿ ಅದು ಪದ್ಮಕೋಶಕವೆಂಬ ಹಸ್ತವಿನ್ಯಾಸವಾಗುತ್ತದೆ ಪತಾಕಾ ಎಂಬ ಹಸ್ತವಿನ್ಯಾಸದಲ್ಲಿ ಬಗ್ಗಿದ ಮಧ್ಯಭಾಗ ಉಳ್ಳ ಅಂಗುಷ್ಠವು ಸೇರಿಕೊಂಡಿದ್ದಲ್ಲಿ ಅಹಿಶಿರಾ ಎಂಬ ವಿನ್ಯಾಸವಾಗುತ್ತದ ಇವರಿಂದ ಜಲಪಾನಾಭಿಲಾಷಿಗೆ ಗಂಗೋದಕವನ್ನು ಕೊಡುವ ಅಭಿನಯವನ್ನು ಪ್ರದರ್ಶಿಸಬೇಕು

---

1 ಇದನ್ನು ಹಿಂದೆ ನಿರ್ದೇಶ ಮಾಡಿಲ್ಲ

2 ಹಿಂದಿನ ಗಣನೆಯಲ್ಲಿ ಸೂಚ್ಯರ್ಧವೆಂದು ನಿರ್ದೇಶಿಸಿರುತ್ತಾರೆ ಸೂಚ್ಯರ್ಧ ಸೂಚೀಮುಖ—ಇವೆರಡೂ ಪರ್ಯಾಯನಾಮಗಳೆಂದೇ ಗ್ರಂಥಕಾರರ ಅಭಿಪ್ರಾಯವಿರಬೇಕು

**ಅಧೋಮುಖೀನಾಂ ಸರ್ವಾಸಾಮಂಗುಲೀನಾಂ ಯದಾ ಭವೇತ್ ।**
**ಕನಿಷ್ಠಾಂಗುಷ್ಠಕಾ ಚೋರ್ಧ್ವಾ ತದಾಸ್ಯಾನ್ಮೃಗಶೀರ್ಷಕಃ ॥ ೩೬ ॥**

**ಸೂಚಿತೇ ಛೇದಿತೇ ಕಾರ್ಯಂ ಶಕ್ತ್ಯಸ್ತ್ರೋಚ್ಚಾಲನೇ ತಥಾ ।**
**ತ್ರೇತಾಗ್ನಿಸಂಸ್ಥಿತಾ ಮಧ್ಯಾ ತರ್ಜನ್ಯಂಗುಷ್ಠಯೋರ್ಯದಾ ॥ ೩೭ ॥**

**ಲಾಂಗುಲೇಽನಾಮಿಕಾ ವಕ್ರಾ ತಥಾ ಚೋರ್ಧ್ವಾ ಕನೀಯಸೀ ।**
**ಅನೇನ ಖಲು ಕರ್ತವ್ಯಂ ಫಲಾನಾಂ ತು ನಿರೂಪಣಂ ॥ ೩೮ ॥**

**ಆವರ್ತ್ಯಂತೇ ಕರತಲೇ ಯಸ್ಯಾಂಗುಲ್ಯಃ ಕರಸ್ಯ ವೈ ।**
**ಪಾರ್ಶ್ವಗತವಿಕೀರ್ಣಾಶ್ಚ ಕಾಲಪದ್ಮ ಇತಿ ಸ್ಮೃತಃ ॥ ೩೯ ॥**

**ಪ್ರತಿಷೇಧಕೃತೇ ಯೋಜ್ಯೋ ನಾಸ್ತಿ ಶೂನ್ಯೇಷು ಚಾಪ್ಯಥ ।**
**ತಿಸ್ರಃ ಪ್ರಸಾರಿತಾಂಗುಲ್ಯಃ ತಥಾ ಚೋರ್ಧ್ವಾ ಕನೀಯಸೀ ॥ ೪೦ ॥**

---

೩೬-೩೯. ಎಲ್ಲಾ ಬೆರಳುಗಳೂ ಅಧೋಮುಖವಾಗಿದ್ದು, ಕನಿಷ್ಠಿಕೆಯಿಂದ ಕೂಡಿದ ಅಂಗುಷ್ಠವು ಮೇಲ್ಮುಖವಾಗಿದ್ದಲ್ಲಿ ಅದು ಮೃಗಶಿರ್ಷಕವೆನಿಸುತ್ತದೆ. ಇದನ್ನು ಸ್ವಶಕ್ತಿಯಿಂದ ಸೂಚಿತವಾದ ಕಾರ್ಯದಲ್ಲಿಯೂ, ಕತ್ತರಿಸಲ್ಪಟ್ಟ ವಸ್ತುವಿನಲ್ಲಿಯೂ, ಹಾಗೆಯೇ ಮೇಲಕ್ಕೆ ಎತ್ತುವಾಗಲೂ ಪ್ರಯೋಗಿಸಬೇಕು ತರ್ಜನಿ ಮತ್ತು ಅಂಗುಷ್ಠಗಳಲ್ಲಿ ಮಧ್ಯಾಂಗುಲಿಯು ಸೇರಿದಲ್ಲಿ [1]ತ್ರೇತಾಗ್ನಿ ಸಂಸ್ಥಿತಾ ಎನಿಸುತ್ತದೆ. ಅನಾಮಿಕೆಯು ವಕ್ರವಾಗಿದ್ದು, ಕಿರುಬೆರಳು ಮೇಲ್ಮುಖವಾಗಿದ್ದಲ್ಲಿ ಲಾಂಗೂಲವೆನಿಸುತ್ತದೆ ಇದರಿಂದ ಫಲಗಳನ್ನು ಅಭಿನಯಿಸಬೇಕು ಯಾವ ಹಸ್ತದಲ್ಲಿ ಮಧ್ಯದಲ್ಲಿ ಸುತ್ತಿಸುತ್ತಿ ಬೆರಳುಗಳು ಪಕ್ಕದಲ್ಲಿ ಕೆದರುತ್ತವೆಯೋ ಅಂತಹ ಹಸ್ತವಿನ್ಯಾಸವು ಕಾಲಪದ್ಮವೆನಿಸುತ್ತದೆ.

೪೦-೪೧ ಇದನ್ನು ನಿಷೇಧಮಾಡುವಾಗಲೂ, ನಾಸ್ತಿ, ಇಲ್ಲಾ ಇತ್ಯಾದಿ ವ್ಯವಹಾರಗಳಲ್ಲಿಯೂ ಪ್ರಯೋಗಿಸಬೇಕು ಯಾವ ಹಸ್ತವಿನ್ಯಾಸದಲ್ಲಿ ಮೂರು ಬೆರಳುಗಳು ನೀಡಲ್ಪಟ್ಟಿದ್ದು, ಕಿರುಬೆರಳು ಮೇಲ್ಮುಖವಾಗಿರುತ್ತದೆಯೋ, ಅಂಗುಷ್ಠವು ಆ ಕಿರುಬೆರಳಿನ ಮಧ್ಯಭಾಗದಲ್ಲಿ ಸೇರಿರುವುದೋ ಇಂತಹ ಹಸ್ತವಿನ್ಯಾಸವು

---

1 ಇದೂ ಹಿಂದೆ ನಿರ್ದೇಶಿಸಲ್ಪಟ್ಟಿಲ್ಲ.

ತಸ್ಯಾ ಮಧ್ಯಾಶ್ರಿತೋಂಗುಷ್ಠಃ ಕರಃ ಸ ಚತುರಃ ಸ್ಮೃತಃ ।
ವಚಸಾಂ ವಿನಿಯೋಗೇ ಚ ಮಧ್ಯೇ ಚೈವ ಪ್ರಯೋಜಯೇತ್ ॥ ೪೧ ॥

ಅನೇನೈವ ತಥಾ ಕಾರ್ಯಂ ವರ್ಣಾನಾಂ ತು ನಿರೂಪಣಂ ।
ಊರ್ಧ್ವಸ್ಥೇಭಿನಯೇಚ್ಛ್ವೇತಂ ರಕ್ತೇ ಸ್ಯಾದರ್ಧಮಂಡಲಂ ॥ ೪೨ ॥

ಮಂಡಲಂ ನಭವೇತ್ಪೀತೆ ನೀಲಂ ಚ ಮೃದಿತೇ ಭವೇತ್ ।
ಸ್ವಭಾವಸ್ಥೇನ ಕೃತ್ಸ್ನಂ ಚ ಶೇಷಾ ವರ್ಣಾಸ್ತಥೈವ ಚ ॥ ೪೩ ॥

ಮಧ್ಯಮಾಂಗುಷ್ಠಸಂದೇಶೋ ವಕ್ರಾ ಚೈವ ಪ್ರದೇಶಿನೀ ।
ಊರ್ಧ್ವಮನ್ಯಾಃ ಪ್ರಕೀರ್ಣಾಶ್ಚ ಭ್ರಮರಶ್ಚ ತದಾ ಭವೇತ್ ॥ ೪೪ ॥

ಪದ್ಮಾದಿಗ್ರಹಣೇ ಕಾರ್ಯಂ ಕರ್ಣಪೂರೇ ತಥಾಪ್ಯಯಂ ।
ತರ್ಜನೀ ಮಧ್ಯಮಾಂಗುಷ್ಠಾ ತ್ರೇತಾಗ್ನಿಸ್ಥಾ ನಿರಂತರಂ ॥ ೪೫ ॥

---

ಚತುರವೆನಿಸುತ್ತದೆ ಇದನ್ನು ಅಂಗುಷ್ಠವು ಮಧ್ಯದಲ್ಲಿದ್ದಾಗ- ವಾಗ್ದಾನಮಾಡುವಾಗ ಉಪಯೋಗಿಸಬೇಕು ವರ್ಣಗಳ ನಿರೂಪಣವನ್ನೂ ಸಹ ಇದರಿಂದಲೇ ಅಭಿನಯಿಸಬೇಕು

೪೨-೪೪ ಈ ಅಂಗುಷ್ಠವು ಮೇಲ್ಮುಖವಾಗಿರುವಾಗ ಬಿಳಿಯ ಬಣ್ಣವನ್ನೂ ಅರ್ಧಮುಷ್ಟಿಗೆ ಮಂಡಲಾಕಾರ ಹೊಂದಿರುವಾಗ ಕೆಂಪು ಬಣ್ಣವನ್ನೂ, ಮಂಡಲಾಕಾರವಿಲ್ಲದಿರುವಾಗ ಹೊಂಬಣ್ಣವನ್ನೂ, ಮರ್ದಿಸಲ್ಪಟ್ಟಿರುವಾಗ ನೀಲವರ್ಣವನ್ನೂ (ಕಪ್ಪು) ಸ್ವಾಭಾವಿಕ ಸ್ಥಿತಿಯಲ್ಲಿರುವಾಗ ಇತರ ಎಲ್ಲಾ ವರ್ಣಗಳನ್ನೂ ಅಭಿನಯಿಸಬೇಕು, ಅಂಗುಷ್ಠವು ವಕ್ರವಾಗಿದ್ದು ಮಧ್ಯಮಾಂಗುಲಿಯನ್ನು ಹೊಂದಿದ್ದಲ್ಲಿ, ಮತ್ತು ಇತರ ಬೆರಳುಗಳು ಕೆದರಿದ್ದಲ್ಲಿ ಅದು ಭ್ರಮರವೆಂಬ ಹಸ್ತ ಸನ್ನಿವೇಶವಾಗುತ್ತದೆ

೪೫-೪೮. ಇದನ್ನು ಪದ್ಮವೇ ಮೊದಲಾದುವುಗಳನ್ನು ಗ್ರಹಿಸುವಾಗಲೂ, ಕಿವಿಯ ಮೇಲಿನ ಆಭರಣವನ್ನು ಧರಿಸುವಾಗಲೂ, ಅಭಿನಯಿಸಬೇಕು ತರ್ಜನೀ ಮತ್ತು ಮಧ್ಯಮ ಅಂಗುಷ್ಠ ಇವು ಎಡಬಿಡದೆ ಸೇರಿದ್ದಲ್ಲಿ ತ್ರೇತಾಗ್ನಿಸ್ಥಾ ಎಂಬ

ಭವೇಯುರ್ಹಂಸವಕ್ತ್ರಸ್ಯ ಶೇಷಾಹ್ಯನ್ಯಾಃ ಪ್ರಸಾರಿತಾಃ ।
ಶ್ಲಕ್ಷ್ಣಲಾಘವನಿಸ್ಸಾರಮಾರ್ದವೇಷು ಪ್ರಯೋಜಯೇತ್ ॥ ೪೬ ॥

ತಿರ್ಯಕ್ಪಿಂಡೀಕೃತಾ ಯಸ್ಮಿನ್ ಉನ್ನತಾ ಚ ಕನಿಷ್ಠಿಕಾ ।
ಅಂಗುಷ್ಠಃ ಕುಂಚಿತಸ್ತ್ವೇವಂ ಹಂಸಪಕ್ಷ ಇತಿ ಸ್ಮೃತಃ ॥ ೪೭ ॥

ಗಂಡಸಂಶ್ರಯಮೇತೇನ ಭೋಜನಃ ಸಪರಿಗ್ರಹಃ ।
ಸ್ಪರ್ಶೇ ಚೈವಾನುಲೇಪಾರ್ಥೇ ಕಾರ್ಯೇ ಸಂವಾಹನೇ ತಥಾ ॥ ೪೮ ॥

ತರ್ಜನ್ಯಂಗುಷ್ಠಸಂದಂಶಸ್ತ್ವರಾಲಸ್ಯ ಯದಾ ಭವೇತ್ ।
ನಿಭುಗ್ನತಲಮಧ್ಯಶ್ಚ ಸ ಸಂದಂಶ ಇತಿ ಸ್ಮೃತಃ ॥ ೪೯ ॥

ಸಂದಂಶಸ್ತ್ರಿವಿಧೋ ಜ್ಞೇಯಸ್ತ್ವಗ್ರಜೋ ಮುಖಜಸ್ತಥಾ ।
ತಥಾ ಪಾರ್ಶ್ವಕೃತಶ್ಚೈವ ತಸ್ಯ ಕರ್ಮಾಣಿ ಮೇ ಶೃಣು ॥ ೫೦ ॥

---

ವಿನ್ಯಾಸವಾಗುತ್ತದೆ ಇತರ ಬೆರಳುಗಳು ನೀಡಲ್ಪಟ್ಟಿದ್ದಲ್ಲಿ ಇದೇ ಹಂಸಾಸ್ಯವೆನಿಸುತ್ತದೆ. ಇದನ್ನು ಸ್ವಚ್ಛತೆ, ಲಾಘವ, ಪ್ರವಹಿಸುವಿಕೆ, ಮಾರ್ದವ ಇವುಗಳ ಅಭಿನಯದಲ್ಲಿ ಪ್ರಯೋಗಿಸಬೇಕು ಕಿರುಬೆರಳು ಅಡ್ಡಲಾಗಿ ಹೊಂದಿಕೊಂಡು ಮೇಲ್ಮುಖವಾಗಿದ್ದು, ಅಂಗುಷ್ಠವು ವಕ್ರವಾಗಿದ್ದಲ್ಲಿ ಹಂಸಪಕ್ಷವೆಂಬ ವಿನ್ಯಾಸವಾಗುತ್ತದೆ ಇದರಿಂದ ಕಪೋಲಪ್ರದೇಶದ ಆಶ್ರಯವನ್ನೂ ಸಪರಿಕರವಾದ ಭೋಜನವನ್ನೂ, ಚಂದನಾದಿಗಳನ್ನು ಹಚ್ಚುವಾಗ ಮಾಡುವ ಸ್ಪರ್ಶವನ್ನೂ, ಅವಯುಗಳ ಒತ್ತುವಿಕೆಯನ್ನೂ ಅಭಿನಯಿಸಬೇಕು

೪೯-೫೧ ವಕ್ರವಾದ ಹಸ್ತದಲ್ಲಿ ತರ್ಜನೀ ಮತ್ತು ಅಂಗುಷ್ಠಗಳಿಗೆ ಪರಸ್ಪರ ಸಂಬಂಧ ಉಂಟಾಗಿದ್ದು ಹಸ್ತದ ಮಧ್ಯಪ್ರದೇಶವು ಬಗ್ಗಿದಲ್ಲಿ ಸಂದಂಶವೆನಿಸುತ್ತದೆ ಈ ಸಂದಂಶವು, ಅಗ್ರಜ, ಮುಖಜ, ಪಾರ್ಶ್ವಕೃತವೆಂದು ಮೂರು ವಿಧವಾಗಿರುತ್ತದೆ ಅವುಗಳ ವ್ಯಾಪಾರವನ್ನೂ ಹೇಳುತ್ತೇನೆ ಅಗ್ರಜವೆಂಬುದನ್ನು ಇಕ್ಕಳವನ್ನು ಹಿಡಿಯುವಾಗಲೂ ನಾಟಿಕೊಂಡಿರುವ ಬಾಣದ ಅಲಗನ್ನು ಸೆಳೆಯುವಾಗಲೂ ಪ್ರಯೋಗಿಸಬೇಕು, ಮುಖಜವೆಂಬ ಎರಡನೆಯದನ್ನು ಚಿತ್ರವನ್ನು ಬರೆಯು

ಸಂದಂಶಗ್ರಹಣೇ ಕಾರ್ಯಃ ಶಲ್ಯೋದ್ಧಾರೇ ತಥಾಗ್ರಜಃ ।
ಆಲೇಖ್ಯರಂಜನೇ ಚೈವ ತರ್ಜನೀಪೀಡನೇ ತಥಾ ॥ ೫೧ ॥

ಯಜ್ಞೋಪವೀತೀ ಪಾರ್ಶ್ವಸ್ಥಃ ಶಿರಃ ಸಂದರ್ಶನೇ ತಥಾ ।
ಸಮಾಗತಾಗ್ರಾಂಗುಲಿಕೋ ಮುಕುಲಃ ಪದ್ಮಕೋಶಕಃ ॥ ೫೨ ॥

ದೇವಾರ್ಚಾಕರಣೇ ಕಾರ್ಯೋ ಬಲೇ ಪದ್ಮನಿರೂಪಣೇ ।
ಅಸಂಯುತಾಃ ಕರಾಹ್ಯೇತೇ ಯಥಾವತ್ಕೀರ್ತಿತಾ ಮಯಾ ॥ ೫೩ ॥

ಪತಾಕಾಭ್ಯಾಂ ತು ಹಸ್ತಾಭ್ಯಾಂ ಸಸ್ಪುಟೋಂಜಲಿರುಚ್ಯತೇ ।
ದೇವತಾನಾಂ ಗುರೂಣಾಂ ಚ ಪಿತ್ರೂಣಾಂ ಚೇಷ್ಯತೇ ಪುನಃ ॥ ೫೪ ॥

ಅನ್ಯೋನ್ಯಪಾರ್ಶ್ವಸಕ್ತಾಭ್ಯಾಂ ಕರಾಭ್ಯಾಂ ಸ್ಯಾತ್ಕಪೋತಕಃ ।
ಶೀತೇ ಭಯೇ ಚ ಕಾರ್ಯೋಯಂ ವಿನಿಯೋಗಗಮೇ ತಥಾ ॥ ೫೫ ॥

---

ವಾಗಲೂ, ತರ್ಜನಿಯನ್ನು ಮರ್ದಿಸುವಾಗಲೂ ಪ್ರಯೋಗಿಸಬೇಕು, ಮೂರನೆಯ ಪಾರ್ಶ್ವಕೃತವನ್ನು ಯಜ್ಞೋಪವೀತದ ಧಾರಣಕಾಲದಲ್ಲಿಯೂ, ತಲೆ ಎತ್ತಿ ನೋಡುವಾಗಲೂ ಪ್ರಯೋಗಿಸಬೇಕು

೫೨–೫೫ ಬೆರಳುಗಳ ಅಗ್ರಭಾಗಗಳೆಲ್ಲವೂ ಸೇರಿ ಕಮಲದ ಮೊಗ್ಗಿನಂತಿರುವ ಹಸ್ತವಿನ್ಯಾಸವು ಮುಕುಲವೆನ್ನಿಸುತ್ತದೆ ಇದನ್ನು ದೇವಪೂಜಾಕಾಲದಲ್ಲಿಯೂ, ಬಲಿ, ಪದ್ಮ ಇವನ್ನು ಅಭಿನಯಿಸುವಾಗಲೂ ಪ್ರಯೋಗಿಸಬೇಕು. ಪರಸ್ಪರ ಸೇರಿರದೆ ಬೇರೆಯಾಗಿರುವ ಹಸ್ತಗಳ ವಿನ್ಯಾಸವನ್ನು ಆಯಾಯ ಲಕ್ಷಣಗಳಿಗೆ ಅನುಗುಣವಾಗಿ ಹೇಳಿದ್ದಾಯಿತು ಇನ್ನು ಮುಂದ ಪರಸ್ಪರ ಹೊಂದಿಕೊಂಡಿರುವ ಹಸ್ತಗಳ ವಿನ್ಯಾಸವಿಶೇಷವನ್ನು ಹೇಳುತ್ತೇನೆ ಪತಾಕಾರೂಪದಲ್ಲಿರುವ ಎರಡು ಕೈಗಳು ಜೋಡಿಸಲ್ಪಟ್ಟದ್ದಲ್ಲಿ ಅಂಜಲಿ ಎಂದು ಹೇಳಲ್ಪಡುತ್ತದೆ ಇದು ಪೂಜಾಕಾಲದಲ್ಲಿ ದೇವತೆ ಮತ್ತು ಗುರು, ಪಿತೃಗಳು ಇವರಿಗೆ ಪ್ರೀತಿಯುಂಟುಮಾಡತಕ್ಕದ್ದಾಗುತ್ತದೆ ಕೈಗಳೆರಡೂ ಪರಸ್ಪರ ಪಾರ್ಶ್ವಗಳಿಂದ ಕೂಡಿದ್ದಲ್ಲಿ ಕಪೋತಕವೆನಿಸುತ್ತದ. ಇದನ್ನು ಶೀತ, ಭಯ ಮತ್ತು ಆಜ್ಞಾನುವರ್ತನಕಾಲದಲ್ಲಿಯೂ ಸಹ ಪ್ರಯೋಗಿಸಬೇಕು

ಅಂಗುಲ್ಯೋ ಯಸ್ಯ ಹಸ್ತಸ್ಯ ಅಂಗುಲ್ಯಂತರನಿಃಸೃತಾಃ ।
ಸ ಕರ್ಕಟ ಇತಿ ಜ್ಞೇಯಃ ಕರ್ತವ್ಯಸ್ತು ವಿಜೃಂಭಿತೇ ॥ ೫೬ ॥

ಮಣಿಬಂಧನವಿನ್ಯಸ್ತಾವರಾಲೌ ವರ್ಧಮಾನಕಃ ।
ಉತ್ತಾನೌ ನತಪಾರ್ಶ್ವಸ್ಥೌ ಸ್ವಸ್ತಿಕಃ ಪರಿಕೀರ್ತಿತಃ ॥ ೫೭ ॥

ವಿಸ್ತೀರ್ಣಂ ಸರ್ವಮೇತೇನ ಋತವೋ ಗಗನಂ ಘನಂ ।
ಸಮುದ್ರಶ್ಚಾಭಿನೇಯಃ ಸ್ಯಾದ್ಭೂಮಿಶ್ಚ ಮನುಜೇಶ್ವರ ॥ ೫೮ ॥

ಕಟಕಃ ಕಟಕೇ ನ್ಯಸ್ಯ ಕಟಕಾವರ್ಧಮಾನಕಃ ।
ಶೃಂಗಾರಾರ್ಥೇ ಪ್ರಯೋಕ್ತವ್ಯಃ ಪ್ರಣಾಮಕರಣೇಷು ಚ ॥ ೫೯ ॥

ಅರಾಲೌತು ವಿಪರ್ಯಸ್ತಾವುತ್ತಾನೌ ವರ್ಧಮಾನಕೌ ।
ಉತ್ಸಂಗ ಇತಿ ವಿಜ್ಞೇಯಃ ಸ್ಪರ್ಶಸ್ಯ ಗ್ರಹಣೇ ಪರಃ ॥ ೬೦ ॥

---

೫೬–೫೮ ಯಾವ ಹಸ್ತವಿನ್ಯಾಸದಲ್ಲಿ ಕೆಲವು ಬೆರಳುಗಳು ಮತ್ತೆ ಕೆಲವು ಬೆರಳುಗಳ ಸಂದುಗಳಲ್ಲಿ ಪ್ರಸರಿಸಿರುವುವೊ ಅಂತಹ ವಿನ್ಯಾಸವು ಕರ್ಕಟವೆನಿಸುತ್ತದೆ. ಅಹಂಕಾರದಿಂದ ವಿಜೃಂಭಿಸುವಾಗ ಇದನ್ನು ಉಪಯೋಗಿಸಬೇಕು ವಕ್ರವಾದ ಹಸ್ತ ದ್ವಯಗಳು ಮಣಿಬಂಧ, ಮಣಿಕಟ್ಟು ಪ್ರದೇಶದಲ್ಲಿ ಜೋಡಿಸಲ್ಪಟ್ಟಲ್ಲಿ ವರ್ಧಮಾನಕವೆನಿಸುತ್ತದೆ ಎರಡು ಹಸ್ತಗಳ ಪಾರ್ಶ್ವಗಳೂ ಕೆಳಮುಖವಾಗಿ ಬಗ್ಗಿದ್ದಲ್ಲಿ ಸ್ವಸ್ತಿಕವೆನಿಸುತ್ತದೆ. ಇದನ್ನು ಋತುಗಳು ಆಕಾಶ, ಮೇಘ, ಸಮುದ್ರ, ಭೂಮಿ ಮೊದಲಾದ ಅನೇಕ ವಿಷಯಗಳಲ್ಲಿ ಅಭಿನಯಿಸಬಹುದು

೫೯-೬೦ ಒಂದು ಹಸ್ತದ ಕಡಗದ ಪ್ರದೇಶದಲ್ಲಿ ಮತ್ತೊಂದು ಹಸ್ತವನ್ನಿಟ್ಟಲ್ಲಿ ಕಟಕಾವರ್ಧಮಾನಕ ವೆನ್ನಿಸುತ್ತದೆ ಇದನ್ನು ಶೃಂಗಾರೋಪಯುಕ್ತವಾದ ಪ್ರಣಯಪ್ರಸಂಗದಲ್ಲಿಯೂ ಪ್ರಮಾಣಮಾಡುವಾಗಲೂ ಪ್ರಯೋಗಿಸಬೇಕು ಎರಡು ಹಸ್ತಗಳನ್ನೂ ವಾಮದಕ್ಷಿಣ ವ್ಯತ್ಯಾಸದಿಂದ ತಲೆಕೆಳಕಾಗಿ ವಕ್ರವಾಗಿ ವಿನ್ಯಾಸ ಮಾಡಿದಲ್ಲಿ ವರ್ಧಮಾನಕವಾಗುತ್ತದೆ ಇದೇ ಉತ್ಸಂಗವೆಂದು ಹೇಳಲ್ಪಡುತ್ತದೆ

ಮುಕುಲಂ ತು ಯದಾ ಹಸ್ತಂ ಕಪಿತ್ಥಂ ಪರಿವೇಷ್ಟಯೇತ್ ।
ಸ ವಿಜ್ಞೇಯಸ್ತದಾ ಹಸ್ತೋ ನಿಷಧೋ ನಾಮನಾಮತಃ ॥ ೬೧ ॥

ಸಂಕ್ಷಿಪ್ತೇ ಚೈವ ನಿಕ್ಷಿಪ್ತೇ ತಥಾ ಕಾರ್ಯಃ ಪ್ರಪೀಡಿತೇ ।
ಪತಾಕಾ ಲಂಬಿತೌ ಹಸ್ತೌ ದೋಲೇತಿ ಪರಿಕೀರ್ತಿತಾ ॥ ೬೨ ॥

ಧ್ಯಾನಾದಿದಾನೇ ಕರ್ತವ್ಯೋ ಭಕ್ಷ್ಯಾದಿಕರಣೇಷು ಚ ।
ದ್ವಿತೀಯಪಾರ್ಶ್ವಸಂಶ್ಲಿಷ್ಟಃ ಪೂರ್ವಃ ಪುಷ್ಪಪುಟಃ ಸ್ಮೃತಃ ॥ ೬೩ ॥

ಪೂರ್ವಾಣಿ ಚಾಭಿನೇಯಾನಿ ಕರಣಾನ್ಯೇವ ಪಾರ್ಥಿವ ।
ಪತಾಕೌ ತು ಯದಾ ಹಸ್ತೌ ಮುಕ್ತಹಸ್ತಾವಧೋಮುಖೌ ॥ ೬೪ ॥

ಉಪರ್ಯುಪರಿವಿನ್ಯಸ್ತೌ ತದಾ ಸ ಮಕರಃ ಕರಃ ।
ಸಿಂಹವ್ಯಾಘ್ರಮೃಗಾದ್ಯಾನಾಂ ಕರ್ತವ್ಯೋಽಭಿನಯೋ ಭವೇತ್ ॥ ೬೫ ॥

---

ಇದು ಸ್ಪರ್ಶವನ್ನು ಅಭಿನಯಿಸುವಾಗ ಪ್ರಯೋಗಿಸತಕ್ಕದ್ದು ಮುಕುಲ ಸನ್ನಿವೇಶದಿಂದ ಕೂಡಿದ ಒಂದು ಹಸ್ತವನ್ನು ಕಪಿತ್ಥವೆಂಬ ಸನ್ನಿವೇಶವುಳ್ಳ ಮತ್ತೊಂದು ಹಸ್ತದಿಂದ ವೇಷ್ಟನಮಾಡಿದ್ದೇ ಆದರೆ ಇದೇ ನಿಷಧವೆಂಬ ಹೆಸರುಳ್ಳ ಹಸ್ತವಿನ್ಯಾಸವಾಗುತ್ತದೆ.

೬೨–೬೩ ಇದನ್ನು ಸಂಕ್ಷೇಪವಾಗಿ ಕೈ ಇಡುವಾಗಲೂ, ಕೈಯನ್ನು ಮರ್ದಿಸುವಾಗಲೂ ಪ್ರಯೋಗಿಸಬೇಕು ಪತಾಕಾ ಸನ್ನಿವೇಶದಿಂದ ಕೂಡಿದ ಎರಡು ಕೈಗಳನ್ನೂ ಜೋರಾಗಿ ನೀಡಿದಲ್ಲಿ ದೋಲಾ ಎಂಬ ವಿನ್ಯಾಸವಾಗುತ್ತದೆ ಇದನ್ನು ಧ್ಯಾನಾದಿಕಾಲದಲ್ಲಿಯೂ, ಭಕ್ಷ್ಯಾದಿಗಳನ್ನು ಮಾಡುವಾಗಲೂ ಅಭಿನಯಿಸಬೇಕು. ಮೊದಲನೆಯ ಒಂದು ಕೈಯಿನ ಕೆಳಭಾಗದ ಪ್ರದೇಶವು ಸಂಕುಚಿತವಾಗಿದ್ದಲ್ಲಿ ಪುಷ್ಪಪುಟವೆನಿಸುತ್ತದೆ ಮೊದಲು ಹೇಳಿರುವ ಹಸ್ತವಿನ್ಯಾಸಗಳೆಲ್ಲವೂ ಆಯಾಯ ಹಸ್ತಗಳಿಂದಲೇ ಅಭಿನಯಿಸಲ್ಪಡತಕ್ಕವು

೬೪–೬೭ ಪತಾಕಾವಿನ್ಯಾಸದಿಂದ ಕೂಡಿದ ಎರಡು ಹಸ್ತಗಳೂ ಅಧೋಮುಖವಾಗಿ ಜೋಲುಬಿದ್ದು ಒಂದರ ಮೇಲೊಂದು ಇಡಲ್ಪಟ್ಟಲ್ಲಿ ಅಂತಹ ಕರವಿನ್ಯಾಸವು ಮಕರವೆಂದು ಹೇಳಲ್ಪಡುತ್ತದೆ ಇದರಿಂದ ಸಿಂಹ, ವ್ಯಾಘ್ರ, ಮೃಗ ಮುಂತಾದವುಗಳ ಅಭಿನಯವನ್ನು ಮಾಡಬೇಕು ಸರ್ಪಶೀರ್ಷಕವೆಂಬ ಸನ್ನಿವೇಶದಿಂದ

**ಅಂಚಿತೌ ಕೂರ್ಪರಾಭ್ಯಾಂತು ಯದಾ ಸ್ಯಾತ್ಸ್ಪರ್ಶಿತೋರ್ಪರಕೇ ।**
**ಗಜದಂತಸ್ತದಾ ನಾಮ್ನಾ ಕಾರ್ಯಃ ಶೈಲನಿಬರ್ಹಣೇ ॥ ೬೬ ॥**

**ಶುಕತುಂಡೌ ಕರೌ ಕೃತ್ವಾ ವಕ್ಷಸ್ಯಭಿಮುಖಾಂಚಿತೌ ।**
**ಶನೈರಧೋಮುಖೌ ವಿದ್ಧಾವವಹಿತ್ಥ ಇತಿ ಸ್ಮೃತಃ ॥ ೬೭ ॥**

**ದೌರ್ಬಲ್ಯಾಚ್ಛ್ವಸಿತೇ ಕಾರ್ಯೋ ಗಾತ್ರಾಣಾಂ ಚ ನಿದರ್ಶನೇ**
**ಜ್ಞೇಯೋ ವೈ ವರ್ಧಮಾನಸ್ತು ಹಂಸಪಕ್ಷೌ ಪರಾಙ್ಮುಖೌ ॥ ೬೮ ॥**

**ಜಾಲವಾತಾಯನಾದೀನಾಂ ಪ್ರಯೋಗಸ್ತೇನಚೇಷ್ಯತೇ ।**
**ಸಂಯುತಾನಾಂ ಕರಾಣಾಂ ತು ಲಕ್ಷಣಂ ಕಥಿತಂ ಮಯಾ ॥ ೬೯ ॥**

**ಏವಂ ಜ್ಞೇಯಾಃ ಕರಾಸ್ಸರ್ವೇ ನಾನಾರಸಸಮುದ್ಭವಾಃ ।**
**ಅತ ಊರ್ಧ್ವಂ ಪ್ರವಕ್ಷ್ಯಾಮಿ ನೃಸ್ತ ಹಸ್ತಮುಪಾಶ್ರಯಂ ॥ ೭೦ ॥**

---

ಕೂಡಿದ ಎರಡು ಕೈಗಳೂ ಮೊಣಕೈವರಗೆ (ವಾಮದಕ್ಷಿಣವ್ಯತ್ಯಾಸದಿಂದ) ಬಗ್ಗಿಸಲ್ಪಟ್ಟಿದ್ದಲ್ಲಿ ಗಜದಂತವೆಂಬ ಕರವಾಗುತ್ತದೆ ಇದನ್ನು ಪರ್ವತಭೇದನ ಕಾರ್ಯದಲ್ಲಿ ಅಭಿನಯಿಸಬೇಕು ಶುಕತುಂಡವೆಂಬ ಸನ್ನಿವೇಶದಿಂದ ಕೂಡಿದ ಎರಡು ಕೈಗಳನ್ನೂ ಎದೆಯ ಮೇಲೆ ಪರಸ್ಪರಾಭಿಮುಖವಾಗಿ ಸ್ವಲ್ಪ ಅಧೋಮುಖವಾಗಿ ಸಂಬಂಧಗೊಳಿಸಿದ್ದಲ್ಲಿ ಇದು ಅವಹಿತ್ಥವೆಂಬ ಕರಸನ್ನಿವೇಶವಾಗುತ್ತದೆ.

೬೮–೭೦ ಈ ಅವಹಿತ್ಥವೆಂಬ ವಿನ್ಯಾಸವನ್ನು (ವಿರಹಾದಿಗಳಿಂದ) ದೇಹ ದೌರ್ಬಲ್ಯ ಹೊಂದಿರುವವರ ಧವಲವರ್ಣವನ್ನೂ, ದೇಹವನ್ನು ನಿದರ್ಶಿಸಿ ತೋರಿಸುವಾಗಲೂ ಪ್ರಯೋಗಿಸಬೇಕು ಹಂಸಪಕ್ಷವೆಂಬ ಹಸ್ತಸನ್ನಿವೇಶವು ಅಭಿಮುಖವಾಗಿರದೆ ಪರಾಙ್ಮುಖವಾಗಿದ್ದಲ್ಲಿ ಅದನ್ನೇ ವರ್ಧಮಾನವೆಂದು ತಿಳಿಯಬೇಕು. ಬಲೆ ಮತ್ತು ಕಿಟಕಿ ಮೊದಲಾದವುಗಳ ಅಭಿನಯವನ್ನು ಇದರಿಂದ ಮಾಡಬೇಕು. ಜೋಡಿಸಲ್ಪಟ್ಟ ಕೈಗಳ ಲಕ್ಷಣಗಳನ್ನೂ ನಾನು ಈರೀತಿ ಹೇಳಿ ಆಯಿತು ಹೀಗೆಯೇ ಎಲ್ಲಾ ಹಸ್ತಗಳ ವಿನ್ಯಾಸಗಳನ್ನೂ ಆಯಾಯ ರಸಾಭಿವ್ಯಂಜಕ ದೃಷ್ಟಿಯಿಂದ ತಿಳಿಯಬೇಕು ಇನ್ನುಮುಂದೆ ಈ ಹಸ್ತಗಳನ್ನು ನಟನಾದ ಮನುಷ್ಯನು ಉಪಯೋಗಿಸುವಾಗ ಅವುಗಳಿಗೆ ಉಂಟಾಗುವ ಸನ್ನಿವೇಶದಿಂದ ನಿರ್ಧರಿಸಬಹುದಾದ ಹೆಸರುಗಳನ್ನು ಹೇಳುತ್ತೇನೆ

ವಕ್ಷಸೋऽಷ್ಟಾಂಗುಲಸ್ಥೌ ತು ಪ್ರಾಙ್ಮುಖೌ ಖಟಕಾಮುಖೌ ।
ಸಮಾನಕೂರ್ಪರಾಸೌ ತು ಚತುರಸ್ರೌ ಪ್ರಕೀರ್ತಿತೌ ॥ ೭೧ ॥

ಹಂಸಪಕ್ಷೌ ಸ್ಮೃತೌ ಹಸ್ತೌ ವ್ಯಾವೃತ್ತೌ ತಾಲವೃಂತವತ್ ।
ಆವೃತ್ತಾವಿತಿ ವಿಜ್ಞೇಯೌ ಅಥವಾ ತಾಲವೃಂತಕೌ ॥ ೭೨ ॥

ಚತುರಸ್ರೀಕೃತೌ ಹಸ್ತೌ ಹಂಸಪಕ್ಷೀಕೃತೌ ತಥಾ ।
ತಿರ್ಯಙ್ಮುಖಾವೂರ್ಧ್ವತಲೌ ಜ್ಞೇಯೌ ಲಘುಮುಖಾವಿತಿ ॥ ೭೩ ॥

ತಾವೇವ ಮಣಿಧನ್ವಾಂತೌ ವರಾಲಕಚಿತೌ ಕರೌ ।
ಜ್ಞೇಯಾವಭಿನಯೇತ್ವೇತೌ ಹ್ಯರಾಲಖಟಕಾಮುಖೌ ॥ ೭೪ ॥

ಭುಜೌ ಸಕೂರ್ಪರಾಗ್ರೌ ತು ಕುಟಿಲಾವರ್ತಿತೌ ಕರೌ ।
ಅಧೋಮುಖತಲಾವಿದ್ಧಾವಾವಿದ್ಧಾವಿತಿ ಕೀರ್ತಿತೌ ॥ ೭೫ ॥

---

೭೧-೭೩ ಖಟಕಾಮುಖವೆಂಬ ಸನ್ನಿವೇಶ ಹೊಂದಿರುವ ಎರಡು ಹಸ್ತಗಳೂ ಮುಂಭಾಗಕ್ಕೆ ಅಭಿಮುಖವಾಗಿದ್ದು ಎದೆಯಿಂದ ಎಂಟು ಅಂಗುಲದಲ್ಲಿದ್ದಲ್ಲಿ ಮೊಣ ಕೈಗಳೊಡನೆ ಒಂದೇಸಮನಾಗಿ ಸೇರಿದಲ್ಲಿ ಇವು ಚತುರಸ್ರವೆಂದು ಹೇಳಲ್ಪಡುತ್ತವೆ ಹಂಸಪಕ್ಷವೆಂಬ ಸನ್ನಿವೇಶ ಹೊಂದಿರುವ ಎರಡು ಹಸ್ತಗಳೂ ಒಂದಕ್ಕೊಂದು ಪರಾಙ್ಮುಖವಾಗಿ ಬೀಸಣಿಗೆಯಂತೆ ಇದ್ದಲ್ಲಿ ಆವೃತ್ತಾ ಎನಿಸುತ್ತವೆ ಇದಕ್ಕೆ ತಾಲ ವೃಂತಕವೆಂದೂ ಹೆಸರಿದೆ ಮೇಲೆ ಹೇಳಿರುವ ಚತುರಸ್ರವೆಂಬ ಸನ್ನಿವೇಶ ಹೊಂದಿರುವ ಹಸ್ತಗಳು ಹಂಸಪಕ್ಷವೆಂಬ ಸನ್ನಿವೇಶದಿಂದ ಕೂಡಿ ಅಡ್ಡವಾದ ಅಗ್ರ ಭಾಗದಿಂದ ತಲೆ ಕೆಳಗಾಗಿದ್ದಲ್ಲಿ ಇವನ್ನೇ ಲಘುಮುಖವೆಂದು ತಿಳಿಯಬೇಕು

೭೪-೭೫ ಲಘುಮುಖವೆಂಬ ಆ ಹಸ್ತಗಳೇ ಅಭಿನಯದಲ್ಲಿ ಮಣಿಬಂಧ ದವರೆಗೂ ವಕ್ರವಾಗಿ ಆವಲ್ಲಿ ಅರಾಲ ಖಟಕಾಮುಖಾ ಎಂದು ತಿಳಿಯಬೇಕು. ಎರಡು ಮೊಣಕೈಗಳೂ ಭುಜ ಚಲನದಿಂದ ಅಗ್ರಭಾಗದಲ್ಲಿ ಸೇರಿದ್ದು ವಕ್ರವಾಗಿ ತಿರುಗಿಸಲ್ಪಟ್ಟ ಕೈಗಳು ಅಧೋಮುಖವಾದ ಅಂಗೈಯ್ಯಿನಿಂದ ಕೂಡಿದ್ದಲ್ಲಿ ಆವಿದ್ಧಾ

ಸರ್ಪಶೀರ್ಷೌ ಯದಾಹಸ್ತೌ ಭವೇತಾಂ ಸ್ವಸ್ತಿಕಸ್ಥಿತೌ
ತಿರ್ಯಕ್ಪ್ರಸಾರಿತಾಸ್ಯೌ ಚ ಜ್ಞೇಯೌ ಸೂಚೀಮುಖಾವಿತಿ || ೭೬ ||

ರೇಚಿತೌ ಚಾಪಿ ವಿಜ್ಞೇಯೌ ಹಂಸಪಕ್ಷಾದ್ಭುತಭ್ರಮೌ |
ಪ್ರಸಾರಿತೋತ್ತಾನತತೌ ರೇಚಿತಾವೇವ ಸಂಜ್ಞಿತೌ || ೭೭ ||

ಚತುರಸ್ರೋ ಭವೇದ್ವಾಮಃ ಸೂವ್ಯಹಸ್ತಶ್ಚ ರೇಚಿತಃ |
ವಿಜ್ಞೇಯೋ ನಾಟ್ಯತತ್ತ್ವಜ್ಞೈರೇವಂ ರೇಚಿತಸಂಜ್ಞಿತಃ || ೭೮ ||

ಅಂಚಿತೌ ಕೂರ್ಪರಾಭ್ಯಾಂ ತು ತ್ರಿಪತಾಕೌ ಯದಾ ಕರೌ |
ಕಿಂಚಿತ್ತಿರ್ಯಗ್ಗತಾವೇತಾವವಹಿತ್ಥಃ ಪ್ರಕೀರ್ತಿತಃ || ೭೯ ||

ಮಣಿಬಂಧನನಿರ್ಮುಕ್ತೌ ಶಿಥಿಲೌ ಪಲ್ಲವೌ ಸ್ಮೃತೌ |
ಬಾಹೂ ಶೀರ್ಷವಿನಿಷ್ಕ್ರಾಂತೌ ನಿತಂಬೌ ಪರಿಕೀರ್ತಿತೌ || ೮೦ ||

---

ಎನಿಸುತ್ತವೆ ಸರ್ಪಶೀರ್ಷವೆಂಬ ಸನ್ನಿವೇಶ ಹೊಂದಿರುವ ಎರಡು ಕೈಗಳೂ ಸ್ವಸ್ತಿಕ ಸ್ಥಿತಿಯನ್ನು ಹೊಂದಿ ಅಡ್ಡಡ್ಡವಾದ ಮುಖಭಾಗದಿಂದ ಕೂಡಿದ್ದಲ್ಲಿ ಇವು ಸೂಚೀಮುಖವೆನಿಸುತ್ತವೆ

೭೭–೮೦ ಹಂಸಪಕ್ಷದ ಸನ್ನಿವೇಶದಿಂದ ಕೂಡಿ ಆಶ್ಚರ್ಯಕರವಾದ ಭ್ರಮಣ ಹೊಂದಿ ಬಗ್ಗಿದ್ದು ಕೈಗಳ ಮೇಲ್ಮುಖವು ನೀಡಲ್ಪಟ್ಟಿದ್ದಲ್ಲಿ ಇವು ರೇಚಿತ ವೆಂದೇ ಹೇಳಲ್ಪಡುತ್ತವೆ ಎಡದ ಕೈ ಚತುರಸ್ರ ಸನ್ನಿವೇಶದಿಂದ ಕೂಡಿ ಬಲಗೈ ರೇಚಿತವಾಗಿದ್ದಲ್ಲಿ ಇದೂ ಸಹ ರೇಚಿತವೆಂದೇ ನಾಟ್ಯ ತತ್ವಜ್ಞರು ನಿಶ್ಚಯಿಸಿದ್ದಾರೆ. ತ್ರಿಪತಾಕವೆಂಬ ಸನ್ನಿವೇಶದಿಂದ ಕೂಡಿದ ಎರಡು ಕೈಗಳೂ ಪರಸ್ಪರ ಮೊಣ ಕೈಯ್ಯನ್ನು ಸೇರಿದ್ದಲ್ಲಿ ಸ್ವಲ್ಪ ಅಡ್ಡಡ್ಡಲಾಗಿರುವ ಇವುಗಳೇ ಅವಹಿತ್ಥವೆಂದು ಕರೆಯ ಲ್ಪಡುತ್ತವೆ. ಮಣಿಬಂಧ ಪ್ರದೇಶದಿಂದ ಜೋಲು ಬಿದ್ದು ಶಿಥಿಲವಾಗಿರುವ ಕೈಗಳು ಪಲ್ಲವವೆನಿಸುತ್ತವೆ. ಎರಡು ಕೈಗಳೂ ತಲೆಯನ್ನು ಸುತ್ತಿ ಹೊರಗೆ ನಿಂತಲ್ಲಿ ಇದಕ್ಕೆ ನಿತಂಬವೆಂದು ಹೆಸರು

ಅಂಸದೇಶೇ ಪ್ರವೃತ್ತೌ ತು ಪರಿಪಾರ್ಶ್ವೋತ್ಥಿತೌ ತಥಾ ।
ವಿಜ್ಞೇಯೌ [1]ಕೇಶಬಂಧಾಖ್ಯೌ ಕರಾವಾಚಾರ್ಯಸಮ್ಮತೌ ॥ ೮೧ ॥

ತಿರ್ಯಕ್ಪ್ರಸಾರಿತಾವೇವ ಪಾರ್ಶ್ವಸಂಸ್ಥೌ ತಥೈವ ಚ ।
ಲತಾಖ್ಯೌ ತು ಕರೌ ಜ್ಞೇಯೌ ನೃತ್ತಾಭಿನಯನಂ ಪ್ರತಿ ॥ ೮೨ ॥

ಸಮುನ್ನತೋ ಲತಾಹಸ್ತಃ ಪಾರ್ಶ್ವಾತ್ಪಾರ್ಶ್ವವಿಲೋಡಿತಃ ।
ದ್ವಿತೀಯಃ ಖಟಕಾಖ್ಯಶ್ಚ ಕರಿಹಸ್ತಃ ಪ್ರಕೀರ್ತಿತಃ ॥ ೮೩ ॥

ಕಟಿಶೀರ್ಷನಿವಿಷ್ಟಾಗ್ರೌ ತ್ರಿಪತಾಕೌ ಯದಾ ಕರೌ ।
ಪಕ್ಷಾವಂಚಿತಕೌ ವಾಮೇ ತದಾ ಜ್ಞೇಯೌ ಪ್ರಯೋಕ್ತೃಭಿಃ ॥ ೮೪ ॥

ತಾವೇವ ತು ಪರಾವೃತ್ತೌ ಪಕ್ಷಾಘಾತೌ ಕರಾವಿತಿ ।
ಅಧೋಮುಖತಲಾವಿದ್ಧೌ ಜ್ಞೇಯೌ ಗರುಡಪಕ್ಷಕೌ ॥ ೮೫ ॥

---

೮೧–೮೩ ಭುಜಗಳ ಮೇಲ್ಭಾಗದಲ್ಲಿ ಸುತ್ತಿ ಎರಡು ಪಾರ್ಶ್ವಗಳಲ್ಲಿಯೂ ಮೇಲ್ಮುಖವಾಗಿ ಎರಡು ಕೈಗಳೂ ನಿಂತಲ್ಲಿ ಇದು ಕೇಶಬಂಧವೆಂಬ ನೃತ್ಯಹಸ್ತವಾಗುತ್ತದೆ ಇದು ಆಚಾರ್ಯರಿಗೆ ಹೀಗೆಯೇ ಸಮ್ಮತ, ಹಾಗೆಯೇ ಪಾರ್ಶ್ವದಲ್ಲಿರುವ ಹಸ್ತಗಳು ಅಡ್ಡಡ್ಡಲಾಗಿ ಚಾಚಲ್ಪಟ್ಟರೆ ನೃತ್ಯಾಭಿನಯಕ್ಕೆ ಅರ್ಹವಾದ ಲತಾ ಎಂಬ ವಿನ್ಯಾಸವಾಗುತ್ತದೆ ಈ ಲತಾಹಸ್ತವೇ ಒಂದು ಪಾರ್ಶ್ವದಿಂದ ಮತ್ತೊಂದು ಪಾರ್ಶ್ವಕ್ಕೆ ಚಾಚಲ್ಪಟ್ಟು ಮೇಲ್ಮುಖವಾಗಿ ನಿಂತಲ್ಲಿ ಮತ್ತು ಈ ರೀತಿಯಾದ ಎರಡನೆಯ ಖಟಕಾ ಹಸ್ತವೂ ಸಹ ಕರಿಹಸ್ತವೆನಿಸುತ್ತದೆ

೮೪–೮೬ ತ್ರಿಪತಾಕವೆಂಬ ವಿನ್ಯಾಸದಿಂದ ಕೂಡಿದ ಎರಡು ಹಸ್ತಗಳೂ ಎಡಭಾಗದ ಸೊಂಟದ ಮೇಲ್ಭಾಗದಲ್ಲಿ ಬೆರಳುಗಳ ಅಗ್ರಭಾಗದಿಂದ ಸ್ಪರ್ಶ ಹೊಂದಿದಲ್ಲಿ ಇದು ಪಕ್ಷವೆಂದು ಹೇಳಲ್ಪಡುತ್ತದೆ ಅದೇ ಹಸ್ತಗಳೇ ಹಿಂದಿರುಗಿ ಇಡಲ್ಪಟ್ಟದ್ದಲ್ಲಿ ಪಕ್ಷಾ[3]ಘಾತವೆನಿಸುತ್ತದೆ ಅಧೋಮುಖವಾದ ಅಂಗೈಗಳಿಂದ ಕೂಡಿ

---

1 ಹಿಂದೆ ಇದನ್ನು ಕೇಶವರ್ಧನವೆಂದು ನಿರ್ದೇಶಿಸಿದ್ದಾರೆ

2 ಹಿಂದೆ ಇವನ್ನು ಪಕ್ಷೋದ್ಯೋತವೆಂದು ನಿರ್ದೇಶಿಸಿದ್ದಾರೆ

3 ಹಿಂದೆ ಇದನ್ನು ಅರ್ಧವರ್ಧಿತವೆಂದು ಹೇಳಿರುವರು

ತಥಾ ಪ್ರಸಾರಿತೌ ಭುಜೌ ದಂಡಪಕ್ಷಾವಿತಿ ಸ್ಮೃತೌ ।
ತೌ ಚೋರ್ಧ್ವಮಂಡಲೌ ಜ್ಞೇಯೌ ಗುರುದೇಶವಿವರ್ತನಾತ್ ॥ ೮೬ ॥

ತಾವೇವ ಪಾರ್ಶ್ವವಿನ್ಯಸ್ತೌ ವಿಜ್ಞೇಯೌ ಪಾರ್ಶ್ವಮಂಡಲೌ ।
ವೇಷ್ಟಿತಾವೇಷ್ಟಿತೌ ಹಸ್ತೌ ತಯೋರ್ಮಂಡಲಕೌ ಸ್ಮೃತೌ ॥ ೮೭ ॥

ತಾವೇವ ಮಣಿಬಂಧಾನ್ತೌ ಸ್ವಸ್ತಿಕಾಕೃತಿ ಸಂಜ್ಞಿತೌ ।
ಸ್ವಸ್ತಿಕಾವಿತಿವಿಖ್ಯಾತೌ ವಿಖ್ಯಾತೌ ಚ ಪ್ರಕೀರ್ಣಕೌ ॥ ೮೮ ॥

ದ್ವಾವೇವ ಪದ್ಮಕೋಶಾಭೌ ಪದ್ಮಕೋಶಾವಿತಿ ಸ್ಮೃತೌ ।
ಕರಾವುದ್ವೇಷ್ಟಿತಾಗ್ರೌ ತು ವಿಜ್ಞೇಯೌ ವಲಿಪಲ್ಲವೌ ॥ ೮೯ ॥

ಊರ್ಧ್ವಪ್ರಸಾರಿತೌ ವಿದ್ಧೌ ವಿಜ್ಞೇಯೌ ಉಲ್ಬಣಾವಿತಿ ।
ಪಲ್ಲವೌ ತು ಶಿರೋದೇಶೇ ಸಂಪ್ರಾಪ್ತೌ ಲಲಿತಾವಿತಿ ॥ ೯೦ ॥

---

ರುವ ಈ ಹಸ್ತಗಳೇ ಗರುಡಪಕ್ಷಕವೆನಿಸುತ್ತವೆ ಭುಜಗಳು ಚಾಚಲ್ಪಟ್ಟಿರುವ ಅಂತಹ ಹಸ್ತಗಳೇ ಮೇಲ್ಭಾಗದಲ್ಲಿ ಮಂಡಲಾಕಾರವಾಗಿ ಸುತ್ತಿ ನಿಂತಲ್ಲಿ ಊರ್ಧ್ವ ಮಂಡಲವೆನಿಸುತ್ತವೆ

೮೭-೮೯ ಮಂಡಲಾಕಾರಗಳಾದ ಆ ಹಸ್ತಗಳೇ ಪಾರ್ಶ್ವಪ್ರದೇಶದಲ್ಲಿ ಇಡಲ್ಪಟ್ಟಿದ್ದಲ್ಲಿ ಪಾರ್ಶ್ವಮಂಡಲವೆನಿಸುತ್ತವೆ ಆ ಹಸ್ತಗಳಲ್ಲಿ ಒಂದು ವೇಷ್ಟಿತ ವಾಗಿಯೂ ಮತ್ತೊಂದು ಹಾಗೆಯೇ ಇದ್ದಲ್ಲಿ ಪಾರ್ಶ್ವಾರ್ಧಮಂಡಲವೆನಿಸುತ್ತವೆ ಅವುಗಳೇ ಮಣಿ ಬಂಧವವರಿಗೂ ವ್ಯಾಪಿಸಿದ್ದಲ್ಲಿ ಸ್ವಸ್ತಿಕಾಕೃತಿ ಎನಿಸುತ್ತವೆ ಇವು ಗಳಿಗೇ ಸ್ವಸ್ತಿಕವೆಂದೂ ಪ್ರಕೀರ್ಣಕವೆಂದೂ ಪ್ರಸಿದ್ಧಿಯುಂಟು ಪದ್ಮದ ಮೊಗ್ಗಿ ನಂತಿರುವ ಎರಡು ಹಸ್ತಗಳೂ ಪದ್ಮಕೋಶವೆನಿಸುತ್ತವೆ ನೀಡಲ್ಪಟ್ಟ ಅಗ್ರಭಾಗ ವುಳ್ಳ ಎರಡು ಹಸ್ತಗಳೂ ಅಲಿಪಲ್ಲವವೆನಿಸುತ್ತವೆ

೯೦-೯೩ ಈ ಹಸ್ತಗಳನ್ನೇ ಮೇಲ್ಭಾಗದಲ್ಲಿ ನೀಡಿದಲ್ಲಿ ಉಲ್ಬಣೌ ಎಂಬ ಸನ್ನಿವೇಶವಾಗುತ್ತದೆ ಹಿಂದೆ ಹೇಳಿರುವ ಪಲ್ಲವವೆಂಬ ವಿನ್ಯಾಸದಿಂದ ಕೂಡಿದ ಹಸ್ತಗಳನ್ನು ತಲೆಯ ಮೇಲೆ ವಿನ್ಯಾಸಮಾಡಿದಲ್ಲಿ ಲಲಿತವೆಂಬ ಹಸ್ತಗಳಾಗುತ್ತವೆ

ಕೂರ್ಪರಸ್ವಸ್ತಿಕನ್ಯಸ್ತಾ ಲಲಿತಾ ವಲಿತಾ ಸ್ಮೃತಾ ।
ಸಂಯುತಾ ವಿಯುತಾಶ್ಚೈವ ನೃತ್ತಹಸ್ತಾಃ ಪ್ರಕೀರ್ತಿತಾಃ　　|| ೯೧ ||

ನಾನಾರ್ಥರಸಸಂಯುಕ್ತೇ ಪ್ರಯೋಗಂ ಕಾಲಸಂಶ್ರಯಂ ।
ವಿಜ್ಞೇಯಂ ನೃತ್ತಹಸ್ತಾನಾಂ ತೇನ ನಾಭಿಹಿತಂ ಮಯಾ　　|| ೯೨ ||

ಆಧಿಗ್ರಸ್ತೇ ಜರಾನ್ತೇ ಚ ನಿಯಮಸ್ಥೇ ಜರಾರ್ದಿತೇ ।
ಮತ್ತೇ ಪ್ರಮತ್ತೇ ಚಿನ್ತಾಯಾಂ ನಾಭಿನೇಯಃ ಕರೋ ಭವೇತ್　　|| ೯೩ ||

ಉದ್ವೇಷ್ಟಂ ಸಮುವೇಷ್ಟಂ ಚ ವಿಚೇಷ್ಟಿತವಿವರ್ತಿತೇ ।
ಕರ್ಮೇದಂ ನೃತ್ತಹಸ್ತಾನಾಂ ವಿಜ್ಞೇಯಂ ಚ ಚತುರ್ವಿಧಂ　　|| ೯೪ ||

ಕಾರ್ಯಾ ಲಲಿತಸಂಚಾರಾ ನೃತ್ತಹಸ್ತಾ ಪರಾ ಬುಧೈಃ ।
ಲಾಲಿತ್ಯಮೇವ ವಿಜ್ಞೇಯಂ ನೃತ್ತಸ್ಯ ಪ್ರತಿಬೋಧನಂ　　|| ೯೫ ||

---

ಈ ಲಲಿತವನ್ನೇ ಮೊಣಕೈಗಳಿಂದ ಸ್ವಸ್ತಿಕರೂಪದಲ್ಲಿ ನ್ಯಾಸಮಾಡಿದಲ್ಲಿ ವಲಿತವೆಂಬ ಹಸ್ತಗಳಾಗುತ್ತದೆ ಹೀಗೆ ಒಂದುಗೂಡಿಯೂ ಬೇರೆಬೇರೆಯಾಗಿಯೂ ಅಭಿನಯಿಸಲು ಅರ್ಹಗಳಾದ ನೃತ್ಯ ಹಸ್ತಗಳನ್ನು ನಾನು ಹೇಳಿದ್ದಾಯಿತು ನಾನಾವಿಧವಾದ ಅರ್ಥವಿಶೇಷಗಳಿಂದ ಅಭಿ ವ್ಯಕ್ತಿಯನ್ನು ದೇಶಕಾಲಗಳಿಗ ತಕ್ಕಂತೆ ಉಂಟುಮಾಡಲು ಈ ನೃತ್ಯಹಸ್ತಗಳು ಬಹಳ ಸಹಕಾರಿಗಳಾಗುತ್ತವೆಂಬುದನ್ನು ರಸಿಕರೇ ತಿಳಿಯಬೇಕು ಆದುದರಿಂದ ಅವೆಲ್ಲವನ್ನೂ ನಾನು ಇಲ್ಲಿ ಹೇಳಲು ಸಾಧ್ಯವಾಗಿಲ್ಲ-ಇಂತಹ ಹಸ್ತಾಭಿನಯಗಳನ್ನು ವ್ಯಾಧಿಗ್ರಸ್ತನೂ, ವಾರ್ಧಕ್ಯದಿಂದ ಮರಣೋನ್ಮುಖನಾಗಿರುವವನೂ, ನಿಯಮಶಾಲಿಯೂ, ವಾರ್ಧಕ್ಯದಿಂದ ದುರ್ಬಲನೂ, ಮದ ಹೊಂದಿರುವವನೂ, ಅವಧಾನವಿಲ್ಲದವನೂ, ಚಿಂತಾಕ್ರಾಂತನೂ ಅಭಿನಯಿಸಲು ಸಾಧ್ಯವಿಲ್ಲ

೯೪-೯೭ ನೃತ್ತೋಪಯೋಗಿಗಳಾದ ಹಸ್ತಗಳಿಗೆ ಸಾಮಾನ್ಯವಾಗಿ ಉದ್ವೇಷ್ಟ, ಸಮುವೇಷ್ಟ, ವಿಚೇಷ್ಟಿತ, ವಿವರ್ತಿತ ಎಂದು ನಾಲ್ಕು ವಿಧವಾದ ವ್ಯಾಪಾರಗಳಿವೆ ಎಂದು ತಿಳಿಯಬೇಕು ಇನ್ನೂ ಇತರ ವಿಧಗಳಲ್ಲಿಯೂ ಇರಬಹುದಾದ ಈ ನೃತ್ತಹಸ್ತಗಳನ್ನು ಪಂಡಿತರಾದವರು ಲಲಿತ ಸಂಚಾರದಿಂದ ಅಭಿನಯಿಸ

ದೇಶಂ ಕಾಲಂ ಪ್ರಯೋಗಂ ಚ ಹ್ಯರ್ಥಯುಕ್ತಿಮವೇಕ್ಷ್ಯ ಚ ।
ಹಸ್ತಾ ಏತೇ ಪ್ರಯೋಕ್ತವ್ಯಾ ಸ್ತ್ರೀಣಾಂ ನೃಣಾಂ ಚ ನರ್ತಕೇ ॥ ೯೬ ॥

ಹಸ್ತಾ ಮಯೈತೇ ಕಥಿತಾ ನೃವೀರ
ಸರ್ವಂ ಕರಾಯತ್ತಮಿದಂ ಹಿ ನೃತ್ತಂ ।
ಯತ್ನಶ್ಚ ಕಾರ್ಯಸ್ತು ಕರೇಷು ತಸ್ಮಾ-
ಚ್ಚಾತುರ್ಯಲಾಸ್ಯಾಭಿನಯೋಪಪನ್ನಂ ॥ ೯೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ನೃತ್ತಹಸ್ತವ್ಯವಸ್ಥಾವರ್ಣನೋ ನಾಮ
ಷಡ್ತ್ರಿಂಶತಿತಮೋಽಧ್ಯಾಯಃ

---

ಬೇಕು ಇಂತಹ ಈ ನೃತ್ತವು ರಂಜಕವಾಗಿ ಪ್ರೇಕ್ಷಕರಿಗೆ ಆಯಾಯ ಅವಸ್ಥೆಗಳಿಗೆ ಬೋಧಕವಾಗಬೇಕಾದಲ್ಲಿ ಲಾಲಿತ್ಯವೇ ಮುಖ್ಯವಾದ ಜೀವಾತುವೆಂದು ತಿಳಿಯಬೇಕು ಸ್ತ್ರೀಯರ ಮತ್ತು ಪುರುಷರ ಆಯಾಯ ಮನೋವೃತ್ತಿಗೆ ಅನುಗುಣವಾದ ರಸಾಭಿವ್ಯಕ್ತಿಗೆ ತಕ್ಕಂತೆ ದೇಶ, ಕಾಲ, ಪ್ರಯೋಗ, ಅರ್ಥೌಚಿತ್ಯ ಇವಕ್ಕೆ ತಕ್ಕಂತೆ ಈ ಹಸ್ತಾಭಿನಯಗಳನ್ನು ನರ್ತಕನಿಂದ ಪ್ರಯೋಗಿಸಬೇಕು ಪ್ರಾಯಶಃ ನೃತ್ತವೆಲ್ಲವೂ ಹಸ್ತಾಭಿನಯದಿಂದಲೇ ಉಂಟಾಗತಕ್ಕದ್ದು ಆದ್ದರಿಂದ ಇಂತಹ ಹಸ್ತಾಭಿನಯಗಳನ್ನೆಲ್ಲಾ ನಾನು ಹೇಳಿರುತ್ತೇನೆ ಇಂತಹ ಅಭಿನಯದಲ್ಲಿ ಚಾತುರ್ಯವನ್ನು ಅಪೇಕ್ಷಿಸುವವರು ಈ ಹಸ್ತ ವಿನ್ಯಾಸಗಳ ಅಭ್ಯಾಸದಲ್ಲಿ ಬಹುಮಟ್ಟಿಗೂ ಪ್ರಯತ್ನಿಸಬೇಕು ಇದರಿಂದಲೇ ಚಾತುರ್ಯದಿಂದ ಕೂಡಿದ ಲಾಸ್ಯಾಭಿನಯವೂ ಸಿದ್ಧವಾಗುತ್ತದೆ

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ಮೂರನೆಯ ಖಂಡದಲ್ಲಿ ಮಾರ್ಕಂಡೇಯ
ವಜ್ರ ಸಂವಾದದಲ್ಲಿ ಅಭಿಧಾನಕೋಶದಲ್ಲಿ ನೃತ್ತಹಸ್ತವ್ಯವಸ್ಥಾವರ್ಣನವೆಂಬ
ಇಪ್ಪತ್ತಾರನೆಯ ಅಧ್ಯಾಯ ಮುಗಿದಿದೆ



॥ ಓಂ ॥

॥ ಶ್ರೀ ಹಯಗ್ರೀವಾಯ ನಮಃ ॥

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### ॥ ಸಪ್ತವಿಂಶತಿತಮೋऽಧ್ಯಾಯಃ ॥

**॥ ಮಾರ್ಕಂಡೇಯ ಉವಾಚ ॥**

**ವಾಚಿಕಶ್ಚ ತಥಾಹಾರ್ಯಸ್ತ್ವಾಂಗಿಕಸ್ಸಾತ್ತ್ವಿಕಸ್ತಥಾ ।**
**ಚತುಷ್ಪ್ರಕಾರೋऽಭಿನಯಃ ಕೀರ್ತಿತೋ ನಾಟ್ಯಕೋವಿದೈಃ ॥ ೧ ॥**

**ವಾಚಿಕೋ ವಚಸಾ ಪ್ರೋಕ್ತಃ ಶೃಣು ಹಾರ್ಯಂ ನರಾಧಿಪ ।**
**ಚತುರ್ವಿಧಂ ತೇ ವಿಜ್ಞೇಯಂ ಪ್ರಸ್ತೋಲಂಕಾರ ಏವ ಚ ॥ ೨ ॥**

**ತಥಾಙ್ಗರಚನಾ ಚೈವ ಜ್ಞೇಯಾ ಸಜ್ಜೀವ ಮೇವ ಚ ।**
**ಮೃದಾ ವಾ ದಾರುಣಾ ವಾಪಿ ವಸ್ತ್ರೇಣಾಪ್ಯಥ ಚರ್ಮಣಾ ॥ ೩ ॥**

---

**ಇಪ್ಪತ್ತೇಳನೆಯ ಅಧ್ಯಾಯ.**

೧-೩. ಅಭಿನಯವು ವಾಚಿಕ, ಆಹಾರ್ಯ, ಅಂಗಿಕ, ಸಾತ್ತ್ವಿಕವೆಂದು ನಾಲ್ಕು ವಿಧವಾಗಿರುತ್ತದೆ ಎಂದು ನಾಟ್ಯನಿಪುಣರು ಹೇಳಿರುತ್ತಾರೆ ವಾಚಕವೆಂದರೆ ನಾಯಿಕಾ ಅಥವಾ ನಾಯಕನ ವ್ಯವಹಾರಗಳನ್ನು ತನ್ನ ಮಾತಿನಿಂದ ಅನುಕರಿಸುವಿಕೆ. ಆಹಾರ್ಯವನ್ನೂ ಹೇಳುತ್ತೇನೆ ಕೇಳು .ಆಹಾರ್ಯವೆಂಬುದು ಪ್ರಸ್ತ, ಅಲಂಕಾರ ಅಂಗರಚನಾ, ಸಜ್ಜೀವವೆಂದು ನಾಲ್ಕು ಬಗೆಯಾಗಿದೆ ಮಣ್ಣು, ಮರ ವಸ್ತ್ರ, ಚರ್ಮ, ಲೋಹ ಇತ್ಯಾಗಳಿಂದ ಅಭಿನೇಯ ವಸ್ತುವಿನ ಸಾದೃಶ್ಯವನ್ನುಂಟುಮಾಡಿ ಅನುಕರಿಸುವಿಕೆಗೆ ಪ್ರಸ್ತವೆಂದು ಹೆಸರು

ಲೋಹೈರನುಕೃತಿರ್ವಾಪಿ ಪ್ರಸ್ತ ಇತ್ಯಭಿಧೀಯತೇ ।
ದೇವದಾನವಯಕ್ಷಾಣಾಂ ಗಜಾಶ್ವಮೃಗಪಕ್ಷಿಣಾಂ ॥ ೪ ॥

ಕಾರ್ಯಾಣಿ ಪ್ರತಿಶೀರ್ಷಾಣಿ ನಾಟ್ಯಜ್ಞೈಃ ಪ್ರಸ್ತಕರ್ಮಣಾ ।
ಅಲಂಕಾರಸ್ತು ವಿಜ್ಞೇಯೋ ಮಾಲ್ಯಾಭರಣವಾಸಸಾಂ ॥ ೫ ॥

ನಾನಾವಿಧಃ ಸಮಾಯೋಗೇ ಹ್ಯಂಗೋಪಾಂಗವಿನಿರ್ಗತಃ ।
ತಚ್ಚ ಕಾರ್ಯೋನಯಾ ಬುಧ್ವಾ ನಿಯೋಗಂ ಜಾತಿಮೇವ ಚ ॥ ೬ ॥

ಆಧಿಪತ್ಯಂ ತಥಾ ಸ್ಥಾನಂ ದೇಶೇ ಚ ನೃಪಸತ್ತಮ ।
ಅತೋಙ್ಗರಚನಾಂ ತುಭ್ಯಂ ವಕ್ಷ್ಯಾಮಿ ನೃಪವರ್ಣಜಾಂ ॥ ೭ ॥

ಶ್ವೇತೋ ರಕ್ತಸ್ತಥಾ ಪೀತಃ ಕೃಷ್ಣೋ ಹರಿತಮೇವ ಚ ।
ಮೂಲವರ್ಣಾಃ ಸಮಾಖ್ಯಾತಾಃ ಪಂಚ ಪಾರ್ಥಿವಸತ್ತಮ ॥ ೮ ॥

ಏಕದ್ವಿತ್ರಿಸಮಾಯೋಗಾದ್ಭಾವಕಲ್ಪನಯಾ ತಥಾ ।
ಸಂಖ್ಯೈವಾನ್ತರವರ್ಣಾನಾಂ ಲೋಕೇ ಕರ್ತುಂ ನ ಶಕ್ಯತೇ ॥ ೯ ॥

---

೪-೭ ದೇವ, ದಾನವ, ಯಕ್ಷರೆಂಬ ದೇವಯೋನಿಗಳ ಮತ್ತು ಆನೆ, ಕುದುರೆ ಮೃಗ, ಪಕ್ಷಿ ಮುಂತಾದುವುಗಳ ಪ್ರತಿಕೃತಿಯನ್ನು ಈ ಪ್ರಸ್ತಕರ್ಮದಿಂದ ಮಾಡಬೇಕು. ಅಲಂಕಾರವೆಂದರೆ ಹೂವು, ಆಭರಣ, ವಸ್ತ್ರ ಮೊದಲಾದುವುಗಳಿಂದ ಅಂಗೋಪಾಂಗಗಳ ಯೋಜನೆಯಿಂದ ಉಂಟಾಗುವ ನಾನಾವಿಧವಾದ ಶೋಭಾ ವಿಶೇಷ ಅಂತಹ ಅಲಂಕಾರ ರಚನೆಯನ್ನು ನಿಯೋಗ, ಜಾತಿ ಮೊದಲಾದು ವನ್ನು ಇಲ್ಲಿ ತಿಳಿದು ಆಚರಿಸಬೇಕು ನಿಯೋಗ ಮತ್ತು ಜಾತಿ ಇವುಗಳಂತೆ ಆಧಿ ಪತ್ಯಸ್ಥಾನ, ದೇಶ ಮುಂತಾದುವನ್ನೂ ತಿಳಿಯಬೇಕು ಆದುದರಿಂದ ವರ್ಣದಿಂದ ಉಂಟಾಗಬಹುದಾದ ಅಂಗರಚನೆಯನ್ನು ನಿನಗೆ ಹೇಳುತ್ತೇನೆ

೮-೧೦ ಎಲೈ, ದೊರೆಯೇ ಬಿಳುಪು, ಕೆಂಪು, ಹಳದಿ, ಕಪ್ಪು, ಹಸುರು, ಎಂಬ ಐದು ಬಣ್ಣಗಳೇ ಮೂಲವರ್ಣಗಳೆಂದು ಹೇಳಲ್ಪಟ್ಟಿವೆ ಈ ವರ್ಣಗಳಲ್ಲಿ ಒಂದು ಎರಡು ಅಥವಾ ಮೂರು ವರ್ಣಗಳ ಸಾಂಕರ್ಯದಿಂದಲೂ, ಅಲ್ಪಸ್ವಲ್ಪ ವ್ಯತ್ಯಾಸ ದಿಂದ ಪೃಥಗ್ಭಾವವನ್ನು ಕಲ್ಪಿಸುವುವರಿಂದಲೂ ಉಂಟಾಗಬಹುದಾದ ಸಂಖ್ಯೆಗೆ

**ಅತ್ಯರ್ಥಸಮಯೋಗಿತ್ವಾಲ್ಲೋಕೇsಹಂ ನೃಪಪುಂಗವ।**
**ವಿಭಾಗಂ ಸಂಪ್ರವಕ್ಷ್ಯಾಮಿ ವರ್ಣಯೋಃ ಶ್ಯಾಮಗೌರಯೋಃ ॥ ೧೦ ॥**

**ದ್ವಿಪ್ರಕಾರಾ ಭವಿಯರ್ಸ್ಮಾತ್ಸರ್ವಸ್ಯೇಹ ಪ್ರಕೀರ್ತಿತಾ ।**
**ಗೌರೀ ಪಂಚವಿಧಾ ತತ್ರ ಶ್ಯಾಮಾ ದ್ವಾದಶಧಾ ಭವೇತ್ ॥ ೧೧ ॥**

**ರುಕ್ಮಗೌರೀ ದಂತಗೌರೀ ಸ್ಫಟಿಚಂದನಗೌರ್ಯಪಿ ।**
**ಶರದ್ಘನಚಂದ್ರಕವದ್ಗೌರೀ ಪಂಚವಿಧಾ ಸ್ಮೃತಾ ॥ ೧೨ ॥**

**ರಕ್ತಶ್ಯಾಮಾ ಭವೇತ್ಪೂರ್ವಂ ಮುದ್ಗಶ್ಯಾಮಾ ನಿರನ್ತರಂ ।**
**ತತೋ ದೂರ್ವಾಂಕುರಶ್ಯಾಮಾ ಪಾಂಡುಶ್ಯಾಮಾ ಚ ಪಾರ್ಥಿವ ॥ ೧೩ ॥**

**ತತಶ್ಚ ಹರಿತಶ್ಯಾಮಾ ಪೀತಶ್ಯಾಮಾ ತತೋ ಭವೇತ್ ।**
**ತತಃ ಪ್ರಿಯಂಗುಕಶ್ಯಾಮಾ ಕಪಿಶ್ಯಾಮಾ ಚ ಪಾರ್ಥಿವ ॥ ೧೪ ॥**

---

ಪಾರವೇ ಇಲ್ಲ ಆದರ ಮಿಶ್ರಣಕ್ರಮದಲ್ಲಿ ಸಮವಾಗಿಯೂ ದ್ವಂದ್ವಪ್ರತಿದ್ವಂದ್ವ ಭಾವದಿಂದಿರುವ ವರ್ಣಗಳಲ್ಲಿ ಕಪ್ಪು ಮತ್ತು ಬಿಳುಪು ಇವುಗಳು ಸ್ಪಷ್ಟವಾದ ವಿಭಾಗ ಹೊಂದಿವೆ ಎಂದು ನಾನು ಹೇಳುತ್ತೇನ

೧೧-೧೬ ಈ ಎರಡು ವರ್ಣಗಳನ್ನು ಪರಸ್ಪರ ಭೇದದಿಂದ ಎರಡು ವಿಧ ವೆಂದು ಎಲ್ಲರೂ ಗ್ರಹಿಸಿರುವರು (ಆದುದರಿಂದ ನನಗೂ ಇದೇ ಅಭಿಪ್ರಾಯ) ಇದರಲ್ಲಿ ಬಿಳುಪು ಎಂಬುದು ಐದು ವಿಧ, ಕಪ್ಪು ಹನ್ನೆರಡು ವಿಧ ರುಕ್ಮಗೌರೀ, (ಚಿನ್ನ ದಲ್ಲಿರುವ ಬಿಳುಪಿನ ಭಾಗ) ದಂತಗೌರೀ, (ಗಜದಂತದ ಬಿಳಪು) ಸ್ಫಟಿಚಂದನ ಗೌರೀ, (ಶ್ರೀ ಗಂಧದ ಬಿಳುಪು) ಶರದ್ಘನಗೌರೀ, (ಶರತ್ಕಾಲದ ಮೋಘದ ಬಿಳುಪು) ಚಂಗ್ರಗೌರೀ, (ಚಂದ್ರನ ಬಿಳುಪು) ಎಂದು ಬಿಳಿಯಬಣ್ಣ (ಆಯಾಯ ಆಶ್ರಯ ವೈಲಕ್ಷಣ್ಯದಿಂದ) ಐದು ವಿಧವಾಗುತ್ತದೆ ರಕ್ತಶ್ಯಾಮಾ, (ರಕ್ತದ ಕಪ್ಪು) ಮುದ್ಗ ಶ್ಯಾಮಾ, (ಉದ್ದಿನಕಾಳಿನಲ್ಲಿರುವ ಸಾಂದ್ರವಾದ ಕಪ್ಪು) ದೂರ್ವಾಂಕುರಶ್ಯಾಮಾ, (ಹಸಿರು ಗರಿಕೆಯಲ್ಲಿರುವ ಕಪ್ಪು) ಪಾಂಡುಶ್ಯಾಮಾ,(ಬಿಳುಪುಕೂಡಿದ ಬೂದುಗಪ್ಪು) ಹರಿತಶ್ಯಾಮಾ, (ಹಸರುಬಣ್ಣದ ಕಪ್ಪು) ಪೀತಶ್ಯಾಮಾ, (ಹೊಂಬಣ್ಣದಿಂದ ಕೂಡಿದ ಕಪ್ಪು) ಪ್ರಿಯಂಗುಕಶ್ಯಾಮಾ, (ಪ್ರಿಯಂಗು ಬಳ್ಳಿಯಂತಿರುವ ಅಸ್ಪಷ್ಟವಾದ ಕಪ್ಪು) ಕಪಿಶ್ಯಾಮಾ, (ಬೂದುಗಪ್ಪು) ನಿಲೋತ್ಪಲಶ್ಯಾಮಾ, (ನೈದಿಲೆಯಂತೆ ವರ್ಣಾಂತರ

ತತೋ ನೀಲೋತ್ಪಲಶ್ಯಾಮಾ ಚಾಷಶ್ಯಾಮಾ ತತಃ ಪರಂ ।
ತತೋ ರಕ್ತೋತ್ಪಲಶ್ಯಾಮಾ ಘನಶ್ಯಾಮಾ ತಥಾ ಪರಾ ॥ ೧೫ ॥

ದ್ರವ್ಯಾನುರೂಪವರ್ಣೈಸ್ತು ತಾಸಾಂ ವ್ಯಕ್ತಿರುದಾಹೃತಾ ।
ರಂಗವ್ಯತಿಕರೈಃ ಶೋಭಾಮಧಿಕೃತ್ಯ ಮಹೀಯತೇ ॥ ೧೬ ॥

ವಕ್ಷ್ಯಾಮಿ ವರ್ಣಾನ್ ದೇವಾನಾಂ ಮತ್ಯೈವ ತು ವಿನಿಶ್ಚಯಂ ।
ತತ್ರ ಯೇಷಾಂ ನ ವಕ್ಷ್ಯಾಮಿ ತೇ ಕಾರ್ಯಾ ಗೌರವರ್ಣಕಾಃ ॥ ೧೭ ॥

ಶ್ಯಾಮಸ್ತು ವಾಸುಕಿಃ ಕಾರ್ಯೋ ನಾಗಾ ಗೌರಾಸ್ತು ದ್ವಾಪರೇ ।
ದೈತ್ಯಾಶ್ಚ ದಾನವಾಶ್ಚೈವ ರಾಕ್ಷಸಾ ಗುಹ್ಯಕಾನುಗಾಃ ॥ ೧೮ ॥

ಪಿಶಾಚಾ ಜಲಸಂಕಾಶಾ ಸಮ್ಮಿತಾನಿ ತು ವರ್ಣತಃ ।
ಷಟ್ಸು ದ್ವೀಪೇಷು ಪುರುಷಾಃ ಕರ್ತವ್ಯಾಃ ಕನಕಪ್ರಭಾಃ ॥ ೧೯ ॥

---

ಮಿಶ್ರವಾದಕಪ್ಪು) ಚಾಷಶ್ಯಾಮಾ, (ಕಿಕೀದಿವಿಪಕ್ಷಿಯಬಣ್ಣದಂತಿರುವ ಕಗ್ಗಪ್ಪು) ರಕ್ತೋತ್ಪಲಶ್ಯಾಮಾ, (ಕೆಂಪು ಕಮಲದಂತಿರುವ ಕಪ್ಪು) ಘನಶ್ಯಾಮಾ, (ಮೋಘದ ಬಣ್ಣದಂತಿರುವ ಕಪ್ಪು) ಇವುಗಳಲ್ಲಿ ಇಲ್ಲಿ ಹೇಳಿರುವ ಆಯಾಯ ಪದಾರ್ಥಗಳ ವರ್ಣಕ್ಕೆ ಅನುಗುಣವಾಗಿ ಆಗುವ ಅಭಿವ್ಯಕ್ತಿಯನ್ನು ಗಮನಿಸಬೇಕು ಈ ವರ್ಣಗಳು ವಿಹಿತವಿನಿಯೋಗದಿಂದ ರಂಗಸ್ಥಲದ ಸಂಬಂಧಹೊಂದಿ ಶೋಭಾತಿಶಯಹೊಂದಿ ಮೆರೆಯುತ್ತವೆ

೧೭–೨೦. ದೇವತೆಗಳಿಗೆ ಯಾವ ಯಾವ ವರ್ಣವಿರಬೇಕೆಂಬುದನ್ನು ನಾನು ತಿಳಿದು ನಿಶ್ಚಯಿಸಿರುವುದನ್ನು ಹೇಳುತ್ತೇನೆ ಯಾರಿಗೆ ಇಲ್ಲಿ ನಾನು ವರ್ಣವನ್ನು ಹೇಳಿರುವುದಿಲ್ಲವೋ ಅವರಿಗೆ ಬಿಳಿಯ ಬಣ್ಣವೇ ಇರಬೇಕೆಂದು ತಿಳಿಯಬೇಕು ವಾಸುಕಿಯನ್ನು ಶ್ಯಾಮವರ್ಣದಿಂದ ರಚಿಸಬೇಕು ಇತರ ಸರ್ಪಗಳನ್ನು ದ್ವಾಪರಯುಗದಲ್ಲಿದ್ದಂತೆ ಬಿಳಿಯಬಣ್ಣದಿಂದ ನಿರ್ಮಿಸಬೇಕು ದೈತ್ಯರು, ದಾನವರು, ರಾಕ್ಷಸರು, ಗುಹ್ಯಕರ ಅನುಯಾಯಿಗಳು, ಪಿಶಾಚಗಳು ಇವರೆಲ್ಲರೂ ಸದೃಶರಾದುದರಿಂದ ನೀರಿನ ಬಣ್ಣದಂತಹ ಬಣ್ಣದಿಂದ ಇವರನ್ನು ರಚಿಸಬೇಕು. ಜಂಬೂದ್ವೀಪಕ್ಕೆ ಸೇರಿದ ಭಾರತವರ್ಷವನ್ನು ಮಾತ್ರ ಬಿಟ್ಟು ಉಳಿದ ಆರು ದ್ವೀಪಗಳಲ್ಲಿಯೂ

**ಜಂಬೂದ್ವೀಪಸ್ಯ ವರ್ಷೇಷು ಮುಕ್ತ್ವೈಕಂ ಭಾರತಂ ನೃಪ ।**
**ಭಾರತೇಷು ತಥಾ ಕಾರ್ಯಾ ನಾನಾದೇಶಭವಾ ಯಥಾ　　॥ ೨೦ ॥**

**ಪುಲಿಂದಾ ದಾಕ್ಷಿಣಾತ್ಯಾಶ್ಚ ಪ್ರಾಯಶೋ ವರ್ಣತೋಽಸಿತಾಃ ।**
**ಶಕಾಶ್ಚ ಯವನಾಶ್ಚೈವ ಪಲ್ಲವಾ ಬಾಹ್ಲಿಕಾಶ್ಚ ಯೇ　　॥ ೨೧ ॥**

**ಪ್ರಾಯೇಣ ಗೌರಾಃ ಕರ್ತವ್ಯಾಃ ಉತ್ತರಾಪಥಸಂಭವಾಃ ।**
**ಪಾಂಚಾಲಾಃ ಶೂರಸೇನಾಶ್ಚ ತಥಾ ಯೇ ಚಾತ್ರ ಮಾಗಧಾಃ　　॥ ೨೨ ॥**

**ಅಂಗಾ ವಂಗಾಃ ಕಲಿಂಗಾಶ್ಚ ಪ್ರಾಯಶೋ ವರ್ಣತೋಽಸಿತಾಃ ।**
**ಚಂದ್ರವರ್ಣಾ ದ್ವಿಜಾಃ ಕಾರ್ಯಾಃ ರಾಜನ್ಯಾಃ ಪದ್ಮಸನ್ನಿಭಾಃ　　। ೨೩ ॥**

**ಆಪಾಂಡುರಾಃ ತಥಾ ವೈಶ್ಯಾಃ ಶ್ಯಾಮಾ ಶೂದ್ರಾ ಶ್ಚ ವರ್ಣತಃ ।**
**ನಾನಾವರ್ಣಾಃ ಸ್ಮೃತಾ ಭೂತಾ ಗಂಧರ್ವಾಪ್ಸರಸಸ್ತಥಾ　　॥ ೨೪ ॥**

---

ಇರುವ ಪುರುಷರನ್ನು ಚಿನ್ನದ ಬಣ್ಣದಿಂದ ರಚಿಸಬೇಕು ಭಾರತದಲ್ಲಿ ಮಾತ್ರ ಆಯಾಯ ದೇಶದಲ್ಲಿ ಹುಟ್ಟಿದ ಜನರು ಯಾವ ಯಾವ ಬಣ್ಣದಲ್ಲಿರುವುದು ಪ್ರಸಿದ್ಧವಾಗಿದೆಯೋ ಆ ಬಣ್ಣದಿಂದಲೇ ಅವರನ್ನು ರಚಿಸಬೇಕು

೨೧-೨೪ ಪುಲಿಂದದೇಶದವರೂ, ದಾಕ್ಷಿಣಾತ್ಯರೂ ಸಹ ಪ್ರಾಯಶಃ ಕಪ್ಪು ವರ್ಣದಿಂದ ಕೂಡಿರುತ್ತಾರ ಶಕ ಯವನ, ಪಲ್ಲವ, ಬಾಹ್ಲಿಕ ದೇಶದವರು ಅದಕ್ಕಿಂತ ಉತ್ತರದಲ್ಲಿರುವವರೂ ಸಹ ಪ್ರಾಯಶಃ ಬಿಳುಪಾಗಿಯೇ ಇರುತ್ತಾರೆ ಪಾಂಚಾಲ, ಶೂರಸೇನ, ಮಗಧ, ಅಂಗ, ವಂಗ, ಕಲಿಂಗ ಈ ದೇಶದವರು ಪ್ರಾಯಶಃ ಕಪ್ಪುವರ್ಣದವರೇ ಹೆಚ್ಚು ದ್ವಿಜರನ್ನು (ಬ್ರಾಹ್ಮಣರನ್ನು) ಚಂದ್ರನ ಬಣ್ಣದಂತಿರುವ ಬಿಳಿಯ ವರ್ಣದಿಂದ ರಚಿಸಬೇಕು ಕ್ಷತ್ರಿಯರನ್ನು ಪದ್ಮವರ್ಣಕ್ಕೆ ಸಮಾನವರ್ಣರನ್ನಾಗಿಯೂ, ವೈಶ್ಯರನ್ನು ಶುಭ್ರವರ್ಣದಿಂದಲೂ, ಶೂದ್ರರನ್ನು ಕಪ್ಪು ಬಣ್ಣದಿಂದಲೂ ರಚಿಸಬೇಕು ಭೂತಗಳೂ, ಗಂಧರ್ವರೂ, ಅಪ್ಸರೆಗಳೂ ಸಹ ನಾನಾವರ್ಣ ಉಳ್ಳವರು.

ರಾಜಾನಃ ಪದ್ಮವರ್ಣಾಭಾ ಯೇ ಚಾಪಿ ಸುಖಿನೋ ಜನಾಃ ।
ಕುಕರ್ಮಾಣೋ ಗ್ರಹಗ್ರಸ್ತಾಃ ವ್ಯಾಧಿತಾಸ್ತಪ ಆಶ್ರಿತಾಃ ॥ ೨೫ ॥

ಆಯುಸ್ತಕರ್ಮಣಶ್ಚೈವ ಆಸಿತಾಃ ಕುಲಜಾಲಯಃ ।
ವರ್ಣಃ ಪ್ರತ್ಯಕ್ಷದೃಷ್ಟಸ್ಯ ಕರ್ತವ್ಯಃ ಸದೃಶಸ್ತಥಾ ॥ ೨೬ ॥

ದೇವಗಂಧರ್ವಸಿದ್ಧಾನಾಂ ಕುಮಾರಾಣಾಂ ಚ ಪಾರ್ಥಿವ ।
ಶ್ಮಶ್ರು ತೇಷಾಂ ನ ಕರ್ತವ್ಯಂ ಯೇ ಚ ದೀಕ್ಷಾಂ ಸಮಾಶ್ರಿತಾಃ ॥ ೨೭ ॥

ದಿವ್ಯಾ ಯೇ ಪುರುಷಾಶ್ಚೈವ ತಥಾ ವಿದ್ಯಾಧರಾಶ್ಚ ಯೇ ।
ಶೃಂಗಾರಿಣೋ ನರೇಂದ್ರಾಶ್ಚ ಚಿತ್ರಶ್ಮಶ್ರುಧರಾಸ್ತಥಾ ॥ ೨೮ ॥

ಶುದ್ಧಂ ತು ಲಿಂಗಿನಾಂ ಕಾರ್ಯಂ ತಥಾಮಾತ್ಯಪುರೋಧಸಾಂ ।
ಮಧ್ಯಸ್ಥಾ ಯೇ ಚ ಪುರುಷಾಃ ಯೇ ಚ ದೀಕ್ಷಾಂ ಸಮಾಶ್ರಿತಾಃ ॥ ೨೯ ॥

---

೨೫–೨೮ ರಾಜರು ಮತ್ತು ಸುಖಿಗಳಾದ ಭೋಗಿಗಳೂ ಸಹ ಪದ್ಮದ ಬಣ್ಣದಂತಿರುವ ವರ್ಣವುಳ್ಳವರು ಕುತ್ಸಿತ ವ್ಯವಹಾರಿಗಳು, ಗ್ರಹಪೀಡಿತರು, ವ್ಯಾಧಿಗ್ರಸ್ತರು, ತಪಸ್ಸಿನಲ್ಲಿ ನಿರತರಾಗಿರುವವರು ಶ್ರಮಜೀವಿಗಳು, ಸಹ ಕಪ್ಪುವರ್ಣ ಉಳ್ಳವರು, ಪ್ರತ್ಯಕ್ಷದಿಂದ ನಮಗೆ ತೋರುವ ಬಣ್ಣದಂತಹ ಬಣ್ಣವನ್ನೇ ಆಯಾಯ ಚಿತ್ರಗಳಿಗೂ ರಚಿಸಬೇಕು ದೇವತೆಗಳಿಗೂ, ಗಂಧರ್ವ ಮತ್ತು ಸಿದ್ಧರಿಗೂ ಕುಮಾರಾವಸ್ಥೆಯಲ್ಲಿರುವವರಿಗೂ, ದೀಕ್ಷಾ ನಿಯಮದಲ್ಲಿರುವವರಿಗೂ ಸಹ ಗಡ್ಡ ಮೀಸೆಗಳನ್ನು ತಿದ್ದಬಾರದು ದಿವ್ಯಪುರುಷನಿಗೂ, ವಿದ್ಯಾಧರರಿಗೂ, ಶೃಂಗಾರಿಗಳಾದ ರಾಜರಿಗೂ ಸಹ ನಾನಾವಿಧ ಬಣ್ಣ ಮತ್ತು ಸನ್ನಿವೇಶದಿಂದ ಕೂಡಿದ ವಿಚಿತ್ರವಾದ ಗಡ್ಡ ಮೀಸೆಗಳನ್ನು ರಚಿಸಬೇಕು

೨೯–೩೨ ಬ್ರಹ್ಮಚರ್ಯವೇ ಮೊದಲಾದ ಆಶ್ರಮ ಚಿಹ್ನೆಗಳನ್ನು ಧರಿಸಿರುವವರಿಗೂ, ಅಮಾತ್ಯ ಮತ್ತು ಪುರೋಹಿತರಿಗೂ, ಸಾಮಾನ್ಯರಾದ ಮಧ್ಯಮ ದರ್ಜೆಯ ಪುರುಷರಿಗೂ, ದೀಕ್ಷೆಯನ್ನು ಹೊಂದಿರುವವರಿಗೂ ಸಹ ಶುಭ್ರವರ್ಣದ

**ಅನಿರ್ಣೀತಪ್ರತಿಜ್ಞಾನಾಂ ದುಃಖಿತಾನಾಂ ತಪಸ್ವಿನಾಂ ।**
**ಮುನೀನಾಂ ಚಿರಬದ್ಧಾನಾಂ ದೀರ್ಘಂ ಶ್ಮಶ್ರುಪ್ರಕೀರ್ತಿತಂ ॥ ೩೦ ॥**

**ಧರ್ಮಪ್ರವೃತ್ತೇರ್ವಂಶಶ್ಚ ಭವೇಚ್ಛೂದ್ರೋ ನರಾಧಿಪ ।**
**ವಣಿಜಾಂ ಕಂಚುಕೀಯಾನಾಂ ಬ್ರಾಹ್ಮಣಾನಾಂ ತಥೈವ ಚ ॥ ೩೧ ॥**

**ರಾಜ್ಞಾಂ ವಿಚಿತ್ರೋ ವೇಶಃ ಸ್ಯಾದ್ವೇಶ್ಯಾಸ್ತ್ರೀಣಾಂ ಚ ಯಾದವ ।**
**ಯಥಾಲಿಂಗಂ ಭವೇದ್ವೇಶಃ ತಥಾನ್ಯೇಷಾಂ ತು ಲೋಕತಃ ॥ ೩೨ ॥**

**ತ್ರಿವಿಧಾ ಮುಕುಟಾ ಜ್ಞೇಯಾ ದೇವಪಾರ್ಥಿವಸಂಶ್ರಯಾಃ ।**
**ದೇವಾನಾಂ ಪಾರ್ಥಿವಾನಾಂ ಚ ಕರ್ತವ್ಯಾಸ್ತು ಕಿರೀಟಕಾಃ ॥ ೩೩ ॥**

**ದೇವಾನಾಂ ಸಪ್ತಶಿಖರಾಃ ಪಂಚಭಿಃ ಭೂಭೃತಾಂ ತಥಾ ।**
**ತ್ರಿಭಿಶ್ಚ ಶಿಖರೈಃ ಕಾರ್ಯಾ ಮಹಿಷೀಯುವರಾಜಯೋಃ ॥ ೩೪ ॥**

---

(ಚಿತ್ರವರ್ಣವಿಲ್ಲದ) ಗಡ್ಡ ಮೀಸೆಗಳನ್ನೇ ರಚಿಸಬೇಕು ಪ್ರತಿಜ್ಞೆಯನ್ನು ಪೂರ್ಣಗೊಳಿಸದಿರುವವರಿಗೂ, ದುಃಖಿತರಿಗೂ, ತಪಸ್ಸಿನಲ್ಲಿ ನಿರತರಾಗಿರುವವರಿಗೂ, ಮುನಿಗಳಿಗೂ, ಬಹುಕಾಲ ಬಂಧನದಲ್ಲಿರುವವರಿಗೂ ಸಹ ಗಡ್ಡ ಮೀಸೆಗಳನ್ನು ರಚಿಸಬೇಕು. ಶೂದ್ರನೂ ಸಹ ಅವನ ವರ್ಣೋಚಿತವಾದ ಧರ್ಮಪ್ರಚಾರಕ್ಕೆ ಅರ್ಹವಾದ ವಂಶ ಹೊಂದಿದ್ದಾನೆ ವ್ಯಾಪಾರಿಗಳಿಗೂ, ಕಂಚುಕಿಗಳಿಗೂ, ಬ್ರಾಹ್ಮಣರಿಗೂ, ರಾಜರಿಗೂ, ವೇಶ್ಯಾಸ್ತ್ರೀಯರಿಗೂ ಸಹ ಅವರವರ ವ್ಯವಹಾರಕ್ಕೆ ತಕ್ಕಂತೆ ನಾನಾ ವಿಧವಾದ ವೇಷಗಳಿರಬಹುದು ಇತರರಿಗೂ ಸಹ ಲೋಕಪ್ರಸಿದ್ಧಿಗೆ ತಕ್ಕಂತೆ ವೇಷಗಳಿರಬಹುದು

೩೩-೩೬ ದೇವತೆಗಳಿಗೂ ರಾಜರಿಗೂ ಅಲಂಕಾರಕ್ಕಾಗಿ ಉಪಯೋಗಿಸುವ ಕಿರೀಟಗಳು ಮೂರು ವಿಧವಾಗಿರುತ್ತವೆ. ಇಲ್ಲಿ ಹೇಳುವ ರೀತಿಯನ್ನನುಸರಿಸಿ ಅವರಿಗೆ ಕಿರೀಟಗಳನ್ನು ರಚಿಸಬೇಕು ದೇವತೆಗಳ ಕಿರೀಟಗಳು ಏಳು ಶಿಖರ ಉಳ್ಳದ್ದಾಗಿಯೂ, ರಾಜರ ಕಿರೀಟಗಳು ಐದು ಶಿಖರ ಉಳ್ಳದ್ದಾಗಿಯೂ, ಪಟ್ಟಮಹಿಷಿ ಮತ್ತು ಯುವರಾಜ ಇವರ ಕಿರೀಟಗಳು ಮೂರು ಶಿಖರಗಳಿಂದ ಕೂಡಿಯೂ ಇರಬೇಕು ಸೇನಾಧ್ಯಕ್ಷನಿಗೆ ಒಂದೇ ಶಿಖರವುಳ್ಳ ಕಿರೀಟವನ್ನು ರಚಿಸಬೇಕು.

**ಸೇನಾಧ್ಯಕ್ಷಸ್ಯ ಕರ್ತವ್ಯಸ್ತಥೈಕಶಿಖರೋ ನೃಪ ।**
**ದೈತ್ಯದಾನವಯಕ್ಷಾಣಾಂ ಪನ್ನಗಾನಾಂ ಸರಕ್ಷಸಾಂ ॥ ೩೫ ॥**

**ಏಕಪಟ್ಟಾಸ್ತು ವಿಸ್ತೀರ್ಣಾಃ ಕರ್ತವ್ಯಾ ಮುಕುಟಾಃ ಶುಭಾಃ ।**
**ವಿದ್ಯಾಧರಾಣಾಂ ಸಿದ್ಧಾನಾಂ ವಾನರಾಣಾಂ ತಥೈವ ಚ ॥ ೩೬ ॥**

**ಗ್ರಂಥಿಮಂತಸ್ತು ಕರ್ತವ್ಯಾ ಮುಕುಟಾಸ್ತು ಪ್ರಯೋಕ್ತೃಭಿಃ ।**
**ದೇವದಾನವಗಂಧರ್ವಾಃ ಕೃಷ್ಣಪಕ್ಷಾಃ ಪ್ರಕೀರ್ತಿತಾಃ ॥ ೩೭ ॥**

**ದೈತ್ಯದಾನವಯಕ್ಷಾಶ್ಚ ಪಿಶಾಚಾನಾಗರಾಕ್ಷಸಾಃ ।**
**ಹರಿಶ್ಮಶ್ರುಕಚಾಃ ಕಾರ್ಯಾಸ್ತಥಾಪಿಂಗೇಕ್ಷಣಾ ನೃಪ ॥ ೩೮ ॥**

**ಕಂಚುಕೀಯಾಶ್ಚ ಕರ್ತವ್ಯಾಸ್ತಥಾ ಶುಕ್ಲಶಿರೋರುಹಾಃ ।**
**ಅಮಾತ್ಯಕಂಚುಕೀಯಾನಾಂ ತಥಾ ಶ್ರೇಷ್ಠಪುರೋಧಸಾಂ ॥ ೩೯ ॥**

**ವೇಷ್ಟನಾಪಟ್ಟಬದ್ಧಾನಿ ಪ್ರತಿಶೀರ್ಷಾಣಿ ಕಾರಯೇತ್ ।**
**ಪಿಶಾಚೋನ್ಮತ್ತಭೂತಾನಾಂ ತಾಪಸಾನಾಂ ತಥೈವ ಚ ॥ ೪೦ ॥**

---

ದೈತ್ಯರು, ದಾನವರು, ಯಕ್ಷರು, ಸರ್ಪಗಳು, ರಾಕ್ಷಸರು ಇವರುಗಳಿಗೆ ಒಂದೇ ಪಟ್ಟಿಯಿಂದ ಕೂಡಿದ ವಿಸ್ತೀರ್ಣವಾದ ಕಿರೀಟಗಳನ್ನು ರಚಿಸಬೇಕು ವಿದ್ಯಾಧರರಿಗೂ, ಸಿದ್ಧರಿಗೂ, ಕಪಿಗಳಿಗೂ ಸಹ ಮಾಡಲ್ಪಡಬಹುದಾದ ಕಿರೀಟಗಳು ಮೆಟ್ಟಿಲು ಮೆಟ್ಟಿಲಾಗಿ ಗ್ರಂಥಿಗಳಿಂದ ಕೂಡಿರಬೇಕು

೩೭–೪೦ ದೇವತೆಗಳು, ದಾನವರು ಮತ್ತು ಗಂಧರ್ವರು ಇವರಿಗೆ ಕಪ್ಪಾದ ರೆಕ್ಕೆಗಳಿರಬೇಕು ದೈತ್ಯರು, ದಾನವರು, ಯಕ್ಷರು, ಪಿಶಾಚಗಳು ಸರ್ಪಗಳು, ರಾಕ್ಷಸರು ಇವರಿಗೆ ಹಸುರಾದ ಗಡ್ಡ ಮೀಸೆಗಳನ್ನೂ ಕೇಶಗಳನ್ನೂ ನಿರ್ಮಿಸಬೇಕು ಮತ್ತು ಹೊಂಬಣ್ಣದಿಂದ ಕೂಡಿದ (ಬೆಕ್ಕಿನಂತೆ) ನೇತ್ರಗಳಿರಬೇಕು ಕಂಚುಕೀಯರಿಗೆ ಬಿಳುಪಾದ ಕೂದಲಿನಿಂದ ಕೂಡಿವ ತಲೆಯನ್ನು ನಿರ್ಮಿಸಬೇಕು ಅಮಾತ್ಯ ಕಂಚುಕೀಯು ಮತ್ತು ಶ್ರೇಷ್ಠರಾದ ಪುರೋಹಿತರು ಇವರ ಪ್ರತಿಬಿಂಬವನ್ನು ಸುತ್ತಿರುವ ಪಟ್ಟಬಂಧದೊಡನೆ ನಿರ್ಮಿಸಬೇಕು ಪಿಶಾಚಗಳು, ಹುಚ್ಚು ಹಿಡಿದಿರುವವರು, ಭೂತಾದಿಗಳು, ತಾಪಸರು ಮತ್ತು ಪ್ರತಿಜ್ಞಾಪೂರ್ತಿಯನ್ನು ಹೊಂದದಿರುವವರು, ಇವರಿಗೆ ತಲೆಯಲ್ಲಿ ಜೋಲಾಡುತ್ತಿರುವ ಕೂದಲುಗಳನ್ನು ರಚಿಸಬೇಕು.

ಅನಿಸ್ತೀರ್ಣಪ್ರತಿಜ್ಞಾನಾಂ ಲಂಬಕೇಶಂ ಭವೇಚ್ಛಿರಃ ।
ಬಾಲಾನಾಮಪಿ ಕರ್ತವ್ಯಂ ಶಿಖಂಡಕವಿಭೂಷಣಂ　　　　॥ ४೧ ॥

ಜಟಾಜೂಟಯುತಂ ಕಾರ್ಯಂ ಮುನೀನಾಮಪಿ ಪಾರ್ಥಿವ ।
ಚೇಟಾನಾಮಪಿ ಕರ್ತವ್ಯಂ ತ್ರಿಶಿರಃ ಖಂಡಮೇವ ಚ　　　　॥ ४೨ ॥

ವಿದೂಷಕಸ್ಯ ಖಲತಿಃ ಸ್ಯಾತ್ಕಾಕಪದಮೇವ ಚ ।
ಶೇಷಾಣಾಮುಕ್ತಯೋಗೇನ ಶೇಷಜಾತಿಸಮಾಶ್ರಯಂ　　　　॥ ४೩ ॥

ಸಜ್ಜೀವಇತಿ ಯತ್ಪ್ರೋಕ್ತಂ ತಸ್ಯ ವಕ್ಷ್ಯಾಮಿ ಲಕ್ಷಣಂ ।
ಪ್ರವೇಶಸ್ತು ತಿರಶ್ಚಾಂ ವೈ ಸಜ್ಜೀವ ಇತಿ ಸಂಜ್ಞಿತಃ　　　　॥ ४४ ॥

ತೇಷಾಂ ಪ್ರಸ್ತೇನ ಕರ್ತವ್ಯಾ ಪ್ರಕೃತಿಃ ಪುರುಷಾಂತರಾ ।
ತಥೈವಾಯುಧಹಸ್ತಾನಾಂ ಕರ್ತವ್ಯಾ ಹೇತಯಃ ಶುಭಾಃ　　　　॥ ४೫ ॥

---

४೧-४४　ಬಾಲಕರಿಗೂ ಸಹ ಶಿರೋಭೂಷಣಗಳನ್ನು ರಚಿಸಬೇಕು ಮುನಿಗಳ ತಲೆಗಳು ಜಟಾಜೂಟದಿಂದ ಕೂಡಿರುವಂತೆ ರಚಿಸಿರಬೇಕು ಪರಿಚಾರಕರ ತಲೆಗಳು ಮೂರು ಭಾಗ ಮಾಡಿದ ಕೇಶಗಳಿಂದ ಕೂಡಿರಬೇಕು ವಿದೂಷಕನ ತಲೆಯು ಕೂದಲಿಲ್ಲದ ಪಟ್ಟೆದಲೆಯಾಗಿ ಅಥವಾ ಕಾಕಪಕ್ಷವೆಂಬ ಸನ್ನಿವೇಶವುಳ್ಳ ಕೂದಲುಳ್ಳದ್ದಾಗಿ ಇರಬೇಕು ಉಳಿದವರ ತಲೆಯ ಕೇಶಾದಿವಿನ್ಯಾಸಗಳು ಆಯಾಯ ಜಾತಿಧರ್ಮಕ್ಕೆ ತಕ್ಕಂತೆ ರಚಿಸಲ್ಪಡಬೇಕು ಸಜ್ಜೀವವೆಂಬ ನಾಲ್ಕನೆಯ ಭೇದವನ್ನು ಹೇಳಿರುವನಷ್ಟೆ ಅದರ ಲಕ್ಷಣವನ್ನೂ ಹೇಳುತ್ತೇನೆ ತಿರ್ಯಕ್ಪ್ರಾಣಿಗಳ ರಂಗಪ್ರವೇಶವೇ ಸಜ್ಜೀವವೆನಿಸುತ್ತದೆ

४५-४೭　ಅಂತಹ ತಿರ್ಯಕ್‌ಪ್ರಾಣಿಗಳ ಪ್ರತಿಕೃತಿಯನ್ನು ಪ್ರಸ್ತವೆಂಬ ಹಿಂದೆ ಹೇಳಿರುವ ವಿಧಾನದಿಂದ ನಿರ್ಮಿಸಬೇಕು ಆ ಪ್ರತಿಕೃತಿಯೊಳಗೆ ಮನುಷ್ಯನನ್ನು ಇಟ್ಟಿರಬೇಕು ಹಾಗೆಯೇ ಈ ಪ್ರಸ್ತವಿಧಾನದಿಂದಲೇ ಆಯುಧಹಸ್ತರಾದ ಪಾತ್ರಗಳಿಗೆ ರಮ್ಯವಾದ ಆಯುಧಗಳನ್ನೂ ರಚಿಸಬೇಕು ಈ ರೀತಿ ಲೋಕಮರ್ಯಾದೆಗೆ ತಕ್ಕಂತೆಯೂ, ತನ್ನ ಬುದ್ಧಿಕೌಶಲದಿಂದಲೂ, ನಾಟ್ಯೋಪಕರಣಗಳನ್ನು ಆಯಾಯ ನಿಯಮಕ್ಕೆ ಅನುಗುಣವಾಗಿ ರಚಿಸಬೇಕು ಎಲ್ಲೆ ಘೋರೆಯೇ,

ಏವಂ ಲೋಕೋಪಚಾರೇಣ ಸ್ವಬುದ್ಧ್ಯಾ ವಿಭವೇನ ಚ ।
ನಾಟ್ಯೋಪಕರಣಾನೀಹ ಯಥಾವತ್ಪರಿಕಲ್ಪಯೇತ್ || ೪೬ ||

ಹೇತಿಪ್ರಮೋಕ್ಷೋ ನ ತು ರಂಗಮಧ್ಯೇ
ಕಾರ್ಯೋ ಭವೇತ್ಪಾರ್ಥಿವವಂಶಮುಖ್ಯ ।
ಆಹಾರ್ಯಮೇತತ್ಕಥಿತಂ ಸಮಾಸಾ-
ದ್ವಕ್ಷ್ಯಾಮ್ಯತಶ್ಚಾಂಗಿಕಮೇವ ತುಭ್ಯಂ || ೪೭ ||

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಆಹಾರ್ಯಾಭಿನಯೋ ನಾಮ
ಸಪ್ತವಿಂಶೋಽಧ್ಯಾಯಃ

---

ರಂಗಸ್ಥಾನದಲ್ಲಿ ಯಾವಾಗಲೂ, ಆಯುಧಪ್ರಯೋಗವನ್ನು ಅಭಿನಯಿಸಲೇ ಬಾರದು ಇಲ್ಲಿಯವರಿಗೆ ಆಹಾರ್ಯವೆಂಬ ಅಭಿನಯ ವಿಶೇಷವನ್ನು ಸಂಗ್ರಹವಾಗಿ ಹೇಳಿ ಆಯಿತು. ಇನ್ನು ಮುಂದೆ ಆಂಗಿಕವೆಂಬ ಅಭಿನಯವನ್ನು ಹೇಳುತ್ತೇನೆ

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ತೃತೀಯ ಖಂಡದಲ್ಲಿ ಮಾರ್ಕಂಡೇಯ
ವಜ್ರ ಸಂವಾದದಲ್ಲಿ ಆಹಾರ್ಯಾಭಿನಯವೆಂಬ ಇಪ್ಪತ್ತೇಳನೆಯ
ಅಧ್ಯಾಯ ಮುಗಿದಿದೆ.



॥ ಓಂ ॥

॥ ಶ್ರೀ ಹಯಗ್ರೀವಾಯ ನಮಃ ॥

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### ॥ ಅಷ್ಟಾವಿಂಶೋಽಧ್ಯಾಯಃ ॥

**॥ ಮಾರ್ಕಂಡೇಯ ಉವಾಚ ॥**

**ಅತಃ ಪರಂ ಪ್ರವಕ್ಷ್ಯಾಮಿ ಸಾಮಾನ್ಯಾಭಿನಯಂ ತವ ।**
**ತಸ್ಮಿನ್ ಕಾರ್ಯಃ ಪ್ರಯತ್ನಸ್ತು ನಾಟ್ಯಾನ್ತರಪ್ರತಿಷ್ಠಿತಂ ॥ ೧ ॥**

**ಶಬ್ದಃ ಸ್ಪರ್ಶಶ್ಚ ರೂಪಂ ಚ ರಸೋ ಗಂಧಸ್ತಥೈವ ಚ ।**
**ಇಂದ್ರಿಯಾಣೀನ್ದ್ರಿಯಾರ್ಥಾಂಸ್ತು ಭಾವೇನಾಭಿನಯೇದ್ಬುಧಃ ॥ ೨ ॥**

**ಕೃತ್ವಾ ಸಾಚೀಕೃತಾಂ ದೃಷ್ಟಿಂ ಶಿರಃ ಕಿಂಚಿನ್ನತಂ ಭವೇತ್ ।**
**ತರ್ಜನೀ ಕರ್ಣದೇಶೇ ತು ಶಬ್ದಂತ್ವಭಿನಯೇದ್ಬುಧಃ ॥ ೩ ॥**

---

### ಇಪ್ಪತ್ತೆಂಟನೆಯ ಅಧ್ಯಾಯ

೧–೩ ಮಾರ್ಕಂಡೇಯರು ಹೇಳುತ್ತಾರೆ — ಇನ್ನು ಮುಂದೆ ಸಾಮಾನ್ಯಾಭಿನಯವನ್ನು ನಿನಗೆ ಹೇಳುತ್ತೇನೆ ಈ ಸಾಮಾನ್ಯಾಭಿನಯ ವಿಷಯದಲ್ಲಿ ಪ್ರಯತ್ನ ಮಾಡಬೇಕು ಇದು ನಾಟ್ಯದ ಉನ್ನತಿಗೆ ಕಾರಣವಾಗುತ್ತದೆ ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂಬ ಆಯಾಯ ಇಂದ್ರಿಯ ವಿಷಯಗಳನ್ನೂ, ಇಂದ್ರಿಯಗಳನ್ನೂ ಸಹ ಸಮುಚಿತವಾದ ಅವುಗಳ ಸ್ವಭಾವಸೂಚನದಿಂದ ಅಭಿನಯಿಸಬೇಕು ದೃಷ್ಟಿಯನ್ನು ಒಂದು ಕಡೆಗೆ ಓರೆಮಾಡಿ ತಲೆಯನ್ನು ಸ್ವಲ್ಪ ಬಗ್ಗಿಸಿ ತರ್ಜನೀ ಬೆರಳನ್ನು ಕಿವಿಯ ಸಮೀಪದಲ್ಲಿಟ್ಟು ಶಬ್ದವನ್ನು ಅಭಿನಯಿಸಬೇಕು

ಕಿಂಚಿದಾಕುಂಚಿತೇ ನೇತ್ರೇ ಕೃತ್ವೋತ್ಫುಲ್ಲಾಂತ್ವನಾಮಿಕಾಂ ।
ಏಕಶ್ವಾಸೋ ಭವೇಚ್ಚಾಪಿ ಗಂಧಮೇವಂ ವಿನಿರ್ದಿಶೇತ್ ॥ ೪ ॥

ಇಂದ್ರಿಯಾರ್ಥಾಸ್ತು ಪಂಚೈತೇ ತ್ರಿವಿಧಾಃ ಪರಿಕೀರ್ತಿತಾಃ ।
ಇಷ್ಟಾಸ್ತಥಾಹ್ಯನಿಷ್ಟಾಶ್ಚ ಮಧ್ಯಸ್ಥಾ ನೃಪಸತ್ತಮ ॥ ೫ ॥

ಗಾತ್ರಪ್ರಹ್ಲಾದನೇನೇಹ ತಥಾ ಪುಲಕಿತೇನ ಚ ।
ನಿತಾಂತಾಸ್ರಕ್ರಿಯಾಭಿಶ್ಚ ಸರ್ವಮಿಷ್ಟಂ ನಿರೂಪಯೇತ್ ॥ ೬ ॥

ಪರಾವೃತ್ತೇನ ಶಿರಸಾ ತಥಾ ಚಾನೇನ ಚಕ್ಷುಷಾ ।
ನೇತ್ರನಾಸಾಂಚಿತತ್ವೇನ ಹ್ಯನಿಷ್ಟಮಿತಿ ನಿರ್ದಿಶೇತ್ ॥ ೭ ॥

ಮಧ್ಯಸ್ಥೇನೈವ ಭಾವೇನ ಮಧ್ಯಸ್ಥಕರಣಂ ಭವೇತ್ ।
ಆತ್ಮಾನುಭಾವೀ ಯೋಽರ್ಥಃ ಸ್ಯಾದಾತ್ಮಸ್ಥ ಇತಿ ಸಂಜ್ಞಿತಃ ॥ ೮ ॥

ಪರಾರ್ಥವರ್ಣನಂ ಯಚ್ಚ ಪರಸ್ಥೇತಿ ಚ ಕೀರ್ತಿತಂ ।
ಉತ್ತಾನೌ ತು ಕರೌ ಕೃತ್ವಾ ಸ್ವಸ್ತಿಕೌ ಪಾರ್ಶ್ವಸಂಸ್ಥಿತೌ ॥ ೯ ॥

---

೪-೬ ಕಣ್ಣನ್ನು ಸ್ವಲ್ಪ ಸಂಕೋಚಮಾಡಿ ಅನಾಮಿಕಾ ಎಂಬ ಕಿರುಬೆರಳಿನ ಪಕ್ಕದ ಬೆರಳನ್ನು ನೀಡಿ ದೀರ್ಘವಾದ ಒಂದೇ ಶ್ವಾಸದಿಂದ ಗಂಧವನ್ನು ಅಭಿನಯಿಸಬೇಕು. ಶಬ್ದಸ್ಪರ್ಶಗಳೇ ಮೊದಲಾದ ಈ ಇಂದ್ರಿಯಾರ್ಥಗಳು ಇಷ್ಟ, ಅನಿಷ್ಟ, ಮಧ್ಯಸ್ಥ ಎಂದು ಮೂರು ವಿಧವಾಗುತ್ತದೆ ಇವುಗಳಲ್ಲಿ ಇಷ್ಟವಾದ ಇಂದ್ರಿಯಾರ್ಥಗಳನ್ನೆಲ್ಲಾ ದೇಹದ ಸುಖಾನುಭವದಿಂದಲೂ, ರೋಮಾಂಚದಿಂದಲೂ, ಹೆಚ್ಚಾಗಿ ಕಣ್ಣೀರನ್ನು ಸುರಿಸುವುದರಿಂದಲೂ ಅಭಿನಯಿಸಬೇಕು

೭-೧೦ ತಲೆಯನ್ನು ತಿರುಗಿಸಿ ಹಾಗೆಯೇ ತಿರುಗಿಸಿದ ಕಣ್ಣಿನಿಂದ ಕೂಡಿ ಕಣ್ಣು, ಮೂಗು, ಇವುಗಳ ಸಂಕೋಚದಿಂದ ಅನಿಷ್ಟವಾದ ಇಂದ್ರಿಯಾರ್ಥಗಳನ್ನು ಅಭಿನಯಿಸಬೇಕು ಮಧ್ಯಸ್ಥಗಳಾದ ಇಂದ್ರಿಯಾರ್ಥಗಳನ್ನು ಮಧ್ಯಸ್ಥ (ತಿರಸ್ಕಾರ ಪುರಸ್ಕಾರರಹಿತವಾದ) ಭಾವದಿಂದಲೇ ಅಭಿನಯಿಸಬೇಕು ಯಾವ ಇಂದ್ರಿಯಾರ್ಥವು ತನ್ನ ಅನುಭವಕ್ಕೆ ಸೇರುತ್ತದೆಯೋ ಅದು ಆತ್ಮಸ್ಥವೆನಿಸುತ್ತದೆ ಮತ್ತೊಬ್ಬರ ಅನುಭವಕ್ಕೆ ಸೇರಿರುವಂತಹ ಇಂದ್ರಿಯಾರ್ಥಗಳು ಪರಸ್ಥವೆನಿಸುತ್ತವೆ ಕೈಗಳನ್ನು ತಲೆಕೆಳಕಾಗಿ (ಅಧೋಮುಖಗಳನ್ನಾಗಿ) ಮಾಡಿ ಸ್ವಸ್ತಿಕಾಕಾರದಲ್ಲಿ

**ಉದ್ವಾಹಿತೇನ ಶಿರಸಾ ತಥಾಚೋರ್ಧ್ವನಿರೀಕ್ಷಣಂ ।**
**ಪ್ರಭಾತಂ ಗಗನಂ ರಾತ್ರಿಂ ಪ್ರದೋಷಂ ದಿವಸಂ ತಥಾ || ೧೦ ||**

**ಋತೂನ್ ಘನಾನ್ ಧರಾಂ ಚೈವ ವಿಸ್ತೀರ್ಣಾಂಶ್ಚ ಜಲಾಶಯಾನ್ ।**
**ದಿಶೋ ಗ್ರಹಾನ್ಸನಕ್ಷತ್ರಾದ್ಯಚ್ಚಾನ್ಯತ್ಸ್ವಗತಂ ನೃಪ || ೧೧ ||**

**ತಸ್ಯ ತ್ವಭಿನಯಃ ಕಾರ್ಯೋ ನಾನಾದೃಷ್ಟಿಸಮನ್ವಿತಃ ।**
**ಏಭಿರೇವ ಕರೈರ್ಭೂಯಃ ಸ್ತನೈಶ್ಚ ಶಿರಸಾ ತಥಾ || ೧೨ ||**

**ಅಧೋನಿರೀಕ್ಷಿತೇನಾಥ ಭೂಮಿಷ್ಠಾನ್ ಸಂಪ್ರಯೋಜಯೇತ್ ।**
**ಚಂದ್ರಂ ಜ್ಯೋತ್ಸ್ನಾಂ ಸುಖಂ ವಾಯುಂ ಸ್ಪರ್ಶೇನಾಭಿನಯೇದ್ಬುಧಃ ||**

**ವಸ್ತ್ರಾವಗುಂಠನಾತ್ಸೂರ್ಯಂ ರಜೋಧೂಮಾನಲಾಂಸ್ತಥಾ ।**
**ಭೂಮಿತಾಪಮಥೋಷ್ಣಂ ಚ ಕುರ್ಯಾಚ್ಛಾಯಾಭಿಲಾಷಿತಃ || ೧೪ ||**

---

ಪಾರ್ಶ್ವಪ್ರದೇಶದಲ್ಲಿಟ್ಟು, ಮೇಲಕ್ಕೆತ್ತಲ್ಪಟ್ಟ ತಲೆಯಿಂದಲೂ, ಮೇಲ್ಮುಖವಾದ ನೋಟದಿಂದಲೂ, ಪ್ರಾತಃಕಾಲ, ಆಕಾಶ, ರಾತ್ರಿ, ಸಾಯಂಕಾಲ, ಹಗಲು, ಋತುಗಳು, ಮೇಘಗಳು, ಭೂಮಿ ವಿಸ್ತಾರವಾದ ಸಮುದ್ರಗಳು, ದಿಕ್ಕುಗಳು, ಗ್ರಹಗಳು, ಒಳ್ಳೆಯ ನಕ್ಷತ್ರ ಮತ್ತು ಇತರ ವಿಧವಾದ ಸ್ವಾತ್ಮಸ್ವಾನುಭವಗಳನ್ನು ನಾನಾವಿಧವಾದ ನೇತ್ರಗಳಿಂದ ಕೂಡಿದ ಅಭಿನಯಗಳ ಮೂಲಕ ಪ್ರದರ್ಶಿಸಬೇಕು

೧೨-೧೫ ಈ ರೀತಿಯಾದ ಕರವಿನ್ಯಾಸದಿಂದಲೂ ಸ್ತನಗಳ ಮತ್ತು ಶಿರಸ್ಸಿನ ಚಲನಗಳಿಂದಲೂ, ಅಧೋಮುಖವಾಗಿ ನೋಡುವುದರಿಂದಲೂ ಭೂಮಿಯಲ್ಲಿರುವ ಪದಾರ್ಥಗಳನ್ನೂ ಅಭಿನಯಿಸಬೇಕು ಚಂದ್ರನನ್ನೂ, ಬೆಳದಿಂಗಳನ್ನೂ, ಸುಖವನ್ನೂ, ವಾಯುವನ್ನೂ ಸಹ ನಿಪುಣನಾದವನು ಸ್ಪರ್ಶದಿಂದ ಅಭಿನಯಿಸಬೇಕು, ಸೂರ್ಯನನ್ನೂ, ಧೂಳು ಮತ್ತು ಹೊಗೆ, ಬೆಂಕಿ ಇವನ್ನೂ ಸಹ ತಲೆಯ ಮೇಲೆ ವಸ್ತ್ರವನ್ನು ಮುಸುಕು ಹಾಕಿಕೊಂಡು ಅಭಿನಯಿಸಬೇಕು ಛಾಯೋಚ್ಛ್ವಾಸ ಪ್ರಯೋಗದಿಂದ ಭೂಮಿಯ ತಾಪವನ್ನೂ ಉಷ್ಣತೆಯನ್ನೂ ಅಭಿನಯಿಸಬೇಕು ಮೇಲ್ಮುಖವಾಗಿ ಮಾಡಲ್ಪಟ್ಟ ಆಕೇಕರಾ ಎಂಬ ವಕ್ರದೃಷ್ಟಿಯಿಂದ ಮಧ್ಯಾಹ್ನ

ಊರ್ಧ್ವಕೇಶರದೃಷ್ಟ್ಯಾತು ಮಧ್ಯಾಹ್ನಸ್ಥಂ ದಿವಾಕರಂ ।
ಉದಯಾಸ್ತಗತಂ ಚೈವ ವಿಸ್ಮಯಾರ್ಥೇ ಪ್ರದರ್ಶಯೇತ್ ॥ ೧೫ ॥

ಚಂದ್ರಂ ವಿಸ್ಮಿತಯಾ ದೃಷ್ಟ್ಯಾ ತಥಾ ತಾರಾಶ್ಚ ದರ್ಶಯೇತ್ ।
ಸುಖಸ್ಪೃಶ್ಯಾನಿ ಸರ್ವಾಣಿ ರೋಮಾಂಚೇನ ತು ದರ್ಶಯೇತ್ ॥ ೧೬ ॥

ದುಃಖಾನಿ ಚ ತಥೋದ್ವೇಗಂ ಮುಖಸ್ಯ ತು ವಿಕೂಣನೈಃ ।
ಗಂಭೀರೋದಾತ್ತಸಂಯುಕ್ತಾನರ್ಥಾನ್ ಸೌಷ್ಠವಸಂಯುತೈಃ ॥ ೧೭ ॥

ಯಜ್ಞೋಪವೀತದೇಶಸ್ಥಮುಬಾಲಂ ಹಸ್ತಮಾದಿಶೇತ್ ।
ಹಾರಾವಹಾರಯಾಗೇಷು ಸ್ರಗ್ದಾಮಸ್ಯ ಚ ದರ್ಶನೇ ॥ ೧೮ ॥

ಭ್ರಮರೇಣ ಪ್ರದೇಶಿನ್ಯಾ ದೃಷ್ಟ್ಯೋಃ ಪರಿಗಮೇನ ಚ ।
ಅಲಂಪದ್ಮಾಕಪೀಡಾಯಾಃ ಸರ್ವಾರ್ಥಗ್ರಹಣಂ ಭವೇತ್ ॥ ೧೯ ॥

---

ಕಾಲದ ಪ್ರಜ್ವಲಿಸುವ ಸೂರ್ಯನನ್ನು ಅಭಿನಯಿಸಬೇಕು ಉದಯಾಸ್ತ ಹೊಂದುವ ಅಂತಹ ಸೂರ್ಯನನ್ನು ಆಶ್ಚರ್ಯಸೂಚಕ ಚೇಷ್ಟೆಗಳಿಂದ ಅಭಿನಯಿಸಬೇಕು ಆಶ್ಚರ್ಯಸೂಚಕವಾದ ದೃಷ್ಟಿವಿನ್ಯಾಸದಿಂದ ಚಂದ್ರನನ್ನೂ ನಕ್ಷತ್ರಗಳನ್ನೂ ಅಭಿನಯಿಸಬೇಕು.

೧೬-೧೯ ಸ್ಪರ್ಶಸುಖವನ್ನುಂಟುಮಾಡುವ ಎಲ್ಲಾ ವಸ್ತುಗಳನ್ನೂ ರೋಮಾಂಚಾಭಿನಯದಿಂದ ಪ್ರದರ್ಶಿಸಬೇಕು ದುಃಖಗಳನ್ನೂ, ಹೆಚ್ಚಾದ ಮನೋವ್ಯಥೆಯನ್ನೂ ಸಹ ಮುಖಸಂಕೋಚದಿಂದ ಅಭಿನಯಿಸಬೇಕು ಗಂಭೀರವಾಗಿಯೂ ಅನರ್ಘವಾಗಿಯೂ ಇರುವ ಉನ್ನತ ವಸ್ತುಗಳನ್ನು ರಮ್ಯವಾಗಿರುವ ಸಮೀಚೀನಾಭಿನಯಗಳಿಂದ ಪ್ರದರ್ಶಿಸಬೇಕು ಹಾರವನ್ನೂ, ಭೋಜನವನ್ನೂ, ಯಾಗವನ್ನೂ, ಹೂವಿನ ಮಾಲಿಕೆಯನ್ನೂ ತೋರ್ಪಡಿಸುವಾಗ ಯಜ್ಞೋಪವೀತ ಪ್ರದೇಶದಲ್ಲಿ ಪ್ರೌಢವಾದ ಹಸ್ತವಿನ್ಯಾಸವನ್ನು ಅಭಿನಯಿಸಬೇಕು ಭ್ರಮರವೆಂಬ ದೃಷ್ಟಿವಿನ್ಯಾಸದಿಂದಲೂ ಅಂಗುಷ್ಠದ ವಿನ್ಯಾಸದಿಂದಲೂ ಅಲಂಕಾರ ಪದ್ಮದ ವಿಕಾಸಾದಿಚೇಷ್ಟೆಗಳಿಂದಲೂ ಎಲ್ಲಾವಸ್ತುಗಳಿಗೂ ಗ್ರಹಣವಾಗುವಂತೆ ಅಭಿನಯಿಸಬೇಕು.

ಶ್ರವ್ಯಂ ಶ್ರವಣಯೋಗೇನ ದೃಶ್ಯಂ ದೃಷ್ಟಿವಿಲೋಕನೈಃ ।
ಆತ್ಮಸಂಸ್ಥಂ ಪರಸ್ಥಂ ವಾ ಮಧ್ಯಸ್ಥಂ ವಾ ವಿನಿರ್ದಿಶೇತ್ ॥ ೨೦ ॥

ವಿದ್ಯುದುಲ್ಕಾಘನರವೋ ವಿಸ್ಫುಲಿಂಗಜುಷಸ್ತಥಾ ।
ಪ್ರತೋದೋಽಕ್ಷಿನಿಮೇಷೈಶ್ಚ ತೇಽಭಿನೇಯಾಃ ಪ್ರಯೋಕ್ತೃಭಿಃ ॥ ೨೧ ॥

ಮುಖಾವಗುಂಠನಂ ಕಾರ್ಯಂ ಭ್ರಮರಾದಿನಿವಾರಣೇ ।
ಕೃತ್ವಾ ಸ್ವಸ್ತಿಕಸಂಸ್ಥಾನೌ ಪದ್ಮಕೋಶಾವಧೋಮುಖೌ ॥ ೨೨ ॥

ಸಿಹ್ಮರ್ಕ್ಷವಾನರಾದೀನಾಂ ಕರ್ತವ್ಯಂ ತು ನಿರೂಪಣಂ ।
ಸ್ವಸ್ತಿಕೌ ತ್ರಿಪತಾಕೌ ತು ಗುರೂಣಾಂ ಪಾದವಂದನೇ ॥ ೨೩ ॥

ಖಟಕಾಸ್ವಸ್ತಿಕೌ ಚಾಪಿ ಪ್ರತೋದಗ್ರಹಣೇ ಭವೇತ್ ।
ಏಕಾದ್ಯಾನಾಂ ದಶಾನ್ತಾನಾಂ ಸಂಖ್ಯಾತ್ವಂಗುಲಿಭಿರ್ಭವೇತ್ ॥ ೨೪ ॥

---

೨೦–೨೩. ತನ್ನಲ್ಲಿರುವ ಅಥವಾ ಪರರಲ್ಲಿರುವ ಹಾಗೂ ಮಧ್ಯಸ್ಥರಲ್ಲಿರುವ ಇಂದ್ರಿಯಾರ್ಥಗಳನ್ನು ಅಭಿನಯಿಸುವ ಸಂದರ್ಭದಲ್ಲಿ ಕಿವಿಯಿಂದ ಕೇಳಲು ಅರ್ಹವಾದ ಶಬ್ದವನ್ನು ಕಿವಿಯ ಅಭಿನಯದಿಂದಲೂ, ಕಣ್ಣಿನಿಂದ ನೋಡಲು ಅರ್ಹವಾದ ರೂಪವನ್ನು ಕಣ್ಣಿನ ನೋಟದ ಅಭಿನಯದಿಂದಲೂ, ಪ್ರದರ್ಶಿಸಬೇಕು ಮಿಂಚುಗಳು, ಆಕಾಶದಿಂದ ಬೀಳುವ ಕೊಳ್ಳಿಗಳು, ಮೇಘಧ್ವನಿ, ಕಿಡಿಯನ್ನು ಕಕ್ಕುವ ಜ್ಯೋತಿರ್ವಿಶೇಷಗಳು ಇವುಗಳಿಂದುಂಟಾಗುವ ವ್ಯಥೆ ಇವುಗಳನ್ನು ಕಣ್ಣಿನ ರೆಪ್ಪೆಗಳ ಅಭಿನಯದಿಂದ ಚತುರರು ಪ್ರದರ್ಶಿಸಬೇಕು ದುಂಬಿಯೇ ಮೊದಲಾದುವನ್ನು ತಡೆಯುವ ಕಾಲದಲ್ಲಿ ಮುಸುಕು ಹಾಕಿಕೊಂಡು ಅದನ್ನು ಅಭಿನಯಿಸಬೇಕು ಸ್ವಸ್ತಿಕವೆಂಬ ಸಂಸ್ಥಾನವನ್ನು ಹೊಂದಿರುವ ಪದ್ಮಕೋಶವೆಂಬ ಹಸ್ತಗಳನ್ನು ಅಧೋಮುಖವಾಗಿ ಮಾಡಿ ಸಿಂಹ, ಕರಡಿ, ಕಪಿ ಇತ್ಯಾದಿಗಳ ವ್ಯಾಪಾರವನ್ನು ಅಭಿನಯಿಸಬೇಕು. ಗುರುಗಳ ಪಾದವಂದನಕಾಲದಲ್ಲಿ ತ್ರಿಪತಾಕದಿಂದ ಕೂಡಿದ ಸ್ವಸ್ತಿಕ ಸನ್ನಿವೇಶವುಳ್ಳ ಹಸ್ತಗಳಿಂದ ಅಭಿನಯಿಸಬೇಕು

೨೪–೨೭. ಚಾವಟಿಯನ್ನು ಹಿಡಿಯುವ ಸಂದರ್ಭದಲ್ಲಿ ಖಟಕ, ಸ್ವಸ್ತಿಕ ಈ ಹಸ್ತಗಳಿಂದ ಅಭಿನಯಿಸಬೇಕು ಒಂದು ಮೊದಲು ಹತ್ತರ ವರಿಗಿನ ಸಂಖ್ಯೆ

**ದಶಾಖ್ಯಾ ಚ ಶತಾಖ್ಯಾ ಚ ಸ್ಥಾನಸಂಖ್ಯಾ ತತಃಪರಂ ।**
**ಪತಾಕಾಭ್ಯಾಂ ತು ಹಸ್ತಾಭ್ಯಾಂ ವಾಚಾಚಾಭಿನಯೋ ಭವೇತ್ ॥ ೨೫ ॥**

**ಛತ್ರಧ್ವಜಪತಾಕಾಶ್ಚ ವಿಜ್ಞೇಯಾ ದಂಡಧಾರಣಾತ್ ।**
**ನಾನಾಪ್ರಹರಣಂ ಚೈವ ವಿಜ್ಞೇಯಮಿಹವಾರಣೈಃ ॥ ೨೬ ॥**

**ಏಕಚಿತ್ತೋಽಪ್ಯಧೋದೃಷ್ಟಿಃ ಶಿರಃ ಕಿಂಚಿನ್ನತಂ ಭವೇತ್ ।**
**ಸವ್ಯಹಸ್ತಶ್ಚ ಸಂದಂಶಸ್ಮಿತೇ ಧ್ಯಾನೇ ವಿತರ್ಕಿತೇ ॥ ೨೭ ॥**

**ಉದ್ವಾಹಿತಂ ಶಿರಃ ಕೃತ್ವಾ ಹಂಸಪಕ್ಷಂ ಪ್ರದಕ್ಷಿಣಂ ।**
**ಅಪತ್ಯರೂಪಣೇ ಕಾರ್ಯ[1] ಉಶ್ವಾ್ರಯಂ ಚ ಪ್ರಯೋಕ್ತೃಭಿಃ ॥ ೨೮ ॥**

**ಅರಾಲಂ ಚ ಶಿರಃ ಸ್ಥಾನೇ ಸಮುದ್ವಾಹ್ಯಾ ಚ ವಾಮತಃ ।**
**ಗತೇ ನಿವೃತ್ತೇ ಧ್ವಸ್ತೇ ಚ ಶ್ರಾಂತಂ ವಾಕ್ಯಂ ನಿಯೋಜಯೇತ್ ॥ ೨೯ ॥**

---

ಯನ್ನು ಬೆರಳುಗಳಿಂದ ಅಭಿನಯಿಸಬೇಕು. ಅನಂತರ ಬರುವ ದಶಕ, ಶತಕ ಮುಂತಾದ ಸ್ಥಾನಗಳನ್ನು ಪತಾಕಾ ಸನ್ನಿವೇಶದಿಂದ ಕೂಡಿದ ಹಸ್ತದ್ವಯದಿಂದ ಲಾಗಲಿ ಮಾತಿನಿಂದಲೇ ಆಗಲಿ ಅಭಿನಯಿಸಬಹುದು ಛತ್ರ, ಧ್ವಜ, ಬಾವುಟ ಇವುಗಳ ಅಭಿನಯಗಳನ್ನು ದಂಡವನ್ನು ಧರಿಸಿ ಪ್ರವರ್ತಿಸಬೇಕು ನಾನಾವಿಧ ವಾದ ಆಯುಧಪ್ರಹಾರಗಳನ್ನು ಹಸ್ತಗಳಿಂದ ತಡೆದು ಅಭಿನಯಿಸಬೇಕು ಒಂದೇ ವಿಷಯವನ್ನು ಆಲೋಚಿಸುತ್ತ ಚಿಂತೆಯಲ್ಲಿರುವವನನ್ನು ತಲೆಯನ್ನು ಸ್ವಲ್ಪ ಬಗ್ಗಿಸಿ ಅಧೋದೃಷ್ಟಿಯಿಂದ ಅಭಿನಯಿಸಬೇಕು ಎಡಗೈಯ್ಯಿನ ಸಂದಂಶಸನ್ನಿವೇಶದಿಂದ ಮಂದಹಾಸ, ಮಂದಸಂಚಾರ, ಊಹೆ ಇವನ್ನು ಅಭಿನಯಿಸಬೇಕು

೨೮-೩೧ ಉದ್ವಾಹಿತವೆಂಬ ಶಿರಸ್ಸಿನ ಸನ್ನಿವೇಶದಿಂದಲೂ, ಪ್ರದಕ್ಷಿಣಾ ಕಾರವುಳ್ಳ ಹಂಸಪಕ್ಷಸನ್ನಿವೇಶದಿಂದ ಕೂಡಿದ ಹಸ್ತಗಳಿಂದಲೂ ಸಹ ಮಕ್ಕಳನ್ನು ಅಭಿನಯಿಸಬೇಕು ಶಿರಸ್ಸನ್ನು ಎಡಗಡೆಗೆ ವಕ್ರವನ್ನಾಗಿ ಮಾಡಿ, ಪ್ರಯಾಣ ನಿವೃತ್ತಿಯನ್ನೂ, ಕಾರ್ಯನಾಶವನ್ನೂ, ಶ್ರಮವನ್ನೂ ಸಹ ಮಾತಿನಿಂದ ಅಭಿ

---

1 ಇದು ಅಶುದ್ಧವಾದ ಪಾಠ ಉಚ್ಛ್ರಾಯಂ ಎಂದಿರಬಹುದು.

ಜಿತೇಂದ್ರಿಯತಯಾ ಯುಕ್ತಂ ಪ್ರಸನ್ನವದನಂ ತಥಾ ।
ವಿಚಿತ್ರಕುಸುಮಾಲೋಕಾಂ ಶರದಂ ತು ನಿರೂಪಯೇತ್ ॥ ೩೦ ॥

ಗಾತ್ರಸ್ಯ ಕಂಪನಾತ್ತಜ್ಞೈಃ ತಥಾಚಾನ್ಯಾಭಿಲಾಷತಃ ।
ಹೇಮಂತಸ್ತ್ವಭಿನೇಯಃ ಸ್ಯಾತ್ಪುರುಷೈಃ ಮಧ್ಯಮಾಧಮೈಃ ॥ ೩೧ ॥

ಶಿರೋದಂತೌಷ್ಠಕಂಪೇನ ಗಾತ್ರಸಂಕೋಚನೇನ ಚ ।
ಕೂಜಿತೈಶ್ಚ ಸಸೀತ್ಕಾರೈಃ ಶೀತಸ್ಯಾಭಿನಯೋ ಭವೇತ್ ॥ ೩೨ ॥

ಪ್ರಸಾದಜನನಾರಂಭೈರುಪಭೋಗೈಃ ಸಸಂಭ್ರಮೈಃ ।
ವಸಂತಸ್ತ್ವಭಿನೇತವ್ಯೋ ನಾನಾಪುಷ್ಪಪ್ರದರ್ಶನಾತ್ ॥ ೩೩ ॥

ಸ್ವೇದಾಪಮಾರ್ಜನಾಚ್ಚಾಪಿ ಭೂಮಿತಾಪೋಪಜೀವಿನಃ ।
ಉಷ್ಣಸ್ಯ ವಾಯೋಃ ಸ್ಪರ್ಶಶ್ಚ ಗ್ರೀಷ್ಮಸ್ಯಾಭಿನಯೋ ಭವೇತ್ ॥ ೩೪ ॥

ಗಂಭೀರನಾದಶ್ರವಣಾತ್ ಪ್ರಾವೃಷ್ಯಭಿನಯೋ ಭವೇತ್ ।
ವಚಸಾಭಿನಯಃ ಕಾರ್ಯೋ ಋತೂನಾಂ ಸುಖದುಃಖಯೋಃ ॥ ೩೫ ॥

---

ನಯಿಸಬೇಕು. ನಾನಾವಿಧವಾದ ಹೂವುಗಳ ಪ್ರಕಾಶದಿಂದ ಶರದೃತುವನ್ನು ಅಭಿನಯಿಸಬೇಕು. ಹೇಮಂತ ಋತುವನ್ನು ಅಭಿನಯಿಸುವಾಗ ಅಭಿಜ್ಞರಾದವರು ಮೈ ನಡುಕದಿಂದಲೂ, ಮಧ್ಯಮಾಧಮರು ಇತರ ಅಭಿಲಾಷೆಯಿಂದಲೂ ಅಭಿನಯಿಸಬೇಕು

೩೨-೩೫ ತಲೆಯು ಮತ್ತು ಹಲ್ಲುತುಟಿಗಳ ನಡುಕದಿಂದಲೂ, ಶರೀರ ಸಂಕೋಚದಿಂದಲೂ, ಸೀತ್ಕಾರದಿಂದ ಕೂಡಿದ ಕುಂಚಿತವೆಂಬ ಧ್ವನಿಯಿಂದಲೂ ಛಳಿಯನ್ನು ಅಭಿನಯಿಸಬೇಕು ಮನಸ್ಸಿನ ಪ್ರಸನ್ನತೆಗೆ ತಕ್ಕ ಅನೇಕ ವ್ಯಾಪಾರಗಳಿಂದಲೂ, ಸಂಭ್ರಮದಿಂದ ಕೂಡಿದ ಉಪಭೋಗಗಳಿಂದಲೂ, ನಾನಾವಿಧವಾದ ಹೂವುಗಳ ಪ್ರದರ್ಶನದಿಂದಲೂ ವಸಂತಋತುವನ್ನು ಅಭಿನಯಿಸಬೇಕು. ಬೆವರನ್ನು ಹೋಗಲಾಡಿಸುವುದರಿಂದಲೂ, ಭೂಮಿಯ ತಾಪದಿಂದ ಬೆಚ್ಚಗಿರುವ ಗಾಳಿಯ ಸ್ಪರ್ಶದಿಂದಲೂ ಗ್ರೀಷ್ಮರ್ತುವನ್ನು ಅಭಿನಯಿಸಬೇಕು, ಗಂಭೀರವಾದ ಧ್ವನಿಯ ಶ್ರವಣದಿಂದ ವರ್ಷಾಕಾಲವನ್ನೂ ಅಭಿನಯಿಸಬೇಕು ಆಯಾಯ ಋತುಗಳ ಸುಖದುಃಖಗಳನ್ನು ಮಾತಿನಿಂದಲೇ ಅಭಿನಯಿಸಬೇಕು

ಸ್ವಭಾವಾಭಿನಯೇಸ್ಥಾನಂ ಪುಂಭಿಃ ಕಾರ್ಯಂ ತು ವೈಷ್ಣವಂ ।
ಆಯುತಂ ಚಾವಹಿತ್ಥಂ ಚ ಸ್ತ್ರೀಭಿಃ ಕಾರ್ಯಂ ಸ್ವಭಾವತಃ ॥ ೩೬ ॥

ಧೈರ್ಯಶೀಲಾಂಗಸಂಪನ್ನಂ ಪುರುಷಾಣಾಂ ವಿಚೇಷ್ಟಿತಂ ।
ಮೃದುಶೀಲಾಂಗಹಾರೈಸ್ತು ಸ್ತ್ರೀಣಾಂ ಕಾರ್ಯಂ ವಿಚೇಷ್ಟಿತಂ ॥ ೩೭ ॥

ಆಲಿಂಗನಂ ತು ಕರ್ತವ್ಯಂ ಸ್ಮಿತರೋಮಾಂಚಸಂಯುತಂ ।
ರೋಮಾಂಚೇನ ತು ಹರ್ಷಃ ಸ್ಯಾತ್ಕ್ರೋಧಮುದ್ವೃತ್ತಚಕ್ಷುಷಾ ॥ ೩೮ ॥

ಈರ್ಷ್ಯಾಕ್ರೋಧಸ್ತು ಕರ್ತವ್ಯಃ ಮಾಲ್ಯಾಭರಣವರ್ಜಿತಂ ।
ಶಿರಸಃ ಕಂಪನಂ ಚೈವ ಮರ್ಮಭಂಗೈಸ್ತಥೈವ ಚ ॥ ೩೯ ॥

ಅಧೋಮುಖಃ ಸನಿಶ್ವಾಸೋ ದುಃಖಂ ಸಂದರ್ಶಯೇನ್ನರಃ ।
ಭೂಮಿಹಸ್ತಾಭಿಘಾತೇನ ಸ್ತ್ರೀಣಾಂ ಸ್ಯಾದ್ರುದಿತೇನ ತತ್ ॥ ೪೦ ॥

---

೩೬-೩೯ ಸ್ವಾಭಾವಿಕವಾದ ಅಭಿನಯಗಳನ್ನು ಪುರುಷರು ವೈಷ್ಣವಸ್ಥಾನವನ್ನು ಅವಲಂಬಿಸಿ ಅಭಿನಯಿಸಬೇಕು ಸ್ತ್ರೀಯರು ಇಂತಹ ಅಭಿನಯವನ್ನು ಆಯುತ ಮತ್ತು ಅವಹಿತ್ಥ ಸ್ಥಾನಗಳನ್ನು ಆಶ್ರಯಿಸಿ ಪ್ರಯೋಗಿಸಬೇಕು ಪುರುಷರ ಅಭಿನಯಗಳು ಧೈರ್ಯದಿಂದ ಕೂಡಿದ ಅವಯವವ್ಯಾಪಾರಗಳಾಗಿರಬೇಕು ಸ್ತ್ರೀಯರ ಅಂತಹ ಅಭಿನಯಗಳು ಸುಕುಮಾರವಾದ ಅವಯವ ಚೇಷ್ಟಾರೂಪದಲ್ಲಿರಬೇಕು ಆಲಿಂಗನವನ್ನು ಮಂದಹಾಸರೋಮಾಂಚಗಳಿಂದ ಕೂಡಿರುವಂತೆ ಅಭಿನಯಿಸಬೇಕು ರೋಮಾಂಚದಿಂದ ಹರ್ಷವನ್ನೂ ನೇತ್ರದ ಊರ್ಧ್ವಚಲನದಿಂದ ಕ್ರೋಧವನ್ನೂ ಅಭಿನಯಿಸಬೇಕು ಸ್ತ್ರೀಯರು ಪತಿಯ ವಿಷಯದಲ್ಲಿ ಪ್ರಣಯಕೋಪವನ್ನು ಹೂವು, ಆಭರಣ ಮೊದಲಾದುವನ್ನು ತ್ಯಜಿಸಿ ಅಭಿನಯಿಸಬೇಕು ತಲೆಯ ನಡುಕದಿಂದಲೂ, ಮರ್ಮಪ್ರದೇಶಗಳನ್ನು ತಿರುಗಿಸುವುದರಿಂದಲೂ ಇದರ ಅಭಿನಯವು ಸ್ಪಷ್ಟಪಡುತ್ತವೆ

೪೦-೪೧ ಪುರುಷನು ಬಗ್ಗಿದ ಮುಖದಿಂದಲೂ, ನಿಟ್ಟುಸಿರುನಿಂದಲೂ, ದುಃಖವನ್ನು ಅಭಿನಯಿಸಬೇಕು ಅದೇ ಅಭಿನಯವನ್ನು ಸ್ತ್ರೀಯರು ಭೂಮಿಯಲ್ಲಿ ಕೈಗಳ ಅಭಿಘಾತದಿಂದಲೂ, ರೋದನದಿಂದಲೂ ಪ್ರದರ್ಶಿಸಬೇಕು ಕಣ್ಣೀರಿನ ಪ್ರದರ್ಶನವು ಹರ್ಷದಿಂದಲೂ, ದುಃಖದಿಂದಲೂ ಎರಡು

ಆನಂದೇನ ಸಮುದ್ಭೂತಂ ರುದಿತಂ ದ್ವಿವಿಧಂ ಸ್ಮೃತಂ ।
ಹೃಷ್ಟೇನ ಚಾಪ್ಯಹೃಷ್ಟೇನ ತಂ ಮುಖೇನ ನಿರೂಪಯೇತ್ ॥ ೪೧ ॥

ಸಂಭ್ರಮಾವೇಗಚೇಷ್ಟಾಭಿಃ ಪುರುಷಾಣಾಂ ಭಯಂ ಭವೇತ್ ।
ತ್ರಾತುರನ್ವೇಷಣಾದೇವ ಉಚ್ಚೈರಾಕ್ರಂದಿತೇನ ಚ ॥ ೪೨ ॥

ನರಾಲಿಂಗನತಶ್ಚೈವ ಭಯಂ ಕಾರ್ಯಂ ಭವೇತ್ ಸ್ತ್ರಿಯಃ ।
ತ್ರಿಪತಾಕಾಂಗುಲೀಭ್ಯಾಂ ತು ಚಲಿತಾಭ್ಯಾಂ ಪ್ರಯೋಜಯೇತ್ ॥ ೪೩ ॥

ಶುಕಶ್ಚ ಶಾರಿಕಾಚೈವ ಸೂಕ್ಷ್ಮಾ ಯೇ ಚೈವ ಪಕ್ಷಿಣಃ ।
ಶಿಖಿಸಾರಸಹಂಸಾದ್ಯಾಃ ಸ್ಥೂಲಾ ಯೇ ಚ ಸ್ವಭಾವತಃ ॥ ೪೪ ॥

ಪಕ್ಷಾಙ್ಗಹಾರೈರ್ದ್ವಿವಿಧೈಃ ತೇಷಾಮಭಿನಯೋ ಭವೇತ್ ।
ಭೂತಾಃ ಪಿಶಾಚಾ ಯಕ್ಷಾಶ್ಚ ದಾನವಾ ರಾಕ್ಷಸಾಸ್ತಥಾ ॥ ೪೫ ॥

ಅಂಗಹಾರೈರ್ವಿನಿರ್ದೇಶ್ಯಾಃ ಪತ್ಯಕ್ಷಾ ನ ಭವನ್ತಿ ಯೇ ।
ಪ್ರತ್ಯಕ್ಷಾ ಅಭಿನೇಯಾಃ ಸ್ಯುಸ್ತಥೋದ್ವೇಗೈಸ್ಸವಿಸ್ಮಯೈಃ ॥ ೪೬ ॥

---

ವಿಧವಾಗಿರುತ್ತದೆ. ಅದನ್ನೂ ಸಂತುಷ್ಟವಾದ ಮತ್ತು ದುಃಖಿಯಾದ ಮುಖದಿಂದಲೇ ಅಭಿನಯಿಸಬೇಕು ಪುರುಷರಭಯವನ್ನು ಅಭಿನಯಿಸುವಾಗ ಸಂಭ್ರಮ, ತ್ವರ ಇವುಗಳಿಗೆ ಸೂಚಕವಾದ ಚೇಷ್ಟೆಗಳಿಂದ ಅದನ್ನು ಪ್ರದರ್ಶಿಸಬೇಕು. ಸ್ತ್ರೀಯರ ಭಯವನ್ನು ಅಭಿನಯಿಸುವಾಗ ರಕ್ಷಕನನ್ನು ಹುಡುಕುವಿಕೆಯಿಂದಲೂ, ಗಟ್ಟಿಯಾದ ರೋದನದಿಂದಲೂ, ಪುರುಷನನ್ನು ಆಲಿಂಗನಮಾಡಿಕೊಳ್ಳುವುದರಿಂದಲೂ ( ಈ ವಿಧವಾದ ಚೇಷ್ಟೆಗಳಿಂದ ಪ್ರದರ್ಶಿಸಬೇಕಾಗುತ್ತದೆ )

೪೩-೪೬ ಗಿಣಿ, ಮೈನಾಪಕ್ಷಿ ಮೊದಲಾದ ಸೂಕ್ಷ್ಮಪಕ್ಷಿಗಳ ಅಭಿನಯವನ್ನು ಚಲನದಿಂದ ಕೂಡಿದ ತ್ರಿಪತಾಕಾಂಗುಲಿಗಳ ವಿನ್ಯಾಸದಿಂದ ಪ್ರದರ್ಶಿಸಬೇಕು. ನವಿಲು, ಕೊಕ್ಕರೆ, ಹಂಸ ಮೊದಲಾದ ಸ್ಥೂಲಸ್ವಭಾವದ ಪಕ್ಷಿಗಳ ಅಭಿನಯವನ್ನು ಎರಡು ವಿಧವಾದ ರಕ್ಕೆಗಳ ಚಲನವಿನ್ಯಾಸದಿಂದ ಪ್ರದರ್ಶಿಸಬೇಕು ಪ್ರತ್ಯಕ್ಷದಿಂದ ತಿಳಿಯಲು ಅವಕಾಶವಿಲ್ಲದಿರುವ ಭೂತ, ಪಿಶಾಚ, ಯಕ್ಷ, ದಾನವ, ರಾಕ್ಷಸ ಮುಂತಾದವರ ಅಭಿನಯಗಳನ್ನು ಅವರವರ ಸ್ವಭಾವಕ್ಕೆ ತಕ್ಕ ಅಂಗವಿಕ್ಷೇಪಗಳಿಂದಲೇ ಪ್ರದರ್ಶಿಸಬೇಕು ಪ್ರತ್ಯಕ್ಷವಾಗತಕ್ಕವುಗಳನ್ನು ಮಾತ್ರ ಭಯ ವಿಸ್ಮಯಾದಿಗಳಿಂದ ಅಭಿನಯಿಸಬೇಕಾಗುತ್ತದೆ

ದೇವಾನ್ ಪ್ರಣಾಮುಕರಣೈಃ ಪ್ರತ್ಯಕ್ಷೇ ತು ನರಾಧಿಪ ।
ಪರೋಕ್ಷೇ ವಿವಿಧೈಃ ಚಿಹ್ನೈಃ ತಥಾನುಕರಣೈಃ ಶುಭೈಃ ॥ ೪೭ ॥

ಸವ್ಯೋತ್ಥಿತೇನ ಹಸ್ತೇನ ತ್ವರಾಲೇನ ಶಿರಃ ಸ್ಪೃಶೇತ್ ।
ನರೇಭಿವಾದನಂ ಹ್ಯೇತತ್ಕಪೋಲೇನ ತಥಾ ಸ್ತ್ರಿಯಃ ॥ ೪೮ ॥

ಮಹಾಜನಂ ಸಖಿವರಂ ವಿಟಧೂರ್ತಜನಂ ತಥಾ ।
ಪರಿಮಂಡಲಸಂಜ್ಞೇನ ಹಸ್ತೇನಾಭಿನಯೇದ್ಬುಧಃ ॥ ೪೯ ॥

ಪ್ರವೃತ್ತಾನ್ ಪ್ರಾಂಶುಯೋಗೇನ ವೃಕ್ಷಾಂಶ್ಚೈವ ಸಮುತ್ಥಿತಾನ್ ।
ಪ್ರಸಾರಿತಾಭ್ಯಾಂ ಬಾಹುಭ್ಯಾಮುತ್ಕ್ಷಿಪ್ತಾಭ್ಯಾಂ ಪ್ರದರ್ಶಯೇತ್ ॥ ೫೦ ॥

(ಸಮೂಹಂಸುಮಹತ್ಸೇನಾಂ ಬಹುವಿಸ್ತೀರ್ಣಮೇವ ಚ ।
ಪತಾಕಾಭ್ಯಾಂ ತು ಹಸ್ತಾಭ್ಯಾಂ ಚೋತ್ಕ್ಷಿಪ್ತಾಭ್ಯಾಂ ಪ್ರದರ್ಶಯೇತ್ ॥)

ಶೌರ್ಯಂ ಚ ಧೈರ್ಯದರ್ಪಂ ಚ ಗರ್ವಮೌದಾರ್ಯಮುಚ್ಛ್ರಯಂ ।
ಲಲಾಟಸ್ಥಾನಸಂಸ್ಥೇನ ತ್ವರಾಲೇನ ಪ್ರದರ್ಶಯೇತ್ ॥ ೫೧ ॥

---

೪೭–೪೮ ದೇವತೆಗಳು ಪ್ರತ್ಯಕ್ಷರಾಗಿದ್ದಲ್ಲಿ ಪ್ರಣಾಮಾದಿಗಳಿಂದಲೂ, ಪರೋಕ್ಷರಾಗಿದ್ದಲ್ಲಿ ಅವರ ನಾನಾವಿಧವಾದ ಶುಭಚಿಹ್ನಗಳನ್ನು ಅನುಕರಿಸುವುದರಿಂದಲೂ ಅವರನ್ನು ಅಭಿನಯಿಸಬೇಕು ಪುರುಷನು ಅಭಿವಾದನಮಾಡುವಾಗ ಎಡಗೈಯನ್ನು ಮೇಲಕ್ಕೆ ಎತ್ತಿ ಬಗ್ಗಿಸಿ ತಲೆಯನ್ನು ಸ್ಪರ್ಶಿಸುವುದರಿಂದಲೂ ಸ್ತ್ರೀಯು ಕಪೋಲಸ್ಪರ್ಶದಿಂದಲೂ ಅಭಿವಾದನವನ್ನು ಪ್ರದರ್ಶಿಸಬೇಕು

೪೯–೫೧ ಜನಸಮೂಹವನ್ನೂ ಅಥವಾ ಮಹಾಪುರುಷನನ್ನೂ, ಉತ್ತಮ ಸ್ನೇಹಿತರನ್ನೂ ವಿಟರು ಧೂರ್ತರು ಇಂತಹವರನ್ನೂ ಪರಿಮಂಡಲವೆಂಬ ಹಸ್ತಸನ್ನಿವೇಶದಿಂದ ಅಭಿನಯಿಸಬೇಕು ಎತ್ತರವಾಗಿರುವವರನ್ನೂ, ಉನ್ನತವಾದ ಮರಗಳನ್ನೂ, ಮೇಲಕ್ಕೆ ಎತ್ತಿನೀಡಿರುವ ಬಾಹುಗಳಿಂದ ಅಭಿನಯಿಸಬೇಕು ಸಮೂಹವನ್ನೂ, ದೊಡ್ಡ ಸೈನ್ಯವನ್ನೂ, ವಿಸ್ತೀರ್ಣವಾದ ದೇಶಾದಿಗಳನ್ನೂ ಸಹ ಮೇಲಕ್ಕೆತ್ತಿದ ಪತಕಾಹಸ್ತಗಳಿಂದ ಪ್ರದರ್ಶಿಸಬೇಕು ಶೌರ್ಯ, ಧೈರ್ಯ, ಅಹಂಕಾರ, ಗರ್ವ, ಔದಾರ್ಯಾತಿಶಯ ಇವನ್ನು ಅರಾಲವೆಂಬ ಹಸ್ತವನ್ನು ಹಣೆಯಮೇಲಿಟ್ಟು ಅಭಿನಯಿಸಬೇಕು

ಪ್ರಜ್ಞಾದೇಹಮದಾವಿದ್ಧೌ ಕರೌ ತು ಮೃಗಶೀರ್ಷಕೌ ।
ವಿಸ್ತೀರ್ಣಪ್ರದ್ರುತೋತ್ಕ್ಷೇಪೌ ಯೋಜ್ಯೌ ಯತ್ಸ್ಯಾದುಪಾವೃತಂ ॥೫೨॥

ಅಧೋಮುಖೋತ್ತಾನತಲಂ ಹಸ್ತಂ ಕಿಂಚಿತ್ಪ್ರಸಾರಿತಂ ।
ಕೃತ್ವಾ ಚಾಭಿನಯೇ ದ್ವೇ ಚ ಬಿಲಗ್ರಾಹಂ ಗ್ರಹಂ ಗ್ರಹಂ ॥ ೫೩ ॥

ಕಾಮಾರ್ತಾನ್ ಜ್ವರಿತಾಂಶ್ಚೈವ ಶಾಪೋಪಹತಚೇತಸಃ ।
ತೇಷಾಮಭಿನಯಃ ಕಾರ್ಯ ಉಚ್ಛ್ವಾಸೈಃ ಕಂಪನೈಸ್ತಥಾ ॥ ೫೪ ॥

ಪ್ರತ್ಯಕ್ಷಾಭಿನಯಃ ಕಾರ್ಯೋ ದೋಲಾಯಾಃ ಪರಿದೋಲನೇ ।
ಆಕಾಶವಚನಾನೀಹ ವಕ್ಷ್ಯಾಮ್ಯಾತ್ಮಗತಾನಿ ಚ ॥ ೫೫ ॥

ಅಪವಾರಿತಕಂ ಚೈವ ಜನಾಂತಿಕಮಥಾಪಿ ಚ ।
ಪರಸಂಭಾಷಣಂ ಯತ್ಸ್ಯಾತ್ತದಾಕಾಶವಚಃ ಸ್ಮೃತಂ ॥ ೫೬ ॥

---

೫೨-೫೪. ಪ್ರಜ್ಞಾಮದ್ಧದಿಂದಲೂ, ದೇಹಮದದಿಂದಲೂ ಕೂಡಿರುವವರನ್ನು ಅಭಿನಯಿಸುವಾಗ ಮೃಗಶಿರ್ಷಕವೆಂಬ ಹಸ್ತಗಳನ್ನು ದೂರಕ್ಕೆ ಚಾಚಿ ತ್ವರೆಯಿಂದ ಪ್ರದರ್ಶಿಸಬೇಕು ಇದು ಉಪಾವೃತವೆನಿಸುತ್ತದೆ ಕೆಳಮುಖವಾಗಿ ಮಗು ಚಿಸ್ವಲ್ಪನೀಡಲ್ಪಟ್ಟ ಹಸ್ತಗಳಿಂದ ಬಿಲದಲ್ಲಿರುವ ಪ್ರಾಣಿಗಳ ಗ್ರಹಣವನ್ನೂ ಅವುಗಳ ಸ್ಥಾನಗಳನ್ನೂ ಅಭಿನಯಿಸಬೇಕು ಕಾಮಾರ್ತರಾದವರ ಮತ್ತು ಜ್ವರಹೊಂದಿ ರುವವರ ಶಾಪದಿಂದ ನಷ್ಟಪ್ರಜ್ಞರಾಗಿರುವವರ ಅಭಿನಯಗಳನ್ನು ಉಚ್ಛ್ವಾಸ ಗಳಿಂದಲೂ, ನಡುಕದಿಂವಲೂ ಪ್ರದರ್ಶಿಸಬೇಕು.

೫೫-೫೬ ತೊಟ್ಟಿಲು ಮೊದಲಾದುವನ್ನು ತೂಗುವಾಗ ಹಸ್ತಚೇಷ್ಟೆಯಿಂದ ಪ್ರತ್ಯಕ್ಷವಾಗಿಯೇ ಅದನ್ನು ಅಭಿನಯಿಸಬೇಕು. ಇನ್ನು ಮುಂದೆ ಅಕಾಶಭಾಷಿತ ಆತ್ಮಗತ, ಅಪವಾರಿತಕ, ಜನಾಂತಿಕ ಇವುಗಳ ಸ್ವರೂಪವನ್ನು ಹೇಳುತ್ತೇನೆ. ಪರೋಕ್ಷದಲ್ಲಿರುವ ಮತ್ತೊಬ್ಬನೊಡನೆ ಪ್ರತ್ಯುತ್ತರಕ್ಕಾಗಿ ಮಾಡುವ ಭಾಷಣಕ್ಕೆ ಆಕಾಶವಚನವೆಂದು ಹೆಸರು ಇತರರು ಕೇಳದಂತೆ ಪರಸ್ಪರವಾಗಿ ಮಾಡುವ

**ಅನ್ಯೈರಶ್ರವಣೀಯಂ ತು ಜನಾಂತಿಕಮಿಹೋಚ್ಯತೇ ।**
**ಅಪವಾರಿತಕಂ ಕರ್ಣೇ ಪುನರುಕ್ತಂ ಪ್ರಚಕ್ಷತೇ ॥ ೫೭ ॥**

**ಹಸ್ತಮಂತರಿತಂ ಕೃತ್ವಾ ತ್ರಿಪತಾಕಂ ಪ್ರಯೋಕ್ತೃಭಿಃ ।**
**ಜನಾಂತಿಕಂ ಪ್ರಯೋಕ್ತವ್ಯಮಪವಾರಿತಕಂ ತಥಾ ॥ ೫೮ ॥**

**ಸ್ವಪ್ನಾಯಿತೇ ಚಾಭಿನಯೋ ವಾಚಾ ಗದ್ಗದಯಾ ಭವೇತ್ ।**
**ವೃದ್ಧಾನಾಂ ಯೋಜಯೇತ್ಪಾಠ್ಯಂ ಗದ್ಗದಸ್ಖಲಿತಾಕ್ಷರಂ ॥ ೫೯ ॥**

**ಅಸಮಾಪ್ತಾಕ್ಷರಂ ಚೈವ ಬಾಲಾನಾಂ ತು ಕಲಸ್ವನಂ ।**
**ದೀರ್ಘೋಚ್ಛ್ವಾಸಯುತಂ ಗ್ಲಾನಂ ವ್ಯಾಧಿತಾನಾಂ ತು ಯೋಜಯೇತ್ ॥**

**ಉಚ್ಛ್ವಾಸೇನ ತು ದೀರ್ಘೇಣ ಮೃತ್ಯುಕಾಲಂ ತು ನಾಟಯೇತ್ ।**
**ಗಾತ್ರನಿಸ್ಪಂದಭಾವೇನ ಮೃತಸ್ಯಾಭಿನಯೋ ಭವೇತ್ ।**
**ಸಾತ್ತ್ವಿಕಾಭಿನಯಂ ವಕ್ಷ್ಯೇ ರಸಭಾವೇಷು ಪಾರ್ಥಿವ ॥ ೬೧ ॥**

---

ಭಾಷಣಕ್ಕೆ ಜನಾಂತಿಕವೆಂದು ಹೆಸರು ಪುನಃಪುನಃ ಕಿವಿಯಲ್ಲಿ ಹೇಳುವ ರಹಸ್ಯ ವಚನಕ್ಕೆ ಅಪವಾರಿತಕವೆಂದು ಹೆಸರು.

೫೮-೬೦ ತ್ರಿಪತಾಕವೆಂಬ ಸನ್ನಿವೇಶವುಳ್ಳ ಹಸ್ತವನ್ನು ಮಧ್ಯದಲ್ಲಿಟ್ಟು ಕೊಂಡು ಜನಾಂತಿಕ, ಅಪವಾರಿತಕ ಇವನ್ನು ನಾಟ್ಯಜ್ಞರು ಪ್ರಯೋಗಿಸಬೇಕು ನಿದ್ದೆಯಲ್ಲಿ ಕನವರಿಸುವ ಅಭಿನಯವನ್ನು ಗದ್ಗದ ಧ್ವನಿಯಿಂದ ಕೂಡಿದ ಮಾತಿನಿಂದ ಪ್ರದರ್ಶಿಸಬೇಕು ವೃದ್ಧರಿಂದ ಹೇಳಬಹುದಾದ ಪಾಠ್ಯವಚನಗಳನ್ನು ಗದ್ಗದ ಧ್ವನಿಯಿಂದಲೂ, ಅಕ್ಷರಸ್ಖಲನದಿಂದ ಕೂಡಿಯೂ ಅಭಿನಯಿಸಬೇಕು. ಮಗುವಿನ ಮಾತುಗಳನ್ನು ಅಸಮಗ್ರಾಕ್ಷರಗಳಿಂದಲೂ, ಅವ್ಯಕ್ತಮಧುರಧ್ವನಿ ಯಿಂದಲೂ, ಅಭಿನಯಿಸಬೇಕು ವ್ಯಾಧಿಗ್ರಸ್ತರ ಮಾತುಗಳನ್ನು ದೀರ್ಘದೀರ್ಘ ವಾದ ನಿಟ್ಟುಸುರುಗಳಿಂದ ಕೂಡಿಯೂ ಬಾಡಿರುವ ಸ್ವರದಿಂದ ಕೂಡಿಯೂ ಅಭಿನಯಿಸಬೇಕು

೬೧-೬೨ ಧೀರ್ಘವಾದ ನಿಟ್ಟುಸಿರಿನಿಂದ ಮರಣಕಾಲವನ್ನು ಅಭಿನಯಿಸ ಬೇಕು ನಿಶ್ಚಲವಾದ ದೇಹದಿಂದ ಮೃತನಾದವನನ್ನು ಅಭಿನಯಿಸಬೇಕು. ಇನ್ನು ಮುಂದೆ ರಸಭಾವಾದಿಗಳನ್ನು ಹೇಳುವಾಗ ಸಾತ್ವಿಕಾಭಿನಯವನ್ನು ಹೇಳುತ್ತೇನೆ

**ಏತಾವದೇವಾಭಿನಯೇ ತು ತುಭ್ಯಂ**
**ಶಕ್ಯಂ ಮಯಾ ಪಾರ್ಥಿವಮುಖ್ಯ ವಕ್ತುಂ ।**
**ನಾಟ್ಯಂ ಹಿ ವಿಶ್ವಸ್ಯ ಯತೋಽನುಕಾರಂ**
**ಕೃತ್ಸ್ನಂ ತತೋ ವಕ್ತುಮಶಕ್ಯಮಾಹ ॥ ೬೨ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ ವಜ್ರ ಸಂವಾದೇ ಸಾಮಾನ್ಯಾಭಿನಯೋ ನಾಮಾಷ್ಟಾವಿಂಶತಿತಮೋಽಧ್ಯಾಯಃ**

---

ಪೃಥ್ವಿ ದೊರೆಯೇ, ಅಭಿನಯದ ವಿಷಯದಲ್ಲಿ ಇಷ್ಟು ಮಾತ್ರ ನಿನಗೆ ಹೇಳಲು ನಾಟ್ಯ ನಾಟ್ಯವೆಂಬುದು ವಿಶ್ವದ ಅನುಕರಣವೇ ಆಗಿರುವುದರಿಂದ ಸಮಗ್ರವಾದ ವಿಶ್ವವೃತ್ತದಂತೆ ಸಮಗ್ರವಾದ ನಾಟ್ಯವೂ ಸಹ ವಾಗ್ವ್ಯಾಪಾರದಿಂದ ಹೇಳಿ ತಿಳಿ ಸಲು ಸಾಧ್ಯವೇ ಇಲ್ಲ

ಇಲ್ಲಿಗೆ ಶ್ರೀವಿಷ್ಣುಧರ್ಮೋತ್ತರ ತೃತೀಯ ಖಂಡದಲ್ಲಿ ಮಾರ್ಕಂಡೇಯ
ಸಂವಾದದಲ್ಲಿ ಸಾಮಾನ್ಯಾಭಿನಯವೆಂಬ ಇಪ್ಪತ್ತೆಂಟನೆಯ
ಅಧ್ಯಾಯ ಮುಗಿದಿದೆ



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಏಕೋನತ್ರಿಂಶತ್ತಮೋಽಧ್ಯಾಯಃ ||

**|| ಮಾರ್ಕಂಡೇಯ ಉವಾಚ ||**

**ಅತಃ ಪರಂ ಪ್ರವಕ್ಷ್ಯಾಮಿ ಗತೀನಾಂ ಲಕ್ಷಣಂ ತವ |**
**ಸ್ವಭಾವೇನೋತ್ತುಂಗಗತಾ ಕಾರ್ಯಂ ಜಾನುಕಟೀಸಮಂ || ೧ ||**

**ಯುದ್ಧಚಾರೀಪ್ರಚಾರೇಷು ಜಾನುಸ್ತನಸಮಂ ನ್ಯಸೇತ್ |**
**ಜ್ವರಾನ್ತೇ ಚ ಕ್ಷುಧಾನ್ತೇ ಚ ತಪಃ ಶ್ರಾನ್ತೇ ರುಜಾನ್ವಿತೇ || ೨ ||**

**ವಿಕೃತೇ ಚಾವಹಿತ್ಥೇ ಚ ತಥೌತ್ಸುಕ್ಯಸಮನ್ವಿತೇ |**
**ಶೃಂಗಾರೇ ಚೈವ ಶೋಕೇ ಚ ಸ್ವಚ್ಛಂದಗಮನೇ ತಥಾ || ೩ ||**

---

### ಇಪ್ಪತ್ತೊಂಬತ್ತನೆಯ ಅಧ್ಯಾಯ

೧-೪ ಮಾರ್ಕಂಡೇಯರು ಹೇಳುತ್ತಾರೆ— ಇನ್ನು ಮುಂದೆ ಆಯಾಯ ಅಭಿನೇಯಾರ್ಥಕ್ಕೆ ತಕ್ಕ ಗತಿಭೇದಗಳನ್ನು ಹೇಳುತ್ತೇನೆ ಸ್ವಭಾವ ಸಿದ್ಧವಾದ ಉಚ್ಚಗಮನದಲ್ಲಿ ಮಂಡಿಯನ್ನು ಸೊಂಟಕ್ಕೆ ಸಮನಾಗಿ ಮಾಡಬೇಕು ಯುದ್ಧ ಮತ್ತು ಚಾರೀ ಎಂಬ ಸಂಚಾರಗಳಲ್ಲಿ ಮಂಡಿಯನ್ನು ಸ್ತನಕ್ಕೆ ಸಮನಾಗಿ ಮಾಡಬೇಕು ಜ್ವರ ಬಂದ ಮೇಲೆಯೂ, ಬಹಳ ಹಸಿವಾಗಿರುವಾಗಲೂ, ತಪಸ್ಸಿನಿಂದ ಬಳಲಿರುವಾಗಲೂ, ರೋಗಗ್ರಸ್ತನಾಗಿರುವಾಗಲೂ, ಚಿತ್ತವಿಕಾರ ಹೊಂದಿರುವಾಗಲೂ ಆಕಾರಗೋಪನಕಾಲದಲ್ಲಿಯೂ, ದುಃಖಹೊಂದಿರುವಾಗಲೂ, ಶೃಂಗಾರ ಮತ್ತು ಶೋಕಗಳನ್ನು ಅಭಿನಯಿಸುವಾಗಲೂ, ಯಥೇಚ್ಛ ಗಮನಕಾಲದಲ್ಲಿಯೂ ಸಹ ನಾಟ್ಯಜ್ಞರು ಸ್ಥಿರವಾದ ಗತಿಯನ್ನು ಅವಲಂಬಿಸಬೇಕು ಅಸ್ವಸ್ಥನಾಗಿರುವಾಗಲೂ

ಏತೇಷ್ವೇವ ತು ಸರ್ವತ್ರ ಸ್ಥಿರಾ ಕಾರ್ಯಾ ಗತಿರ್ಬುಧೈಃ ।
ಅಸ್ವಸ್ಥೇ ಕಂಪಿತೇ ಚೈವ ಭಯೇ ವಿತ್ರಾಸಿತೇ ತಥಾ ॥ ೪ ॥

ಆವೇಗೇ ಚೈವ ಹರ್ಷೇ ಚ ಕಾರ್ಯಂ ಯುಚ್ಚ ತ್ವರಾನ್ವಿತಂ ।
ಅನಿಷ್ಟಶ್ರವಣೇ ಚೈವ ಕ್ಷೇಪೇ ಚಾದ್ಭುತದರ್ಶನೇ ॥ ೫ ॥

ಅಪಿಚಾತ್ಯಯಿಕೇ ಕಾರ್ಯೇ ತಥಾ ಚೈವಾರಿಮಾರ್ಗಣೇ ।
ಅಪರಾಧಾನುಸಾರೇಣ ಶ್ವಾಪದಾನುಗತೌ ತಥಾ ॥ ೬ ॥

ಏವಂ ವಿಧೇಷು ಕಾರ್ಯೇಷು ಗತಿಂ ಶೀಘ್ರಾಂ ಪ್ರಯೋಜಯೇತ್ ।
ಗತಿಃ ಶೃಂಗಾರಿಣೀ ಕಾರ್ಯಾ ಸ್ವಸ್ಥಕಾಮಿತಸಂಭವೇ ॥ ೭ ॥

ದೂತೀದರ್ಶಿತಮಾರ್ಗಸ್ತು ಹೃದ್ಯವೇಶಪರಿಕ್ರಮೇ ।
ಸಸೌಷ್ಠವಸಮಾಯುಕ್ತೈಃ ಲಯತಾಲವಶಾನುಗೈಃ ॥ ೮ ॥

---

ನಡುಗುವಾಗಲೂ, ಭಯದಲ್ಲಿಯೂ, ಇತರರಿಂದ ಹೆದರಿಸಲ್ಪಟ್ಟಾಗಲೂ, ತ್ವರೆ ಯಿಂದ ಕಾರ್ಯವನ್ನು ಮಾಡುವಾಗಲೂ, ಮತ್ತು

೫-೮ ತನಗೆ ಅನಿಷ್ಟವಾದ ವೃತ್ತಾಂತವನ್ನು ಕೇಳುವಾಗಲೂ, ಧಿಕ್ಕಾರ ದಲ್ಲಿಯೂ, ಆಶ್ಚರ್ಯದರ್ಶನಕಾಲದಲ್ಲಿಯೂ ಶತ್ರುವನ್ನು ಹುಡುಕುವಾಗಲೂ ಅಪರಾಧಿಗಳಾದ ಕ್ರೂರಮೃಗಗಳನ್ನು ಹಿಂಬಾಲಿಸಿ ಹೋಗುವಾಗಲೂ ಸಹ ಶ್ರೀಘ್ರ ಗತಿಯನ್ನೇ ಅಭಿನಯಿಸಬೇಕು ಅನಾಯಾಸದಿಂದ ಇಷ್ಟ ಜನಸಮಾಗಮವು ಸಂಭ ವಿಸುವಾಗ ಶೃಂಗಾರಕ್ಕೆ ಅರ್ಹವಾದ ಗತಿಯನ್ನೇ ಅಭಿನಯಿಸಬೇಕು. ದೂತಿಯ ಪ್ರಯತ್ನದಿಂದ ನಾಯಿಕೆಯ ಲಾಭವನ್ನು ಹೊಂದುವಾಗ ರಮ್ಯವೇಷದಿಂದ ಕೂಡಿಯೂ, ಲಯತಾಲಗಳಿಗೆ ತಕ್ಕಂತೆ ಗತಿಸೌಷ್ಠವವನ್ನು ಹೊಂದಿಯೂ, ಪಾದಗಳಲಯಕ್ಕೆ ಅನುಗುಣವಾದ ಹಸ್ತಗಳಿಂದ ಕೂಡಿಯೂ ಇರಬೇಕು

**ಪಾದಯೋರನುಗೌ ಚಾಪಿ ಹಸ್ತೌ ಕಾರ್ಯೌ ಪ್ರಯೋಕ್ತೃಭಿಃ ।**
**ಪ್ರಚ್ಛನ್ನಕಾಮಿತೇ ಗಚ್ಛನ್ ನ ಚಾತ್ಯರ್ಥಂ ವಿಭೂಷಿತಃ ॥ ೯ ॥**

**ಕೃಷ್ಣವಾಸಾಃ ಪದೈರ್ಮಂದೈಃ ಶಬ್ದಾಶಂಕೀ ಮುಹುರ್ಮುಹುಃ ।**
**ವೇಪಮಾನಶರೀರಶ್ಚ ಶಂಕಿತಃ ಪ್ರಸ್ಖಲನ್ ಮುಹುಃ ॥ ೧೦ ॥**

**ಅಂಗಸ್ವಭಾವನೇಪಥ್ಯೋ ರೌದ್ರಸ್ತು ತ್ರಿವಿಧೋ ಮತಃ ।**
**ರುಧಿರಕ್ಲಿನ್ನದೇಹಸ್ತು ಪದ್ಮಾಂತ್ರಾಂಗಧರಸ್ತಥಾ ॥ ೧೧ ॥**

**ಬಹ್ವಾಯುಧಧರೋ ರೌದ್ರನೇಪಥ್ಯೇನ ಪ್ರಕೀರ್ತಿತಃ ।**
**ರೂಕ್ಷೋ ನಿರ್ಭರ್ತ್ಸನಕಥೋ ನಿರ್ಘೃಣಸ್ತು ಸ್ವಭಾವತಃ ॥ ೧೨ ॥**

**ವಿವಿಧಸ್ಯಾಪಿ ರೌದ್ರಸ್ಯ ಚತುಸ್ತಾಲಾನ್ತರಾಗತಿಃ ।**
**ಅಹೃದ್ಯಾ ತು ಮಹೀ ಯತ್ರ ಶ್ಮಶಾನರಣಸಂಕುಲಾ ॥ ೧೩ ॥**

೯-೧೨ ಕಾಮಪುರುಷಾರ್ಥಕ್ಕಾಗಿ ರಹಸ್ಯವಾಗಿ ಹೋಗುವವನು ಹೆಚ್ಚಾಗಿ ಅಲಂಕಾರಗಳನ್ನು ಧರಿಸದೆಯೂ, ಕಪ್ಪು ಬಟ್ಟೆಯನ್ನು ಉಟ್ಟು, ಸದ್ದಾಗದಂತೆ ಮಂದಗಾಮಿಯಾಗಿಯೂ ಹೊರಡಬೇಕು ಶಂಕಿತನಾಗಿ ನಡಗುತ್ತಾ, ಬಾರಿಬಾರಿಗೂ ಎಡವುತ್ತಾ ಹೋಗಬೇಕು. ಆಯಾಯ ಅಂಗಸ್ವಭಾವಕ್ಕೆ ತಕ್ಕಂತೆ ವೇಷವುಳ್ಳ ರೌದ್ರವು ಮೂರುವಿಧವಾಗಿರುತ್ತದೆ ರುಧಿರಕ್ಲಿನ್ನ ದೇಹ (ರಕ್ತದಿಂದ ನೆನಸಿದ ದೇಹ ಉಳ್ಳದ್ದು) ಪದ್ಮಾಂತ್ರಾಂಗಧರ (ಹೃದಯಕಮಲ ಮತ್ತು ಕರುಳು ಇವನ್ನು ಹೊಂದಿರುವುದು) ಬಹ್ವಾಯುಧಧರ (ನಾನಾ ವಿಧವಾದ ಆಯುಧಗಳನ್ನು ಧರಿಸಿರುವುದು) ಎಂಬ ಹೆಸರುಗಳು ಆ ಮೂರಕ್ಕೂ ಇವೆ ಈ ಮೂರು ಭೇದಗಳೂ ರೌದ್ರವಾದ ವೇಷಕ್ಕೆ ಸೇರಿವೆ ಈ ಮೂವರೂ ಭಯಂಕರರಾಗಿಯೂ, ಮತ್ತೊಬ್ಬರಿಗೆ ಹೆದರಿಕೆಯನ್ನುಂಟುಮಾಡುವವರೂ ಸ್ವಾಭಾವಿಕವಾದ ನಿರ್ದಯತೆಯುಳ್ಳವರಾಗಿಯೂ ಇರುತ್ತಾರೆ ಈ ರೌದ್ರಗಳಿಗೆಲ್ಲಾ ನಾಲ್ಕು ಕಾಲಪ್ರಮಾಣದ ಗತಿಯೇ ವಿಹಿತವಾಗಿವೆ

೧೩-೧೫ ಯಾವ ಪ್ರದೇಶದಲ್ಲಿ ಭೂಮಿಯು ರಮ್ಯವಾಗಿರುವುದಿಲ್ಲವೋ ಮತ್ತು ಯುದ್ಧದಿಂದ ಸಬಿಡವಾದ ಶ್ಮಶಾನವು ಹತ್ತಿರದಲ್ಲಾಗಲಿ, ಸ್ವಲ್ಪ ದೂರ

**ಆಸನ್ನಾ ಚ ವಿಕೃಷ್ಟಾ ಚ ತತ್ರ ಬೀಭತ್ಸಿಕಾ ಗತಿಃ ।**
**ಗತಿರ್ವೀರೇ ಚ ಕರ್ತವ್ಯಾ ಪಾದವಿಕ್ಷಿಪ್ತಸಂಯುತಾ ॥ ೧೪ ॥**

**ವಿಸ್ಮಯೇ ಚೈವ ಹರ್ಷೇ ಚ ವಿಕ್ಷಿಪ್ತಪದವಿಕ್ರಮಾ ।**
**ಗತಿಃ ಸ್ಥಿರಪದಾ ಪ್ರೋಕ್ತಾ ತಥೈವ ಕರುಣಾರಸೇ ॥ ೧೫ ॥**

**ನ ತತ್ರ ಸೌಷ್ಠವಂ ಕಾರ್ಯಂ ನ ಪ್ರಮಾಣಂ ತಥಾವಿಧಂ ।**
**ವಿಘೂರ್ಣಿತಶರೀರಾ ಚ ಸ್ತಬ್ಧಾ ಚ ಶಿಥಿಲಾ ಗತಿಃ ॥ ೧೬ ॥**

**ಗಾಢಪ್ರಹಾರಿತೇ ಕಾರ್ಯಾ ಗತಿಃ ಪಿಂಡಿತವಿಗ್ರಹಾ ।**
**ದ್ರುತಾ ಭಯಾನಕೇ ಕಾರ್ಯಾ ಸ್ತಬ್ಧಾ ಕಾರ್ಯವಶಾದಥ ॥ ೧೭ ॥**

**ಸತ್ತ್ವೇ ತು ವಿಕೃತೇ ದೃಷ್ಟೇ ಗತಿರ್ವಿಸ್ಫುರಿತೇಕ್ಷಣಾ ।**
**ತಾಪಸಾನಾಂ ಭವೇನ್ಮಂದಾ ಯುಗಮಾತ್ರೇಕ್ಷಣಾ ಗತಿಃ ॥ ೧೮ ॥**

---

ದಲ್ಲಾಗಲಿ ಇದ್ದಲ್ಲಿ ಅಂತಹ ಪ್ರದೇಶದಲ್ಲಿಯೂ ಭೀಭತ್ಸ ಗತಿಯನ್ನೇ ಆಶ್ರಯಿಸ ಬೇಕು ವೀರರಸದಲ್ಲಿಯೂ ಪಾದಗಳನ್ನು ಎತ್ತಿಹಾಕುವ ಗತಿಯನ್ನೇ ಅವಲಂಬಿಸ ಬೇಕು ಆಶ್ಚರ್ಯದಲ್ಲಿಯೂ, ಹರ್ಷದಲ್ಲಿಯೂ ಪಾದವಿಕ್ಷೇಪದಿಂದ ಕೂಡಿದ ನಡಿಗೆಯೇ ಇರಬೇಕು ಕರುಣರಸದಲ್ಲಿಯೂ ಸ್ಥಿರವಾದ ಪಾದವಿನ್ಯಾಸವುಳ್ಳ ಗತಿ ಯನ್ನೇ ಹೊಂದಬೇಕು

೧೬–೧೮ ಈ ಕರುಣರಸದಲ್ಲಿ ಸೌಷ್ಠವವುಳ್ಳ ಮತ್ತು ಪ್ರಮಾಣಾನುಸಾರಿ ಯಾದ ಗಮನವು ಬೇಕಾಗಿಲ್ಲ ಹೆಚ್ಚಾದ ಪ್ರಹಾರದಿಂದ ಕೂಡಿರುವವನು ಅಂಗಗಳ ಭ್ರಮಣದಿಂದ ಕೂಡಿದ ಮತ್ತು ಸ್ತಬ್ಧವೂ ಆದ ದೇಹವನ್ನೆಲ್ಲಾ ಪಿಂಡೀಕೃತವನ್ನಾಗಿ ಮಾಡುವ ಶಿಥಿಲಗತಿಯನ್ನೇ ಆಶ್ರಯಿಸಬೇಕು ಭಯಾನಕರಸದಲ್ಲಿ ದ್ರುತಗತಿ ಯನ್ನಾಗಲಿ, ಪ್ರಕರಣಕ್ಕೆ ತಕ್ಕಂತೆ ಸ್ತಬ್ಧಗತಿಯನ್ನಾಗಲಿ, ಆಶ್ರಯಿಸಬಹುದು ಅಂತಃಕರಣವು ಕ್ರೋಧಾದಿಗಳಿಂದ ಕಲಕಲ್ಪಟ್ಟಿದ್ದುದು ಕಂಡುಬಂದಲ್ಲಿ ಕಣ್ಣುಗಳ ಸ್ಫುರಣದಿಂದ ಕೂಡಿದ ಗತಿಯನ್ನೇ ಆಶ್ರಯಿಸಬೇಕು ತಪಸ್ವಿಗಳಿಗೆ ಒಂದು ನೊಗದಷ್ಟು ನೋಟದಿಂದ ಕೂಡಿದ ಮಂದಗತಿಯೇ ಇರಬೇಕು

**ಹಸ್ತಸಂಸ್ಪರ್ಶನಾನ್ಮಂದಾ ಸ್ಯಂಧಕಾರೇ ಗತಿರ್ಭವೇತ್ ।**
**ರಥಸ್ಥಸ್ಯಾಪಿ ಕರ್ತವ್ಯಾ ಗತಿರ್ಮಂದಪದೈರಥ ॥ ೧೯ ॥**

**ಸಮಪಾದಂ ಬುಧಸ್ಥಾನಂ ಕೃತ್ವಾ ರಥಗತಿಂ ವ್ರಜೇತ್ ।**
**ಧನುರ್ಗೃಹೀತ್ವಾ ಹಸ್ತೇನ ತಥಾ ಚೈಕೇನ ಕೂಬರಂ ॥ ೨೦ ॥**

**ಸೂತಶ್ಚಾಸ್ಯ ಭವೇದೇವ ಪ್ರತೋದಗ್ರಹಣಾಕೃತಿಃ ।**
**ವಿಮಾನಸ್ಥಸ್ಯ ಕರ್ತವ್ಯಾ ಗತಿರಾನಂದಿನೀ ಭವೇತ್ ॥ ೨೧ ॥**

**ಆರೋಹಾಶ್ಚಾವರೋಹಾಶ್ಚ ಊರ್ಧ್ವಾಧೋವೀಕ್ಷಣೈರ್ಗತೈಃ ।**
**ಮಂಡಲಾವರ್ತನೈಃ ಕಾರ್ಯಮಾಕಾಶಗಮನಂ ತಥಾ ॥ ೨೨ ॥**

**ಋಜ್ವಾಗತೋನ್ನತೈಃ ಪಾದೈಃ ಭ್ರಶ್ಯಮಾನಸ್ತು ಖಾದ್ಭವೇತ್ ।**
**ಉಚ್ಛ್ರಿತಾರೋಹಣಂ ಕಾರ್ಯಮುಪಕ್ರಾಂತಪದೈರಥ ॥ ೨೩ ॥**

---

೧೯–೨೧ ಕತ್ತಲೆಯಲ್ಲಿ ಹಸ್ತಗಳ ಸ್ಪರ್ಶದಿಂದ ಮಂದಗತಿಯನ್ನು ಅಭಿನಯಿಸಬೇಕು. ರಥದಲ್ಲಿರುವವನ ಗತಿಯನ್ನೂ ಮಂದವಾದ ಪದನ್ಯಾಸದಿಂದಲೇ ಅಭಿನಯಿಸಬೇಕು ಬುಧಸ್ಥಾನವೆಂಬ ಸಮಪಾದದ ಗತಿಯನ್ನೇ ರಥಗತಿಯಲ್ಲಿ ಅಭಿನಯಿಸಬೇಕು ಈ ರಥಗತಿಯಲ್ಲಿ ಒಂದು ಕೈಯಲ್ಲಿ ಧನುಸ್ಸನ್ನೂ ಮತ್ತೊಂದು ಕೈಯಲ್ಲಿ ರಥರಕ್ಷಕವಾದ ಚರ್ಮದ ಚೀಲವನ್ನೂ ಗ್ರಹಿಸಿರಬೇಕು ಸೂತನೂ ಸಹ ಚಾವಟಿಯನ್ನು ಹಿಡಿದು ಇವನ ಸಮೀಪದಲ್ಲಿರಬೇಕು ವಿಮಾನದಲ್ಲಿರುವವನು ಆನಂದಕರವಾದ ಗತಿಯನ್ನು ಅಭಿನಯಿಸಬೇಕು

೨೨–೨೪ ಹತ್ತುವುದು ಮತ್ತು ಕೆಳಕ್ಕೆ ಇಳಿಯುವುದು ಇವನ್ನು ಮೇಲೆ ಮತ್ತು ಕೆಳಗೆ ನೋಡುವುದರಿಂದ ಕೂಡಿದ ಗತಿಯಿಂದ ಅಭಿನಯಿಸಬೇಕು ಆಕಾಶ ಗಮನವನ್ನು ಮಂಡಲಾಕಾರದ ಸುತ್ತುವಿಕೆಯಿಂದ ಅಭಿನಯಿಸಬೇಕು ಆಕಾಶ ದಿಂದ ಜಾರಿಬೀಳುವ ಅಭಿನಯವನ್ನು ಋಜುವಾಗಿಯೂ, ಉನ್ನತವಾಗಿಯೂ ಚಾಚಲ್ಪಟ್ಟ ಪಾದಗಳಿಂದ ಪ್ರದರ್ಶಿಸಬೇಕು ಉನ್ನತವಾದ ಸ್ಥಳಕ್ಕೆ ಹತ್ತುವುದನ್ನು ಹಿಂದುಮುಂದಾಗಿ ತಿರುಗಿರುವ ಪಾದವಿನ್ಯಾಸಗಳಿಂದ ಪ್ರದರ್ಶಿಸಬೇಕು ಹಾಗೆಯೇ

ತಥಾವತರಣಂ ಕಾರ್ಯಂ ಶಂಕಿತೈರಿವ ಸಂಹಿತೈಃ ।
ಉತ್ಕ್ಷಿಪ್ತಪಾದಸಂಚಾರಾ ಸಲಿಲೇ ಚ ಗತಿರ್ಭವೇತ್ || ೨೪ ||

ಉತ್ಕ್ಷಿಪ್ತಹಸ್ತಸಂಚಾರಾ ಪಾದಪಾರೋಹಣೇ ಭವೇತ್ ।
ಸೂಚೀವಿದ್ಧೈರಪಕ್ರಾಂತೈಃ ಪದೈಃ ಪಾರ್ಶ್ವಗತೈರಥ || ೨೫ ||

ಅಂಕುಶಗ್ರಹಣಾನ್ನಾಗಂ ಖಲೀನಗ್ರಹಣಾದ್ಧಯಂ ।
ಪ್ರಗ್ರಹಗ್ರಹಣಾದೇವ ಅನ್ಯೇಷಾಂ ಕಾರಯೇದ್ಗತಿಂ || ೨೬ ||

ಅಶ್ವಯಾನೇ ಗತಿಃ ಕಾರ್ಯಾ ವೈಶಾಖಸ್ಥಾನಕೇನ ಹ ।
ಪನ್ನಗಾನಾಂ ಗತಿಃ ಕಾರ್ಯಾ ಪದೈಃ ಸ್ವಸ್ತಿಕಸಂಯುತೈಃ || ೨೭ ||

ವಿಟಸ್ಯಾಪಿ ತು ಕರ್ತವ್ಯಾ ಗತಿರ್ಲಲಿತವಿಕ್ರಮಾ ।
ಕಂಚುಕೀಯಸ್ಯ ಕರ್ತವ್ಯಾ ಕಂಪಿತಾ ಸ್ಖಲಿತಾ ಗತಿಃ || ೨೮ ||

---

ಸೇರಿರುವ ಪಾದಗಳಿಂದ ಕೂಡಿದ ಶಂಕಾಸಹಿತವಾದ ಗತಿಯಿಂದ ಇಳಿಯುವಿಕೆಯನ್ನು ಅಭಿನಯಿಸಬೇಕು ನೀರಿನಲ್ಲಿ ನಡೆಯುವುದನ್ನು ಕಾಲುಗಳನ್ನು ಮೇಲಕ್ಕೆ ಎತ್ತಿ, ಎತ್ತಿ, ಇಡುವ ಗಮನದಿಂದ ಅಭಿನಯಿಸಬೇಕು

೨೫-೨೮. ಮರಗಳನ್ನು ಹತ್ತುವಾಗ ಕೈಗಳನ್ನು ಮೇಲಕ್ಕೆ ಎತ್ತಿಕೊಂಡಿರುವ ಸಂಚಾರದಿಂದ ಆರೋಹಣವನ್ನು ಅಭಿನಯಿಸಬೇಕು, ಪಾದಗಳು ಸೂಚೀವಿದ್ಧವೆಂಬ ಗತಿಯಿಂದ ಕೂಡಿ ಪಾರ್ಶ್ವವನ್ನು ಹೊಂದಿರಬೇಕು, ಅಂಕುಶವನ್ನು ಹಿಡಿದು ಆನೆಯ ಗತಿಯನ್ನೂ, ಲಗಾಮನ್ನು ಹಿಡಿದು ಕುದುರೆಯ ಗತಿಯನ್ನೂ, ಹಗ್ಗವನ್ನು ಹಿಡಿದು ಇತರ ಪ್ರಾಣಿಗಳ ಗತಿಯನ್ನೂ ಅಭಿನಯಿಸಬೇಕು ವೈಶಾಖ ಸ್ಥಾನಕದಿಂದ ಅಶ್ವಗತಿಯನ್ನೂ, ಸ್ವಸ್ತಿಕ ಸನ್ನಿವೇಶವುಳ್ಳ ಪಾದಗಳಿಂದ ಸರ್ಪಗಳ ಗತಿಯನ್ನೂ, ಅಭಿನಯಿಸಬೇಕು ವಿಟರು ಲಲಿತವಾದ ಪಾದವಿನ್ಯಾಸದಿಂದ ಕೂಡಿದ ಗತಿಯಿಂದ ಅಭಿನಯಿಸಬೇಕು ಕಂಚುಕೀಯನಿಗೆ ನಡುಗುವ ಸ್ಖಲಿತ ಗತಿಯನ್ನು ಪ್ರದರ್ಶಿಸಬೇಕು

ವಿಷ್ಟಂಭನಗತಿಪ್ರಾಣಾ ಕೃಶಸ್ಯಾಪಿ ಗತಿರ್ಭವೇತ್ ।
ವ್ಯಾಧಿಗ್ರಸ್ತಸ್ಯ ಚ ತಥಾ ತಪಃಶ್ರಾಂತಸ್ಯ ಚೈವ ಹಿ ॥ ೨೯ ॥

ದೀರ್ಘಾಧ್ವನಿ ಗತಸ್ಯಾಪಿ ಶನೈರ್ಮಂದಪರಿಕ್ರಮಾ ।
ಮತ್ತಸ್ಯ ತು ಗತಿಃ ಕಾರ್ಯಾ ಸ್ಖಲಿತಾ ಪಾರ್ಶ್ವಯೋರ್ದ್ವಯೋಃ ॥ ೩೦ ॥

ಉನ್ಮತ್ತಸ್ಯಾಪಿ ಕರ್ತವ್ಯಾ ಗತಿಸ್ತ್ವಭಿನಯಕ್ರಮಾ ।
ಅಸಂಬದ್ಧಪ್ರಲಾಪೀ ಸ್ಯಾನ್ಮಲಿನೋ ಲೋಮಶಸ್ತಥಾ ॥ ೩೧ ॥

ವಿಕಲಾನಾಂ ಗತಿಃ ಕಾರ್ಯಾ ತಥಾ ಕಾರ್ಯಾನುರೂಪತಃ ।
ಸ್ಥೂಲದೇಹಸ್ಯ ಕರ್ತವ್ಯಾ ಗತಿರ್ದೇಹಾನುಕರ್ಷಿಣೀ ॥ ೩೨ ॥

ವಿದೂಷಕಸ್ಯ ಕರ್ತವ್ಯಾ ಗತಿರ್ಹಾಸ್ಯಪ್ರದಾ ತಥಾ ।
ಸ್ವಭಾವಜಾತಂ ವಿನ್ಯಸ್ಯ ಕುಟಿಲಂ ವಾಮಕೇ ಕರೇ ॥ ೩೩ ॥

---

೨೯ ೩೧ ಕೃಶನಾದವನನ್ನು ಅಲ್ಲಲ್ಲಿ ಅವಲಂಬನದಿಂದ ಕೂಡಿದ ಗತಿಯಿಂದ ಅಭಿನಯಿಸಬೇಕು ವ್ಯಾಧಿಗ್ರಸ್ತನನ್ನೂ, ತಪಸ್ಸಿನಿಂದ ಬಳಲಿರುವವನನ್ನೂ, ಮಾರ್ಗ ಶ್ರಮದಿಂದ ಶ್ರಾಂತನಾಗಿರುವವನನ್ನೂ ಮೆಲ್ಲಮೆಲ್ಲಗಿರುವ ಮಂದಗತಿಯಿಂದ ಅಭಿನಯಿಸಬೇಕು ಮದ್ಯಾದಿ ಪಾನದಿಂದ ಮತ್ತನಾಗಿರುವವನನ್ನು ಎರಡು ಪಾರ್ಶ್ವದಿಂದಲೂ ಕೂಡಿದ ಸ್ಖಲಿತಗತಿಯಿಂದ ಅಭಿನಯಿಸಬೇಕು ಹುಚ್ಚು ಹಿಡಿದಿರುವವನನ್ನೂ ಈ ರೀತಿಯಾದ ಗತಿಯಿಂದ ಅಭಿನಯಿಸಬೇಕು ಅಂಗವೈಕಲ್ಯವಿರುವವರನ್ನು ಆಯಾಯ ಕಾರ್ಯಕ್ಕೆ ತಕ್ಕ ಗತಿವೈಕಲ್ಯದಿಂದಲೇ ಅಭಿನಯಿಸಬೇಕು ಅಸಂಬದ್ಧಪ್ರಲಾಪಿಯನ್ನು ಮಾಲಿನ್ಯ ಮತ್ತು ರೋಮಗಳಿಂದ ಕೂಡಿಯೂ ಅಭಿನಯಿಸಬೇಕು

೩೨–೩೪ ಸ್ಥೂಲದೇಹ ಉಳ್ಳವನ ಗತಿಯನ್ನು ಎಲ್ಲಾ ದೇಹದೊಡನೆ ಸೆಳೆಯುತ್ತಿರುವಂತೆ ಪ್ರದರ್ಶಿಸಬೇಕು. ವಿದೂಷಕನ ಗತಿಯನ್ನು ಹಾಸ್ಯರಸಕ್ಕೆ ತಕ್ಕಂತೆ ಅಭಿನಯಿಸಬೇಕು ಸ್ವಾಭಾವಿಕವಾದ ಕೌಟಿಲ್ಯವನ್ನು ಎಡಗೈಯ್ಯಿನ ವಿನ್ಯಾಸದಿಂದ ತೋರ್ಪಡಿಸುತ್ತಾ ಚಂಚಲವಾದ ದೃಷ್ಟಿಯಿಂದ ಚೇಟರ ಗತಿಯನ್ನು

ಗತೌ ರಮೇತ ಚೇಟಾನಾಂ ದೃಷ್ಟಿಶ್ಚಾರ್ಯವಿಚಾರಿಣೀ ।
ನಾನಾದೇಶಸಮುದ್ಭೂತಾ ಪುರುಷಾಣಾಂ ಸ್ವಭಾವತಃ ॥ ೩೪ ॥

ಶ್ವಾಪದಾನಾಂ ಪಶೂನಾಂ ಚ ಗತಿಃ ಕಾರ್ಯಾ ನರಾಧಿಪ ।
ಶೇಷಾಣಾಮರ್ಥಯೋಗೇನ ಸ್ಥಾನಕಾನಿ ಪ್ರಯೋಜಯೇತ್ ॥ ೩೫ ॥

ಧೈರ್ಯೋಪಪನ್ನಾ ಗತಿರುತ್ತಮಾನಾಂ
ಮಧ್ಯಾ ಗತಿರ್ಮಧ್ಯಮಸಂಮಿತಾನಾಂ ।
ದ್ರುತಾ ಗತಿಶ್ಚ ಪ್ರಚುರಾಧಮಾನಾಂ
ಲಯತ್ರಯಂ ಸತ್ತ್ವವಶೇನ ಯೋಜ್ಯಂ ॥ ೩೬ ॥

ರಂಗೇ ವಿಕೃತ್ಯಾ ತು ನೃಪಪ್ರಧಾನ
ಗತಾಗತೈಃ ಪಾದಗತಿಪ್ರಚಾರಃ ।
ಕಾರ್ಯೋ ವಶಾದೇವ ಗೃಹಸ್ಯ ನಿತ್ಯಂ
ಸಮೀಕ್ಷ್ಯ ರಂಗಂ ತು ಯಥಾನುರೂಪಂ ॥ ೩೭ ॥

---

ಅಭಿನಯಿಸಬೇಕು. ನಾನಾದೇಶಗಳ ಪುರುಷರ ಗತಿಯನ್ನು ಆಯಾಯ ದೇಶ ಸ್ವಭಾವಕ್ಕೆ ತಕ್ಕಂತೆಯೂ ಮತ್ತು ದುಷ್ಟಪ್ರಾಣಿಗಳ ಮತ್ತು ಸಾಧುವಾದ ಪಶುಗಳ ಗಮನವನ್ನೂ ಅವುಗಳ ಸ್ವಭಾವಕ್ಕೆ ತಕ್ಕಂತೆಯೂ ಅಭಿನಯಿಸಬೇಕು.

೩೫-೩೭ ಇತರರಿಗೆ ಅವರವರ ಸ್ವರೂಪಕ್ಕೆ ತಕ್ಕಂತೆ ಗತಿಸ್ಥಾನಗಳನ್ನು ಪ್ರಯೋಗಿಸಬೇಕು. ಉತ್ತಮ ಪ್ರಕೃತಿಗಳಿಗೆ ಧೈರ್ಯಕ್ಕೆ ಸೂಚಕವಾದ ಗಂಭೀರ ಗತಿಯನ್ನೂ, ಮಧ್ಯಮ ಪ್ರಕೃತಿಗಳಿಗೆ ಮಧ್ಯಮ ಗತಿಯನ್ನು, ಅಧಮಂಗೆ ಪ್ರಚಂಡ ವಾದ ದ್ರುತಗತಿಯನ್ನೂ, ಅವರವರ ನೋವೃತ್ತಿಗೆ ತಕ್ಕಂತೆ ಮೂರು ಲಯಗಳನ್ನೂ ಯೋಜಿಸಿ ಅಭಿನಯಿಸಬೇಕು. ರಂಗಸ್ಥಳದಲ್ಲಿ ಅಭಿನಯಿಸುವವನು ವಿಕಾರದಿಂದಿ ಬಾರದು. ಗಮನಾಗಮನಗಳಿಂದ ಪಾದಗಳ ಗತಿಯನ್ನೇ ಪ್ರದರ್ಶಿಸಬೇಕು. ರಂಗ ಸ್ಥಾನದ ಗೃಹವನ್ನು ನೋಡಿಕೊಂಡು ಅದಕ್ಕೆ ತಕ್ಕಂತೆ ಗತಿಭೇದಗಳನ್ನು ಅನುಸರಿಸ

ಸ್ತ್ರೀಣಾಂ ಗತಿಃ ಸ್ಯಾಲ್ಲಲಿತಪ್ರಚಾರಾ
ಧೀರಾ ನರಾಣಾಂ ಚ ತಥೋದ್ಧತಾ ಸ್ಯಾತ್ ।
ಗತಿಪ್ರಚಾರೋಽರ್ಥವಶೇನ ಯೋಜ್ಯ-
ಶ್ಚೈತಾವದುಕ್ತಂ ತವ ರಾಜಸಿಂಹ ॥ ೩೮ ॥

ವಯೋಽನುರೂಪಃ ಪ್ರಥಮಸ್ತು ವೇಷೋ
ವೇಷಾನುರೂಪಶ್ಚ ಗತಿಪ್ರಚಾರಃ ।
ಗತಿಪ್ರಚಾರಾನುಗತಂ ಚ ನಾಟ್ಯಂ
ನಾಟ್ಯಾನುರೂಪೋಽಭಿನಯಶ್ಚ ಕಾರ್ಯಃ ॥ ೩೯ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಗತಿಪ್ರಚಾರವರ್ಣನೋನಾಮೈಕೋನ
ತ್ರಿಂಶತ್ತಮೋಽಧ್ಯಾಯಃ

---

ಬೇಕು ಸ್ತ್ರೀಯರ ಗತಿಗಳು ಸುಕುಮಾರವಾಗಿಯೂ, ಪುರುಷಗತಿಗಳು ಧೀರ ವಾಗಿಯೂ, ಉದ್ಧತವಾಗಿಯೂ ಇರಬೇಕು ಈ ವಿಧವಾದ ಗತಿಪ್ರಚಾರಗಳೆಲ್ಲ ವನ್ನೂ ಆಯಾಯ ಪಾತ್ರಗಳು ಮತ್ತು ದೇಶಕಾಲಭೇದಗಳು ಇವಕ್ಕೆ ಅನುಗುಣ ವಾಗಿ ಯೋಜಿಸಬೇಕು ಈ ವಿಷಯದಲ್ಲಿ ಹೇಳತಕ್ಕ ಅನೇಕ ವಿಷಯಗಳಿದ್ದರೂ ಇಷ್ಟನ್ನು ಮಾತ್ರ ಹೇಳಿರುತ್ತೇನೆ ಅಭಿನಯಮಾಡತಕ್ಕವನು ಈ ವಿಷಯವನ್ನು ಮೊದಲು ಗಮನಿಸಿರಬೇಕು ವೇಷವು ವಯಸ್ಸಿಗೆ ತಕ್ಕಂತಿರಬೇಕು ಗತಿಭೇದ ಗಳು ಅಂತಹ ವೇಷಕ್ಕೆ ತಕ್ಕಂತಿರಬೇಕು ನಾಟ್ಯವು ಅಂತಹ ಗತಿಭೇದಕ್ಕೆ ಅನುಗುಣವಾಗಿರಬೇಕು. ಅಭಿನಯವೂ ಸಹ ನಾಟ್ಯಕ್ಕೆ ತಕ್ಕಂತೆ ಇರಬೇಕು

ಇಲ್ಲಿಗೆ ಶ್ರೀವಿಷ್ಣುಧರ್ಮೋತ್ತರ ತೃತೀಯ ಖಂಡದಲ್ಲಿ ಮಾರ್ಕಂಡೇಯ ವಜ್ರ
ಸಂವಾದದಲ್ಲಿ ಗತಿಪ್ರಚಾರವರ್ಣನವೆಂಬ ಇಪ್ಪತ್ತೊಂಭತ್ತನೆಯ
ಅಧ್ಯಾಯ ಮುಗಿದಿದೆ



॥ ಓಂ ॥

॥ ಶ್ರೀ ಹಯಗ್ರೀವಾಯ ನಮಃ ॥

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

### ॥ ತ್ರಿಂಶತ್ತಮೋಽಧ್ಯಾಯಃ ॥

॥ ಮಾರ್ಕಂಡೇಯ ಉವಾಚ ॥

ಹಾಸ್ಯಶೃಂಗಾರಕರುಣಾ ರೌದ್ರವೀರಭಯಾನಕಾಃ ।
ಬೀಭತ್ಸಾದ್ಭುತಶಾಂತಾಖ್ಯಾ ನವ ನಾಟ್ಯೇರಸಾಃ ಸ್ಮೃತಾಃ ॥ ೧ ॥

ಶಾಂತೋ ರಸಃ ಸ್ವತಂತ್ರೋಽತ್ರ ಪೃಥಗೇವ ವ್ಯವಸ್ಥಿತಃ ।
ಶೃಂಗಾರಾದ್ಧಿ ಭವೇದ್ಧಾಸ್ಯೋ ರೌದ್ರಾಚ್ಚ ಕರುಣೋದಯಃ ॥ ೨ ॥

ವೀರಾಚ್ಚೈವಾದ್ಭುತೋತ್ಪತ್ತಿ ಬೀಭತ್ಸಾಚ್ಚ ಭಯಾನಕಃ ।
ಏತೇಷಾಮಂಗವರ್ಣಾಶ್ಚ ಸಾತ್ತ್ವಿಕೋಽಭಿನಯಃ ಸ್ಮೃತಃ ॥ ೩ ॥

### ಮೂವತ್ತನೆಯ ಅಧ್ಯಾಯ.

೧-೩ ಮಾರ್ಕಂಡೇಯರು ಹೇಳುತ್ತಾರೆ– ಹಾಸ್ಯ, ಶೃಂಗಾರ, ಕರುಣ, ರೌದ್ರ ವೀರ, ಭಯಾನಕ, ಬೀಭತ್ಸ, ಅದ್ಭುತ, ಶಾಂತ ಈ ಒಂಭತ್ತು ರಸಗಳು ನಾಟ್ಯೋಪಯೋಗಿಗಳೆಂದು ಹೇಳಲ್ಪಟ್ಟಿವೆ ಇವುಗಳಲ್ಲಿ ವಿರಕ್ತಿಸಾಧ್ಯವಾದ ಶಾಂತರಸವು ಸ್ವತಂತ್ರವಾಗಿಯೂ, ಬೇರೆಯಾಗಿಯೂ ಇದೆ (ಅಂದರೆ ಮತ್ತೊಂದು ರಸದೊಡನೆ ಕಾರ್ಯರೂಪದಿಂದಲಾಗಲಿ, ಕಾರಣರೂಪದಿಂದಲಾಗಲಿ ಸೇರುವುದಿಲ್ಲವೆಂದು ತಾತ್ಪರ್ಯ) ಶೃಂಗಾರದಿಂದ ಹಾಸ್ಯರಸವೂ, ರೌದ್ರದಿಂದ ಕರುಣರಸವೂ ವೀರರಸದಿಂದ ಅದ್ಭುತವೂ, ಬೀಭತ್ಸದಿಂದ ಭಯಾನಕವೂ ಉತ್ಪತ್ತಿ ಹೊಂದುತ್ತದೆ ಇವುಗಳ ಅಭಿನಯವು ಸಾತ್ವಿಕಾಭಿನಯವಾಗುತ್ತದೆ ಇವುಗಳ ವರ್ಣಗಳನ್ನೂ ಹೇಳುತ್ತೇನೆ

**ಶಾಂತಃ ಸ್ವಭಾವವರ್ಣಸ್ತು ರಸಃ ಪ್ರೋಕ್ತೋ ನರಾಧಿಪ ।**
**ಶೃಂಗಾರಸ್ತು ಭವೇಚ್ಛ್ಯಾಮೋ ರಕ್ತೋ ರೌದ್ರಃ ಪ್ರಕೀರ್ತಿತಃ ॥ ೪ ॥**

**ಸಿತೋ ಹಾಸ್ಯಶ್ಚ ವಿಜ್ಞೇಯಃ ಕೃಷ್ಣಶ್ಚೈವ ಭಯಾನಕಃ ।**
**ಗೌರೋ ವೀರಸ್ತು ವಿಜ್ಞೇಯಃ ಪೀತಶ್ಚೈವಾದ್ಭುತಃ ಸ್ಮೃತಃ ॥ ೫ ॥**

**ಕಾಪೋತಃ ಕರುಣಶ್ಚೈವ ನೀಲೋ ಬೀಭತ್ಸ ಏವ ಚ ।**
**ಹಾಸ್ಯಃ ಪ್ರಮಥದೈವತ್ಯಃ ಶೃಂಗಾರೋ ವಿಷ್ಣುದೈವತಃ ॥ ೬ ॥**

**ರೌದ್ರೋ ರೌದ್ರಾಧಿದೇವಶ್ಚ ಕರುಣೋ ಯಮದೈವತಃ ।**
**ಬೀಭತ್ಸಸ್ಯ ಮಹಾಕಾಲಃ ಕಾಲದೇವೋ ಭಯಾನಕಃ ॥ ೭ ॥**

**ವೀರೋ ಮಹೇಂದ್ರದೇವಃ ಸ್ಯಾದದ್ಭುತೋ ಬ್ರಹ್ಮದೈವತಃ ।**
**ಶಾನ್ತಸ್ತು ದೇವೋ ವಿಜ್ಞೇಯಃ ಪರಃ ಪುರುಷ ಏವ ತು ॥ ೮ ॥**

---

೪–೬ ಶಾಂತರಸವು ಅಪ್ರಕಟವಾದ ಸ್ವಾಭಾವಿಕ ವರ್ಣವುಳ್ಳದ್ದು ಶೃಂಗಾರವು ಶ್ಯಾಮವರ್ಣದಿಂದಲೂ, ರೌದ್ರವು ರಕ್ತವರ್ಣದಿಂದಲೂ, ಹಾಸ್ಯರಸವು ಬಿಳಿಯ ಬಣ್ಣದಿಂದಲೂ, ಭಯಾನಕವು ಕೃಷ್ಣವರ್ಣದಿಂದಲೂ, ವೀರವು ಬಿಳುವು ಮಿಶ್ರವಾದ ಹೊಂಬಣ್ಣದಿಂದಲೂ, ಅದ್ಭುತ ರಸವು ಹಳದಿಬಣ್ಣದಿಂದಲೂ, ಕರುಣವು ಕಪೋತದಂತಹ ಬೂದುಬಣ್ಣದಿಂದಲೂ, ಬೀಭತ್ಸವು ನೀಲಿಯ ಬಣ್ಣದಿಂದಲೂ ಕೂಡಿರುತ್ತವೆ ಹಾಸ್ಯರಸಕ್ಕ ಪ್ರಮಥವೇ ದೇವತೆ, ಶೃಂಗಾರಕ್ಕೆ ವಿಷ್ಣುವೇ ದೇವತೆ—

೭–೮ ರೌದ್ರರಸಕ್ಕೆ ರುದ್ರನೇ ಅಧಿದೇವತೆ, ಕರುಣರಸಕ್ಕೆ ಯಮನೇ ದೇವತೆ, ಬೀಭತ್ಸಕ್ಕೆ ಮಹಾಕಾಲನೇ ದೇವತೆ, ಭಯಾನಕರಸಕ್ಕೆ ಕಾಲಪುರುಷನೇ ದೇವತೆ, ವೀರರಸಕ್ಕೆ ಮಹೇಂದ್ರನೇ ದೇವತೆ, ಅದ್ಭುತರಸಕ್ಕ ಬ್ರಹ್ಮನೇ ದೇವತೆ, ಶಾಂತರಸಕ್ಕೆ ಪರಮಪುರುಷನಾದ ಪರಮಾತ್ಮನೇ ದೇವತೆ, ಈ ಶಾಂತರಸವು ವೈರಾಗ್ಯದಿಂದ ಉಂಟಾಗುತ್ತದೆ ಅದರ ಅಭಿನಯವೂ ಸಹ ಸರ್ವಭೂತದಯೇ ಮೊದಲಾದ ಅಸಾಧಾರಣ ಧರ್ಮಗಳಿಂದ ಉಂಟಾಗುತ್ತದೆ ಸರ್ವಪ್ರಾಣಿಗಳಲ್ಲಿಯೂ, ಏಕರೂಪವಾದ ದಯೆ, ಧ್ಯಾನ ಮತ್ತು ಮೋಕ್ಷಮಾರ್ಗದ ಅನುಷ್ಠಾನ

ಶಾಂತಸ್ಯ ತು ಸಮುತ್ಪತ್ತಿಃ ನೃಪವೈರಾಗ್ಯತಃ ಸ್ಮೃತಃ ।
ಸಚಾಭಿನೇಯೋ ಭವತಿ ಲಿಂಗಗ್ರಹಣತಸ್ತಥಾ ॥ ೯ ॥

ಸರ್ವಭೂತದಯಾಧ್ಯಾನಮೋಕ್ಷಮಾರ್ಗಪ್ರವರ್ತನೈಃ ।
ನಾಸ್ತಿ ಯತ್ರ ಸುಖಂ ದುಃಖಂ ನ ದ್ವೇಷೋ ನಾಪಿ ಮತ್ಸರಃ ॥ ೧೦ ॥

ಸಮಃ ಸರ್ವೇಷು ಭೂತೇಷು ಸ ಶಾಂತಃ ಪ್ರಥಿತೋ ರಸಃ ।
ಹಾಸ್ಯಸ್ಯ ತು ಸಮುತ್ಪತ್ತಿರಸಂಬದ್ಧಪ್ರಲಾಪತಃ ॥ ೧೧ ॥

ಅಸಂಬದ್ಧಾತ್ತಥಾ ವೇಶಾದ್ಭವತೀತಿ ವಿನಿಶ್ಚಯಃ ।
ಆತ್ಮಸ್ಥಶ್ಚ ಪರಸ್ಥಶ್ಚ ದ್ವಿವಿಧಃ ಸ ಚ ಕೀರ್ತಿತಃ ॥ ೧೨ ॥

ಆತ್ಮಸ್ಥಶ್ಚ ಸ್ವಯಂ ಹಾಸಾತ್ಪರಸ್ಥಃ ಪರಹಾಸನಾತ್ ।
ಉತ್ತಮಾಧಮಮುಖ್ಯಾನಾಂ ತ್ರಿವಿಧಃ ಸ ಭವೇತ್ತದಾ ॥ ೧೩ ॥

ಈಷದ್ವಿಕಂಪಿತೈರ್ಗಂಡೈಃ ಕಟಾಕ್ಷೈಃ ಸೌಷ್ಠವಾನ್ವಿತೈಃ ।
ಅಲಕ್ಷಿತದ್ವಿಜಂ ಚೈವ ಉತ್ತಮಾನಾಂ ಸ್ಮಿತಂ ಭವೇತ್ ॥ ೧೪ ॥

---

ಇವುಗಳಿಂದ ಯಾವ ಮನೋವೃತ್ತಿಯಲ್ಲಿ ಸುಖ, ದುಃಖ, ದ್ವೇಷ, ಮತ್ಸರ ಮೊದಲಾದ ದೋಷಗಳಿರುವುದಿಲ್ಲವೋ ಸರ್ವಭೂತಗಳಲ್ಲಿಯೂ ಸಾಮ್ಯ ಹೊಂದಿರುವ ಅಂತಹ ಮನೋವೃತ್ತಿಯೇ ಶಾಂತರಸವೆಂದು ಪ್ರಸಿದ್ಧಿಹೊಂದಿದೆ

೧೧-೧೩ ಹಾಸ್ಯ ರಸವು ಅಸಂಬದ್ಧ ಪ್ರಲಾಪದಿಂದ ಅಭಿವ್ಯಕ್ತಿ ಹೊಂದುತ್ತದೆ ಹಾಗೆಯೇ ಅಸಂಬದ್ಧವಾದ ವೇಷವೂ ಹಾಸ್ಯಾಭಿವ್ಯಕ್ತಿಗೆ ಕಾರಣವೆಂಬುದು ದೃಢಪಟ್ಟಿದೆ ಅದೂ ಸಹ ಆತ್ಮಸ್ಥ ಪರಸ್ಥವೆಂದು ಎರಡು ವಿಧ, ತನ್ನ ಹಾಸದಿಂದ ಅಭಿವ್ಯಕ್ತಿಹೊಂದಿದಲ್ಲಿ ಆತ್ಮಸ್ಥವೆಂತಲೂ ಅದರಿಂದ ಇತರರಿಗೆ ಹಾಸ ಉಂಟಾದಲ್ಲಿ ಅದು ಪರಸಂಸ್ಥವೆಂದೂ ಹೆಸರು ಇದೂ ಸಹ ಉತ್ತಮ ಮಧ್ಯಮಾಧಮ ಭೇದದಿಂದ ಮೂರು ವಿಧವಾಗುತ್ತದೆ

೧೪-೧೬ ಹಾಸ್ಯರಸಕ್ಕೆ ಅನುಭಾವರೂಪವಾದ ಸ್ಮಿತವು ಉತ್ತಮ ಪ್ರಕೃತಿಗಳಿಗೆ ಕಪೋಲ ಪ್ರದೇಶವು ಸ್ವಲ್ಪ ವಿಕಾಸದಿಂದ ಕೂಡಿಯೂ, ಹಲ್ಲುಗಳು ಕಾಣಿಸದಂತೆಯೂ ಗಂಭೀರವಾಗಿರಬೇಕು ಹಲ್ಲುಗಳನ್ನು ತೋರ್ಪಡಿಸಿಕೊಳ್ಳುತ್ತಿರುವ

**ತಥಾ ದರ್ಶಿತದಂತಸ್ತು ಮಧ್ಯಮಾನಾಂ ಪ್ರಕೀರ್ತಿತಂ ।**
**ಸಾಸ್ರಂ ತದಧಮಾನಾಂ ಸ್ಯಾತ್ಸಸ್ವನಂ ಚ ಮಹೀಭುಜಾಂ ॥ ೧೫ ॥**

**ಶೃಂಗಾರೋ ದ್ವಿವಿಧಃ ಪ್ರೋಕ್ತಃ ಸಂಭೋಗಾದ್ವಿರಹಾತ್ತಥಾ ।**
**ವಿಪ್ರಲಂಭಕೃತಸ್ಯಾತ್ರ ನಿರ್ವೇದೋಽಭಿನಯುಕ್ರಿಯಃ ॥ ೧೬ ॥**

**ವಿಪ್ರಲಂಭೇ ತು ನಿರ್ದಿಷ್ಟಾಃ ಕಾಮಾವಸ್ಥಾಃ ತಥಾ ದಶ ।**
**ಚಕ್ಷುಃಪ್ರೀತಿರ್ವಿನಿರ್ದಿಷ್ಟಾ ಪ್ರಥಮಾಯಾಂ ನರಾಧಿಪ ॥ ೧೭ ॥**

**ಮನಸಶ್ಚ ತಥಾ ಸಂಗೋ ದ್ವಿತೀಯಾಯಾಂ ಪ್ರಕೀರ್ತಿತಃ ।**
**ಸ್ಮರಣಂ ಚ ತಥಾ ಪ್ರೋಕ್ತಂ ತೃತೀಯಾಯಾಂ ನಿರನ್ತರಂ ॥ ೧೮ ॥**

**ನಿದ್ರಾಭೇದಃ ಚತುರ್ಥ್ಯಾಂ ತು ಪಂಚಮ್ಯಾಂ ತನುತಾ ತಥಾ ।**
**ವ್ಯಾವೃತ್ತಿರ್ವಿಷಯೇಭ್ಯಸ್ತು ಷಷ್ಠ್ಯಾಂ ಪ್ರೋಕ್ತಾ ನರಾಧಿಪ ॥ ೧೯ ॥**

**ಲಜ್ಜಾಪ್ರಣಾಶಃ ಸಪ್ತಮ್ಯಾಂ ಉನ್ಮಾದಸ್ತದನಂತರಂ ।**
**ನವಮ್ಯಾಂ ತು ತಥಾ ಮೂರ್ಛಾ ದಶಮ್ಯಾಂ ಮರಣಂ ಭವೇತ್ ॥ ೨೦ ॥**

---

ಇಂತಹ ಮಂದಹಾಸವು ಮಧ್ಯಮ ಪ್ರಕೃತಿಗಳಿಗೆ ಸೇರುತ್ತದೆ ಕಣ್ಣೀರಿನಿಂದ ಕೂಡಿರುವ ಇಂತಹ ಸ್ಮಿತವು ಅಧಮ ಪ್ರಕೃತಿಗಳಿಗೆ ಸೇರಿದುದು ರಾಜರುಗಳ ಇಂತಹ ಹಾಸವು ಪ್ರಾಯಃ ಶಬ್ದದಿಂದ ಕೂಡಿರುತ್ತದೆ ಶೃಂಗಾರರಸವು ಸಂಭೋಗ ವಿಪ್ರಲಂಭಗಳೆಂದು ಎರಡು ವಿಧವಾಗಿರುತ್ತದೆ ಇವುಗಳಲ್ಲಿ ವಿಪ್ರಲಂಭ ಶೃಂಗಾರದ ಅಭಿನಯವು ನಿರ್ವೇದವೆಂಬ ಸಂಚಾರಿಭಾವದಿಂದ ಪ್ರಕಾಶಹೊಂದುತ್ತದೆ

೧೭–೨೦ ವಿಪ್ರಲಂಭದೆಶೆಯಲ್ಲಿ ಹತ್ತು ಕಾಮಾವಸ್ಥೆಗಳುಂಟಾಗುತ್ತವೆ ಮೊದಲನೆಯದು ಚಕ್ಷುಃಪ್ರೀತಿ, ಎರಡನೆಯದು ಮನಸ್ಸಿನ ಸಂಗ, ಮೂರನೆ ಯದು ಇಷ್ಟವಸ್ತುವಿನ ಸಂತತಸ್ಮರಣ, ನಾಲ್ಕನೆಯದು ಜಾಗರ, ಐದನೆಯದು ಅವಯುವಗಳ ಕೃಶತೆ, ಆರನೆಯದು ವಿಷಯಗಳಲ್ಲಿ ಅನಾಸಕ್ತಿ, ಏಳನೆಯದು ಲಜ್ಜಾತ್ಯಾಗ, ಎಂಟನೆಯದು ಉನ್ಮಾದ, ಒಂಭತ್ತನೆಯದು ಮೂರ್ಛೆ, ಹತ್ತನೆ ಯದು ಮರಣ

ದ್ವಯೋರುಜ್ಜ್ವಲಯೋಸ್ತತ್ರ ಸಂಭೋಗಾಭಿನಯೋ ಭವೇತ್ ।
ಸುಖಪ್ರಾಯೋಪ್ಯಸಂಪನ್ನೋ ಯತ್ರ ಮಾಲ್ಯಾನುಲೇಪಕಃ ॥ ೨೧ ॥

ಪುರುಷಪ್ರಮದಾಯುಗ್ಮಂ ಶೃಂಗಾರ ಇತಿ ಸಂಜ್ಞಿತಃ ।
ಶೋಕಾದ್ಭವತಿ ರಾಜೇಂದ್ರ ತಥೈವ ಕರುಣೋ ರಸಃ ॥ ೨೨ ॥

ತ್ರಸ್ತಗಾತ್ರಾದ್ವಿನಿಃಶ್ವಾಸಪರಿದೇವಿತರೋದನೈಃ ।
ಮುಖವೈವರ್ಣ್ಯಶೋಷೈಶ್ಚ ತಸ್ಯೇಹಾಭಿನಯೋ ಭವೇತ್ ॥ ೨೩ ॥

ಕ್ರೋಧಾದ್ಭವತಿ ರೌದ್ರಸ್ಯ ರಸಸ್ಯ ತು ಸಮುದ್ಭವಃ ।
ರಕ್ತನೇತ್ರಭ್ರುಕುಟಿಕ್ರೋಧಾಮರ್ಷೈಃ ಸಸಾಹಸೈಃ ॥ ೨೪ ॥

ಪೀಡನೈಃ ಶಸ್ತ್ರಸಂಘಾತೈಃ ತಸ್ಯೇಹಾಭಿನಯೋ ಭವೇತ್ ।
ಜುಗುಪ್ಸಯಾ ಚ ಭವತಿ ಬೀಭತ್ಸಸ್ಯ ಸಮುದ್ಭವಃ ॥ ೨೫ ॥

---

೨೧-೨೩ ಸುಖಕರವಾದ ವಸ್ತ್ರಭೂಷಣಗಳಿಂದಲೂ, ಗಂಧಾನುಲೇಪ ಪುಷ್ಪಮಾಲಾದಿಗಳಿಂದಲೂ ಉಜ್ಜ್ವಲವೇಷವುಳ್ಳ ನಾಯಿಕಾನಾಯಕಯುಗ್ಮದ ಸುಖಪ್ರಾಯವಾದ ಸಮಾಗಮವೇ ಸಂಭೋಗಾಭಿನಯವೆನಿಸುತ್ತದೆ ಶೋಕ ವೆಂಬ ಸ್ಥಾಯೀಭಾವದಿಂದ ಕರುಣರಸ ಉಂಟಾಗುತ್ತದೆ ಈ ಕರುಣರಸವನ್ನು ಭಯದಿಂದ ನಡುಗುವ ದೇಹದಿಂದಲೂ, ನಿಟ್ಟುಸಿರುಗಳಿಂದಲೂ, ರೋದನಾದಿ ಗಳಿಂದಲೂ, ಮುಖವಿವರ್ಣತೆಯಿಂದಲೂ, ಅವಯವಗಳ ಶೋಷಣೆಯಿಂದಲೂ ಅಭಿನಯಿಸಬೇಕಾಗುತ್ತದೆ

೨೪-೨೫ ಕ್ರೋಧವೆಂಬ ಸ್ಥಾಯೀಭಾವದಿಂದ ರೌದ್ರರಸವು ಅಭಿವ್ಯಕ್ತ ವಾಗುತ್ತದೆ ಕಣ್ಣುಗಳ ರಕ್ತವರ್ಣದಿಂದಲೂ, ಹುಬ್ಬನ್ನು ವಕ್ರಮಾಡುವುದ ರಿಂದಲೂ, ಸಾಹಸದಿಂದ ಕೂಡಿದ ಕೋಪಾಮರ್ಷಾದಿಗಳಿಂದಲೂ, ಶಸ್ತ್ರಾಸ್ತ್ರಗಳ ಸಂಘರ್ಷದಿಂದಲೂ ಇದನ್ನು ಅಭಿನಯಿಸಬೇಕು ಜಿಗುಪ್ಸಾ ಎಂಬ ಸ್ಥಾಯೀ ಭಾವದಿಂದ ಭೀಭತ್ಸರಸವು ಅಭಿವ್ಯಕ್ತವಾಗುತ್ತದ ಮೂಗನ್ನು ತಿರುಗಿಸು ವುದರಿಂದಲೂ, ಅನುಭಾವರೂಪವಾದ ಅಸಹ್ಯತೆಯಿಂದಲೂ ಇದನ್ನು ಅಭಿನಯಿ ಸಬೇಕು.

ನಾಸಾವಿಘೂರ್ಣನಾತ್ತಸ್ಯ ಚೋದ್ವೇಗೇನ ತಥೈವ ಚ ।
ಆಶ್ಚರ್ಯೇಣ ಸಮುತ್ಪತ್ತಿರದ್ಭುತಂ ತತ್ಪ್ರಕೀರ್ತಿತಂ ॥ ೨೬ ॥

ಪ್ರಸ್ಫುರಿತಾಕ್ಷಿರೋಮಾಂಚೈರಂಗುಲೀ ಭ್ರಮಣಾದಿಭಿಃ ।
ಸ್ವೇದೇನ ಚಾಭಿನೇಯಃ ಸ್ಯಾದದ್ಭುತಸ್ತು ತಥಾ ರಸಃ ॥ ೨೭ ॥

ನಾಟ್ಯಸ್ಯ ಮೂಲಂ ತು ರಸಃ ಪ್ರದಿಷ್ಟೋ
ರಸೇನ ಹೀನಂ ನ ಹಿ ನೃತ್ತಮಸ್ತಿ ।
ತಸ್ಮಾತ್ಪ್ರಯತ್ನೇನ ರಸಾಶ್ರಯಸ್ಯ ನೃತ್ತಸ್ಯ
ಯತ್ನಃ ಪುರುಷೇಣ ಕಾರ್ಯಃ ॥ ೨೮ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ರಸವರ್ಣನೋ ನಾಮ
ತ್ರಿಂಶತ್ತಮೋಽಧ್ಯಾಯಃ

---

೨೬-೨೭ ಆಶ್ಚರ್ಯವೆಂಬ ಸ್ಥಾಯೀಭಾವದಿಂದ ಅದ್ಭುತ ರಸವು ಅಭಿವ್ಯಕ್ತವಾಗುತ್ತದ ಕಣ್ಣುಗಳ ಸ್ಫುರಣ, ರೋಮಾಂಚ, ಬೆರಳುಗಳನ್ನು ಅಲುಗಿಸುವಿಕೆ ಮತ್ತು ಬೆವರು ಇವುಗಳಿಂದ ಈ ರಸವನ್ನು ಅಭಿನಯಿಸಬೇಕು ನಾಟ್ಯಕ್ಕೆ ರಸಾಭಿವ್ಯಕ್ತಿಯೇ ಮುಖ್ಯವಾದ ಫಲ, ರಸ ಸಂಬಂಧವಿಲ್ಲದ ನೃತ್ಯವೇ ಇಲ್ಲ ಆದುದರಿಂದ ನಾಟ್ಯಜ್ಞರು ರಸಾಭಿವ್ಯಕ್ತಿಗೆ ತಕ್ಕಂತೆ ನಾಟ್ಯವನ್ನು ಪ್ರದರ್ಶಿಸಲು ಪ್ರಯತ್ನಿಸಬೇಕು

ಇಲ್ಲಿಗೆ ಶ್ರೀವಿಷ್ಣುಧರ್ಮೋತ್ತರ ತೃತೀಯ ಖಂಡದಲ್ಲಿ ಮಾರ್ಕಂಡೇಯ
ವಜ್ರ ಸಂವಾದದಲ್ಲಿ ರಸವರ್ಣನವೆಂಬ ಮೂವತ್ತನೆಯ
ಅಧ್ಯಾಯ ಮುಗಿದಿದೆ



॥ ಓಂ ॥

॥ ಶ್ರೀ ಹಯಗ್ರೀವಾಯ ನಮಃ ॥

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

॥ ಏಕತ್ರಿಂಶತ್ತಮೋಽಧ್ಯಾಯಃ ॥

॥ ಮಾರ್ಕಂಡೇಯ ಉವಾಚ ॥

ಭಾವಾಧ್ಯಾಯಮತೋ ವಕ್ಷ್ಯೇ ತನ್ಮೇ ನಿಗದತಃ ಶೃಣು ।
ಹಾಸಾದ್ಯಾಃ ಕಥಿತಾ ಭಾವಾಃ ಪಂಚಾಶತ್ತ್ರ್ಯೇಕವರ್ಜಿತಾಃ ॥ ೧ ॥

ಪರಚೇಷ್ಟಾನುಕರಣಾದ್ಧ್ಯಾಸ್ಯಃ ಸಮುಪಜಾಯತೇ ।
ಸ್ಮಿತಹಾಸಾಭಿಹಸಿತೈರಭಿನೇಯಸ್ಯ ಪಂಡಿತೈಃ ॥ ೨ ॥

ಇಷ್ಟಾರ್ಥವಿಷಯಪ್ರಾಪ್ತ್ಯಾ ರತಿರಿತ್ಯುಪಜಾಯತೇ ।
ಸೌಮ್ಯತ್ವಾದಭಿನೇಯಾ ಸಾ ವಾಙ್ಮಾಧುರ್ಯಾದಿಭಿಸ್ತಥಾ ॥ ೩ ॥

---

### ಮೂವತ್ತೊಂದನೆಯ ಅಧ್ಯಾಯ.

೧-೩ ಮಾರ್ಕಂಡೇಯರು ಹೇಳುತ್ತಾರೆ ಇನ್ನು ಮುಂದೆ ಭಾವಾಧ್ಯಾಯವನ್ನು ಪ್ರಾರಂಭಿಸುತ್ತೇನೆ ಅದನ್ನೂ ಕೇಳು ಹಾಸ್ಯವೇ ಮೊದಲಾದ ಭಾವಗಳು ನಲವತ್ತೊಂಭತ್ತು ಇರುತ್ತವೆ ಮತ್ತೊಬ್ಬರ ಚೇಷ್ಟಾದಿಗಳನ್ನು ಅನುಕರಿಸುವಾಗ ಹಾಸ್ಯವೆಂಬ ಯಾವ ಚಿತ್ತವೃತ್ತಿಯುಂಟಾಗುತ್ತದೆಯೋ ಅದನ್ನು ಸ್ಮಿತ, ಹಾಸ, ಹಸಿತ ಎಂಬ ನಗುವಿನ ವಿಶೇಷಗಳಿಂದ ಪಂಡಿತರು ಅಭಿನಯಿಸಬೇಕು ಕಾಮಿನಿಯೇ ಮೊದಲಾದ ಇಷ್ಟವಸ್ತುವಿನ ಪ್ರಾಪ್ತಿಯುಂಟಾದಾಗ ಉದ್ಭವಿಸುವ ಪ್ರೀತಿರೂಪವಾದ ಚಿತ್ತವೃತ್ತಿಯು ರತಿ ಎನಿಸುತ್ತದೆ ಇದು ಸೌಮ್ಯವಾಗಿರುವುದರಿಂದ ಮಧುರವಾದ ವಾಕ್ಕುಗಳಿಂದ ಇದನ್ನು ಅಭಿನಯಿಸಬೇಕು

ಇಷ್ಟಬಂಧುವಿಯೋಗೇನ ಧನನಾಶೇನ ಪಾರ್ಥಿವ ।
ಶೋಕೋ ಭವತಿ ತಸ್ಯ ಸ್ಯಾದ್ರುದಿತಾಭಿನಯಕ್ರಿಯಾ ॥ ೪ ॥

ಕ್ರೋಧಃ ಚತುಃಪ್ರಕಾರಶ್ಚ ಕರ್ತವ್ಯೋ ನಾಟ್ಯಯೋಕ್ತೃಭಿಃ ।
ರಿಪುಜೋ ಗುರುಜಶ್ಚೈವ ಭೃತ್ಯಜಃ ಪ್ರಣಯೋದ್ಭವಃ । ೫ ॥

ನಿಯಂತ್ರಿತಃ ಸಶತ್ರೂಣಾಂ ಗುರೂಣಾಂ ಸ್ವೇದಸಂಯುತಃ ।
ಭೃತ್ಯಾನಾಂ ಚ ದಯಾಲುಃ ಸ್ಯಾತ್ ಸ್ತ್ರೀಣಾಂ ಚ ಪ್ರಣಯೋದ್ಭವಃ ॥ ೬ ॥

ಕರ್ಮಾತಿಶಯನಿರ್ವೃತ್ತೋ ವಿಸ್ಮಯೋ ಹರ್ಷಸಂಭವಃ ।
ಸಿದ್ಧಿಸ್ಥಾನೇ ತ್ವಸೌ ಸಾಧ್ಯೋ ರೋಮಾಂಚಹಸನಾದಿಭಿಃ ॥ ೭ ॥

ಅಸೌ ಮೋಹಾಭಿನಿವೃತ್ತೋ ವ್ಯವಸಾಯನಯಾತ್ಮಕಃ ।
ಉತ್ಸಾಹಸ್ತ್ವಭಿನೇಯಃ ಸ್ಯಾದಪ್ರಮಾದಕ್ರಿಯಾದಿಭಿಃ ॥ ೮ ॥

---

೪–೬ ಶೋಕವೆಂಬುದು ಇಷ್ಟರ ಮತ್ತು ಬಂಧುಗಳ ವಿಯೋಗದಿಂದಲೂ, ಧನ ನಾಶದಿಂದಲೂ, ಉಂಟಾಗುತ್ತದೆ ರೋದನಾದಿಗಳಿಂದ ಇದು ಅಭಿನಯಿಸಲ್ಪಡತಕ್ಕದ್ದು ಕ್ರೋಧವನ್ನು ನಾಟ್ಯಜ್ಞರು ನಾಲ್ಕು ವಿಧವನ್ನಾಗಿ ಅಭಿನಯಿಸಬೇಕಾಗುತ್ತದೆ ಶತ್ರುಗಳಿಂದ ಮತ್ತು ಗುರುವಿನಿಂದ, ಭೃತ್ಯರಿಂದ ಮತ್ತು ಪ್ರಣಯದಿಂದ ಉಂಟಾಗುವ ನಾಲ್ಕು ಭೇದಗಳನ್ನೂ ಗಮನಿಸಬೇಕು ಬಂಧಿಸಲ್ಪಟ್ಟವನಿಗೆ ಶತ್ರುಗಳ ವಿಷಯದಲ್ಲಿ ತಡೆಇಲ್ಲದೆಯೂ, ಧಿಕ್ಕರಿಸಿದ ಗುರುವಿನ ವಿಷಯದಲ್ಲಿ ಬೆವರಿನಿಂದ ಕೂಡಿಯೂ, ಅಪರಾಧಿಗಳಾದ ಭೃತ್ಯರ ವಿಷಯದಲ್ಲಿ ಸ್ವಲ್ಪ ದಯೆಯಿಂದ ಕೂಡಿಯೂ, ಕುಪಿತರಾದ ಸ್ತ್ರೀಯರ ವಿಷಯದಲ್ಲಿ ಪ್ರಣಯದಿಂದಲೂ ಈ ಕ್ರೋಧವು ಉದ್ಭವಿಸುತ್ತದೆ

೭–೮ ಲೋಕಾತಿಶಯವಾದ ಕಾರ್ಯವು ನಡೆದಾಗ ಹರ್ಷಾತಿಶಯದಿಂದ ವಿಸ್ಮಯವೆಂಬ ಭಾವವುಂಟಾಗುತ್ತದೆ ಮಂತ್ರಾದಿಗಳ ಸಿದ್ಧಿಯು ಉಂಟಾದಾಗ ಇದು ರೋಮಾಂಚ ಮತ್ತು ಹಾಸಾದಿಗಳಿಂದ ಅಭಿನಯಿಸಲ್ಪಡತಕ್ಕದ್ದಾಗುತ್ತದೆ ಇದು ಅಜ್ಞಾನದಿಂದ ಉಂಟಾದಲ್ಲಿ ಕಾರ್ಯವ್ಯಾಪೃತಿಯಿಂದ ಅಭಿನಯಿಸತಕ್ಕುದಾಗುತ್ತದೆ. ಉತ್ಸಾಹವೆಂಬ ಭಾವವು ಜಾಗರೂಕತೆಯಿಂದ ಕೂಡಿದ ಕ್ರಿಯೆಗಳಿಂದ ಅಭಿನಯಿಸ

ಸ್ವಾಪರಾಧಸಮುದ್ಭೂತಂ ಭಯಂ ನಾಮೇಹ ಜಾಯತೇ ।
ವೇಪಥುತ್ರಾಸಪತನೈಃ ಅಭಿನೇಯಸ್ಸಸಂಭ್ರಮೈಃ　　॥ ೯ ॥

ಬೀಭತ್ಸದರ್ಶನಾದ್ಯೈಸ್ತು ಜುಗುಪ್ಸಾ ನಾಮ ಜಾಯತೇ　　॥ ೧೦ ॥

ಉದ್ವೇಜನೈಸ್ಸಹೃಲ್ಲೇಖೈರಭಿನೇಯೋ ವಿಕೂಣನೈಃ ।
ದಾರಿದ್ರ್ಯೇಷ್ಟವಿನಾಶೇ ಚ ನಿರ್ವೇದೋ ನಾಮ ಜಾಯತೇ　　॥ ೧೧ ॥

ಪರಸ್ಪರವಿನಿಶ್ವಾಸೈಃ ತಸ್ಯಾಭಿನಯನಕ್ರಿಯಾ ।
ವಾನ್ತೇ ವಿರಕ್ತೇ ಶ್ರಾಂತೇ ಚ ಗ್ಲಾನಿಃ ಸ್ಯಾತ್ತಪಸಾ ತಥಾ　　॥ ೧೨ ॥

ಮಂದಾಕ್ರಮಣಕಂಪಾದ್ಯೈಃ ಕ್ಷಾಮತ್ವೇನ ಚ ದರ್ಶಯೇತ್　　॥ ೧೩ ॥

---

ಲ್ಪಡತಕ್ಕದ್ದು　ತನ್ನ ಅಪರಾಧದಿಂದುಂಟಾದ ಚಿತ್ತವೃತ್ತಿಯು ಭಯವೆಂದು ಹೇಳ ಲ್ಪಡುತ್ತದೆ　ಇದು ಭಯಾನಕರಸದ ಸ್ಥಾಯಿಭಾವ, ಇದನ್ನು ಸಂಭ್ರಮದಿಂದ ಕೂಡಿದ ನಡುಕ, ತ್ರಾಸ, ಪತನ ಇತ್ಯಾದಿಗಳಿಂದ ಅಭಿನಯಿಸಬೇಕು

೧೦-೧೩　ಅಸಹನೀಯವಾದ ಹೀನ ವಸ್ತುಗಳ ದರ್ಶನದಿಂದ ಜುಗುಪ್ಸೆ ಎಂಬ ಚಿತ್ತವೃತ್ತಿಯುಂಟಾಗುತ್ತದೆ　ಇದನ್ನು ಉದ್ವೇಗದಿಂದಲೂ, ಹೃದಯಸ್ಪರ್ಶ ದಿಂದಲೂ, ಅಸಹ್ಯತೆಯಿಂದುಂಟಾದ ಮುಖಪರಿವರ್ತನದಿಂದಲೂ ಅಭಿನಯಿಸಬೇಕು ದಾರಿದ್ರ್ಯ ಮತ್ತು ಇಷ್ಟವಸ್ತುವಿನ ನಾಶ ಇವುಗಳಿಂದ ನಿರ್ವೇದವೆಂಬ ಭಾವವು ಉದ್ಭವಿಸುತ್ತದೆ　ಸಾಂದ್ರವಾದ ನಿಟ್ಟುಸುರುಗಳಿಂದ ಇದನ್ನು ಅಭಿನಯಿಸಬೇಕು ವಾಂತಿಯಿಂದಲೂ, ವಿರಾಗ ಮತ್ತು ಶ್ರಮದಿಂದಲೂ, ತಪಸ್ಸಿನಿಂದಲೂ ಸಹ ಗ್ಲಾನಿ ಯುಂಟಾಗುತ್ತದೆ　ಮಂದಗಮನ, ಕಂಪ, ಕೃಶತೆ ಇವುಗಳಿಂದ ಇದನ್ನು ಅಭಿನಯಿಸಬೇಕು

ಚೌರ್ಯಾದಿಭಿಃ ಗೃಹೀತಸ್ಯ ಶಂಕಾನಾಮೇಹ ಜಾಯತೇ ।
ಆಕಾರಾವರಣಂ ತಸ್ಯಾಃ ಕಾರ್ಯಂ ದಿಗವಲೋಕನಂ ।
ಪರಾಪರಾಧಸಂಭೂತಾ ಅಸೂಯಾ ನಾಮ ಜಾಯತೇ ॥ ೧೪ ॥

ಗುಣನಾಶನವಿದ್ವೇಷ್ಯೈಃ ಸಾಭಿನೇಯಾ ತಥಾ ಬುಧೈಃ ।
ಮದ್ಯೋಪಯೋಗೇನ ಮದೋ ಜಾಯತೇ ಚ ತ್ರಿಭಿಸ್ತಥಾ ॥ ೧೫ ॥

ಉತ್ತಮಾಧಮಮಧ್ಯತ್ವಾತ್ಪುರುಷಾಣಾಂ ಸ್ವಭಾವತಃ ।
ದೃಗ್ಭ್ರಮೇಣೋತ್ತಮಾನಾಂ ಸ್ಯಾನ್ಮಧ್ಯಾನಾಂ ವಾಕ್ಪ್ರಲಾಪತಃ ॥ ೧೬ ॥

ಅಧಮಾನಾಂ ಚ ಪತನೈರಸಂಬದ್ಧಪರಿಕ್ರಮೈಃ ।
ಆಯಾಸೇನಾಧಮಾನಾಂ ಚ ಶ್ರಮೋನಾಮೇಹ ಜಾಯತೇ ॥ ೧೭ ॥

ಗಾತ್ರಮರ್ದನನಿಶ್ವಾಸಜೃಂಭಣೈಸ್ತತ್ಪ್ರಯೋಜಯೇತ್ ।
ಗರ್ವೇಣ ಖೇದಾದ್ರಾಗೇಣ ಹ್ಯಾಲಸ್ಯಂ ಸ್ಯಾತ್ಸ್ವಭಾವತಃ ॥ ೧೮ ॥

---

೧೪-೧೫ ಕಳ್ಳತನವೇ ಮೊದಲಾದ ಅಕೃತ್ಯ ಹೊಂದಿರುವವನಿಗೆ ಶಂಕೆ ಎಂಬ ಚಿತ್ತವೃತ್ತಿಯುಂಟಾಗುತ್ತದೆ ಇದನ್ನು ಆಕಾರವನ್ನು ಮರೆಮಾಚುವುದರಿಂದಲೂ, ದಿಕ್ಕುಗಳನ್ನು ನೋಡುವುದರಿಂದಲೂ ಅಭಿನಯಿಸಬೇಕು. ಮತ್ತೊಬ್ಬರ ಅಪರಾಧದಿಂದ ಅಸೂಯೆಯೆಂಬ ಚಿತ್ತವೃತ್ತಿಯುಂಟಾಗುತ್ತದೆ ಗುಣನಾಶದಿಂದಲೂ ದ್ವೇಷದಿಂದಲೂ ಇದನ್ನು ಪಂಡಿತರು ಅಭಿನಯಿಸಬೇಕು ಮದ್ಯಾದಿ ಮಾದಕ ವಸ್ತುಗಳ ಸೇವನದಿಂದ ಮದವುಂಟಾಗುತ್ತದ ಉತ್ತಮಾಧಮ ಮಧ್ಯಮರೆಂಬ ಸ್ವಾಭಾವಿಕ ಪುರುಷಭೇದದಿಂದ ಅದೂ ಮೂರು ವಿಧವಾಗುತ್ತದೆ

೧೬-೧೮ ಈ ಮದವನ್ನು ಉತ್ತಮ ಪ್ರಕೃತಿಗಳಿಗೆ ಕಣ್ಣುಗಳ ಭ್ರಮಣದಿಂದಲೂ, ಮಧ್ಯಮ ಪ್ರಕೃತಿಗಳಿಗೆ ಪ್ರಲಾಪಗಳಿಂದಲೂ, ಅಧಮರಿಗೆ ನೆಲಕ್ಕೆ ಬೀಳುವುದು ಹಾಗೂ ಕುಟಿಲಗಮನ ಇವುಗಳಿಂದಲೂ ಅಭಿನಯಿಸಬೇಕಾಗುತ್ತದೆ ಅಧಮ ಪ್ರಕೃತಿಗಳಿಗೆ ಆಯಾಸದಿಂದ ಶ್ರಮವೆಂಬ ಭಾವವುಂಟಾಗುತ್ತದೆ ಇದನ್ನು ಮೈಮುರಿಯುವಿಕೆ, ನಿಶ್ವಾಸ, ಆಕಳಿಕೆ ಇವುಗಳಿಂದ ಅಭಿನಯಿಸಬೇಕು ಗರ್ವದಿಂದಲೂ, ಬೇಸರದಿಂದಲೂ, ರಾಗಾತಿಶಯದಿಂದಲೂ ಆಲಸ್ಯವೆಂಬ ಭಾವವುಂಟಾ

ತಸ್ಯ ಪ್ರಯೋಗಃ ಕರ್ತವ್ಯಃ ಶಯನಾಸನಸೇವನಾತ್ ।
ದೌರ್ಗತ್ಯೇನ ಮನಸ್ತಾಪಾದ್ದೈನ್ಯಂ ನಾಮೇಹ ಜಾಯತೇ　　|| ೧೯ ||

ಹೃದಯಸ್ಯ ವಿತರ್ಕೇಣ ತಸ್ಯ ತ್ವಭಿನಯೋ ಭವೇತ್ ।
ಅಸ್ಥಾನೇ ತಸ್ಕರಾನ್ ದೃಷ್ಟ್ವಾ ತ್ರಾಸನೈರ್ವಿವಿಧೈಸ್ತಥಾ　　|| ೨೦ ||

ತತ್ಪ್ರತೀಕಾರಶೂನ್ಯಸ್ಯ ಮೋಹಃ ಸಮುಪಜಾಯತೇ ।
ವ್ಯಸನೇನಾಭಿಘಾತೇನ ವೈರಾನುಸ್ಮರಣೇನ ಚ　　|| ೨೧ ||

ಸರ್ವೇಂದ್ರಿಯಾಣಾಂ ಮೋಹೇನ ಸ ತು ಕಾರ್ಯಃ ಪ್ರಯೋಕ್ತೃಭಿಃ ।
ಸ್ಮರಣಾತ್ಪೂರ್ವವೃತ್ತಾನಾಂ ಸ್ಮೃತಿರ್ನಾಮೇಹ ಜಾಯತೇ　　|| ೨೨ ||

ಭೃಶಮುತ್ಕ್ಷೇಪಣಾತ್ತಸ್ಯಾಃ ಪ್ರಯೋಗಃ ಕಾರ್ಯಲೋಲುಪಾತ್ ।
ಲೋಕವೃತ್ತಾಂತವಿಜ್ಞಾನಾತ್ ವೃತ್ತಿರ್ನಾಮೇಹ ಜಾಯತೇ　　|| ೨೩ ||

---

ಗುತ್ತದೆ ಅದರ ಅಭಿನಯವನ್ನು ವಿಶ್ರಾಂತಿಗೆ ಸಾಧಕವಾದ ಶಯನ, ಆಸನ ಇವುಗಳ ಸೇವನದಿಂದ ಪ್ರದರ್ಶಿಸಬೇಕು ದಾರಿದ್ರ್ಯದಿಂದಲೂ ಮನಸ್ತಾಪದಿಂದಲೂ ದೈನ್ಯವೆಂಬ ಚಿತ್ತವೃತ್ತಿಯುಂಟಾಗುತ್ತದೆ

೨೦-೨೨ ಮನಸ್ಸಿನ ತರ್ಕವಿತರ್ಕಗಳಿಂದ ಇದನ್ನು ಅಭಿನಯಿಸಬೇಕು ಅಸಮಯದಲ್ಲಿ ಕಳ್ಳರನ್ನು ನೋಡಿ ಹಾಗೂ ನಾನಾವಿಧವಾದ ಹೆದರಿಕೆಗಳಿಂದ ಕೂಡಿ ಪ್ರತೀಕಾರ ತಿಳಿಯದಿರುವಾಗ ಮೋಹ ಉಂಟಾಗುತ್ತದೆ ಇದನ್ನು ವ್ಯಸನ ದಿಂದಲೂ, ಇತರ ಅಭಿಘಾತದಿಂದಲೂ ಶತ್ರುಗಳ ವೈರವನ್ನು ಸ್ಮರಿಸುವುದರಿಂದಲೂ ಸರ್ವೇಂದ್ರಿಯಗಳ ಜಡತೆಯಿಂದಲೂ ಅಭಿನಯಿಸಬೇಕು ಹಿಂದೆ ನಡೆದ ವೃತ್ತಾಂತ ಗಳ ಸ್ಮರಣದಿಂದ ಸ್ಮೃತಿ ಎಂಬ ಮನೋವೃತ್ತಿವುಂಟಾಗುತ್ತದೆ

೨೩-೨೫ ಇದನ್ನು ಬಹುಮಟ್ಟಿಗೂ ಇತರರನ್ನು ನಿರಾಕರಿಸುವ (ಅಥವಾ ಊರ್ಧ್ವಮುಖವಾದ) ಚೇಷ್ಟೆಗಳಿಂದಲೂ, ಕಾರ್ಯಚಾಪಲ್ಯದಿಂದಲೂ ಅಭಿನಯಿಸ ಬೇಕು ಲೋಕವೃತ್ತಾಂತಗಳನ್ನು ತಿಳಿಯುವುದರಿಂದ ವೃತ್ತಿ ಎಂಬ ಭಾವವುಂಟಾ

ಪ್ರಯೋಜ್ಯೋ ಲಬ್ಧಭೋಗೇನ ಆಲಬ್ಧಸ್ಯ ವಿವರ್ಜಿತಂ ।
ಕ್ರೀಡಾನಾಮೇಹ ಭವತಿ ಚಾಪಲ್ಯಾದ್ಧರ್ಷಸಂಭವಾ ॥ ១೪ ॥

ಕ್ರೀಡನೇನ ಪ್ರಯೋಜ್ಯಾ ಸಾ ಗುರುವಾಕ್ಯಪ್ರತಿಕ್ರಮೈಃ ।
ಕೃತಾಕಾರ್ಯಸ್ಯ ರಾಜೇಂದ್ರ ವ್ರೀಡಾನಾಮೇಹ ಜಾಯತೇ ॥ ១೫ ॥

ಅಧೋಮುಖೇನ ಸಾ ಕಾರ್ಯಾ ಮೂಲೇ ಸ್ವೀಕರಣೇನ ಚ ।
ಜ್ಞೇಯಾ ಚಪಲತಾ ರಾಜನ್ನವಿಚಾರ್ಯಾ ಕ್ರಿಯಾವತಾ ॥ ១೬ ॥

ಅಯಮೇವ ಪ್ರಯೋಗಸ್ಯ ತಥೈವ ಸಮುದಾಹೃತಃ ।
ಮನೋರಥಾನಾಂ ಲಾಭೇ ತು ಹರ್ಷೋನಾಮೇಹ ಜಾಯತೇ ॥ ១೭ ॥

ಸುಖಪ್ರಸಾದರೋಮಾಂಚಪ್ರಸ್ವೇದೈರ್ದರ್ಶಯೇದ್ಬುಧಃ ।
ಸಂಭ್ರಮಾಜ್ಜಾಯತೇ ರಾಜನ್ ಆವೇಗ ಇತಿ ಸರ್ವದಾ ॥ ១೮ ॥

---

ಗುತ್ತದೆ ಆಲಸ್ಯವನ್ನು ಬಿಟ್ಟು ಲಬ್ಧ ವಸ್ತುವಿನ ಅನುಭವದಿಂದ ಇವನ್ನು ಅಭಿನಯಿಸಬೇಕು ಚಾಪಲ್ಯದಿಂದಲೂ, ಸಂತೋಷದಿಂದಲೂ ಕ್ರೀಡಾ ಎಂಬ ಭಾವವುಂಟಾಗುತ್ತದೆ ಇದನ್ನು ವಿಹಾರಗಳಿಂದಲೂ, ಗುರುಜನಗಳ ವಾಕ್ಯಕ್ಕೆ ವಿರುದ್ಧ ನೀತಿಯಿಂದಲೂ ಅಭಿನಯಿಸಬೇಕು ಅಕಾರ್ಯಮಾಡಿದಲ್ಲಿ ಆತ್ಮಾವಮಾನಕ್ಕೆ ಕಾರಣವಾದ ವ್ರೀಡಾ ಎಂಬ ಭಾವವುಂಟಾಗುತ್ತದೆ ಇದನ್ನು ಅಧೋಮುಖದಿಂದಲೂ ಅಕಾರ್ಯಕ್ಕೆ ಕಾರಣವನ್ನು ಪರಿಶೀಲಿಸುವುದರಿಂದಲೂ ಅಭಿನಯಿಸಬೇಕು

១೬–១೮ ಕಾರ್ಯದಲ್ಲಿ ಆಸಕ್ತನಾದವನಿಗೆ ವಿಚಾರಶೂನ್ಯತೆಯಿಂದ ಚಪಲತಾ ಎಂಬ ಮನೋವೃತ್ತಿಯುಂಟಾಗುತ್ತದೆ ಅವಿಚಾರ ಶೀಲತೆಯಿಂದಲೇ ಇದನ್ನು ಅಭಿನಯಿಸಬೇಕು ಮನೋರಥಗಳ ಲಾಭವುಂಟಾದಲ್ಲಿ ಹರ್ಷವೆಂಬ ಭಾವವುಂಟಾಗುತ್ತದೆ ಇವನ್ನು ಸುಖಾನುಭವ ಪ್ರಸನ್ನತೆ, ರೋಮಾಂಚ, ಬೆವರು ಇವುಗಳಿಂದ ಅಭಿನಯಿಸಬೇಕು ಸಂಭ್ರಮಾತಿಶಯದಿಂದ ಆವೇಗ (ತ್ವರೆ) ವೆಂಬ ಭಾವವು ಯಾವಾಗಲೂ ಸಹಜವಾಗಿಯೇ ಉಂಟಾಗುತ್ತದೆ.

ಆಃಶಬ್ದೈಃ ಸಹಸಾನರ್ಥಾ ದರ್ಶನೀಯಾ ಬುಧೈಸ್ತು ತೇ ।
ವಿಷಾದಸ್ಯ ಸಮುತ್ಪತ್ತಿಃ ಕಾರ್ಯನಾಶೇನ ಜಾಯತೇ ॥ ೨೯ ॥

ನಿದ್ರಾನಿಃಶ್ವಸಿತವ್ಯಾಜೈಃ ಸಾಭಿನೇಯಾ ತಥಾ ಭವೇತ್ ।
ಉತ್ಕಂಠಾಕರಣೈಃ ಸರ್ವೈಃ ಔತ್ಸುಕ್ಯಂ ನಾಮ ಜಾಯತೇ ॥ ೩೦ ॥

ಆಲಸ್ಯಗುರುಗಾತ್ರತ್ವೈಃ ಧ್ಯಾನೇನಾಭಿನಯೋಽಸ್ಯ ತತ್ ।
ರಾತ್ರಿಜಾಗರಣಾಲಸ್ಯಮದೈರ್ನಿದ್ರೇಹ ಜಾಯತೇ ॥ ೩೧ ॥

ನೇತ್ರಾಭಿಮರ್ದನಾತ್ಕಾರ್ಯಾ ಜೃಂಭಣಾ ಗಾತ್ರಗೌರವಾತ್ ।
ಅಪಸ್ಮಾರಸ್ತು ಭವತಿ ದೇವಾದೀನಾಂ ಪ್ರಕೋಪತಃ ॥ ೩೨ ॥

ನಿಃಸಂಜ್ಞತ್ವಂ ಸಮಾಧ್ಮಾನಂ ತಸ್ಯೇಹಾಭಿನಯೋ ಭವೇತ್ ।
ನಿದ್ರಾಸಮರ್ಥಂ ಸುಪ್ತತ್ವಂ ಸ್ವಪನಂ ತತ್ರ ಯೋಜಯೇತ್ ॥ ೩೩ ॥

---

೨೯-೩೧ ಆಕಸ್ಮಿಕವಾದ ಅನರ್ಥಗಳುಂಟಾದಲ್ಲಿ ಅದನ್ನು ಪಂಡಿತರು ಆಃ ಎಂಬ ಶಬ್ದದಿಂದ ಅದನ್ನು ಅಭಿನಯಿಸಿ ಪ್ರದರ್ಶಿಸಬೇಕು ಪ್ರಾರಂಭಿಸಿದ ಕಾರ್ಯವು ನಷ್ಟವಾದಲ್ಲಿ ವಿಷಾದವೆಂಬ ಭಾವವು ಉಂಟಾಗುತ್ತದೆ ಇದನ್ನು ನಿದ್ರಾ ಮತ್ತು ನಿಶ್ವಾಸ ಈ ಕಾರ್ಯಗಳಿಂದ ಅಭಿನಯಿಸಬೇಕು ಮನೋವ್ಯಥೆಗೆ ಕಾರಣವಾದ ಇತರ ಹವ್ಯಾಸಗಳಿಂದ ಔತ್ಸುಕ್ಯವೆಂಬ ಭಾವವುಂಟಾಗುತ್ತದೆ ಆಲಸ್ಯದಿಂದಲೂ ಗಾತ್ರಗೌರವದಿಂದಲೂ, ಧ್ಯಾನದಿಂದಲೂ ಇದನ್ನು ಅಭಿನಯಿಸ ಬೇಕು ರಾತ್ರಿಯ ಜಾಗರಣೆ, ಆಲಸ್ಯ, ಮದ ಇವುಗಳಿಂದ ಮನಃ ಸಂಕೋಚ ರೂಪವಾದ ನಿದ್ರಾ ಎಂಬ ಭಾವವುಂಟಾಗುತ್ತದೆ. ಇದನ್ನು, ಕಣ್ಣುಗಳನ್ನು ಉಜ್ಜುವುದರಿಂದಲೂ, ಆಕಳಿಕೆಯಿಂದಲೂ, ದೇಹದ ಗೌರವದಿಂದಲೂ ಅಭಿನಯಿಸಬೇಕು

೩೨-೩೪ ದೇವತೆಗಳ ಕೋಪಾದಿಗಳಿಂದ ಅಪಸ್ಮಾರವೆಂಬ ಭಾವವುಂಟಾಗುತ್ತದೆ ಇದರ ಅಭಿನಯವು ನಿಸ್ಸಂಜ್ಞತೆಯಿಂದಲೂ, ತಲೆಯ ಶೈಥಿಲ್ಯದಿಂದಲೂ ಉಂಟಾಗುತ್ತದೆ ನಿದ್ರೆಯಿಂದ ಕೂಡಿದ ಮನೋವೃತ್ತಿಯೇ ಸುಪ್ತವೆನಿಸುತ್ತದೆ ಇದನ್ನು ಶಯನದಿಂದ ಅಭಿನಯಿಸಬೇಕು ನಿದ್ರಾನಂತರ ಬೋಧವೆಂಬ ಭಾವವುಂಟಾಗುತ್ತದೆ ಇದನ್ನು ಆಕಳಿಸುವಿಕೆಯಿಂದ ಅಭಿನಯಿಸಬೇಕು ಹೆಚ್ಚಾದ

ನಿದ್ರೋಚ್ಛೇದಾದ್ವಿಬೋಧಸ್ತು ಜೃಂಭಣಂ ತತ್ರ ಯೋಜಯೇತ್ ।
ವಿದ್ಯಾಶೌರ್ಯಧನೈಶ್ವರ್ಯೈರಮರ್ಷೋ ನಾಮ ಜಾಯತೇ ॥ ೩೪ ॥

ಶಿರಃ ಕಂಪನೈಸ್ತಸ್ಯ ಕಾರ್ಯಸ್ತ್ವಭಿನಯೋ ಬುಧೈಃ ।
ಧಾರ್ಷ್ಟ್ಯಜೈಂಹ್ಯಾದಿಸಂಭೂತೋ ಹ್ಯವಹಿತ್ಥೋ ಭಯಾತ್ಮಕಃ ॥ ೩೫ ॥

ಸರ್ವಾಂಗಗೋಪನಾತ್ಕಾರ್ಯೋऽಭಿನಯೋ ನರ್ತನಸ್ಯ ಚ ।
ಚೌರ್ಯಾದಿಜಾತಮರ್ಧಸ್ಯ ಗ್ಲಾನಿಃ ಕಾರ್ಯಾ ಪ್ರಯೋಕ್ತೃಭಿಃ ॥ ೩೬ ॥

ವಾತಪ್ರಾಯಸ್ತಥೋನ್ಮಾದೋ ಯಥಾ ಜ್ಞೇಯೋ ವಿಯೋಗಜಃ ।
ಅಸಚ್ಚೇಷ್ಟಾಪ್ರಲಾಪೇನ ತಸ್ಯಾಭಿನಯಕಾರಣಂ ॥ ೩೭ ॥

ವ್ಯಾಧಿಭಿರ್ವಾ ಪ್ರಹಾರೈರ್ವಾ ಮರಣಂ ನಾಮ ಜಾಯತೇ ।
ಕರ್ತವ್ಯೋಽಭಿನಯಸ್ತಸ್ಯ ಮೂಢೇಂದ್ರಿಯವಿಚೇಷ್ಟನೈಃ ॥ ೩೮ ॥

---

ವಿದ್ಯೆ, ಶೌರ್ಯ, ಧನ, ಆಸ್ತಿಪಾಸ್ತಿಗಳು ಇವುಗಳಿಂದ ಅಮರ್ಷವೆಂಬ ಭಾವ ವುಂಟಾಗುತ್ತದೆ ಇದನ್ನು ಶಿರಃಕಂಪಗಳಿಂದ ಪಂಡಿತರು ಅಭಿನಯಿಸಬೇಕು ಧೃಷ್ಟತೆ ಮತ್ತು ಕೌಟಿಲ್ಯ ಇವುಗಳಿಂದ ಭಯರೂಪವಾದ ಅವಹಿತ್ಥವೆಂಬ ಭಾವ ವುಂಟಾಗುತ್ತದೆ ಇದರ ಅಭಿನಯವನ್ನು ನರ್ತನಕಾಲದಲ್ಲಿ ಅವಯವಗಳ ಗೋಪನ ದಿಂದ ಪ್ರದರ್ಶಿಸಬೇಕು

೩೬–೪೦ ಚೌರ್ಯಾದಿಗಳಿಂದ ಉಂಟಾದ ಅವಹಿತ್ಥವನ್ನು ಅರ್ಧ ದೌರ್ಬಲ್ಯದಿಂದ ಅಭಿನಯಿಸಬೇಕು ಉನ್ಮಾದವೆಂಬುದು ವಾತಪ್ರಕೋಪದಿಂದಲೂ, ವಿಯೋಗದಿಂದಲೂ ಉಂಟಾಗುತ್ತದೆ ಎಂದು ತಿಳಿಯಬೇಕು ಅಸಚ್ಚೇಷ್ಟೆ ಮತ್ತು ಅಸತ್ಪ್ರಲಾಪ ಇವುಗಳಿಂದ ಅದನ್ನು ಅಭಿನಯಿಸಬೇಕು ವ್ಯಾಧಿ ಅಥವಾ ಪ್ರಹಾರ ಇತ್ಯಾದಿಗಳಿಂದ ಮರಣವೆಂಬ ಭಾವವುಂಟಾಗುತ್ತದೆ ಇದರ ಅವಸ್ಥೆಯನ್ನು ಇಂದ್ರಿಯ ಗಳಮೌಢ್ಯ ಮತ್ತು ಚೇಷ್ಟಾ ಇತ್ಯಾದಿಗಳಿಂದ ಅಭಿನಯಿಸಬೇಕು ಭಯಂಕರವಾದ ಮಹಾಧ್ವನಿಯೇ ಮೊದಲಾದವುಗಳಿಂದ ತ್ರಾಸವೆಂಬ ಭಾವವುಂಟಾಗುತ್ತದೆ

ಮಹಾಭೈರವನಾದಾದ್ಯೈಃ ತ್ರಾಸಃ ಸಮುಪಜಾಯತೇ ।
ಸಂಕ್ಷಿಪ್ತಾಙ್ಗಪ್ರಕಂಪಾದ್ಯೈಸ್ತಸ್ಯ ತ್ವಭಿನಯೋ ಭವೇತ್ ॥ ೩೯ ॥

ವಿಚಾರಣಾರ್ಥೇ ಸಂದೇಹಃ ಕಾರ್ಯೋ ಭ್ರೂಕ್ಷೇಪಕಂಪನೈಃ ।
ಕ್ರೋಧೋಽಪರಾಧಾದ್ಭವತಿ ಕ್ರೋಧಾಭಿನಯದರ್ಶನಃ ॥ ೪೦ ॥

ಭಯೋಽಪರಾಧಜೋ ಜ್ಞೇಯೋ ದೃಗ್ಭಯಾಭಿನಯಾತ್ಮಕಃ ।
ಮನೋರಥಾಪ್ತಿಜೋ ಹರ್ಷಃ ರೋಮಾಂಚೇನ ಪ್ರದರ್ಶಯೇತ್ ॥ ೪೧ ॥

ಭೀತಃ ಕ್ರೋಧಶ್ಚ ಉಭಯೋ ರೋಮಾಂಚಸ್ಯ ಸಮುದ್ಭವಃ ।
ಸ್ವರಭೇದೋ ಭಯಾದ್ರೌಕ್ಷ್ಯಾತ್ಸ್ವರಭೇದೇನ ದರ್ಶಯೇತ್ ॥ ೪೨ ॥

ಶೋಕಾನಂದಸಮುದ್ಭೂತಮಶ್ರುಸ್ಯಾದ್ರೋದನೇನ ತು ।
ವರ್ಣಾಂತರತ್ವಾದ್ವಿಜ್ಞೇಯಂ ವೈವರ್ಣ್ಯಂ ನಾಟ್ಯಯೋಕ್ತೃಭಿಃ ॥ ೪೩ ॥

---

ಅವಯವಗಳ ಸಂಕೋಚ ಮತ್ತು ನಡುಕ ಇತ್ಯಾದಿಗಳಿಂದ ಇದನ್ನು ಅಭಿನಯಿಸಬೇಕು ವಿಚಾರಮಾಡತಕ್ಕ ವಿಷಯದಲ್ಲಿ ಉಂಟಾಗುವ ಸಂದೇಹವೆಂಬ ಭಾವವನ್ನು ಹುಬ್ಬುಗಳ ಚಲನದಿಂದಲೂ, ಕಂಪದಿಂದಲೂ ಅಭಿನಯಿಸಬೇಕು ಇತರರು ಮಾಡಿದ ಅಪರಾಧಗಳಿಂದ ಕ್ರೋಧವೆಂಬ ಭಾವವುಂಟಾಗುತ್ತದೆ ಇದನ್ನು ಕೋಪದಿಂದಲೇ ಅಭಿನಯಿಸಬೇಕು

೪೧-೪೪ ಇತರರ ಅಪರಾಧದಿಂದಲೂ ಭಯವುಂಟಾಗುತ್ತದೆ. ಇದು ಆ ಭಯಕ್ಕೆ ತಕ್ಕ ನೇತ್ರಭಯದಿಂದ ಅಭಿನಯಿಸತಕ್ಕದ್ದು ಮನೋರಥಸಿದ್ಧಿಯಿಂದುಂಟಾದ ಹರ್ಷವೆಂಬ ಭಾವವನ್ನು ರೋಮಾಂಚದಿಂದ ಪ್ರದರ್ಶಿಸಬೇಕು ಭಯ,ಕ್ರೋಧ ಇವೆರಡೂ ರೋಮಾಂಚಕ್ಕೆ ಕಾರಣವಾಗುತ್ತವೆ ಬಹಳ ರೂಕ್ಷವಾದ ಭಯದಿಂದ ಸ್ವರ ವಿಕಾರವುಂಟಾಗುತ್ತದೆ ಇದನ್ನೂ ಸಹ (ಆಯಾಯ) ಸ್ವರಭೇದದಿಂದಲೇ ಪ್ರದರ್ಶಿಸಬೇಕು ದುಃಖದಿಂದಲೂ, ಸಂತೋಷದಿಂದಲೂ. ರೋದನದಿಂದಲೂ ಸಹ ಕಣ್ಣೀರು ಉಂಟಾಗುತ್ತದೆ ವೈವರ್ಣ್ಯವೆಂಬ ಭಾವವನ್ನು ಬಣ್ಣ ಕುಂದಿರುವುದರಿಂದ ನಾಟ್ಯಜ್ಞರು ತಿಳಿಯಬೇಕು ಈ ವೈವರ್ಣ್ಯವನ್ನು ತಿಳಿಯಲು

ವೈವರ್ಣ್ಯಂ ನಾಭಿನೇತವ್ಯಂ ಪ್ರಯತ್ನಾತ್ತದ್ಧಿ ದುಷ್ಕರಂ ।
ಗ್ಲಾನಿಃ ಶಂಕಾಭ್ಯಸೂಯಾ ಚ ಶ್ರಮಶ್ಚಪಲತಾ ತಥಾ ॥ ೪೪ ॥

~~ರೋಮಾಂಚಹರ್ಷೌ ನಿದ್ರಾ ಚ ಉನ್ಮಾದೋ ಮದ ಏವ ಚ~~ ।
ಸ್ವೇದಶ್ಚೈವಾವಹಿತ್ಥಶ್ಚ ಭಾವಾ ಹಾಸ್ಯರಸೇ ಸ್ಮೃತಾಃ ॥ ೪೫ ॥

ಆಲಸ್ಯೌಗ್ರ್ಯಜುಗುಪ್ಸಾಭಿರ್ಭಾವಾ ಹಿ ಪರಿವರ್ಜಿತಾಃ ।
ಉದ್ಭಾವಯಂತಿ ಶೃಂಗಾರಂ ರಸಮಾಸ್ವಾದ್ಯಸಂಜ್ಞಕಂ ॥ ೪೬ ॥

ದೈವಸ್ಯೈವ ಚ ಚಿಂತಾ ಚ ದೈನ್ಯಗ್ಲಾನ್ಯಶ್ರುಪಾತನಂ ।
ಜಡತಾ ಮರಣಂ ಚೈವ ವ್ಯಾಧಿಶ್ಚ ಕರುಣಾರಸೇ ॥ ೪೭ ॥

ಅಸಮ್ಮೋಹಸ್ತಥೋನ್ಮಾದೋ ವಿಷಾದೋ ಮದ ಏವ ಚ ।
ಮೃತ್ಯುರ್ವ್ಯಾಧಿರ್ಭಯಂ ಚೈವ ಭಾವಾ ಬೀಭತ್ಸಸಂಶ್ರಯಾಃ ॥ ೪೮ ॥

ಸ್ತಂಭಃ ಸ್ವೇದಶ್ಚ ರೋಮಾಂಚೋ ಜುಗುಪ್ಸಾ ವಿಸ್ಮಯಸ್ತಥಾ ।
ಆವೇಗೋ ಜಡತಾ ಹರ್ಷೋऽಸೂಯಾ ಚೈವಾದ್ಭುತೇ ರಸೇ ॥ ೪೯ ॥

ಸಾಧ್ಯವೇ ಇಲ್ಲ ಇದು ಪ್ರಯತ್ನಶಾಲಿಗಳಿಗೂ ದುಷ್ಕರ, ಗ್ಲಾನಿ, ಶಂಕಾ, ಅಭ್ಯಸೂಯಾ, ಶ್ರಮ, ಚಪಲತಾ ಮತ್ತು

೪೫-೪೭ ರೋಮಾಂಚ, ಹರ್ಷ, ನಿದ್ರಾ, ಉನ್ಮಾದ, ಮದ, ಸ್ವೇದ, ಅವಹಿತ್ಥ ಈ ಭಾವಗಳೆಲ್ಲವೂ ಯಥಾ ಸಂಭವದಿಂದ ಹಾಸ್ಯರಸಕ್ಕೆ ಅನುಕೂಲಿಸುತ್ತವೆ ಆಲಸ್ಯ, ಉಗ್ರತಾ, ಜುಗುಪ್ಸಾ ಇವುಗಳನ್ನು ಬಿಟ್ಟು ಉಳಿದ ಎಲ್ಲಾ ಭಾವಗಳೂ ಶೃಂಗಾರರಸದ ಅಭಿವ್ಯಕ್ತಿಗೂ, ಆಸ್ವಾದಾತಿಶಯಕ್ಕೂ ಸಹಕಾರಿಗಳಾಗುತ್ತವೆ ಯಾವಾಗಲೂ ದೈವಚಿಂತೆ, ದೈನ್ಯ, ಗ್ಲಾನಿ, ಕಣ್ಣೀರು, ಜಡತ್ವ, ಮರಣ, ವ್ಯಾಧಿ ಇವುಗಳು ಕರುಣರಸಕ್ಕೆ ಸಹಕಾರಿಗಳಾಗುತ್ತವೆ.

೪೮-೫೧ ಅಸಮ್ಮೋಹ, ಉನ್ಮಾದ, ವಿಷಾದ, ಮದ, ಮೃತ್ಯು, ವ್ಯಾಧಿ, ಭಯ ಈ ಭಾವಗಳು ಬೀಭತ್ಸರಸಕ್ಕೆ ಸಹಕಾರಿಗಳಾಗುತ್ತವೆ ಸ್ತಂಭ, ಸ್ವೇದ, ರೋಮಾಂಚ, ಜುಗುಪ್ಸಾ, ವಿಸ್ಮಯ, ಆವೇಗ, ಜಡತಾ, ಹರ್ಷ, ಅಸೂಯಾ ಇವು

ಸ್ವೇದಶ್ಚ ವೇಪಥುಶ್ಚೈವ ರೋಮಾಂಚೋ ಗದ್ಗದಸ್ತಥಾ ।
ಮತಿಶ್ಚೈವ ತಥೋಗ್ರತ್ವಮಮರ್ಷೋ ಮದ ಏವ ಚ　　॥ ೩೦ ॥

ರೋಮಾಂಚಃ ಸ್ವರಭೇದಶ್ಚ ಕ್ರೋಧೋಽಸೂಯಾ ಧೃತಿಸ್ತಥಾ ।
ಗರ್ವಶ್ಚೈವ ವಿತರ್ಕಶ್ಚ ವೀರೇ ಭಾವಾ ಭವನ್ತಿ ವೈ　　॥ ೩೧ ॥

ಯೇ ಚಾನ್ಯೇ ಸಾತ್ತ್ವಿಕಾ ಭಾವಾ ನಾನಾಭಿನಯಯೋನಿಜಾಃ ।
ರಸೇಷ್ವೇತೇಷು ತೇ ಸರ್ವೇ ವಿಜ್ಞೇಯಾ ನಾಟ್ಯಕೋವಿದೈಃ　　॥ ೩೨ ॥

ಬಹೂನಾಂ ಸಮವೇತಾನಾಂ ರೂಪಂ ಯಸ್ಯ ಭವೇದ್ಬಹು ।
ಸ ಮಂತವ್ಯೋ ರಸಃ ಸ್ಥಾಯೀ ಶೇಷಾಃ ಸಂಚಾರಿಣಃ ಸ್ಮೃತಾಃ　　॥ ೩೩ ॥

ಶೃಂಗಾರಂ ತ್ರಿವಿಧಂ ವಿಂದ್ಯಾದ್ವಾ ನೇಪಥ್ಯಕ್ರಿಯಾತ್ಮಕಂ ।
ಅಂಗನೇಪಥ್ಯಭಾವಶ್ಚ ಹಾಸ್ಯರೌದ್ರೌ ಪ್ರಕೀರ್ತಿತಾ　　॥ ೩೪ ॥

ಧರ್ಮಾರ್ಥಬಂಧುಘಾತೇನ ಕರುಣಸ್ತ್ರಿವಿಧಃ ಸ್ಮೃತಃ ।
ಯುದ್ಧವೀರಂ ದಯಾವೀರಂ ದಾನವೀರಂ ತಥೈವ ಚ　　॥ ೩೫ ॥

---

ಅದ್ಭುತರಸಕ್ಕೆ ಸಹಕಾರಿಗಳಾಗುತ್ತವೆ ಸ್ವೇದ, ವೇಪಥು, ರೋಮಾಂಚ, ಗದ್ಗದ ಸ್ವರ, ಮತಿ, ಉಗ್ರತೆ, ಅಮರ್ಷ, ಮದ, ಸ್ವರಭೇದ, ಕ್ರೋಧ, ಅಸೂಯಾ, ಧೃತಿ, ಗರ್ವ, ವಿತರ್ಕ ಈ ಭಾವಗಳೆಲ್ಲವೂ ವೀರರಸದಲ್ಲಿ ಉಂಟಾಗುತ್ತವೆ

೩೨–೩೫ ಇವಲ್ಲದೆ ನಾನಾವಿಧವಾದ ಅಭಿನಯಗಳಿಂದ ವ್ಯಕ್ತವಾಗುವ ಇತರ ಸಾತ್ತ್ವಿಕಭಾವಗಳೂ ಈ ರಸಗಳಲ್ಲಿ ಸಹಕಾರಿಗಳಾಗುತ್ತವೆ ಎಂಬುದನ್ನು ನಾಟ್ಯಜ್ಞರು ತಿಳಿಯಬೇಕು ಎಲ್ಲಾ ಭಾವಗಳೂ ಒಂದೆಡೆಯಲ್ಲಿ ಸೇರಿದಲ್ಲಿ ಯಾವ ಭಾವದ ಸ್ವರೂಪವು ಸ್ವಸಾಮಗ್ರಿಯಿಂದ ಹೆಚ್ಚಿನ ಪರಿಪೋಷ ಹೊಂದುತ್ತದೆಯೋ ಅದೇ ರಸಕ್ಕೆ ಸ್ಥಾಯಿಯಾಗುತ್ತದೆ ಇತರ ಭಾವಗಳು ಸಂಚಾರಿಗಳಾಗುತ್ತವೆ ಶೃಂಗಾರವು ಆಯಾಯ ಭೂಷಣಾದಿ ಭೇದದಿಂದ ಮೂರು ವಿಧವಾಗುತ್ತದೆ ಹಾಸ್ಯ ಮತ್ತು ರೌದ್ರರಸಗಳು ಅಂಗಗಳ ನೇಪಥ್ಯವನ್ನೇ ಅವಲಂಬಿಸುತ್ತವೆ ಧರ್ಮ, ಅರ್ಥ, ಬಂಧು ಇವುಗಳ ನಾಶದಿಂದ ಕರುಣವೂ ಮೂರು ವಿಧವಾಗುತ್ತದೆ ವೀರ ರಸವೂ ಸಹ ಯುದ್ಧವೀರ, ದಾನವೀರ, ದಯಾವೀರ ಎಂದು ಮೂರು ವಿಧವಾಗುತ್ತದೆ ಎಂದು ಅಭಿಜ್ಞರು ಹೇಳುತ್ತಾರೆ

ರಸಂ ವೀರಮಪಿ ಪ್ರಾಹುಃ ತಜ್ಞಾಃ ತ್ರಿವಿಧಮೇವ ಚ ।
ವ್ಯಾಜತ್ರಾಸಾಪರಾಧೈಶ್ಚ ತ್ರಿಧಾ ವಿದ್ಯಾದ್ಭಯಾನಕಂ ॥ ೫೬ ॥

ನಹ್ಯೇಕರಸಜಂ ಕಾವ್ಯಂ ಕಿಂಚಿದಸ್ತಿ ಪ್ರಯೋಗಜಂ ।
ಭಾವೋ ವಾಪಿ ರಸೋ ವಾಪಿ ಪ್ರವೃತ್ತಿರ್ವೃತ್ತಿರೇವ ಚ ॥ ೫೭ ॥

ಏಕೋನಪಂಚಾಶದಿಮೇ ಸಮಗ್ರಾ
ಭಾವವ್ಯವಸ್ಥಾ ಗದಿತಾ ಮಯಾ ತೇ ।
ಯುಕ್ತ್ಯಾ ಚ ಯೋ ಯತ್ರ ರಸೇ ನಿಯುಕ್ತಾಃ
ಪ್ರೋಕ್ತಂ ತದಪ್ಯತ್ರ ನರೇಂದ್ರಚಂದ್ರ ॥ ೫೮ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಏಕೋನಪಂಚಾಶದ್ಭಾವನಿರೂಪಣೋ-
ನಾಮೈಕತ್ರಿಂಶತ್ತಮೋಽಧ್ಯಾಯಃ

---

೫೬–೫೮. ವ್ಯಾಜ, ಭಯ, ಅಪರಾಧ ಇವುಗಳಿಂದ ಭಯಾನಕರಸವೂ ಮೂರು ವಿಧವಾಗುತ್ತದೆ ಒಂದೇ ಒಂದು ರಸದಿಂದ ಕೂಡಿದ ಯಾವ ಕಾವ್ಯವೂ ಪ್ರಯೋಗಾರ್ಹವಾಗುವುದಿಲ್ಲ ಆದುದರಿಂದ ಭಾವ, ರಸ, ಪ್ರವೃತ್ತಿ ಇವುಗಳಿಂದ ಕೂಡಿದ ನಲವತ್ತೊಂಭತ್ತು ಭಾವಗಳನ್ನೂ ವ್ಯವಸ್ಥೆಯಿಂದ ಹೇಳಿರುತ್ತೇನೆ. ಈ ವಿಧವಾದ ಭಾವಗಳಲ್ಲಿ ಯಾವಯಾವರಸಗಳಲ್ಲಿ ಯಾವಯಾವ ಭಾವಗಳನ್ನು ಪ್ರಯೋಗಿಸಬೇಕೆಂಬುದನ್ನು ನಿನಗೆ ಹೇಳಿರುತ್ತೇನೆ

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯ ಖಂಡದಲ್ಲಿ ಮಾರ್ಕಂಡೇಯ
ವಜ್ರ ಸಂವಾದದಲ್ಲಿ ಏಕೋನ ಪಂಚಾಶದ್ಭಾವನಿರೂಪಣವೆಂಬ
ಮೂವತ್ತೊಂದನೆಯ ಅಧ್ಯಾಯ ಮುಗಿದಿದೆ



|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ದ್ವಾತ್ರಿಂಶತ್ತಮೋಽಧ್ಯಾಯಃ ||

|| ಮಾರ್ಕಂಡೇಯ ಉವಾಚ ||

|| ಅಥಾತೋ ಮುದ್ರಾಹಸ್ತಾನ್ವ್ಯಾಖ್ಯಾಸ್ಯಾಮಃ ||

**ಗದ್ಯ|| ಹಸ್ತಸ್ಯ ಪ್ರಸಾರಿತಾಙ್ಗುಷ್ಠಸ್ಯೋಪರಿ ಯದಾ ಕುಬ್ಜತರ್ಜನೀ ಭವತಿ ತದೋಙ್ಕಾರಃ || ಕರಮಧ್ಯಗತಾಸು ಸರ್ವಾಸ್ವಂಗುಲೀಷು ಕ್ರಮಾತ್ಕುಬ್ಜೀಕೃತಾಸ್ವಙ್ಗುಷ್ಠಾದ್ಯಾಸು ಅ, ಇ, ಉ, ಎ, ಓ|ಪ್ರಸಾರಿತಾಸು ಅ, ಇ, ಉ, ಊ, ಐ, ಔ, |ಅಂ, ಮುಕುಲಃ, ಅಃ ಮುಕಲವಿಶೇಷಃ |ಅಂಗುಷ್ಠಮೂಲಗತಯಾ ಪರಹಸ್ತತರ್ಜನ್ಯಾ ಕ್ರಮಾತ್ಕವರ್ಗಃ ||**

---

### ಮೂವತ್ತೆರಡನೆಯ ಅಧ್ಯಾಯ.

ಮಾರ್ಕಂಡೇಯರು ಹೇಳುತ್ತಾರೆ.— ಇನ್ನು ಮುಂದೆ ಮುದ್ರಾಸನ್ನಿವೇಶವುಳ್ಳ ಹಸ್ತಗಳನ್ನು ವ್ಯಾಖ್ಯಾನ ಮಾಡುತ್ತೇವೆ ಹಸ್ತದಲ್ಲಿ ಅಂಗುಷ್ಠವು ನೀಡಲ್ಪಟ್ಟಿದ್ದು ಅದರ ಮೇಲ್ಭಾಗದಲ್ಲಿ ತರ್ಜನಿಯು ಬಗ್ಗಿದ್ದಲ್ಲಿ ಅದು ಓಂಕಾರ ಮುದ್ರೆ ಎನಿಸುತ್ತದೆ ಅಂಗುಷ್ಠವೇ ಮೊದಲಾದ ಎಲ್ಲಾ ಬೆರಳುಗಳೂ ಕೈಯಿನ ಮಧ್ಯದಲ್ಲಿ ಕ್ರಮವಾಗಿ ಬಗ್ಗಿದ್ದಲ್ಲಿ ಅ, ಉ, ಏ, ಓ, ಅಕ್ಷರಗಳಿಗೆ ಸೂಚಕವಾದ ಮುದ್ರೆಯಾಗುತ್ತದೆ ಬಗ್ಗಿದ ಬೆರಳುಗಳು ಪುನಃ ಪ್ರಸರಣ ಹೊಂದಿದಲ್ಲಿ ಆ, ಈ, ಊ, ಐ, ಔ, ಇವಕ್ಕೆ ಸೂಚಕವಾದ ಮುದ್ರೆಯಾಗುತ್ತದೆ. ಮುಕುಲಮುದ್ರೆಯು ಅಂ, ಎಂಬುದಕ್ಕೆ ಸೂಚಕವಾಗಿಯೂ, ಮುಕುಲವಿಶೇಷವು ಅಃ ಎಂಬುದಕ್ಕೆ ಸೂಚಕವಾಗಿಯೂ ಆಗುತ್ತವೆ ಮತ್ತೊಂದು ಹಸ್ತದ ತರ್ಜನಿಯು ಅಂಗುಷ್ಠದ ಮೂಲವನ್ನು ಹೊಂದಿದ್ದಲ್ಲಿ ಕವರ್ಗಮುದ್ರೆಯಾಗುತ್ತದೆ

**ಸರ್ವಾಧಃಪರಂ ರೇಖಾಗತಯಾ ತವರ್ಗಃ। ತದುಪರಿ ಬವಶತಯ್ಯಃ ಪವರ್ಗಃ। ತರ್ಜನ್ಯಾದ್ಯಾಸು ಪ್ರಥಮಪರ್ವಗತಯಾ ಪವರ್ಗಃ॥ ಅಗ್ರೇಷು ಶವರ್ಗಃ ಮಧ್ಯಮಾನಖಸಂಸ್ಪರ್ಶೇ ರಕ್ಷ ಇತಿ। ಅ ವಾಸುದೇವಃ। ಆ ಸಂಕರ್ಷಣಃ। ಅಂ ಪ್ರದ್ಯುಮ್ನಃ। ಅಃ ಅನಿರುದ್ಧಃ। ಅಂಜಲಿಪುರುಷಃ ಕರಯೋಃ ಪರಸ್ಪರಪೃಷ್ಠಲಗ್ನಯೋಃ। ಕನೀಯಸ್ಯಾ ಕನೀಯಸೀ ಚೇತಿ, ತರ್ಜನ್ಯಾ ತರ್ಜನೀ ಅಂಗುಷ್ಠೇನಾಂಗುಷ್ಠ ಇತಿ ತಾರ್ಕ್ಷ್ಯಮುದ್ರಾ॥**

**ಪತಾಕಃ ಕುಂಚಿತಾಗ್ರಸ್ತಾಲಃ, ತಿರ್ಯಕ್ಪ್ರಸಾರಿತಾಂಗುಷ್ಠೋ ಮಕರಃ। ಕುಂಚಿತಾಂಗುಲಿರರ್ಧಚಂದ್ರಃ। ದೃಶ್ಯಶಿಖರೌ ಕನೀಯಸ್ಯಂಗುಲ್ಯಗ್ರಲಗ್ನೌ। ಸಂಹತಾಂಗುಷ್ಠಃ ಶಂಖಃ। ಅಃ ಕಾರೌ ಸಂಹತೌ**

ಎಲ್ಲಕ್ಕಿಂತಲೂ ಕೆಳಭಾಗದಲ್ಲಿರುವ ರೇಖೆಯನ್ನು ಹೊಂದಿದ್ದಲ್ಲಿ ತವರ್ಗ ಅದರ ಮೇಲು ಭಾಗದಲ್ಲಿ ಬ ವ ಶ ತ ಇವು ಮತ್ತು ಪವರ್ಗ, ತರ್ಜನಿಯೇ ಮೊದಲಾದ ಅಂಗುಲಿಗಳಲ್ಲಿ (ಅಂಗುಷ್ಠವು) ಮೊದಲನೆಯ ಗಿಣ್ಣನ್ನು ಹೊಂದಿದ್ದಲ್ಲಿ ಪವರ್ಗ, ಮೇಲುಭಾಗದಲ್ಲಿ ಶವರ್ಗ(ಶ. ಷ ಸ ಹ ಲ) ಮಧ್ಯಮಾಂಗುಲಿ ಮತ್ತು ಅದರ ಉಗುರು ಇವುಗಳ ಸ್ಪರ್ಶ ಹೊಂದಿದ್ದಲ್ಲಿ ರ ಕ್ಷ ಎಂಬ ಅಕ್ಷರಗಳಾಗುತ್ತವೆ ಅ ಎಂಬುದು ವಾಸುದೇವಮುದ್ರಾ, ಆ ಎಂಬುದು ಸಂಕರ್ಷಣಮುದ್ರಾ ಅಂ ಎಂಬುದು ಪ್ರದ್ಯುಮ್ನಮುದ್ರಾ, ಅಃ ಎಂಬುದು ಅನಿರುದ್ಧಮುದ್ರಾ, ಎರಡು ಕೈಗಳೂ ಆ ಹಿಂಬಾಗದಿಂದ ಅನ್ಯೋನ್ಯ ಸ್ಪರ್ಶವನ್ನು ಹೊಂದಿದ್ದಲ್ಲಿ ಅಂಜಲಿ ಪುರುಷ ಮುದ್ರೆಯಾಗುತ್ತದೆ. ಅಂತಹ ಕೈ ಇರುವಾಗ ಕಿರುಬೆರಳಿನೊಡನೆ ಮತ್ತೊಂದು ಕಿರುಬೆರಳು ಸೇರಿದಲ್ಲಿ ಮತ್ತು ತರ್ಜನಿಯೊಡನೆ ತರ್ಜನಿಯು ಸೇರಿದ್ದಲ್ಲಿ ಹಾಗೂ ಅಂಗುಷ್ಠದೊಡನೆ ಅಂಗುಷ್ಠವೂ ಸಹ ಸೇರಿದ್ದಲ್ಲಿ ಇದು ತಾರ್ಕ್ಷ್ಯಮುದ್ರೆಯಾಗುತ್ತದೆ.

ಪತಾಕವೆಂಬ ಹಸ್ತವಿನ್ಯಾಸವು ಸಂಕುಚಿತವಾದ ಅಗ್ರಭಾಗ ಹೊಂದಿದ್ದಲ್ಲಿ ತಾಲಮುದ್ರೆಯಾಗುತ್ತದೆ ಅಡ್ಡಲಾಗಿ ಅಂಗುಷ್ಠವನ್ನು ನೀಡಿದ್ದಲ್ಲಿ ಮಕರಮುದ್ರೆಯಾಗುತ್ತದೆ ಬೆರಳುಗಳು ಸಂಕುಚಿತವಾಗಿದ್ದಲ್ಲಿ ಅರ್ಧಚಂದ್ರಮುದ್ರೆ, ಕಿರುಬೆರಳು ಅಂಗುಲಿಯ ಅಗ್ರಭಾಗದಲ್ಲಿ ಸಂಬಂಧಿಸಿದ್ದಲ್ಲಿ ದೃಶ್ಯ ಶಿಖರವೆಂಬ ಮುದ್ರೆಗಳಾಗುತ್ತವೆ ಅಂಗುಲಿಗಳೆಲ್ಲಾ ಒಂದಾಗಿ ಸೇರಿದ್ದಲ್ಲಿ ಶಂಖಮುದ್ರೆ ಅಃ ಎಂಬ ಸನ್ನಿ

ಸ್ಪಷ್ಟಾಂಗುಲಾ ಪದ್ಮಃ ಕುಬ್ಜಾಂಗುಷ್ಠೋ ಲಕ್ಷ್ಮೀಃ । ಮಕರಃ
ಪ್ರಸಾರಿತಾಂಗುಲಿಃ ಶೇಷಃ ತದುಪರಿಶಿಖರೇ ಭೋಗಶಯನಃ ।
ಆಃ ಕಾರ ಏವ ಪ್ರಸಾರಿತಮಧ್ಯಮಾಂಗುಲಿರ್ಗ ಊಣಃ[1] ॥

ತತ್ರೈವ ಮಧ್ಯಮಾಂಗುಲಿಃ ಶಿಖರಗೃಹೀತಾ ಗರುಡವಾಹನಂ ।
ಮಧ್ಯಮಾನಾಮಿಕಯೋರಂಗುಷ್ಠಯೋಶ್ಚಾಗ್ರಯೋಗೇ ಚಕ್ರಃ ।
ಉಪರ್ಯುಪರಿ ಕಪಿತ್ಥಯೋರುಪರಿ ಚಿಬ್ಬುಕೇ ಗದಾ । ಕಪಿತ್ಥಕುಬ್ಜ-
ಮಧ್ಯಮಿಕೋ ಹಲಃ । ಕರ್ಕಟಕೇ ಸುಮೂಲಂ । ಕಪಿತ್ಥಮಧ್ಯ-
ಭ್ರಷ್ಟಾಂಗುಲಿಃ ಚರ್ಮ । ಕಪಿತ್ಥಂ ಪೃಷ್ಠತಲಾಂಗುಲಿಃ ಖಡ್ಗಃ ।
ಶಿಖರೋ ಮಧ್ಯಭ್ರಷ್ಟಾಂಗುಲಿಃ ಧನುಃ ।

---

ವೇಶವುಳ್ಳ ಅಂಗುಲಿಗಳು ಸ್ಪಷ್ಟವಾಗಿ ಸೇರಿಕೊಂಡಿದ್ದಲ್ಲಿ ಪದ್ಮಮುದ್ರೆಯಾಗುತ್ತದೆ ಅಂಗುಷ್ಠವು ಕುಳ್ಳಾಗಿದ್ದಲ್ಲಿ ಲಕ್ಷ್ಮೀಮುದ್ರೆಯಾಗುತ್ತದೆ ಬೆರಳುಗಳು ನೀಡಿದ್ದಲ್ಲಿ ಮಕರ ಮುದ್ರೆಯೇ ಶೇಷಮುದ್ರೆಯಾಗುತ್ತದೆ. ಶಿಖರಮುದ್ರೆಯನ್ನು ಅದರ ಮೇಲೆ ಮಾಡಿದಲ್ಲಿ ಭೋಗಶಯನ ಮುದ್ರೆಯಾಗುತ್ತದೆ ಆಃ ಎಂಬ ಮುದ್ರೆಯೇ ಮಧ್ಯಮಾಂಗುಲಿಯನ್ನು ನೀಡಿದ್ದಲ್ಲಿ ಗರುಡಮುದ್ರೆಯಾಗುತ್ತದೆ

ಅದೇ ಮುದ್ರೆಯಲ್ಲಿ ಮಧ್ಯಮಾಂಗುಳಿಯು ಶಿಖರಸನ್ನಿವೇಶದಿಂದ ಕೂಡಿದ್ದಲ್ಲಿ ಗರುಡವಾಹನಮುದ್ರೆ ಮಧ್ಯಮಾ ಮತ್ತು ಅನಾಮಿಕೆಗಳು ಎರಡು ಅಂಗುಷ್ಠಗಳೂ ಅಗ್ರ ಭಾಗದಲ್ಲಿ ಸೇರಿದ್ದಲ್ಲಿ ಚಕ್ರಮುದ್ರೆ-ಕಪಿತ್ಥಸಂನಿವೇಶದಿಂದ ಕೂಡಿದ ಎರಡು ಹಸ್ತಗಳೂ ಮೇಲ್ಭಾಗದಲ್ಲಿ ಗಲ್ಲದ ಪ್ರಾಂತವನ್ನು ಸೇರಿದ್ದಲ್ಲಿ ಗದಾಮುದ್ರೆ-ಕಪಿತ್ಥ ಸನ್ನಿವೇಶದಲ್ಲಿರುವ ಹಸ್ತವು ಮಧ್ಯಮಾಂಗುಂಲಿಯು ಕುಳ್ಳಾಗಿದ್ದಲ್ಲಿ ಹಲ ಮುದ್ರೆ ಯಾಗುತ್ತದೆ ಕರ್ಕಟಕ ಸನ್ನಿವೇಶದಿಂದ ಕೂಡಿದ ಆ ಮುದ್ರೆಯು ಹಲಮುದ್ರೆ ಯಂತೆ ಇದ್ದಲ್ಲಿ ಸುಮೂಲವೆನಿಸುತ್ತದೆ ಕಪಿತ್ಥಹಸ್ತವು ಮಧ್ಯಮಾಂಗುಲಿಯನ್ನು ತ್ಯಜಿಸಿದ್ದಲ್ಲಿ ಚರ್ಮಮುದ್ರೆಯಾಗುತ್ತದೆ. ಅದೇ ಕಪಿತ್ಥಹಸ್ತವು ಹಿಂಭಾಗಕ್ಕೆ ಸೇರಿರುವ ಬೆರಳುಗಳಿಂದ ಕೂಡಿದ್ದಲ್ಲಿ ಖಡ್ಗಮುದ್ರೆಯಾಗುತ್ತದೆ ಶಿಖರ ಹಸ್ತವು ಮಧ್ಯಮಾಂಗುಲಿ ಇಲ್ಲದಿದ್ದಲ್ಲಿ ಧನುರ್ಮುದ್ರೆಯಾಗುತ್ತದೆ

---

1 ಇದು ಇಲ್ಲಿ ಶುದ್ಧಪಾಠವೆಂದು ತೋರುತ್ತದೆ ಗರುಡಃ ಎಂಬ ಪಾಠವನ್ನು ಊಹಿಸಿ ಅರ್ಥ ಬರೆಯಲಾಗಿದೆ

**ತರ್ಜನೀಮಧ್ಯಮಿಕೋಂಗುಷ್ಠಾನಾಂ ಸಂಹತಾನಾಂ ವಿಯೋಗಾ-ಚ್ಛರಃ। ಮುಕುಲಃ ಸಂಚಿತಕನೀನಿಕಃ ಕೌಸ್ತುಭಃ। ದ್ವಾ ಶಿಖರೌ ಪೃಥಕ್ ವನಮಾಲಾ। ಅಃಕಾರೋ ಪೃಥಗ್ಲಗ್ನೋ ನೃಸಿಂಹಃ। ಶಿಖರಃ ಪ್ರಸಾರಿತಕನೀನಿಕಾಧೋ ವರಾಹಃ। ಇ ಹಯಶಿರಃ। ಓಂ ವಾಮನಃ। ವಿತಲಿಃ ತ್ರಿವಿಕ್ರಮಃ। ಅರ್ಧಚಂದ್ರೋ ಮತ್ಸ್ಯಃ। ಅಧೋಮುಖಃ ಕುಬ್ಜಪತಾಕಃ ಕೂರ್ಮಃ। ಶಿಖರಃ ಪ್ರಸಾರಿತಕನೀಯಾನೂರ್ಧ್ವ-ಮುಖಾಂಗುಷ್ಠಃ ಹಂಸಃ। ಪತಾಕಃ ಕುಬ್ಜಕರಮಧ್ಯೋ ದತ್ತಾ-ತ್ರೇಯಃ।**

**ಕಪಿತ್ಥಃ ಪರಶುರಾಮಃ। ದ್ವೌ ಶಿಖರೌ ಯುಕ್ತೌ ದಾಶರಥೀ। ಪತಾಕಃ ಕೃಷ್ಣಃ। ತ್ರಿಪತಾಕೋ ಬಲದೇವಃ। ಶಿಖರೋ ವಿಷ್ಣುಃ॥**

---

ಇತರಾಂಗುಲಿಗಳಿಂದ ಕೂಡಿದ ಅಂಗುಷ್ಠ ಹೊರತು ತರ್ಜನೀ ಮಧ್ಯ ಮಾಂಗುಲಿಗಳಿಂದ ಕೂಡಿದ ಸನ್ನಿವೇಶವು ಶರಮುದ್ರೆಯಾಗುತ್ತದೆ ಮುಕುಲವೆಂಬ ಹಸ್ತವು ಕುಗ್ಗಿದ ಕಿರುಬೆರಳಿನಿಂದ ಕೂಡಿದ್ದಲ್ಲಿ ಕೌಸ್ತುಭ ಮುದ್ರೆಯಾಗುತ್ತದೆ ಶಿಖರ ಮುದ್ರೆಯಿಂದ ಕೂಡಿದ ಎರಡು ಕೈಗಳೂ ವನಮಾಲಾ ಮುದ್ರೆಯಾಗುತ್ತವೆ ಅಃ ಎಂಬ ಮುದ್ರೆಯು ಎರಡು ಕೈಗಳಲ್ಲಿಯೂ ಬೇರೆಬೇರೆಯಾಗಿದ್ದಲ್ಲಿ ನೃಸಿಂಹ ಮುದ್ರೆಯಾಗುತ್ತದೆ ಶಿಖರಮುದ್ರೆಯು ಕಿರುಬೆರಳಿನ ಕೆಳಭಾಗವು ಚಾಚಲ್ಪಟ್ಟಿದ್ದಲ್ಲಿ ವರಾಹ ಮುದ್ರಾ ಇ ಎಂಬುದು ಹಯಶಿರೋಮುದ್ರಾ, ಓಂ ಎಂಬುದು ವಾಮನಮುದ್ರಾ, ವಿತಲಿ ಎಂಬ ಕರಸನ್ನಿವೇಶವು ತ್ರಿವಿಕ್ರಮಮುದ್ರಾ, ಅರ್ಧಚಂದ್ರವುಮತ್ಸ್ಯಮುದ್ರಾ, ಕುಗ್ಗಿದ ಪತಾಕಮುದ್ರೆಯು ಅಧೋಮುಖವಾಗಿದ್ದಲ್ಲಿ ಕೂರ್ಮ ಮುದ್ರಾ, ಶಿಖರ ಹಸ್ತವು ಕಿರುಬೆರಳನ್ನು ನೀಡಿ ಮೇಲ್ಮುಖವಾದ ಅಂಗುಷ್ಠ ಹೊಂದಿದ್ದರೆ ಹಂಸಮುದ್ರೆಯಾಗುತ್ತದೆ ಪತಾಕಹಸ್ತವು ಕರಮಧ್ಯವು ಬಗ್ಗಿದ್ದಲ್ಲಿ ದತ್ತಾತ್ರೇಯ ಮುದ್ರೆಯಾಗುತ್ತದೆ

ಕಪಿತ್ಥಕರವು ಪರಶುರಾಮ ಮುದ್ರಾ, ಶಿಖರಹಸ್ತಗಳೆರಡೂ ಸೇರಿಕೊಂಡಿದ್ದಲ್ಲಿ ದಾಶರಥಿ ಮುದ್ರಾ, ಪತಾಕಹಸ್ತವು ಕೃಷ್ಣಮುದ್ರಾ, ತ್ರಿಪತಾಕಹಸ್ತವು ಬಲದೇವ ಮುದ್ರಾ, ಶಿಖರಹಸ್ತವು ವಿಷ್ಣುಮುದ್ರಾ, ಮೇಲ್ಮುಖವಾದ ಪತಾಕಹಸ್ತವು ಪೃಥಿವೀ

ಉತ್ತಾನಪತಾಕಃ ಪೃಥಿವೀ । ಕುಬ್ಜಃ ಪತಾಕಃ ಪ್ರಸಾರಿತಾಂಗುಷ್ಠ
ಸ್ತೋಯಃ । ಅಂಗುಷ್ಠಾಗ್ರಾಂಗುಲಿರ್ನಖಪರಿಮಾರ್ಜಿತೋಽಗ್ನಿಃ ।
ಚಲತ್ಪತಾಕೋ ವಾಯುಃ । ತಿರ್ಯಙ್ಮುಷ್ಟಿಪ್ರಸಾರಿತತರ್ಜನೀಕೋಽ-
ನ್ತರಿಕ್ಷಂ । ಪಿತಸ್ತಿದ್ವಯಯೋಗೋ ವರ್ತುಲೀಕೃತೋಽರ್ಕಃ । ಅನಾ-
ಮಿಕಾರ್ಧೇನ ವಕ್ರಶ್ಚಂದ್ರಃ । ಸರ್ವಾಸು ಮುಕುಲಿತಾಸು ಪ್ರಸಾರಿತೇ
ಮಧ್ಯಮಾತರ್ಜನೀ ನರನಾರಾಯಣೌ ॥

ತತ್ರೈವಪ್ರಸಾರಿತಾಗ್ರಾನಾಮಿಕಾ ಗುಣಾಃ ಬ್ರಹ್ಮವಿಷ್ಣುಮಹೇ-
ಶ್ವರಾಃ । ವಾಮಸ್ಯ ಪ್ರಸಾರಿತಾಂಗುಲೇಃ ತದುಪರಿ ತಥಾ ವಿಧವಿವ-
ದಕ್ಷಿಣಃ ಕಪಿಲಃ । ಚತಸ್ರೋಽಪ್ಯಂಗುಲ್ಯಃ ಪ್ರಸಾರಿತಾಸ್ತನ್ಮೂಲೇ
ಕುಂಚಿತಾಂಗುಷ್ಠಶ್ಚಾನ್ತರಾತ್ಮಾ ತೋಯಃ । ಪ್ರಸಾರಿತಕನಿಷ್ಠಿಕೋ
ಋಗ್ವೇದಃ । ಸೈವಾನಾಮಿಕಯಾ ಸಹ ಪ್ರಸಾರಿತೋ ಯಜುರ್ವೇದಃ ।

---

ಮುದ್ರೆ, ಕುಗ್ಗಿದ ಪತಾಕಹಸ್ತವು ಅಂಗುಷ್ಠವು ನೀಡಿದಲ್ಲಿ ತೋಯಮುದ್ರಾ, ಅಂಗು
ಷ್ಠದ ಅಗ್ರಭಾಗವು ಇತರ ಅಂಗುಲಿಗಳ ಉಗುರುಗಳಿಂದ ಸ್ಪರ್ಶ ಹೊಂದಿದ್ದಲ್ಲಿ ಅಗ್ನಿ
ಮುದ್ರೆಯಾಗುತ್ತದೆ. ಪತಾಕಹಸ್ತವು ಚಲಿಸುತ್ತಿದ್ದಲ್ಲಿ ವಾಯುಮುದ್ರಾ, ಮುಷ್ಟಿ
ಯನ್ನು ಅಡ್ಡಲಾಗಿ ಮಾಡಿ ತರ್ಜನಿಯನ್ನು ನೀಡಿದಲ್ಲಿ ಅಂತರಿಕ್ಷಮುದ್ರಾ, ಎರಡು
ಹಸ್ತಗಳ ಗೇಣುಗಳನ್ನೂ ಒಂದಾಗಿ ಮಾಡಿ ಮಂಡಲಾಕಾರ ಹೊಂದಿಸಿದಲ್ಲಿ, ಅರ್ಕ
ಮುದ್ರಾ, ಅನಾಮಿಕೆಯ ಅರ್ಧಭಾಗದಿಂದ ಮಾಡಿದ ಅಂಗುಷ್ಠವು ವಕ್ರಚಂದ್ರ
ಮುದ್ರಾ, ಎಲ್ಲಾ ಬೆರಳುಗಳೂ ಸಂಕುಚಿತವಾಗಿದ್ದು ಮಧ್ಯಮ ಮತ್ತು ತರ್ಜನಿಗಳು
ಚಾಚಿದ್ದಲ್ಲಿ ನರನಾರಾಯಣಮುದ್ರಾ

ಅದೇ ಮುದ್ರೆಯೇ ಅನಾಮಿಕೆಯ ಅಗ್ರಭಾಗವು ನೀಡಿದ್ದಲ್ಲಿ ಗುಣಗಳಿಗೂ
ಬ್ರಹ್ಮ ವಿಷ್ಣು ಮಹೇಶ್ವರರಿಗೂ ಸೂಚಕವಾದ ಮುದ್ರೆಯಾಗುತ್ತದೆ ಎಡಗೈಯ್ಯಿನ
ಬೆರಳುಗಳೆಲ್ಲವೂ ನೀಡಿದ್ದು ಅದರ ಮೇಲೆ ಅಂತಹದೇ ಆದ ಬಲಗೈಯ್ಯು ಸೇರಿದ್ದಲ್ಲಿ
ಕಪಿಲಮುದ್ರೆಯಾಗುತ್ತದೆ ನಾಲ್ಕು ಬೆರಳುಗಳೂ ಚಾಚಿದ್ದು ಅವುಗಳ ಬುಡದಲ್ಲಿ
ಸಂಕುಚಿತವಾದ ಅಂಗುಷ್ಠವು ಸೇರಿದ್ದಲ್ಲಿ ಅನ್ತರಾತ್ಮತೋಯ ಮುದ್ರೆಯಾಗುತ್ತದೆ.
ಕನಿಷ್ಠಾಂಗುಲಿಯು ಚಾಚಿದ್ದಲ್ಲಿ ಋಗ್ವೇದಮುದ್ರಾ, ಅದೇ ಕನಿಷ್ಠಾಂಗುಲಿಯು

ಚತುರಾತ್ಮಾ ಪ್ರಸಾರಿತಾಂಗುಷ್ಠಃ ಸಾಮವೇದಃ ವೇಷ್ಟ್ಯಮಾನಾ-
ಸ್ವಂಗುಲೀಷು ಕರಮಧ್ಯಗಮನೇನ ಗಾಯತ್ರೀ ॥

ಸಾಮವೇದೋಽಧೋಮುಖಾಂಗುಲಿಃ ಶಿಕ್ಷಾ । ಸೈವ ದಕ್ಷಿಣದಿಶಿ
ನೀತಾ ಕಲ್ಪಃ । ತರ್ಜನ್ಯಂಗುಷ್ಠಯೋಗೇ ವ್ಯಾಕರಣಂ । ಶಿಖರೇ
ಅಂಗುಷ್ಠೇನ ತರ್ಜನೀಮಧ್ಯಮೇನ ನಿರುಕ್ತಂ । ಖಟಕಾಮುಖಾ-
ಭ್ಯಾಂ ಜ್ಯೋತಿಷಂ । ಅಧೋಮುಖಶ್ಛಂದೋ ವಿಚಿತಿಃ ।

ಏತಾ ರಹಸ್ಯಮುದ್ರಾಸ್ತೇ ಮಯೋಕ್ತಾ ನೃಪಸತ್ತಮ ।
ಅತಃಪರಂ ಪ್ರವಕ್ಷ್ಯಾಮಿ ಸಾಮಾನ್ಯಾಂಸ್ತಾನ್ನಿಬೋಧ ಮೇ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ರಹಸ್ಯಮುದ್ರಾವರ್ಣನೋ ನಾಮ
ದ್ವಾತ್ರಿಂಶತ್ತಮೋಽಧ್ಯಾಯಃ

---

ಅನಾಮಿಕೆಯೊಡಗೂಡಿ ಚಾಚಿದ್ದಲ್ಲಿ ಯಜುರ್ವೇದಮುದ್ರಾ, ಅಂಗುಷ್ಠವನ್ನು ಚಾಚಿರುವ ಚತುರಾತ್ಮಮುದ್ರೆಯೇ ಸಾಮವೇದಮುದ್ರಾ, ಎಲ್ಲಾ ಬೆರಳುಗಳೂ ವೇಷ್ಟನ ಹೊಂದಿ ಅಂಗೈಯ್ಯಿನ ಮಧ್ಯವನ್ನು ನೇರಿದ್ದಲ್ಲಿ ಗಾಯತ್ರೀಮುದ್ರಾ

ಸಾಮವೇದಮುದ್ರೆಯೇ ಅಧೋಮುಖಗಳಾದ ಬೆರಳುಗಳಿಂದ ಕೂಡಿದ್ದಲ್ಲಿ ಶಿಕ್ಷಾಮುದ್ರೆಯಾಗುತ್ತದೆ ಅದನ್ನೇ ಬಲಭಾಗದಲ್ಲಿ ಪ್ರಯೋಗಿಸಿದ್ದಲ್ಲಿ ಕಲ್ಪಮುದ್ರೆಯಾಗುತ್ತದೆ ತರ್ಜನೀ ಅಂಗುಷ್ಠ ಸಂಬಂಧದಿಂದ ವ್ಯಾಕರಣಮುದ್ರಾ, ಅಂಗುಷ್ಠದ ಶಿಖರಭಾಗವು ತರ್ಜನಿಯ ಮಧ್ಯವನ್ನು ಹೊಂದಿದಲ್ಲಿ ನಿರುಕ್ತಮುದ್ರಾ, ಖಟಕಾ ಮುಖದಿಂದ ಕೂಡಿದ ಎರಡು ಹಸ್ತಗಳೂ ಜ್ಯೋತಿಷಮುದ್ರಾ, ಇದೇ ಅಧೋಮುಖವಾಗಿದ್ದಲ್ಲಿ ಛಂದೋವಿಚಿತಿಮುದ್ರಾ, ಎಲೈ ದೊರೆಯೇ, ಈ ರೀತಿಯಾದ ರಹಸ್ಯಮುದ್ರೆಗಳನ್ನೆಲ್ಲಾ ನಿನಗೆ ಹೇಳಿದ್ದಾಯಿತು ಇನ್ನು ಮುಂದೆ ಸಾಮಾನ್ಯ ಮುದ್ರೆಗಳನ್ನೆಲ್ಲಾ ನಿನಗೆ ಹೇಳುತ್ತೇನೆ ಕೇಳು

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ ವಜ್ರ
ಸಂವಾದದಲ್ಲಿ ರಹಸ್ಯಮುದ್ರಾವರ್ಣನವೆಂಬ ಮೂವತ್ತೆರಡನೆಯ
ಅಧ್ಯಾಯ ಮುಗಿದಿದೆ

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ತ್ರಯಸ್ತ್ರಿಂಶತ್ತಮೋಽಧ್ಯಾಯಃ ||

|| ಮಾರ್ಕಂಡೇಯ ಉವಾಚ ||

**ಉತ್ತಾನಂ ತು ಕರಂ ಕೃತ್ವಾ ಚತುರಾಂಗುಲಿಕುಂಚಿತಂ |**
**ಅಂಗುಷ್ಠೌ ಪಾರ್ಶ್ವತೋ ಯೋಜ್ಯೌ ಭಸ್ಮಮುದ್ರಾ ಪ್ರಕೀರ್ತಿತಾ || ೧ ||**

**ಸಾ ತಿರ್ಯಗುಚ್ಛ್ರಿತಾಂಗುಲಿರ್ಲಿಂಗಮುದ್ರಾ ಪ್ರಕೀರ್ತಿತಾ |**
**ಅಂಗುಲ್ಯಸ್ತ್ರಯಃ [1] ಸಕ್ತಾಽಸ್ಯಾಗ್ರಾಂಗುಷ್ಠಪರಿಸಂಚಿತಾಃ || ೨ ||**

**ತರ್ಜನೀಂ ಪ್ರಸೃತಾಂ ಕೃತ್ವಾ ಜಟಾಮುದ್ರಾ ಪ್ರಕೀರ್ತಿತಾ |**
**ವೇತ್ರಮುದ್ರಾ ಯದಾ ತಸ್ಯಾಂ ನೇತ್ರಾಂತೇ ತರ್ಜನೀ ಭವೇತ್ || ೩ ||**

---

### ಮೂವತ್ತಮೂರನೆಯ ಅಧ್ಯಾಯ.

೧–೩ ಮಾರ್ಕಂಡೇಯರು ಹೇಳುತ್ತಾರೆ, ಎರಡು ಕೈಗಳನ್ನೂ ಮಗುಚಿ ನಾಲ್ಕು ಮುಂದಿನ ಬೆರಳುಗಳನ್ನೂ ಬಗ್ಗಿಸಿ ಪಾರ್ಶ್ವಗಳಲ್ಲಿ ಎರಡು ಅಂಗುಷ್ಠಗಳನ್ನೂ ಸೇರಿಸಿದಲ್ಲಿ ಭಸ್ಮಮುದ್ರೆಯಾಗುತ್ತದೆ ಹಾಗೆಯೇ ಮುಂದಿನ ಬೆರಳುಗಳನ್ನು ಅಡ್ಡ ಲಾಗಿ ನೀಡಿದ್ದಲ್ಲಿ ಲಿಂಗಮುದ್ರೆಯಾಗುತ್ತದೆ ಮೂರು ಬೆರಳುಗಳೂ ಅಂಗುಷ್ಠದ ಅಗ್ರಭಾಗದಲ್ಲಿ ಸೇರಿದ್ದು ತರ್ಜನಿಯು ನೀಡಲ್ಪಟ್ಟಿದ್ದಲ್ಲಿ ಜಟಾಮುದ್ರೆಯಾಗುತ್ತದೆ. ಇದೇ ಮುದ್ರೆಯು ಕಡೆಗಣ್ಣಿನಲ್ಲಿ ತರ್ಜನಿ ಇದ್ದಲ್ಲಿ ವೇತ್ರಮುದ್ರೆ ಎನಿಸುತ್ತದೆ.

---

1 ಇಲ್ಲಿನ ಪಾಠವು ಅಶುದ್ಧವಾಗಿದೆ

ಬಂಧಸ್ಥಂ ತು ಪ್ರಕುರ್ವೀತ ಚಾಂಗುಷ್ಠಂ ಪ್ರಸೃತಂ ತಥಾ ।
ಉತ್ತಾನಂ ಮೂರ್ಧ್ನಿ ಸಂಯೋಜ್ಯ ಶಶಾಂಕಂ ತು ವಿನಿರ್ದಿಶೇತ್ ॥ ೪ ॥

ಅಂಗುಲ್ಯಃ ಪ್ರಸೃತಾಃ ಸರ್ವಾಃ ವರ್ತುಲಾಃ ಶೃಂಗರೂಪಕಾಃ ।
ಮೂರ್ಧ್ನಿ ಕೃತ್ವಾ ತು ತಾಂ ಮುದ್ರಾಂ ಗೋವೃಷಂ ತು ವಿನಿರ್ದಿಶೇತ್ ॥ ೫ ॥

ತಿರ್ಯಕ್ ಕೃತ್ವಾ ತು ತಂ ಹಸ್ತಂ ಸರ್ವಸಂಕುಚಿತಾಂಗುಲಿಂ ।
ಅಂಗುಷ್ಠಂ ಮಧ್ಯಮಾವೇಷ್ಟ್ಯ ಪರ್ಯಸ್ತಂ ತು ವಿನಿರ್ದಿಶೇತ್ ॥ ೬ ॥

ಕನಿಷ್ಠಿಕಾಂ ಸಂಕುಚಿತಾಮಂಗುಷ್ಠೋಪರಿ ವಿನ್ಯಸೇತ್ ।
ಕನಿಷ್ಠಾನಾಮಿಕಾಮಧ್ಯೇ ದಕ್ಷಾಂಗುಷ್ಠಂ ಪ್ರಕೀರ್ತಿತಂ ॥ ೭ ॥

ಉತ್ತಾನೌ ತು ಕರೌ ಕೃತ್ವಾ ಅನ್ಯೋನ್ಯಾಂತರಿತಾಂಗುಲೀ ।
ಕನಿಷ್ಠಿಕಾನ್ತೇ ಚಾಂಗುಷ್ಠಮನನ್ತೇತಿ ಪ್ರಕೀರ್ತಿತಾ ॥ ೮ ॥

---

೪-೬ ಇತರ ಅಂಗುಲಿಗಳನ್ನು ಮಡಿಸಿ ಅಂಗುಷ್ಠವನ್ನು ಚಾಚಿ ಅದನ್ನು ತಲೆಕೆಳಕಾಗಿ ತಲೆಯ ಮೇಲೆ ಯೋಜಿಸಿದಲ್ಲಿ ಶಶಾಂಕಮುದ್ರೆಯಾಗುತ್ತದೆ ಬೆರಳು ಗಳೆಲ್ಲವನ್ನೂ ನೀಡಿ, ಹಸುವಿನ ಕೊಂಬುಗಳಂತೆ ವರ್ತುಳಾಕಾರದಿಂದ ಕೂಡಿರುವ ಆ ಮುದ್ರೆಯನ್ನು ತಲೆಯ ಮೇಲೆ ಯೋಜಿಸಿದಲ್ಲಿ ಗೋವೃಷವೆಂಬ ಮುದ್ರೆಯಾಗು ತ್ತದೆ ಹಸ್ತದ ಎಲ್ಲಾ ಅಂಗುಲಿಗಳನ್ನೂ ಮಡಿಸಿ ಅಡ್ಡಡ್ಡಲಾಗಿ ಮಾಡಿ ಅಂಗುಷ್ಠ ಮಧ್ಯವನ್ನು ವೇಷ್ಟನಮಾಡಿದಲ್ಲಿ ಪರ್ಯಸ್ತ ಮುದ್ರೆಯಾಗುತ್ತದೆ

೭-೮ ಸಂಕುಚಿತವಾದ ಕಿರುಬೆರಳನ್ನು ಅಂಗುಷ್ಠದ ಮೇಲೆ ಇಡಬೇಕು ಹೀಗೆ ಕಿರುಬೆರಳು ಮತ್ತು ಅನಾಮಿಕೆಯ ಮಧ್ಯದಲ್ಲಿ ಅಂಗುಷ್ಠವಿದ್ದಲ್ಲಿ ದಕ್ಷಾಂಗುಷ್ಠ ಮುದ್ರೆಯಾಗುತ್ತದೆ ಎರಡು ಹಸ್ತಗಳನ್ನೂ ಕೆಳಮುಖವಾಗಿ ಮಾಡಿ ಬೆರಳುಗಳು ಪರಸ್ಪರ ಸೇರಿಕೊಂಡಿದ್ದು ಎರಡು ಹಸ್ತಗಳ ಕಿರುಬೆರಳಿನ ಸಮೀಪದಲ್ಲಿ ಎರಡು ಅಂಗುಷ್ಠಗಳೂ ಬಂದಲ್ಲಿ ಅನಂತಮುದ್ರೆಯಾಗುತ್ತದೆ ಕೆಳಮುಖವಾದ ಬಲ ಗೈಯನ್ನು ಕೆಳಭಾಗದಲ್ಲಿಟ್ಟು ಅದರ ಮೇಲ್ಭಾಗದಲ್ಲಿ ಎಡಗೈಯನ್ನೂ ಹಾಗೆಯೇ

ಉತ್ತಾನಂ ದಕ್ಷಿಣಂ ಹಸ್ತಂ ತ್ವಧೋವಾಮಂ ತಥೋಪರಿ ।
ಕರಜಾನ್ಯೋನ್ಯಸಂಯೋಗಾದ್ಧರ್ಮಸ್ಯ ಪರಿಕೀರ್ತಿತಾ ॥ ೯ ॥

ಸಾ ಚೈವ ವಿಪರೀತಾ ತು ಜ್ಞಾನಸ್ಯ ಪರಿಕೀರ್ತಿತಂ ।
ಕನಿಷ್ಠಿಕೇ ದ್ವೇ ಚಾಂಗುಷ್ಠೌ ಯುಗ್ಮೀಕೃತ್ವಾ ಪ್ರಸಾರಯೇತ್ ॥ ೧೦ ॥

ವೈರಾಗ್ಯಸ್ಯ ಭವೇನ್ಮುದ್ರಾ ಸರ್ವಕರ್ಮಕರೀ ಶುಭಾ ।
ಪೃಷ್ಠೇ ಪೃಷ್ಠಂ ತು ಸಂಯೋಜ್ಯಂ ಕರಯೋರುಭಯೋರಪಿ ॥ ೧೧ ॥

ಕನೀಯಸ್ಯಂಗುಷ್ಠಯೋಗೇನ ಭವತ್ಯೈಶ್ವರ್ಯಮೇವ ಚ ।
ಪದ್ಮಾಕಾರೋ ಭವೇದ್ಧಸ್ತಃ ಕನಿಷ್ಠಾತರ್ಜನೀಯುತಃ ॥ ೧೨ ॥

ಚತಸ್ರ ಉಚ್ಛ್ರಿತಾಃ ಕೃತ್ವಾ ಪೃಷ್ಠೇಽನ್ಯೋನ್ಯಂ ತು ಯೋಜಯೇತ್ ।
ಅಂಗುಷ್ಠಾವೇಕತಃ ಕೃತ್ವಾ ಪ್ರಣಾಲಂ ಚೈವ ಕಾರಯೇತ್ ॥ ೧೩ ॥

---

ಇಟ್ಟಲ್ಲಿ ಬೆರಳುಗಳೂ ಪರಸ್ಪರ ಸಂಯೋಗ ಹೊಂದಿದಲ್ಲಿ ಇದು ಧರ್ಮಮುದ್ರೆಯಾಗುತ್ತದೆ. ಅದೇ ವ್ಯತ್ಯಸ್ತವಾಗಿದ್ದಲ್ಲಿ ಜ್ಞಾನಮುದ್ರೆಯಾಗುತ್ತದೆ

೧೦-೧೩ ಎರಡು ಹಸ್ತಗಳ ಕನಿಷ್ಠಿಕೆಯನ್ನೂ, ಅಂಗುಷ್ಠವನ್ನೂ ಜೋಡಿಯಾಗಿ ಸೇರಿಸಿ ನೀಡಿದಲ್ಲಿ ಇದು ವೈರಾಗ್ಯಮುದ್ರೆಯಾಗುತ್ತದೆ ಇದು ಸರ್ವಕರ್ಮಗಳಲ್ಲಿಯೂ ಶುಭಕರವಾದ್ದು ಎರಡೂ ಕೈಗಳ ಹಿಂಭಾಗವನ್ನು ಒಂದರ ಮೇಲೊಂದನ್ನಾಗಿ ಯೋಜಿಸಿ ಕಿರುಬೆರಳುಗಳಿಗೂ, ಅಂಗುಷ್ಠಗಳಿಗೂ ಪರಸ್ಪರ ಸಂಬಂಧ ಉಂಟಾದಲ್ಲಿ ಇದು ಐಶ್ವರ್ಯಮುದ್ರೆಯಾಗುತ್ತದೆ ಹಸ್ತದ್ವಯವನ್ನೂ ಪದ್ಮಾಕಾರಮಾಡಿ ಕನಿಷ್ಠಿಕೆಗಳನ್ನೂ, ತರ್ಜನಿಗಳನ್ನೂ ಸೇರಿಸಿ ಮಧ್ಯದ ಎರಡೆರಡು ಬೆರಳುಗಳನ್ನೂ, ಒಟ್ಟು ನಾಲ್ಕು ಬೆರಳುಗಳನ್ನೂ ನೀಡಿ ಕೈಗಳ ಕಳಭಾಗವನ್ನು ಸೇರಿಸಬೇಕು ಅಂಗುಷ್ಠಗಳೆರಡೂ ಒಂದೇ ಕಡೆಯಲ್ಲಿ ಸೇರಿ ನಾಳದಂತೆ ತೋರಬೇಕು ಈ ಮುದ್ರೆಯು ಸರ್ವದೋಷಗಳಿಗೂ ನಾಶಕವಾಗಿಯೂ, ಶುಭಕರವಾಗಿಯೂ ಇರುತ್ತದೆ.

ಸಕಲಸ್ಯ ಭವೇನ್ಮುದ್ರಾ ದುಷ್ಟಾನಾಂ ಶಮನೀ ಶುಭಾ ।
ತ್ರಯಃ ಸಂಕುಚಿತಾ ಯತ್ರ ಕನಿಷ್ಠಾಂಗುಷ್ಠಕೇಕಲಾಃ ॥ ೧೪ ॥

ಉತ್ತಾನಂ ದಕ್ಷಿಣಾಂಗುಷ್ಠಂ ವಾಮಾಂಗುಷ್ಠೇನ ವೇಷ್ಟಯೇತ್ ।
ದಕ್ಷಿಣಾಂಗುಲಿಭಿಶ್ಚಾತ್ರ ವಾಮಾಂಗುಷ್ಠಂ ತು ವೇಷ್ಟಯೇತ್ ॥ ೧೫ ॥

ವಾಮಸ್ಯಾಂಗುಲಿಭಿಶ್ಚಾತ್ರ ತ್ವಂಗುಲೀ ಪರಿವೇಷ್ಟಯೇತ್ ।
ತರ್ಜನ್ಯೌ ಕುಂಚಿತೌ ಕೃತ್ವಾ ಮುದ್ರಾ ನಿಷ್ಕಲರೂಪಿಣೀ ॥ ೧೬ ॥

ಉತ್ತಾನೌ ತು ಕರೌ ಕೃತ್ವಾ ಅಂಗುಷ್ಠಾಂಗುಲಿಕುಂಚಿತೌ ।
ಕರಮಧ್ಯಸ್ಥಿತಾ ಹ್ಯೇತಾ ನಖಾಂಸ್ತಾಸಾಂ ತು ಗೋಪಯೇತ್ ॥ ೧೭ ॥

ಪೃಷ್ಠಂ ಪೃಷ್ಠೇ ತು ಸಂಯೋಜ್ಯ ತ್ವಂಗುಷ್ಠೌ ವಿನ್ಯಸೇತ್ಸಮಂ ।
ಮಾಲಾಕಾರಂ ತತಃ ಕೃತ್ವಾ ದೇವ್ಯಾ ಮುದ್ರಾ ಪ್ರಕೀರ್ತಿತಾ ॥ ೧೮ ॥

ಅಂಗುಷ್ಠೋಂಗುಷ್ಠಕೇ ಯೋಜ್ಯಃ ಕನಿಷ್ಠಾಯಾಂ ಕನಿಷ್ಠಿಕಾ ।
ಕರಮಧ್ಯೇ ತು ತಾಂ ಕೃತ್ವಾ ಷಡಾಭ್ಯಾಮೇಕತಃ ಕುರು ॥ ೧೯ ॥

---

೧೪-೧೬ ಅಂಗುಷ್ಠ ಮತ್ತು ಕನಿಷ್ಠಿಕೆಯು ಸೇರಿದ್ದು ಅದರಲ್ಲಿ ಉಳಿದ ಮೂರು ಬೆರಳುಗಳೂ ಬಗ್ಗಿರಬೇಕು ಮೇಲ್ಮುಖವಾಗಿರುವ ಬಲ ಅಂಗುಷ್ಠವನ್ನು ಎಡ ಅಂಗುಷ್ಠದಿಂದ ವೇಷ್ಟನಮಾಡಬೇಕು ಇತರ ಬಲ ಅಂಗುಲಿಗಳಿಂದ ಎಡದ ಅಂಗುಷ್ಠವನ್ನೂ ವೇಷ್ಟಿಸಬೇಕು ಎಡದ ಅಂಗುಲಿಗಳಿಂದಲೂ ಬೆರಳುಗಳನ್ನು ವೇಷ್ಟನಮಾಡಿ ತರ್ಜನಿಗಳನ್ನು ಕುಗ್ಗಿಸಿದಲ್ಲಿ ಇದು ನಿಷ್ಕಲಮುದ್ರೆಯಾಗುತ್ತದೆ

೧೭-೨೦ ಅಂಗುಷ್ಠವನ್ನು ಕುಗ್ಗಿಸಿ ಕೈಗಳನ್ನು ತಲೆಕೆಳಗಾಗಿ ಮಾಡಿ ಕೈಯಿನ ಮಧ್ಯದಲ್ಲಿ ಸೇರಿರುವ ಎಲ್ಲಾ ಬೆರಳುಗಳ ಉಗುರುಗಳನ್ನು ಮುಚ್ಚಬೇಕು ಕೈಗಳ ಹಿಂಭಾಗವನ್ನು ಸೇರಿಸಿ ಅಂಗುಷ್ಠವನ್ನು ಸಮವಾಗಿಟ್ಟು ಎರಡು ಕೈಗಳನ್ನೂ ಮಾಲೆಯಂತೆ ಮಾಡಿದಲ್ಲಿ ಇದು ದೇವೀಮುದ್ರೆಯಾಗುತ್ತದೆ. ಅಂಗುಷ್ಠದೊಡನೆ ಅಂಗುಷ್ಠವನ್ನೂ, ಕನಿಷ್ಠಿಕೆಯೊಡನೆ ಕನಿಷ್ಠಿಕೆಯನ್ನೂ ಸೇರಿಸಬೇಕು ಇದನ್ನು ಕುಗ್ಗಿಸಿ ಕೈಮಧ್ಯದಲ್ಲಿಟ್ಟು ಊರ್ಧ್ವಮುಖವಾದ (ಎರಡು ಕೈಗಳೂ ಸೇರಿ) ಆರು

ಸಂಕುಂಚ್ಯ ತು ಷಡೇತಾನಿ ಶಕ್ತ್ಯಾಕಾರಂ ತು ಕಾರಯೇತ್ ।
ಸ್ಕಂದಸ್ಯ ತು ಸ್ಮೃತಾ ಮುದ್ರಾ ಅಭೇದ್ಯಾ ತ್ರಿದಶೈರಪಿ ॥ ೨೦ ॥

ಅಧೋಮುಖಂ ಕರಂ ಕೃತ್ವಾ ತಿಸ್ರೋಂಗುಲ್ಯಸ್ತು ಕುಂಚಿತಾಃ ।
ತ್ರಿತಾಲಾ ಮಧ್ಯಮಾ ತತ್ರ ಕಿಂಚಿತ್ಸಂಕುಚಿತಾ ಭವೇತ್ ॥ ೨೧ ॥

ತರ್ಜನ್ಯಾಂ ಯೋಜ್ಯ ಚಾಂಗುಷ್ಠಂ ದನ್ತಾಕಾರಂ ತು ದರ್ಶಯೇತ್ ।
ವಿಘ್ನರಾಜಸ್ಯ ಮುದ್ರೈಷಾ ಸರ್ವವಿಘ್ನಪ್ರಣಾಶಿನೀ ॥ ೨೨ ॥

ಉತ್ತಾನೌ ಪ್ರಸೃತೌ ಹಸ್ತೌ ತರ್ಜನ್ಯಂಗುಷ್ಠಸಂವೃತೌ ।
ಅಸ್ಯಾನಾಮೌ ತು ಸಂಯೋಜ್ಯ ಶಕ್ರಮುದ್ರಾ ಪ್ರಕೀರ್ತಿತಾ ॥ ೨೩ ॥

ಸಂಕೋಚ್ಯ ಕರಜಾಂ ಮಧ್ಯಾಂ ಹಸ್ತಯೋರುಭಯೋರಪಿ ।
ಪ್ರಸೃತಾಂಗುಷ್ಠಮುತ್ತಾನಾಂ ಯೋಜ್ಯಾ ಮುದ್ರಾ ಹುತಾಶನೇ ॥ ೨೪ ॥

ಅಧೋಮುಖಂ ಕರಂ ಕೃತ್ವಾ ಯಸ್ಯ ಸ್ಯಾತ್ಕುಂಚಿತಾಂಗುಲಿಃ ।
ವಿರೂಪಾಕ್ಷಸ್ಯ ಮುದ್ರೈಷಾ ಭವೇನ್ಮಧ್ಯಾ ಪ್ರಸಾರಿತಾ ॥ ೨೫ ॥

---

ಬೆರಳುಗಳನ್ನೂ ಸ್ವಲ್ಪ ಕುಗ್ಗಿಸಿ ಶಕ್ತಿಯಂತೆ ಒಂದು ಕಡೆಗೆ ಚಾಚಿದಲ್ಲಿ ಇದು ಸ್ಕಂದ ಮುದ್ರೆಯಾಗುತ್ತದೆ ಇದು ದೇವತೆಗಳಿಗೂ ಅಭೇದ್ಯವಾದುದು

೨೧-೨೩ ಕೈಯನ್ನು ಅಧೋಮುಖವನ್ನಾಗಿ ಮಾಡಿ ಮೂರು ಬೆರಳುಗಳನ್ನೂ ತಾಳೆಯಮರದಂತೆ ಸ್ವಲ್ಪ ನೀಡಿ ಮಧ್ಯಮಾಂಗುಲಿಯು ಸ್ವಲ್ಪ ಸಂಕೋಚ ಹೊಂದಿದ್ದು ತರ್ಜನಿಯೊಡನೆ ಅಂಗುಷ್ಠವನ್ನು ಸೇರಿಸಿ ದನ್ತಾಕಾರವಾದ ಮುದ್ರೆಯನ್ನು ಪ್ರದರ್ಶಿಸಬೇಕು ಇದು ಸರ್ವವಿಘ್ನನಾಶಕವಾದ ವಿಘ್ನರಾಜಮುದ್ರಾ ತರ್ಜನೀ ಮತ್ತು ಅಂಗುಷ್ಠಗಳು ಸೇರಿಕೊಂಡಿರುವ ಎರಡು ಹಸ್ತಗಳನ್ನೂ ಮೇಲ್ಮುಖವಾಗಿ ಸೇರಿಸಿದಲ್ಲಿ ಶಕ್ರಮುದ್ರೆಯಾಗುತ್ತದೆ

೨೪-೨೬ ಮಧ್ಯಾಂಗುಲಿಯನ್ನು ಬಗ್ಗಿಸಿ ಅಂಗುಷ್ಠವನ್ನು ವಿಸ್ತರಿಸಿ ಎರಡು ಕೈಗಳನ್ನೂ ಮೇಲ್ಮುಖವಾಗಿ ಯೋಜಿಸಿದಲ್ಲಿ ಹುತಾಶನಮುದ್ರೆಯಾಗುತ್ತದೆ ಕೈಯನ್ನು ಕೆಳಮುಖಮಾಡಿ ಬೆರಳುಗಳನ್ನು ಕುಗ್ಗಿಸಿ ಮಧ್ಯಮಾಂಗುಲಿಯು ಚಾಚಲ್ಪಟ್ಟಿದ್ದಲ್ಲಿ ವಿರೂಪಾಕ್ಷ ಮುದ್ರೆಯಾಗುತ್ತದೆ ಮೇಲ್ಮುಖವಾದ ಹಸ್ತದಲ್ಲಿ ಎಲ್ಲಾ

ಉತ್ತಾನೇ ಪ್ರಸೃತಾಂಗುಲ್ಯಃ ಕರೇ ಭವತಿ ವಾರುಣೀ ।
ತಾನೇವ ತು ಯದಾ ತಿರ್ಯಕ್ತದಾ ಭವತಿ ಮಾರುತೀ ॥ ೨೬ ॥

ನಿಕುಂಚಿತಾಶ್ಚ ತಾಃ ಸರ್ವಾ ಕೌಬೇರೀ ತು ಪ್ರಕೀರ್ತಿತಾ ।
ಮಧ್ಯೇಪ್ರಸಾರಿತಾಸ್ತಿಸ್ರೋ ಮುದ್ರೇಶಾನೀ ಪ್ರಕೀರ್ತಿತಾ ॥ ೨೭ ॥

ಬ್ರಹ್ಮಜಾ ಪದ್ಮಮುದ್ರಾ ಸ್ಯಾದ್ಭೋಗೋಽನಂತಸ್ಯ ಕೀರ್ತಿತಾ ।
ವಾಮಾಸಕ್ತಸ್ಯ ವಾಮಾಂ ತು ದಕ್ಷಿಣಾನಾಮುಪಕ್ರಮೇ ॥ ೨೮ ॥

ತಯೋರಗ್ರಾಣಿ ಗೃಹ್ಣೀತ ತರ್ಜನ್ಯಗ್ರದ್ವಯೇನ ತು ।
ಸಂಕೋಚಯೇತ್ ಷಡೇತಾನಿ ಸ್ವಾಂಗುಷ್ಠೇ ತರ್ಜನೀಂ ನ್ಯಸೇತ್ ॥ ೨೯ ॥

ವಜ್ರ ಏಷ ಸಮಾಖ್ಯಾತಃ ಶಕ್ತಿಃ ಪೂರ್ವಮುದಾಹೃತಾ ।
ಕರೌ ಬಾಹುದ್ವಯಂ ಚೈವ ದಂಡಮುದ್ರಾ ಪ್ರಸಾರಿತಾ ॥ ೩೦ ॥

ಕನಿಷ್ಠಾನಾಮಿಕೇ ದ್ವೇ ದ್ವೇ ಅಂತರ್ಯಾಂಗುಷ್ಠಕುಂಚಿತೌ ।
ಚತ್ವಾರಃ ಪ್ರಸೃತೌ ಯುಗ್ಮಃ ಖಡ್ಗಮುದ್ರಾ ಪ್ರಕೀರ್ತಿತಾ ॥ ೩೧ ॥

---

ಬೆರಳುಗಳೂ ಚಾಚಲ್ಪಟ್ಟಿದ್ದಲ್ಲಿ ವಾರುಣೀ ಮುದ್ರೆಯಾಗುತ್ತದೆ ಅದೇ ಮುದ್ರೆಯು ಅಡ್ಡಲಾಗಿದ್ದಲ್ಲಿ ಮಾರುತಿ ಮುದ್ರೆಯಾಗುತ್ತದೆ

೨೭-೩೦ ಈ ಮುದ್ರೆಯಲ್ಲಿ ಬೆರಳುಗಳೆಲ್ಲವೂ ಸಂಕೋಚಹೊಂದಿದ್ದಲ್ಲಿ ಕೌಬೇರೀ ಮುದ್ರೆಯಾಗುತ್ತದೆ ಮಧ್ಯದ ಮೂರು ಬೆರಳುಗಳೂ ಚಾಚಲ್ಪಟ್ಟಿದ್ದಲ್ಲಿ ಈಶಾನೀ ಮುದ್ರೆಯಾಗುತ್ತದೆ ಪದ್ಮಮುದ್ರೆಯು ಬ್ರಹ್ಮನಿಂದ ಉಂಟಾದದ್ದು ಭೋಗಮುದ್ರೆಯು ಅನಂತನಿಂದ ಉಂಟಾದದ್ದು ತರ್ಜನಿಯನ್ನು ಬಿಟ್ಟು ಬಲಗೈಯ್ಯಿನ ಬೆರಳುಗಳಿಂದ ಬಲಗೈಯ್ಯು ಆವರಿಸಲ್ಪಟ್ಟಿರಬೇಕು. ತರ್ಜನಿಗಳ ಅಗ್ರಭಾಗವನ್ನು ಗ್ರಹಿಸಿ ಆರು ಬೆರಳುಗಳನ್ನೂ ಸಂಕೋಚಮಾಡಿ ಅಂಗುಷ್ಠಗಳ ಮೇಲ ತರ್ಜನಿಯನ್ನು ಇಟ್ಟಲ್ಲಿ ವಜ್ರಮುದ್ರೆ ಎನಿಸುತ್ತದೆ ಶಕ್ತಿಮುದ್ರೆಯನ್ನು ಹಿಂದೆ ಹೇಳಲಾಗಿದೆ ಹಸ್ತಗಳೂ ಎರಡು ಬಾಹುಗಳೂ ಚಾಚಲ್ಪಟ್ಟಿದ್ದಲ್ಲಿ ದಂಡಮುದ್ರೆಯಾಗುತ್ತದೆ

೩೧-೩೨ ಎರಡೂ ಕೈಗಳ ಕನಿಷ್ಠಿಕೆ ಮತ್ತು ಅನಾಮಿಕೆಗಳು ಅಂಗುಷ್ಠಗಳೊಡನೆ ಸೇರಿ ಬಗ್ಗಿದ್ದು ಉಳಿದ ನಾಲ್ಕು ಬೆರಳುಗಳೂ (ಹಸ್ತದ್ವಯವೂ ಸೇರಿ)

**ವರ್ತುಲಾಂ ತರ್ಜನೀಂ ಕೃತ್ವಾ ಅಂಗುಷ್ಠೋಪರಿ ವಿನ್ಯಸೇತ್ ।**
**ದಕ್ಷಿಣಾಂ ತರ್ಜನೀಂ ಚೈವ ತಸ್ಯಾಸ್ಯೇ ತು ನಿಯೋಜಯೇತ್ ॥ ೩೨ ॥**

**ದಕ್ಷಿಣಂ ಕುಂಚಿತಂ ಕೃತ್ವಾ ತಿಸ್ರೋ ವಾಮಾಃ ಪ್ರಸಾರಿತಾಃ ।**
**ಮುಷ್ಟಿಂ ಕೃತ್ವಾ ತು ವಾಮೇನ ತ್ವಂಗುಷ್ಠಂ ತು ಸಮುಚ್ಛ್ರಯೇತ್ ॥**

**ಅಂಗುಷ್ಠೇನ ತು ಸಂಗೃಹ್ಯ ಪತಾಕಾ ಪ್ರಸೃತಾಕರಂ ।**
**ತಿರ್ಯಕ್ಕರಂ ತು ಕೃತ್ವಾ ವೈ ಸಂಕುಂಚ್ಯ ಚತುರಂಗುಲೀಃ ॥ ೩೪ ॥**

**ಅಂಗುಷ್ಠಂ ಪ್ರಸೃತಂ ಕೃತ್ವಾ ಗದಾಮುದ್ರಾ ತಥಾ ಪರಾ ।**
**ಅನ್ಯೋನ್ಯಂ ಯೋಜಯೇದ್ಧಸ್ತೌ ಕನಿಷ್ಠಾಂಗುಷ್ಠಯೋಜಿತಾ ॥ ೩೫ ॥**

**ತದೇವ ಯುಗ್ಮಂ ಪ್ರಸೃತಾ ಶೂಲಮುದ್ರಾ ಪ್ರಕೀರ್ತಿತಾ ।**
**ನಿತ್ಯಂ ಪ್ರಸಾರಯೇದ್ಧಸ್ತಂ ಸ್ವಲ್ಪಾಕಾರಂ ತು ಯೋಜಯೇತ್ ॥ ೩೬ ॥**

---

ಚಾಚಲ್ಪಟ್ಟಿದ್ದಲ್ಲಿ ಇಂತಹ ಹಸ್ತದ್ವಯವು ಖಡ್ಗಮುದ್ರೆಯಾಗುತ್ತದೆ ಒಂದು ಹಸ್ತದ (ಎಡ) ತರ್ಜನಿಯನ್ನು ಮಂಡಲಾಕಾರ ಮಾಡಿ ಅಂಗುಷ್ಠದ ಮೇಲೆ ನ್ಯಾಸಮಾಡಬೇಕು ಬಲಗೈಯಿನ ತರ್ಜನಿಯನ್ನು ಅದರ ಮೇಲ್ಭಾಗದಲ್ಲಿ ಇಡಬೇಕು ಬಲಗೈಯ್ಯಿನ ಅಂಗುಷ್ಠವು ಕುಗ್ಗಿಯೂ ಉಳಿದ ಮೂರು ಬೆರಳುಗಳೂ ಚಾಚಲ್ಪಟ್ಟೂ ಇರಬೇಕು ಎಡಗೈಯನ್ನು ಮುಷ್ಟಿಯನ್ನಾಗಿ ಮಾಡಿ ಎಡಗೈಯ್ಯಿನ ಅಂಗುಷ್ಠವನ್ನು ಮೇಲಕ್ಕೆ ಎತ್ತಬೇಕು

೩೪-೩೫ ಪತಾಕಾ ರೂಪದಿಂದ ಕೂಡಿದ ಹಸ್ತವನ್ನು ಅಂಗುಷ್ಠದೊಡನೆ ಸಂಕೋಚಪಡಿಸಿ ಅಡ್ಡಡ್ಡಲಾಗಿ ಮಾಡಿ ನಾಲ್ಕು ಬೆರಳುಗಳನ್ನೂ ಕುಗ್ಗಿಸಿ ಅಂಗುಷ್ಠವನ್ನು ನೀಡಿದಲ್ಲಿ ಇದೂ ಗದಾಮುದ್ರೆಯಾಗುತ್ತದೆ ಕನಿಷ್ಠಾಂಗುಷ್ಠಗಳೊಡನೆ ಕೂಡಿರುವ ಹಸ್ತಗಳನ್ನು ಪರಸ್ಪರವಾಗಿ ಸೇರಿಸಬೇಕು ಹೀಗೆ ಚಾಚಲ್ಪಟ್ಟ ಹಸ್ತದ್ವಯವು ಶೂಲಮುದ್ರೆಯಾಗುತ್ತದೆ

೩೬-೩೭. ಈ ಮುದ್ರೆಯಲ್ಲಿ ಹಸ್ತವನ್ನು ಚಾಚಿಯೇ ಇರಬೇಕು ಸ್ವಲ್ಪ ಭಾಗವನ್ನು ಮಾತ್ರ ಮುದ್ರೆಯಲ್ಲಿ ಯೋಜಿಸಬೇಕು ಎರಡು ಮಧ್ಯಾಂಗುಲಿಯನ್ನೂ

ಮಧ್ಯಮೇಕಂ ನ್ಯಸೇದ್ವೇ ದ್ವೇ ಪ್ರಸೃತಾಗ್ರೇ ನಿಯೋಜಯೇತ್ ।
ತರ್ಜನೀದ್ವಯಂ ಸಂಕುಚ್ಯ ಮಧ್ಯಮಾಪೃಷ್ಠಸಂಸ್ಥಿತಾ ॥ ೩೭ ॥

ದ್ರವ್ಯರೂಪಾ ಸ್ಮೃತಾ ಹ್ಯೇಷಾ ಆತ್ಮಭಾವೇ ನಿಯೋಜಯೇತ್ ।
ಉತ್ತಾನೌ ತು ಕರೌ ಕೃತ್ವಾ ಷಡೇತೇಂಗುಲಯಃ ಸ್ಮೃತಾಃ ॥ ೩೮ ॥

ಸಮಾನಾಃ ಸುಸಮಾನಾಶ್ಚ ಯೋಜಿತಾ ವೈಷ್ಣವೀ ಭವೇತ್ ।
ತರ್ಜನ್ಯೌ ಕುಂಚಿತೇ ಕೃತ್ವಾ ಮಧ್ಯಮಾ ಪೃಷ್ಠತೋ ನ್ಯಸೇತ್ ॥ ೩೯ ॥

ಕನಿಷ್ಠೋಪರಿಚಾಂಗುಷ್ಠೌ ಘೃತಮುದ್ರಾ ಪ್ರಕೀರ್ತಿತಾ ।
ಉತ್ತಾನಂ ವಾಮಹಸ್ತಂ ಚ ದಕ್ಷಿಣಂ ಚಾಪ್ಯಧೋಮುಖಂ ॥ ೪೦ ॥

ಮಧ್ಯಮಾನಾಮಿಕೇ ದ್ವೇ ದ್ವೇ ಸಂಕುಚ್ಯಾಂಗುಷ್ಠಸಂಸ್ಥಿತೇ ।
ತರ್ಜನೀಕನ್ಯಕಾ ಚೈವ ಮಧ್ಯಮಾಭ್ಯಾಂ ಸಮಾಕ್ರಮೇತ್ ॥ ೪೧ ॥

---

ಜೋಡಿಸಿ ಒಂದಾಗಿ ಯೋಜಿಸಬೇಕು ಮುಂದಕ್ಕೆ ನೀಡಬೇಕು ಎರಡು ತರ್ಜನಿಗಳನ್ನು ಸ್ವಲ್ಪ ವಕ್ರಮಾಡಿ ಮಧ್ಯಮಾಂಗುಲಿಯ ಹಿಂಭಾಗದಲ್ಲಿ ಯೋಜಿಸಬೇಕು ಇದು ದ್ರವ್ಯರೂಪಮುದ್ರೆ ಎನಿಸುತ್ತದೆ ಇದನ್ನು ಮಾನಸಿಕ ಭಾವಾನುಕರಣ ಕಾಲದಲ್ಲಿ ಪ್ರಯೋಗಿಸಬೇಕು.

೩೮-೪೧ ಎರಡು ಕೈಗಳನ್ನೂ ಮೇಲ್ಮುಖವಾಗಿಟ್ಟು ತರ್ಜನಿಗಳೆರಡನ್ನೂ ಬಗ್ಗಿಸಿ ಮಧ್ಯಮಾಂಗುಲಿಯ ಹಿಂಭಾಗದಲ್ಲಿ ನ್ಯಾಸಮಾಡಬೇಕು ಉಳಿದ ಆರು ಬೆರಳುಗಳನ್ನೂ ಆಯಾಯ ಬೆರಳುಗಳ ಸಾಮ್ಯಕ್ಕೆ ತಕ್ಕಂತೆ ಜೋಡಿಸಿ ಕನಿಷ್ಠಿಕೆಯ ಮೇಲೆ ಅಂಗುಷ್ಠಗಳೆರಡನ್ನೂ ನ್ಯಾಸಮಾಡಿದಲ್ಲಿ ಘೃತಮುದ್ರೆಯಾಗುತ್ತದೆ ಎಡಗೈಯ್ಯನ್ನು ಮೇಲ್ಮುಖವಾಗಿಟ್ಟು ಬಲಗೈಯನ್ನು ಅಧೋಮುಖಮಾಡಿ ಮಧ್ಯಮಾಗಳೆರಡನ್ನೂ ಕುಗ್ಗಿಸಿ ಅಂಗುಷ್ಠದಲ್ಲಿಟ್ಟು ತರ್ಜನೀಕನಿಷ್ಠಿಕೆಗಳು ಮಧ್ಯಮಾಂಗುಲಿಯಿಂದ ಆಕ್ರಮಿಸುವಂತೆ ಮಾಡಿದಲ್ಲಿ ಇದು ಎರಡನೆಯ ದ್ರವ್ಯ ರೂಪವಾದ ಗಂಧ ಮುದ್ರೆಯಾಗುತ್ತದೆ

ದ್ವಿತೀಯಾ ದ್ರವ್ಯರೂಪಾ ಚ ಗಂಧಮುದ್ರಾ ಪ್ರಕೀರ್ತಿತಾ ।
ಉತ್ತಾನೌ ತು ಕರೌ ಕೃತ್ವಾ ಕನಿಷ್ಠಾನಾಮಿಕಾ ತಥಾ ॥ ೪೨ ॥

ಸಂಕೋಚಯಿತ್ವಾ ಚತ್ವಾರಃ ಮಧ್ಯಮೇ ದ್ವೇ ಪ್ರಸಾರಯೇತ್ ।
ಅಂಗುಷ್ಠಾಗ್ರೇ ಚ ತರ್ಜನ್ಯೌ ಪುಷ್ಪಮುದ್ರಾ ಪ್ರಕೀರ್ತಿತಾ ॥ ೪೩ ॥

ಉತ್ತಾನೌ ತು ಕರೌ ಕೃತ್ವಾ ಷಡಂಗುಲಿನಿಕುಂಚಿತೌ ।
ಪ್ರಸೃತೇ ತರ್ಜನೀ ಕೃತ್ವಾ ಚಾಗ್ರಮಗ್ರೇ ನಿಯೋಜಯೇತ್ ॥ ೪೪ ॥

ತಯೋರ್ಮೂಲೇ ತಥಾಂಗುಷ್ಠೌ ಧೂಮಮುದ್ರಾ ಪ್ರಕೀರ್ತಿತಾ ।
ತರ್ಜನ್ಯಾ ತರ್ಜನೀ ಯತ್ರ ಕನೀಯಸ್ಯಾ ಕನೀಯಸೀ ॥ ೪೫ ॥

ಚತಸ್ರ ಉಚ್ಛ್ರಿತಾಃ ಕೃತ್ವಾ ಪೃಷ್ಠಂ ಪೃಷ್ಠೇ ನಿಯೋಜಯೇತ್ ।
ಅಂಗುಷ್ಠಾವುಚ್ಛ್ರಿತೌ ಕೃತ್ವಾ ದೀಪಮುದ್ರಾ ಪ್ರಕೀರ್ತಿತಾ ॥ ೪೬ ॥

---

೪೨-೪೪ ಎರಡು ಕೈಗಳನ್ನೂ ಮೇಲ್ಮುಖವಮಾಡಿ ಕಿರುಬೆರಳು ಮತ್ತು ಅನಾಮಿಕೆ ಈ ನಾಲ್ಕನ್ನೂ ಕುಗ್ಗಿಸಿ ಎರಡು ಮಧ್ಯಮಾಂಗುಲಿಗಳನ್ನೂ ಮುಂದಕ್ಕೆ ಚಾಚಬೇಕು. ತರ್ಜನಿಗಳೆರಡೂ ಅಂಗುಷ್ಠದ ಮೇಲ್ಭಾಗ ಹೊಂದಿರಬೇಕು ಇದಕ್ಕೆ ಪುಷ್ಪಮುದ್ರೆ ಎಂದು ಹೆಸರು. ಹಾಗೆಯೇ ಎರಡು ಕೈಗಳನ್ನೂ ಮೇಲ್ಮುಖ ಮಾಡಿ ತರ್ಜನಿಗಳೆರಡನ್ನೂ ಮುಂದಕ್ಕೆ ಚಾಚಿ ಅವುಗಳ ಅಗ್ರಭಾಗವನ್ನು ಪರಸ್ಪರ ಯೋಜಿಸಬೇಕು ಆ ತರ್ಜನಿಗಳ ಮೂಲಭಾಗದಲ್ಲಿ ಅಂಗುಷ್ಠಗಳೆರಡನ್ನೂ ಸೇರಿಸ ಬೇಕು ಉಳಿದ ಆರು ಬೆರಳುಗಳೂ ಕುಗ್ಗಿರಬೇಕು ಇದಕ್ಕೆ ಧೂಮಮುದ್ರೆ ಎಂದು ಹೆಸರು

೪೫-೫೦ ಯಾವ ಹಸ್ತಗಳ ಸನ್ನಿವೇಶದಲ್ಲಿ ತರ್ಜನಿಯೊಡನೆ ತರ್ಜನಿಯೂ, ಕನಿಷ್ಠಿಕೆಯೊಡನೆ ಕನಿಷ್ಠಿಕೆಯೂ ಸೇರಿ ಮುಂದಿನ ನಾಲ್ಕು ಬೆರಳುಗಳು ಉನ್ನತವಾಗಿ ನಿಲ್ಲುವುವೋ ಮತ್ತು ಎರಡು ಕೈಗಳೂ ಹಿಂಭಾಗದಿಂದ ಸೇರಿ ಅಂಗುಷ್ಠಗಳು ಮೇಲ್ಮುಖವಾಗಿ ನಿಲ್ಲುವುವೋ ಇಂತಹ ಸನ್ನಿವೇಶವು ದೀಪಮುದ್ರೆ ಎನಿಸುತ್ತದೆ

ಉಚ್ಛ್ರಿತಾಂಗುಲಯಃ ಸರ್ವಾಃ ಕನೀಯೋರುಭಯೋರಪಿ ।
ಪೃಷ್ಠಪೃಷ್ಠೇ ತು ಸಂಯೋಜ್ಯ ಅಂಗುಷ್ಠಾಗ್ರೇ ನಿಯೋಜಯೇತ್ ॥ ೪೭ ॥

ನೈವೇದ್ಯಮುದ್ರಾ ಕಥಿತಾ ಫಲಾಕಾರಕರಾ ಶುಭಾ ।
ಅಂಗುಲ್ಯಃ ಸಂಹತಾಃ ಸರ್ವಾಃ ತಥಾ ಸಂಕುಚಿತಾಷ್ಟಯಾಃ ॥ ೪೮ ॥

ಪುಷ್ಪಮುದ್ರಾ ವಿನಿರ್ದಿಷ್ಟಾ ದ್ವಿತೀಯಾ ಯದುನಂದನ ।
ಅಂಗುಷ್ಠಾ ಚೈಕತಃ ಕೃತ್ವಾ ಅನಾಮಾ ಚ ಕನೀಯಸೀ ॥ ೪೯ ॥

ಮಧ್ಯಮೇ ದ್ವೇ ಚ ಸಂಕೋಚ್ಯ ಅನಾಮಾ ಪೃಷ್ಠತೋನ್ಯಸೇತ್ ।
ದತ್ವಾ ಚೈವ ತು ತರ್ಜನ್ಯಾ ಮಧ್ಯಮಾಃ ಪರಿವಿನ್ಯಸೇತ್ ॥ ೫೦ ॥

ಮಹಾಮುದ್ರಾ ಭವತ್ಯೇಷಾ ಸರ್ವದ್ರವ್ಯಪ್ರಪೂರಿಣೀ ।
ಅನಾಮಾ ಮಧ್ಯಮೇ ದ್ವೇ ತು ಅನ್ಯೋನ್ಯಾಂತರಿತೇ ಕೃತೇ ॥ ೫೧ ॥

ಸಂಯೋಜ್ಯ ಮಧ್ಯಮೇ ಸಾಗ್ರಂ ತರ್ಜನೀದ್ವಯಮೇವ ಚ ।
ಕನಿಷ್ಠಾದ್ಯೇ ತಥಾ ದ್ವೇ ದ್ವೇ ಸಾಗ್ರೇಽನಾಮ್ನಿ ನಿಯೋಜಯೇತ್ ॥ ೫೨ ॥

---

ಕನಿಷ್ಠಿಕೆಗಳೆರಡೂ ಅಂಗುಷ್ಠದಲ್ಲಿ ಸೇರಿದ್ದು ಇತರ ಬೆರಳುಗಳೆಲ್ಲವೂ ಚಾಚಲ್ಪಟ್ಟಿದ್ದು ಪೃಷ್ಠಭಾಗದಲ್ಲಿ ಎರಡು ಕೈಗಳೂ ಸೇರಿದಲ್ಲಿ ಇದು ಫಲಾಕಾರವಾದ ನೈವೇದ್ಯ ಮುದ್ರೆಯಾಗುತ್ತದೆ ಇದು ಬಹು ಶುಭಪ್ರದವಾದ್ದು ಬೆರಳುಗಳೆಲ್ಲವೂ ಸೇರಿ ಸಂಕೋಚಹೊಂದಿದಲ್ಲಿ ಎರಡನೆಯ ಪುಷ್ಪಮುದ್ರೆಯಾಗುತ್ತದೆ ಅಂಗುಷ್ಠ ಗಳೆರಡನ್ನೂ ಒಂದುಕಡೆ ಸೇರಿಸಿ ಅನಾಮಿಕೆ ಮತ್ತು ಕನಿಷ್ಠಿಕೆಗಳನ್ನೂ ಸೇರಿಸಿ ಎರಡು ಮಧ್ಯಮಾಂಗುಲಿಗಳನ್ನೂ ಕುಗ್ಗಿಸಿ ಅನಾಮಿಕೆಯ ಹಿಂಭಾಗದಲ್ಲಿ ನ್ಯಾಸ ಮಾಡಬೇಕು ಆ ಮಧ್ಯಮಾಂಗುಲಿಯೊಡನೆ ಹಿಂಭಾಗದಲ್ಲಿ ತರ್ಜನಿಯನ್ನು ನ್ಯಾಸ ಮಾಡಿರಬೇಕು ಇದು ಸರ್ವದ್ರವ್ಯಸಂಪಾದಕವಾದ ಮಹಾಮುದ್ರೆ ಎನಿಸುತ್ತದೆ

೫೧-೫೫ ಅನಾಮಿಕೆ ಮತ್ತು ಮಧ್ಯಮಾ ಇವನ್ನು (ಎರಡು ಕೈಗಳಿಂದಲೂ) ಒಂದಕ್ಕೊಂದು ಪಕ್ಕದಲ್ಲಿ ಸೇರುವಂತೆ ಮಾಡಿ ಅಗ್ರಸಹಿತವಾದ ಎರಡು ತರ್ಜನಿ ಗಳನ್ನೂ ಮಧ್ಯಮಾಂಗುಲಿಯಲ್ಲಿ ಯೋಜಿಸಿ ಎರಡು ಕನಿಷ್ಠಿಕಗಳನ್ನೂ ಅಗ್ರಸಹಿತ ವಾಗಿ ಅನಾಮಿಕೆಯಲ್ಲಿಡಬೇಕು ಅಂಗುಷ್ಠಗಳು ಅರ್ಧದ ಮಟ್ಟಿಗೆ ನೋಲ್ಬಾಬಿ

ಅರ್ಧಸ್ಥಿತೌ ತಥಾಂಗುಷ್ಠೌ ಅಮೃತಾಖ್ಯಾ ಪ್ರಕೀರ್ತಿತಾ ।
ಚಂಡೀಶಮುದ್ರಾ ಕಥಿತಾ ಅಂಜಲಿಃ ಕುಬ್ಜತರ್ಜನೀ ॥ ೫೩ ॥

ಅಸ್ತ್ರಮುದ್ರಾ ಭವೇದ್ರಾಜನ್ ಪದ್ಮಃ ಸ್ಯಾತ್ಸಂಹತಾಂಜಲಿಃ ।
ದಕ್ಷಿಣೇನ ತು ಹಸ್ತೇನ ಮುಷ್ಟಿಂ ಬಧ್ವಾ ಪ್ರಯತ್ನತಃ ॥ ೫೪ ॥

ಅಂಗುಷ್ಠಮುನ್ನತಂ ಕೃತ್ವಾ ವಾಮಾಂಗುಷ್ಠೇ ತು ನಿಕ್ಷಿಪೇತ್ ।
ದಕ್ಷಿಣಂ ಚ ತಥಾ ಮುಷ್ಟಿಂ ವಾಮಾಂಗುಲ್ಯಾ ತು ವೇಷ್ಟಯೇತ್ ॥ ೫೫ ॥

ಸದ್ಯೋಜಾತಸ್ಯ ಮುದ್ರೈಷಾ ಕಥಿತಾ ಪಾಪನಾಶಿನೀ ।
ಇಯಮೇವ ವಿಪರ್ಯಸ್ತಾ ವಾಮದೇವಸ್ಯ ಕೀರ್ತಿತಾ ॥ ೫೬ ॥

ಕರಸಂಪುಟಕಂ ಕೃತ್ವಾ ವಾಮಾಂ ನಾಸಾಂ ತು ಕಾರಯೇತ್ ।
ದಕ್ಷಿಣೇ ಮಧ್ಯಮಾಕುಂಚ್ಯ ಅಂಗುಷ್ಠೌ ಕುಂಚಯೇತ್ತಥಾ ॥ ೫೭ ॥

ಶೂಲಾಕಾರಂ ತತಃ ಕೃತ್ವಾ ಹೃದಯಂ ಪರಿವರ್ತಯೇತ್ ।
ಅಘೋರಸ್ಯ ಸ್ಮೃತಾ ಮುದ್ರಾ ಸರ್ವವಿಘ್ನವಿನಾಶಿನೀ ॥ ೫೮ ॥

---

ವಾಗಿರಬೇಕು ಇದು ಅಮೃತವೆಂಬ ಮುದ್ರೆಯಾಗುತ್ತದೆ ಬಗ್ಗಿದ ತರ್ಜನಿಯುಳ್ಳ ಎರಡು ಕೈಗಳೂ ಸೇರಿ ಚಂಡೀಶಮುದ್ರೆಯಾಗುತ್ತದೆ ಅಂಜಲಿಯು ಬೆರಳುಗಳು ಸೇರಿಕೊಂಡಿರುವ ಪದ್ಮಮುದ್ರೆಯೇ ಅಸ್ತ್ರಮುದ್ರೆಯಾಗುತ್ತದೆ ಬಲಗೈಯ್ಯಿನಿಂದ ಪ್ರಯತ್ನಪೂರ್ವಕವಾಗಿ ದೃಢಮುಷ್ಟಿಯನ್ನು ಮಾಡಿ ಮೇಲ್ಮುಖವಾಗಿ ಮಾಡಿರುವ ಅಂಗುಷ್ಠವನ್ನು ಎಡಗೈಯ್ಯಿನ ಅಂಗುಷ್ಠದ ಮೇಲೆ ಇಡಬೇಕು ಆ ಬಲಮುಷ್ಟಿಯನ್ನೂ ಸಹ ಎಡಗೈಯ್ಯಿನ ಬೆರಳುಗಳಿಂದ ವೇಷ್ಟನಮಾಡಬೇಕು ಇದು ಸದ್ಯೋಜಾತ ಮುದ್ರೆಯಾಗುತ್ತದೆ. ಮತ್ತು ಸರ್ವಪಾಪನಾಶಕವೂ ಆಗಿರುತ್ತದೆ

೫೭-೫೮. ಇದೇ ಮುದ್ರೆಯನ್ನು ವಾಮದಕ್ಷಿಣವ್ಯತ್ಯಾಸದಿಂದ ರಚಿಸಿದಲ್ಲಿ ವಾಮದೇವ ಮುದ್ರೆಯಾಗುತ್ತದೆ ಎರಡು ಕೈಗಳನ್ನೂ ಸಂಪುಟದಂತೆ ಸೇರಿಸಿ ಅವನ್ನು ಎಡಭಾಗದ ಮೂಗಿನ ಮೇಲೆ ಯೋಜಿಸಬೇಕು ಬಲಗೈಯ್ಯಿನ ಮಧ್ಯಮಾಂಗುಲಿಯನ್ನು ಬಗ್ಗಿಸಿ ಅಂಗುಷ್ಠಗಳನ್ನೂ ಕುಗ್ಗಿಸಬೇಕು ಶೂಲಾಕಾರದಂತೆ ಮಾಡಿದ ಆ ಹಸ್ತಗಳನ್ನು ಹೃದಯ ಪ್ರದೇಶದಲ್ಲಿಡಬೇಕು ಇದು ಸರ್ವವಿಘ್ನನಾಶಕವಾದ ಅಘೋರಮುದ್ರೆ ಎನಿಸುತ್ತದೆ

ಉತ್ತಾನೌ ತು ಕರೌ ಕೃತ್ವಾ ಅನಾಮಾದ್ವಯಕುಂಚಿತೌ ।
ತಸ್ಯಾಮುಪರಿಚಾಂಗುಷ್ಠೌ ತರ್ಜನ್ಯೌ ದ್ವೇ ಚ ಕುಂಚಿತೇ ॥ ೫೯ ॥

ಮಧ್ಯಾನಾಮೇ ತು ತೇ ದ್ವೇ ತು ಕನಿಷ್ಠಾಮೇಕತೋ ನ್ಯಸೇತ್ ।
ಮುದ್ರೈಷಾ ವಜ್ರಸಂಜ್ಞಸ್ಯ ಸರ್ವದುಷ್ಟನಿವಾರಿಣೀ ॥ ೬೦ ॥

ಕನಿಷ್ಠಾನಾಮಿಕೇ ದ್ವೇ ದ್ವೇ ಅಂತರಾಂತರಯೋಜಿತೇ ।
ಆಕುಂಚ್ಯಾನ್ತರಿತೇ ಯೋಜ್ಯೇ ಶೇಷೇ ಚೈವ ಪ್ರಸಾರಿತೇ ॥ ೬೧ ॥

ಈಶಾನಸ್ಯ ಭವೇನ್ಮುದ್ರಾ ಸರ್ವಕರ್ಮಕರೀ ಶುಭಾ ।
ತರ್ಜನ್ಯೌ ಕುಂಚಿತೇ ಕೃತ್ವಾ ತಥೈವ ಚ ಕನೀಯಸೀ ॥ ೬೨ ॥

ಅಧೋಮುಖಾಂ ಸ್ಪೃಷ್ಟನಖಾಂ ಸ್ಥಿತಾಂ ಮಧ್ಯೇ ಕರಸ್ಯ ಚ ।
ಚತಸ್ರಶ್ಚೋಚ್ಛ್ರಿತಾಃ ಪೃಷ್ಠೇ ತ್ವಂಗುಷ್ಠಾದೇಕತಃ ಕುರು ॥ ೬೩ ॥

ನಾಲವ್ಯವಸಿತೌ ದ್ವೌ ತು ಮುದ್ರಾ ವ್ಯೋಮ್ನಃ ಪ್ರಕೀರ್ತಿತಾ ।
ಮುಷ್ಟಿಂ ಬಧ್ವಾ ತು ವಾಮೇನ ತರ್ಜನೀಂ ಸಂಪ್ರಸಾರಯೇತ್ ॥ ೬೪ ॥

---

೫೯–೬೧ ಅನಾಮಿಕಾದ್ವಯವನ್ನೂ ಕುಗ್ಗಿಸಿ ಕೈಗಳೆರಡನ್ನೂ ಮೇಲ್ಮುಖ ಮಾಡಿ ಅದರ ಮೇಲೆ ಅಂಗುಷ್ಠಗಳೆರಡನ್ನೂ, ತರ್ಜನಿಗಳನ್ನೂ ಕುಗ್ಗಿಸಬೇಕು. ಮಧ್ಯಮಾನಾಮಿಕೆಗಳೆರಡನ್ನೂ ಒಂದು ಕಡೆಯ ಕನಿಷ್ಠಿಕೆಯಲ್ಲಿ ನ್ಯಾಸಮಾಡಬೇಕು. ಇದು ಸರ್ವದುಷ್ಟನಿವಾರಕವಾದ ವಜ್ರಮುದ್ರೆ ಎನಿಸುತ್ತದೆ ಕನಿಷ್ಠಿಕೆ ಮತ್ತು ಅನಾಮಿಕೆಗಳೆರಡನ್ನೂ ಮಧ್ಯದಲ್ಲಿ ಹೊಂದಿಕೊಳ್ಳುವಂತೆ ಸೇರಿಸಿ ಬಗ್ಗಿಸಿ ಕೊನೆಗಳನ್ನೂ ಸೇರಿಸಿ ಉಳಿದ ಬೆರಳುಗಳನ್ನು ನೀಡಿದಲ್ಲಿ ಇದು ಈಶಾನಮುದ್ರೆಯಾಗುತ್ತದೆ ಇದು ಎಲ್ಲಾ ಕರ್ಮಗಳಲ್ಲೂ ಶುಭಕರವಾದುದು

೬೨–೬೪ ತರ್ಜನಿಗಳೆರಡನ್ನೂ ಮತ್ತು ಕನಿಷ್ಠಿಕೆಯನ್ನೂ ಕುಗ್ಗಿಸಿ ಕೈಗಳ ಮಧ್ಯದಲ್ಲಿ ಯೋಜಿಸಿ ಉಳಿದ ನಾಲ್ಕು ಬೆರಳುಗಳನ್ನೂ ಉಗುರುಗಳು ಕಾಣುವಂತೆ ಅಧೋಮುಖವಾಗಿ ಧರಿಸಿ ಅಂಗುಷ್ಠಗಳೆರಡನ್ನೂ ನಾಳಗಳಂತೆ ಒಂದೊಂದು ಕಡೆ ಮಾಡಿದಲ್ಲಿ ವ್ಯೋಮಮುದ್ರೆ ಎನಿಸುತ್ತದೆ ಎಡಗೈಯ್ಯಿಂದ ಮುಷ್ಟಿಯನ್ನು ಬಂಧಿಸಿ ತರ್ಜನಿಯನ್ನು ನೀಡಬೇಕು ಬಲಗೈಯಿನ ಮುಷ್ಟಿಯಿಂದ ಆ ತರ್ಜನಿಯನ್ನು ಗ್ರಹಿಸಬೇಕು ಇದು ಸರ್ವಾತ್ಮಮುದ್ರೆಯೆನಿಸುತ್ತದೆ

ಗ್ರಾಹ್ಯಾ ದಕ್ಷಿಣಮುಷ್ಟ್ಯಾ ತು ಮುದ್ರಾ ಸರ್ವಾತ್ಮನೋ ಭವೇತ್ ।
ವಾಮಮುಷ್ಟ್ಯಾ ತಥಾಂಗುಷ್ಠಂ ದಕ್ಷಿಣಂ ಪ್ರಕ್ಷಿಪೇದ್ಬುಧಃ ॥ ೬೫ ॥

ಕರಜಾ ಪೃಷ್ಠತೋ ಯೋಜ್ಯಾ ಮುದ್ರೈಷಾ ಶಿವಸಂಜ್ಞಿತಾ ।
ಅಂಗುಲ್ಯೋಂತರ್ಹಿತಾಃ ಸರ್ವಾ ವರ್ತುಲಾಗರ್ಭಸಂಸ್ಥಿತಾಃ ॥ ೬೬ ॥

ಪ್ರಸೃತಾ ಮಧ್ಯಮಾ ಯುಕ್ತಾ ಶಿಖಾಮುದ್ರಾ ಪ್ರಕೀರ್ತಿತಾ ।
ಅಧೋಮುಖಾಸ್ತು ವೈ ತಿಸ್ರಃ ತಿರ್ಯಕ್ತಾಶ್ಚ ಸುಸಂಸ್ಥಿತಾಃ ॥ ೬೭ ॥

ಕನೀಯಸ್ಯುಪರಿತ್ಸಾಸಾಂ ತಾಶ್ಚ ಸರ್ವಾ ಅಧೋಮುಖಾಃ ।
ತಾಸಾಮುಪರಿಚಾಂಗುಷ್ಠೇ ದಕ್ಷಿಣಂ ಸಂಪ್ರಯೋಜಯೇತ್ ॥ ೬೮ ॥

ವಾಮೇ ಧರ್ಮಜ್ಞ ಮುದ್ರೈಷಾ ಕಥಿತಾ ಲಾಂಗಲಸ್ಯ ತು ।
ಬಂಧೇ ತ್ವನಾಮಿಕಾ ತ್ವಸ್ಮಿನ್ ಮುದ್ರಾ ಹ್ಯಸ್ತ್ರಸ್ಯ ಕೀರ್ತಿತಾ ॥ ೬೯ ॥

ಉತ್ತಾನೌ ತು ಕರೌ ಕೃತ್ವಾ ಉಭಾವೇಕತ್ರ ಯೋಜಯೇತ್ ।
ಕರಜಾಸ್ತು ಸ್ಮೃತಾಃ ಸರ್ವಾ ಮುದ್ರಾ ಗಾಯತ್ರಸಂಜ್ಞಿತಾಃ ॥ ೭೦ ॥

---

೬೫–೬೯ ಎಡಮುಷ್ಟಿಯಲ್ಲಿ ಬಲದ ಅಂಗುಷ್ಠವನ್ನು ಇಡಬೇಕು. ಬೆರಳುಗಳೆಲ್ಲವೂ ಹಿಂಭಾಗದಲ್ಲಿ ಸೇರಿರಬೇಕು ಈ ಮುದ್ರೆಯು ಶಿವಮುದ್ರೆ ಎನಿಸುತ್ತದೆ ಎಲ್ಲಾ ಬೆರಳುಗಳೂ ಹೊರಗೆ ಕಾಣದಂತೆ ದುಂಡಾಗಿ ಹಸ್ತಮಧ್ಯದಲ್ಲಿ ಲೀನವಾಗಿದು ಮಧ್ಯಮಾಂಗುಲಿಯು ನೀಡಿದಲ್ಲಿ ಇದು ಶಿಖಾಮುದ್ರೆ ಎನಿಸುತ್ತದೆ ಮೂರು ಬೆರಳುಗಳೂ ಅಧೋಮುಖವಾಗಿದ್ದು ಅವೂ ಸಹ ಕೆಳಭಾಗದಲ್ಲಿ ಅಡ್ಡಡ್ಡಲಾಗಿ ಸೇರಿಕೊಂಡಿರಬೇಕು ಕಿರುಬೆರಳು ಇವುಗಳ ಮೇಲಿದ್ದು ಇವೆಲ್ಲವೂ ಅಧೋಮುಖವಾಗಿರಬೇಕು ಅವುಗಳ ಮೇಲೆ ಬಲದ ಅಂಗುಷ್ಠವನ್ನು ಯೋಜಿಸಬೇಕು ಎಡಗೈ ಈ ರೀತಿ ಇದ್ದಲ್ಲಿ ಇದು ಲಾಂಗಲಮುದ್ರೆ ಎನಿಸುತ್ತದೆ ಈ ಮುಷ್ಟಿ ಬಂಧದ ಮೇಲೆ ಅನಾಮಿಕಯೇ ಇದ್ದಲ್ಲಿ ಇದೇ ಅಸ್ತ್ರಮುದ್ರೆಯಾಗುತ್ತದೆ.

೭೦ ೭೧ ಮೇಲ್ಮುಖವಾಗಿರುವ ಕೈಗಳೆರಡನ್ನೂ ಒಂದೇ ಕಡಗೆ ಸೇರಿಸಬೇಕು ಬೆರಳುಗಳೂ ಹಾಗೆಯೇ ಸೇರಿದ್ದಲ್ಲಿ ಇದು ಗಾಯತ್ರ ಮುದ್ರೆಯಾಗುತ್ತದೆ

ಮುಷ್ಟೌ ಪ್ರಸಾರಯೇದೇಕಾಮಂಗುಲೀಂ ತು ಕ್ರಮಾನ್ನೃಪ ।
ತರ್ಜನ್ಯನ್ತಾಂ ಕನಿಷ್ಠಾದ್ಯಾಂ ಶಕ್ತಿಮುದ್ರಾ ಪ್ರಕೀರ್ತಿತಾ ॥ ೭೧ ॥

ಹೃದಿ ನ್ಯಸ್ತೋಂಜಲಿರ್ಜ್ಞೇಯೋ ನಮಸ್ಕಾರೋ ನರಾಧಿಪ ।
ಕಪಿತ್ಥಯಜನೀಂ ಗೃಹ್ಯ ಶಿಖರೇಣ ಧ್ವಜೋ ಭವೇತ್ ॥ ೭೨ ॥

ಅಂಗುಷ್ಠೇ ಯೋಜ್ಯ ತರ್ಜನ್ಯೌ ಹಸ್ತೋತ್ತಾನೌ ಸೃತಾಂಗುಲೀ ।
ಮಣಿಬಂಧೌ ನಿಪೀಡ್ಯೈವ ಶಶಿಕರ್ಣೀ ಭವೇನ್ನೃಪ ॥ ೭೩ ॥

ಸಂಪುಟೀಕೃತ್ಯ ಹಸ್ತೌ ದ್ವೌ ಕಿಂಚಿತ್ಸಂಕುಂಚಿತಾಂಗುಲಿಃ ।
ಮುಕುಲಾ ತು ಸಮಾಖ್ಯಾತಾ ಪಂಕಜಂ ಪ್ರಸೃತೈವ ಸಾ ॥ ೭೪ ॥

ಉತ್ತಾನೌ ತು ಸೃತೌ ಹಸ್ತೌ ಕೃತ್ವಾಂಗುಷ್ಠೌ ತು ಕುಂಚಿತೌ ।
ಮಧ್ಯಸಂಸ್ಥೌ ಕರೌ ಕೃತ್ವಾ ಆವಾಹನ್ಯಾಸ್ತು ಲಕ್ಷಣಂ ॥ ೭೫ ॥

ಮೊದಲು ಮುಷ್ಟಿಯನ್ನು ಮಾಡಿ ಕನಿಷ್ಠಿಕೆಯಿಂದ ಮೊದಲು ಮಾಡಿ ತರ್ಜನಿಯ ವರೆಗೂ ಎಲ್ಲಾ ಬೆರಳುಗಳನ್ನೂ ಕ್ರಮವಾಗಿ ನೀಡಿದಲ್ಲಿ ಶಕ್ತಿಮುದ್ರೆಯಾಗುತ್ತದೆ ಹೃದಯದಲ್ಲಿ ಅಂಜಲಿ ರೂಪದಿಂದ ಎರಡು ಹಸ್ತಗಳನ್ನೂ ಇಟ್ಟಲ್ಲಿ ನಮಸ್ಕಾರ ಮುದ್ರೆಯಾಗುತ್ತದೆ ಶಿಖರವೆಂಬ ಹಸ್ತಸನ್ನಿವೇಶದೊಡನೆ ಕಪಿತ್ಥಯಜನೀ ಎಂಬ ಹಸ್ತಸನ್ನಿವೇಶವನ್ನು ಯೋಜಿಸಿದಲ್ಲಿ ಧ್ವಜಮುದ್ರೆಯಾಗುತ್ತದೆ

೭೩–೭೫ ತರ್ಜನಿಗಳೆರಡನ್ನೂ ಅಂಗುಷ್ಠದಲ್ಲಿ ಸೇರಿಸಿ ನೀಡಿದ ಬೆರಳು ಗಳುಳ್ಳ ಎರಡು ಹಸ್ತಗಳನ್ನೂ ಮೇಲ್ಮುಖಮಾಡಿ ಮಣಿಬಂಧಪ್ರದೇಶವನ್ನು ಪರಸ್ಪರ ಮರ್ದಿಸಿದಲ್ಲಿ ಶಶಿಕರ್ಣೀ ಎಂಬ ಮುದ್ರೆಯಾಗುತ್ತದೆ ಎರಡು ಹಸ್ತಗಳನ್ನೂ ಸಂಪುಟದಂತೆ ಸೇರಿಸಿ ಸ್ವಲ್ಪಮಟ್ಟಿಗೆ ಬೆರಳುಗಳನ್ನು ಕುಗ್ಗಿಸಿದಲ್ಲಿ ಮುಕುಲಮುದ್ರೆ ಯಾಗುತ್ತದೆ ಬೆರಳುಗಳನ್ನು ನೀಡಿದ್ದಲ್ಲಿ ಇದೇ ಪಂಕಜಮುದ್ರೆಯಾಗುತ್ತದೆ. ಎರಡು ಹಸ್ತಗಳನ್ನೂ ವಿಸ್ತರಿಸಿ ಮೇಲ್ಮುಖಮಾಡಿ ಅಂಗುಷ್ಠಗಳನ್ನು ಕುಗ್ಗಿಸಿ ಮಧ್ಯ ಭಾಗದಲ್ಲಿ ಕೈಗಳನ್ನಿಟ್ಟಲ್ಲಿ ಆವಾಹನೀಮುದ್ರೆಯ ಲಕ್ಷಣವಾಗುತ್ತದೆ

**ಅಂಗುಷ್ಠೌ ಕುಂಚಿತೌ ದ್ವೌ ತು ಸ್ವಕೀಯಾಂಗುಲಿವೇಷ್ಟಿತೌ ।**
**ಉಭೌ ಚಾಭಿಮುಖೌ ಹಸ್ತೌ ಯೋಜಯಿತ್ವಾ ತು ರಿಷ್ಟುರಾ　　॥ ೭೬ ॥**

**ಉತ್ತಾನಂ ದಕ್ಷಿಣಾಂಗುಷ್ಠಂ ವಾಮಾಂಗುಷ್ಠೇನ ವೇಷ್ಟಯೇತ್ ।**
**ಭ್ರಾಮಯೇದ್ವರ್ತುಲಾಂಗುಷ್ಠೌ ಮುದ್ರಾ ಪ್ರೋಕ್ತಾ ವಿಸರ್ಜನೇ　॥ ೭೭ ॥**

**ವಿತಸ್ತಿದ್ವಯಸಂಯೋಗಾಚ್ಛಿದ್ರಮುದ್ರಾ ಪ್ರಕೀರ್ತಿತಾ ।**
**ಮುಷ್ಟಿಃ ಪ್ರಮಾರ್ಜಿತಾ ಜ್ಞೇಯಾ ಲಿಂಗಮುದ್ರಾ ತಥೈವ ಚ　॥ ೭೮ ॥**

**ಸಂದಷ್ಟೇ ಮಾರ್ಜಿತಾವೋಷ್ಠೌ ಜೀರ್ಣಾಮುದ್ರಾ ಪ್ರಕೀರ್ತಿತಾ ।**
**ಪ್ರಸಾರಿತೌ ಭುಜೌ ಕೃತ್ವಾ ಭುಜಾಗ್ರೌ ಕುಂಚಿತೌ ತಥಾ　॥ ೭೯ ॥**

**ಅಗ್ರಾಗ್ರೌ ಕುಂಚಿತಾಂಶೇನ ಕರಪಲ್ಲವಸನ್ನಿಭೌ ।**
**ತರ್ಜನೀಂ ಕುಂಚಿತಾಂ ಕೃತ್ವಾ ಅಂಗುಷ್ಠೋಪರಿ ವಿನ್ಯಸೇತ್　॥ ೮೦ ॥**

**ನಿಕುಬ್ಜೌ ಬಾಹುದಂಡೌ ತು ಬಧ್ನೀಯಾಚ್ಚ ಪೃಥಕ್ಪೃಥಕ್ ।**
**ಕೈರಿಣೀ ನಾಮ ಮುದ್ರೈಷಾ ಕಥಿತಾ ಸೂರ್ಯದೇವತಾ　॥ ೮೧ ॥**

೭೬–೭೮. ಎರಡು ಅಂಗುಷ್ಠಗಳನ್ನೂ ಕುಗ್ಗಿಸಿ ಇತರ ಬೆರಳುಗಳಿಂದ ವೇಷ್ಟನಮಾಡಿ ಎರಡು ಹಸ್ತಗಳನ್ನೂ ಅಭಿಮುಖವಾಗಿ ಇಟ್ಟಲ್ಲಿ ರಿಷ್ಟುರಾ ಎಂಬ ಮುದ್ರೆಯಾಗುತ್ತದೆ ಮೇಲ್ಮುಖವಾಗಿರುವ ಬಲಅಂಗುಷ್ಠವನ್ನು ಎಡಅಂಗುಷ್ಠದಿಂದ ವೇಷ್ಟನಮಾಡಿ ವರ್ತುಲಾಕಾರವಾದ ಎರಡು ಅಂಗುಷ್ಠವನ್ನೂ ತಿರುಗಿಸಿದಲ್ಲಿ ವಿಸರ್ಜನ ಮುದ್ರೆಯಾಗುತ್ತದೆ ಗೇಣುಗಳ ಸನ್ನಿವೇಶವುಳ್ಳ ಎರಡು ಹಸ್ತಗಳನ್ನೂ ಸೇರಿಸಿದಲ್ಲಿ ಛಿದ್ರಮುದ್ರೆಯಾಗುತ್ತದೆ ಕೇವಲ ಶುದ್ಧವಾದ ಮುಷ್ಟಿಯು ಲಿಂಗ ಮುದ್ರೆಯಾಗುತ್ತದೆ

೭೯–೮೧ ಸಂದಷ್ಟವೆಂಬ ಹಸ್ತಸನ್ನಿವೇಶದಲ್ಲಿ ಅಧರೋಷ್ಠವು ಸ್ಪರ್ಶಮಾಡಿದಲ್ಲಿ ಜೀರ್ಣಮುದ್ರೆಯಾಗುತ್ತದೆ ಭುಜಗಳನ್ನು ನೀಡಿ ಭುಜಾಗ್ರಗಳನ್ನು ವಕ್ರಮಾಡಿ ಅಗ್ರಾಗ್ರವಾದ ಬೆರಳುಗಳು ಬಗ್ಗಿ ಚಿಗುರಿನಂತೆ ಇದ್ದು ತರ್ಜನಿಯನ್ನು ಬಗ್ಗಿಸಿ ಅಂಗುಷ್ಠದ ಮೇಲೆ ನ್ಯಾಸಮಾಡಬೇಕು ಎರಡು ತೋಳುಗಳನ್ನೂ ಕುಗ್ಗಿಸಿ ಬೇರೆಬೇರೆಯಾಗಿ ಬಂಧಿಸಬೇಕು ಇದು ಸೂರ್ಯದೇವತಾಕವಾದ ಕೈರಿಣೀ ಎಂಬ ಮುದ್ರೆಯಾಗುತ್ತದೆ

ಪದ್ಮಾಕಾರೌ ಕರೌ ಕೃತ್ವಾ ಶ್ಲಿಷ್ಟಮಧ್ಯಮಿಕಾಂಗುಲೀ ।
ಅಂಗುಲ್ಯಾಕಾರಯೋತ್ತಸ್ಮಿನ್ವಿಶ್ವಮುದ್ರೇತಿ ಕೀರ್ತಿತಾ ॥ ೮೨ ॥

ಸಮ್ಮುಖೌ ತು ಕರೌ ಕೃತ್ವಾ ಸಂಶ್ಲಿಷ್ಟಾ ಗ್ರಥಿತಾಂಗುಲೀ ।
ಕನಿಷ್ಠಾಮಧ್ಯಮೇ ಯೋಜ್ಯಾ ತರ್ಜನ್ಯೌ ಮಧ್ಯಮೇ ತಥಾ ॥ ೮೩ ॥

ಹೃದಿ ಮೂರ್ಧ್ನಿ ಶಿಖಾಬನ್ಧೇ ಮುದ್ರೇಯಂ ವ್ಯೋಮಸಂಜ್ಞಿತಾ ।
ಮುಷ್ಟಿಬಂಧೋಚ್ಛ್ರಿತಾಂ ಕೃತ್ವಾ ಮಧ್ಯಹಸ್ತಸ್ಯ ತರ್ಜನೀಂ ॥ ೮೪ ॥

ತಾಲಶಬ್ದಕೃತಾಸೌ ತು ಮುದ್ರಾ ಚಾಸ್ತ್ರಸ್ಯ ಕೀರ್ತಿತಾ ।
ಮಧ್ಯಮಾ ತರ್ಜನೀ ಚೈವ ಸವ್ಯಹಸ್ತಸ್ಯ ಚೋಚ್ಛ್ರಿತೇ ॥ ೮೫ ॥

ಕನಿಷ್ಠಾನಾಮಿಕೇ ಕುಬ್ಜೇ ಸಾಂಗುಷ್ಠೇನೈವ ಸಂಜ್ಞಿತಾ ।
ನೇತ್ರಪ್ರದರ್ಶಿತಾ ಜ್ಞೇಯಾ ಗೋವೃಷಾಗಮನೇ ತಥಾ ॥ ೮೬ ॥

---

೮೨-೮೪ ಮಧ್ಯಮಾಂಗುಲಿಯು ಸೇರಿಕೊಂಡಿರುವಂತೆ ಎರಡು ಕೈಗಳನ್ನೂ ಪದ್ಮಾಕಾರಮಾಡಿ ಬೆರಳುಗಳ ಸನ್ನಿವೇಶವನ್ನೂ ತಕ್ಕಂತೆ ಮಾಡಿದ್ದಲ್ಲಿ ವಿಶ್ವಮುದ್ರೆ ಎನಿಸುತ್ತದೆ ಬೆರಳುಗಳು ಸೇರಿಕೊಂಡಿರುವ ಎರಡು ಕೈಗಳನ್ನೂ ಎದುರು ಬದುರು ಮಾಡಿ ಕನಿಷ್ಠಿಕೆಗಳನ್ನೂ ತರ್ಜನಿಗಳನ್ನೂ ಮಧ್ಯಮಾಂಗುಲಿಯೊಡನೆ ಸೇರಿಸಬೇಕು ಇದನ್ನು ಹೃದಯದಲ್ಲಿಯೂ ತಲೆಯ ಮೇಲೂ ಕೇಶಬಂಧನ ಸ್ಥಾನದಲ್ಲಿಯೂ ಯೋಜಿಸಿದಲ್ಲಿ ಇದು ವ್ಯೋಮಮುದ್ರೆ ಎನಿಸುತ್ತದೆ ಮುಷ್ಟಿಬಂಧಮಾಡಿ ತರ್ಜನಿಯನ್ನು ಮಾತ್ರ ಚಾಚಿ ಮಧ್ಯಹಸ್ತದಲ್ಲಿತಾಲದ ಶಬ್ದವನ್ನು ಮಾಡಿದಲ್ಲಿ ಇದು ಅಸ್ತ್ರಮುದ್ರೆಯಾಗುತ್ತದೆ

೮೫-೮೬. ಎಡಭಾಗದ ಹಸ್ತದಲ್ಲಿ ಮಧ್ಯಮ ಮತ್ತು ತರ್ಜನಿಗಳು ಚಾಚಲ್ಪಟ್ಟದ್ದು ಕನಿಷ್ಠ ಮತ್ತು ಅನಾಮಿಕೆಗಳೆರಡೂ ಕುಗ್ಗಿದಲ್ಲಿ ಇದಕ್ಕೆ ಅಂಗುಷ್ಠಮುದ್ರೆ ಎಂದೇ ಹೆಸರು ಈ ಮುದ್ರೆಯೇ ಎತ್ತು, ಹಸು ಇವುಗಳ ಆಗಮನಕಾಲದಲ್ಲಿ

ಉತ್ತಾನೌ ತು ಕರೌ ಕೃತ್ವಾ ಸರ್ವಾಂಗುಲ್ಯೋ ವಿಕುಂಚಿತಾಃ ।
ಕೃತ್ವಾ ಚೋಪರಿ ಚಾಂಗುಷ್ಠಂ ಚಾಲಯೇತ ಪುನಃಪುನಃ		|| ೮೭ ||

ಸರ್ವಾಸಾಮೇವ ಶಕ್ತೀನಾಂ ಮುದ್ರೈಷಾ ಸಂಪ್ರಕೀರ್ತಿತಾ ।
ದೀಪ್ತಾ ಸೂಕ್ಷ್ಮಾ ಜಯಾ ಭದ್ರಾ ವಿಭೂತಿರ್ವಿಮಲಾ ತಥಾ		|| ೮೮ ||

ಅಮೋಘಾ ವಿದ್ಯುತಾ ಚೈವ ನವಮಾ ಸರ್ವತೋಮುಖೀ ।
ಇತಿ ನಾಮಾನಿ ಶಕ್ತೀನಾಂ ಸರಹಸ್ಯಾನಿ ನಿರ್ದಿಶೇತ್		|| ೮೯ ||

ಸಮ್ಮುಖೌ ತು ಕರೌ ಕೃತ್ವಾ ಶ್ಲಿಷ್ಟೌ ಚೈವ ಪ್ರಸಾರಿತೌ ।
ಇಯಂ ಮುದ್ರಾ ನಮಸ್ಕಾರೇ ರವಿಸಾನ್ನಿಧ್ಯಕಾರಿಣೀ		|| ೯೦ ||

ಅನಾಮಿಕಾಯಾಃ ಸಂದೇಶೋ ರವಿಮುದ್ರಾ ಪ್ರಕೀರ್ತಿತಾ ।
ಸೋಮಮುದ್ರಾ ಮಧ್ಯಮಯಾ ಭೌಮಮುದ್ರಾ ಹ್ಯನಾಮಯಾ		|| ೯೧ ||

ಕನೀಯಸ್ಯಾ ಬುಧೇ ಮುದ್ರಾ ಉನ್ಮೂಲೇ ಜೀವಸಂಜ್ಞಿತಾ ।
ಅನಾಮಿಕಾಮೂಲಗಾ ತು ಶುಕ್ರಮುದ್ರಾ ಪ್ರಕೀರ್ತಿತಾ		|| ೯೨ ||

---

ನೇತ್ರಪ್ರದರ್ಶಿತಾ ಎನಿಸುತ್ತದೆ ಕೈಗಳನ್ನು ಮೇಲ್ಮುಖಮಾಡಿ ಎಲ್ಲಾ ಬೆರಳು ಗಳನ್ನೂ ಕುಗ್ಗಿಸಿ ಅದರ ಮೇಲೆ ಅಂಗುಷ್ಠವನ್ನಿಟ್ಟು ಪುನಃಪುನಃ ಚಲಿಸುವಂತೆ ಮಾಡಬೇಕು ಇದು ಎಲ್ಲಾ ಶಕ್ತಿಗಳಿಗೂ ಮುದ್ರೆಯಾಗುತ್ತದೆ

೮೮-೯೦ ದೀಪ್ತಾ, ಸೂಕ್ಷ್ಮಾ, ಜಯಾ, ಭದ್ರಾ, ವಿಭೂತಿ, ವಿಮಲಾ, ಅಮೋಘಾ, ವಿದ್ಯುತಾ, ಸರ್ವತೋಮುಖೀ ಇವು ಒಂಭತ್ತೂ ಆ ಶಕ್ತಿಗಳ ನಾಮಗಳು ಈ ಶಕ್ತಿಮುದ್ರೆಗಳನ್ನು ಆಯಾಯ ರಹಸ್ಯಮಂತ್ರಗಳೊಡನೆ ನಿರ್ದೇಶಿಸಬೇಕು ಕೈಗಳನ್ನು ಎದುರುಬದುರು ಮಾಡಿ ಸೇರಿಸಿ ನೀಡಿದಲ್ಲಿ ಇದು ಸೂರ್ಯಸಾನ್ನಿಧ್ಯಕ್ಕೆ ಸಾಧಕವಾದ ನಮಸ್ಕಾರಮುದ್ರೆ ಅನಾಮಿಕೆಯ ನಿರ್ದೇಶವು ರವಿಮುದ್ರೆಯಾಗುತ್ತದೆ

೯೧-೯೩ ಮಧ್ಯಮಾಂಗುಲಿಯ ನಿರ್ದೇಶವು ಸೋಮಮುದ್ರೆ ಅನಾಮಿಕೆ ಯಿಂದ ಅಂಗಾರಕಮುದ್ರಾ, ಕಿರುಬೆರಳಿನಿಂದ ಬುಧಮುದ್ರಾ, ಅದರ ಮೂಲ ಭಾಗದಿಂದ ಹೊರತು ಉಳಿದ ಭಾಗದಿಂದ ಗುರುಮುದ್ರಾ ಅದರ ಮೂಲಭಾಗ ಮಾತ್ರದಿಂದ ಶುಕ್ರಮುದ್ರಾ, ಮಧ್ಯಮಾಂಗುಲಿಯ ಬುಡದಲ್ಲಿ ಅಂಗುಷ್ಟವು ಸೇರಿದ್ದಲ್ಲಿ

ಮಧ್ಯಮಾಮೂಲಗಾಂಗುಷ್ಠಾ ಶನಿಮುದ್ರಾ ಪ್ರಕೀರ್ತಿತಾ ।
ತರ್ಜನೀಮೂಲಗಾಂಗುಷ್ಠೇ ರಾಹುಮುದ್ರಾ ಪ್ರಕೀರ್ತಿತಾ ॥ ೯೩ ॥

ತರ್ಜನೀಚಲನಾಜ್ಞೇಯಾ ಕೇತುಮುದ್ರಾ ನರಾಧಿಪ ।
ವಾಮಹಸ್ತೇನ ಶಿಖರಾಃ ಕ್ರೋಧಮುದ್ರಾ ಪ್ರಕೀರ್ತಿತಾ ॥ ೯೪ ॥

ಸಂಪುಟೌ ತು ಕರೌ ಕೃತ್ವಾ ವಾಮೋಚ್ಛ್ರಯಾಂ ನರಾಧಿಪ ।
ಏಷಾ ವರಾಹಮುದ್ರಾ ತು ಸರ್ವಕರ್ಮಕರೀ ಶುಭಾ ॥ ೯೫ ॥

ವಾಮೇನ ವೇಷ್ಟಿತೋ ಹಸ್ತೋ ದಕ್ಷಿಣೋ ಭೈರವೀ ಭವೇತ್ ।
ಹಸ್ತಾವಧೋಮುಖೌ ಯತ್ರ ದೃಷ್ಟಿಶ್ಚಾಧಸ್ತಥಾ ಭವೇತ್ ॥ ೯೬ ॥

ಪಾತಾಲಭಂಜಿನೀ ನಾಮ ಮುದ್ರೈಷಾ ಕಥಿತಾ ನೃಪ ।
ಕಪಿತ್ಥಾನಾಮಿಕಾ ದೀರ್ಘಾ ಸ್ತಂಭಿನೀ ತು ನಿಗದ್ಯತೇ ॥ ೯೭ ॥

[1]ಕರಮಧ್ಯಾತ್ತು ಸಂಗ್ರಾಹ್ಯ ಮಿವಮಧ್ಯೇನ ಚಾಹತಂ ।
ಏವಂ ಮಧ್ಯೇನ ಸಂಯುಕ್ತಾ ಕ್ರೋಧಿನೀ ಪರಿಕೀರ್ತಿತಾ ॥ ೯೮ ॥

ಸಹಮಧ್ಯಾ ತು ಸಂಗ್ರಾಹ್ಯಾ ಖತಮಧ್ಯೇ ದ್ವಿಧಾಹತಂ ।
ಏವಮಧ್ಯೇನ ಸಂಯುಕ್ತಾ ವೀರ್ಯಮುದ್ರಾ ಪ್ರಕೀರ್ತಿತಾ ॥ ೯೯ ॥

---

ಶನಿಮುದ್ರಾ, ತರ್ಜನಿಯ ಮೂಲದಲ್ಲಿ ಅಂಗುಷ್ಠವು ಸೇರಿದ್ದಲ್ಲಿ ರಾಹುಮುದ್ರಾ, ಅಲ್ಲಿರುವ ತರ್ಜನಿಯ ಚಲನದಿಂದ ಕೇತುಮುದ್ರಾ, ಶಿಖರಸನ್ನಿವೇಶದಿಂದಿರುವ ಎಡಗೈಯ್ಯಿಸಿಂದ ಕ್ರೋಧಮುದ್ರೆಯಾಗುತ್ತದೆ ಕೈಗಳೆರಡನ್ನೂ ಸಂಪುಟದಂತೆ ಜೋಡಿಸಿ ಎಡಗೈಯನ್ನು ಮೇಲಕ್ಕೆ ಮಾಡಿದ್ದಲ್ಲಿ ಇದು ವರಾಹಮುದ್ರೆಯಾಗುತ್ತದೆ ಇದು ಸರ್ವಕರ್ಮಗಳಲ್ಲಿಯೂ ಶುಭಕರವಾದ್ದು ಎಡಗೈಯ್ಯಿನಿಂದ ವೇಷ್ಟನಮಾಡಲ್ಪಟ್ಟ ಬಲಗೈಯ್ಯಿಸಿಂದ ಭೈರವೀಮುದ್ರೆಯಾಗುತ್ತದೆ

೯೬–೧೦೦ ಹಸ್ತಗಳೆರಡೂ ಅಧೋಮುಖವಾಗಿದ್ದು ದೃಷ್ಟಿಯೂ ಅಧೋಮುಖವಾಗಿದ್ದಲ್ಲಿ ಇದು ಪಾತಾಲಭಂಜಿನೀ ಎಂಬ ಮುದ್ರೆಯಾಗುತ್ತದೆ ಕಪಿತ್ಥ

---

1 ಇಲ್ಲಿ ೯೮ ನೇ ಶ್ಲೋಕದಿಂದ ೧೦೧ ರವರೆಗೆ ಲಕ್ಷಣವಾಕ್ಯಗಳು ಅರ್ಥವಾಗುವಂತಿಲ್ಲ

ಏವಮುಧ್ಯೇನ ಸಂಯುಕ್ತಂ ಭೈರವೀ ಚಾಪರಾ ಭವೇತ್ ।
ಕ್ಷೇತ್ರಮುಧ್ಯಾ ತು ಸಂಗ್ರಾಹ್ಯಾ ಇರಮುಧ್ಯೇನ ಸಂಯುತಂ ॥ ೧೦೦ ॥

ಏವಮುಧ್ಯೇನ ಚಕ್ರಾಂತಂ ಸ್ತಂಭಿನೀ ಚಾಪರಾ ಭವೇತ್ ।
ಲಸನ್ಮಧ್ಯಾ ತು ಸಂಗ್ರಾಹ್ಯಮೋಕಮುಧ್ಯೇನ ಚಾಹತಂ ॥ ೧೦೧ ॥

ಪಾತಾಲಭಂಜಿನೀ ನಾಮ ಮುದ್ರೇಯಮಪರಾ ಭವೇತ್ ।
ತರ್ಜನೀ ಮಧ್ಯಮಾ ಚೈವ ತಥಾ ಚೈವ ತ್ವನಾಮಿಕಾಂ ॥ ೧೦೨ ॥

ಮಧ್ಯಪರ್ವಸು ಸಂಯುಕ್ತಾಂ ಪೃಷ್ಠತಃ ಕಾರಯೇತ್ಕರೇ ।
ಶಂಖಮುದ್ರೇಯಮುದ್ದಿಷ್ಟಾ ಪೂರ್ವಮುಕ್ತಾ ತಥಾಪರಾ ॥ ೧೦೩ ॥

ಪ್ರಸಾರ್ಯ ಸರ್ವಾಶ್ಚಾಂಗುಲ್ಯಃ ಕರಪೃಷ್ಠೇ ಚ ಯೋಜಯೇತ್ ।
ಚಕ್ರಮುದ್ರಾ ಭವೇತ್ತೇಷಾಂ ಪೂರ್ವಮುಕ್ತಾ ತಥಾಪರಾ ॥ ೧೦೪ ॥

ಕಟಿಭಾಗಪ್ರದೇಶೇ ತು ಮುಷ್ಟಿಸ್ತು ತ್ರಿಶಿರಾ ಭವೇತ್ ।
ಗದಾಮುದ್ರಾ ಭವತ್ಯೇಷಾ ಸರ್ವವಿಘ್ನಪ್ರಣಾಶಿನೀ ॥ ೧೦೫ ॥

---

ವೆಂಬ ಸನ್ನಿವೇಶದಿಂದ ಕೂಡಿ ಅನಾಮಿಕೆಯು ದೀರ್ಘವಾಗಿ ಚಾಚಲ್ಪಟ್ಟಿದ್ದಲ್ಲಿ ಸ್ತಂಭಿನೀ ಎಂಬ ಮುದ್ರೆಯಾಗುತ್ತದೆ

೧೦೧-೧೦೫ ಒಂದು ಹಸ್ತದಲ್ಲಿರುವ ತರ್ಜನೀ ಮಧ್ಯಮ ಅನಾಮಿಕೆ ಈ ಮೂರನ್ನೂ ಮತ್ತೊಂದು ಹಸ್ತದ ಈ ಬೆರಳುಗಳೊಡನೆ ಮಧ್ಯದ ಗಿಣ್ಣಿನವರೆಗೂ ಸೇರಿಸಿ ಕೈಗಳ ಹಿಂಭಾಗವನ್ನು ಸೇರಿಸಿದ್ದಲ್ಲಿ ಶಂಖಮುದ್ರೆಯಾಗುತ್ತದೆ ಹಿಂದೆಯೂ ಬೇರೆ ಶಂಖಮುದ್ರೆಯನ್ನು ಹೇಳಲಾಗಿದೆ ಎಲ್ಲಾ ಬೆರಳುಗಳನ್ನೂ ನೀಡಿ ಕೈಯ್ಯಿನ ಕೆಳಭಾಗದಲ್ಲಿ ಯೋಜಿಸಿದಲ್ಲಿ ಇದು ಹಿಂದೆ ಹೇಳಿರುವ ಚಕ್ರಮುದ್ರೆಗಿಂತ ಬೇರೆಯಾದ ಚಕ್ರಮುದ್ರೆಯಾಗುತ್ತದೆ ತ್ರಿಶಿರಾ ಎಂಬ ಮುಷ್ಟಿಯನ್ನು ಕಟಿಪ್ರದೇಶದಲ್ಲಿ ಇಟ್ಟಲ್ಲಿ ಗದಾಮುದ್ರೆಯಾಗುತ್ತದೆ ಇದು ಸರ್ವ ವಿಘ್ನನಾಶಕನಾದ ದು

**ಅನ್ಯೋನ್ಯಾಭಿಮುಖೌ ಕೃತ್ವಾ ಕರೌ ಸಂವೇಷ್ಟಿತಾಂಗುಲೀ ।**
**ಸಹಾಂಗುಷ್ಠೇನ ನಿರ್ದಿಷ್ಟಾ ಮುದ್ರಾ ಕೌಸ್ತುಭಸಂಜ್ಞಿತಾ ॥ ೧೦೬ ॥**

**ಸಂಸ್ಪೃಶ್ಯ ವಹ್ನಿಶಿಖರಂ ವಾಮದಕ್ಷಿಣಕಂ ಸ್ಪೃಶೇತ್ ।**
**ಇಯಂ ಮುದ್ರಾ ವಿನಿರ್ದಿಷ್ಟಾ ವನಮಾಲೇತಿ ಪಾರ್ಥಿವ ॥ ೧೦೭ ॥**

**ಅನಾಮಿಕಾನಾಮನೇ ಗ್ರನ್ಥೇ ಸ್ರಜಂ ದ್ರವ್ಯಕರದ್ವಯೋಃ ।**
**ಜಂಘಾಮಧ್ಯಗತೌ ಕೃತ್ವಾ ಚಿಬುಕೇಽರ್ಧಸಮಾಯುತೌ ॥ ೧೦೮ ॥**

**ಮುಖಂ ವಿವೃತಕಂ ಕುರ್ಯಾಜ್ಜ್ವಲಜ್ಜಿಹ್ವಾಂ ತು ಲೇಲಿಹಾಂ ।**
**ಏಷಾ ಮುದ್ರಾ ಮಹಾಮುದ್ರಾ ನಾರಸಿಂಹೀತಿ ಕೀರ್ತಿತಾ ॥ ೧೦೯ ॥**

**ಅಂಗುಷ್ಠಂ ಮುಷ್ಟಿನಾಗ್ರಾಹ್ಯಂ ಹೃನ್ಮುದ್ರಾ ಪರಿಕೀರ್ತಿತಾ ।**
**ಮುಷ್ಟಿಂ ಬದ್ಧ್ವೈವ ಚಾಂಗುಷ್ಠೇ ತಿರ್ಯಗ್ಗಂ ಕಾರಯೇಚ್ಛಿರಃ ॥ ೧೧೦ ॥**

**ಸ್ಪಷ್ಟಾ ತು ತರ್ಜನೀಮುಷ್ಟ್ಯಾ ಶಿಖಾಮುದ್ರಾ ಪ್ರಕೀರ್ತಿತಾ ।**
**ತರ್ಜನೀಪ್ರಾಂತಸಂಲಗ್ನೇ ದ್ವೇ ಮುಷ್ಟೀ ಕವಚಂ ಭವೇತ್ ॥ ೧೧೧ ॥**

---

೧೦೬-೧೦೯ ಮಡಿಸಿದ ಬೆರಳುಗಳುಳ್ಳ ಎರಡು ಕೈಗಳನ್ನೂ ಪರಸ್ಪರಾಭಿಮುಖಮಾಡಿ ಅಂಗುಷ್ಠದೊಡನೆ ಸೇರಿಸಿದ್ದಲ್ಲಿ ಇದು ಕೌಸ್ತುಭಮುದ್ರೆಯಾಗುತ್ತದೆ ವಹ್ನಿಶಿಖರವೆಂಬ ಸನ್ನಿವೇಶ ಹೊಂದಿದ ಎಡ ಹಸ್ತವು ಬಲ ಹಸ್ತವನ್ನು ಸೇರಿದ್ದಲ್ಲಿ ಇದು ವನಮಾಲಾ ಎಂಬ ಮುದ್ರೆಯಾಗುತ್ತದೆ ದ್ರವ್ಯಮುದ್ರೆಯಿಂದ ಕೂಡಿದ ಎರಡು ಕೈಗಳಲ್ಲಿಯೂ ಒಗ್ಗಿದ ಅನಾಮಿಕಗಳಿಂದ ಮಾಲೆಯನ್ನು ಧರಿಸಿ ಮೊಣಕಾಲಿನ ಮಧ್ಯದಲ್ಲಿಟ್ಟು ಆ ಕೈಗಳ ಅರ್ಧಭಾಗವು ಮುಂದಿಯ ಮೇಲೆ ಬಗ್ಗಿರುವ ಗಲ್ಲದಲ್ಲಿ ಸೇರಿದ್ದು ತೆರೆದ ಬಾಯಿಯಿಂದ ಜ್ವಲಿಸುವ ಮತ್ತು ಇತ್ತ ಅತ್ತ ನೆಕ್ಕುತ್ತಿರುವ ನಾಲಿಗೆಯು ಹೊರ ಬಿದ್ದಿದ್ದಲ್ಲಿ ಇದು ನಾರಸಿಂಹೀ ಎಂಬ ಮಹಾಮುದ್ರೆಯಾಗುತ್ತದೆ

೧೧೦-೧೧೧ ಅಂಗುಷ್ಠವನ್ನು ಮುಷ್ಟಿಯಿಂದ ಗ್ರಹಿಸಿದಲ್ಲಿ ಅದು ಹೃನ್ಮುದ್ರೆಯಾಗುತ್ತದೆ ಮುಷ್ಟಿಯನ್ನು ಬಂಧಿಸಿ ಅಂಗುಷ್ಠದ ಮೇಲೆ ತಲೆಯನ್ನು ಅಡ್ಡಲಾಗಿ ಇಟ್ಟು ಮುಷ್ಟಿಯ ಮೇಲೆ ತರ್ಜನಿಯು ಸ್ಪಷ್ಟವಾಗಿ ತೋರುತ್ತಿದ್ದಲ್ಲಿ ಇದು ಶಿಖಾಮುದ್ರೆಯಾಗುತ್ತದೆ ಎರಡು ಮುಷ್ಟಿಗಳೂ ತರ್ಜನಿಯ ಪ್ರಾಂತದಲ್ಲಿ ಸೇರಿದಲ್ಲಿ

ಮುಷ್ಟೀ ಬದ್ಧ್ವಾ ತು ಹಸ್ತೌ ದ್ವೇ ಉಭಯೋಂಗುಲಿಯೋಜಿತೌ ।
ಗದಾಮುದ್ರಾ ಸಮಾಖ್ಯಾತಾ ಸರ್ವಕರ್ಮಕರೀ ಶುಭಾ　　　॥ ೧೧೨ ॥

ತರ್ಜನೀ ತು ತಥಾಂಗುಷ್ಠಂ ಪ್ರತಿಶ್ಲಿಷ್ಟಾ ತು ಕಾರಯೇತ್ ।
ಶೇಷಾಃ ಪ್ರಸಾರಿತಾಂಗುಲ್ಯಃ ನೇತ್ರಮುದ್ರಾ ಭವೇನ್ನೃಪ　　　॥ ೧೧೩ ॥

ಅನಾಮೌ ವಲಿನೌ ಕೃತ್ವಾ ತರ್ಜನ್ಯಾನಮನಾಶ್ರಯಾತ್ ।
ಮಧ್ಯಮೌ ಚೇನ್ನತೌ ಕೃತ್ವಾ ಅಂಗುಷ್ಠೌ ಶ್ಲೇಷಿತೌ ಸಮೌ　　　॥ ೧೧೪ ॥

ಏಷಾ ಮುದ್ರಾ ಸಮಾಖ್ಯಾತಾ ದಿವ್ಯಾ ಚ ಶಿರಸೋ ನೃಪ ।
ಅಂಜಲಿಃ ಪ್ರಮುದಾ ಮುದ್ರಾ ಕ್ಷಿಪ್ರಂ ದೇವಪ್ರಸಾದಿನೀ　　　॥ ೧೧೫ ॥

ವಂದನೇ ಹೃದಯೇ ದತ್ತಾ ಪೂರ್ವದಕ್ಷಿಣತೋಽಪರಾ ।
ಊರ್ಧ್ವಾಂಗುಷ್ಠೋ ವಾಮಮುಷ್ಟಿರ್ದಕ್ಷಿಣೋಽಙ್ಗುಷ್ಠಬಂಧನಃ　　　॥ ೧೧೬ ॥

ಸನ್ಯಸ್ಯಾನ್ಯಸ್ಯ ಚಾಂಗುಷ್ಠಂ ಯಸ್ಯಾ ಊರ್ಧ್ವಂ ಪ್ರತಿಷ್ಠಿತಂ ।
ವಾಸುದೇವಸ್ಯ ಮುದ್ರೈಷಾ ಬದ್ಧಾ ಸ್ಯಾತ್ಪಾಪನಾಶನೀ　　　॥ ೧೧೭ ॥

---

ಕವಚಮುದ್ರೆಯಾಗುತ್ತದೆ. ಎರಡು ಕೈಗಳ ಬೆರಳುಗಳೂ ಸೇರಿಕೊಂಡು ಒಟ್ಟಾಗಿ ಮುಷ್ಟಿಬಂಧಮಾಡಿದಲ್ಲಿ ಇದು ಗದಾಮುದ್ರೆಯಾಗುತ್ತದೆ. ಇದು ಸರ್ವ ಕರ್ಮಕರ ಮತ್ತು ಶುಭಕರ.

೧೧೩-೧೧೭. ತರ್ಜನಿಯನ್ನೂ, ಅಂಗುಷ್ಠವನ್ನೂ ಎದುರುಬದರಾಗಿ ಸೇರಿಸಿ ಉಳಿದ ಬೆರಳುಗಳೆಲ್ಲವೂ ನೀಡಿದ್ದಲ್ಲಿ ಇದು ನೇತ್ರಮುದ್ರೆಯಾಗುತ್ತದೆ. ಸುಕ್ಕು ಇರುವ ಸ್ಥಳದಲ್ಲಿ ಬಗ್ಗಿಸದೆ ಎರಡು ಮಧ್ಯಮಾಂಗುಲಿಗಳನ್ನೂ ಸ್ವಲ್ಪ ಬಗ್ಗಿದ ತರ್ಜನಿಯ ಆಶ್ರಯ ಹೊಂದಿಸಿ ಅಂಗುಷ್ಠಗಳೆರಡನ್ನೂ ಸಮವಾಗಿಸೇರಿಸಿದಲ್ಲಿ ಇದು ದಿವ್ಯಶಿರೋಮುದ್ರೆ ಎನಿಸುತ್ತದೆ. ಎರಡು ಕೈಗಳಿಂದ ಕೂಡಿದ ಅಂಜಲಿಯು ಪ್ರಮುದಾ ಎಂಬ ಮುದ್ರೆ. ಇದು ಜಾಗ್ರತೆಯಾಗಿ ದೇವತಾನುಗ್ರಹಕ್ಕೆ ಸಾಧಕವಾಗುತ್ತದೆ. ವಂದನಕಾಲದಲ್ಲಿ ಎಡಬಲವ್ಯತ್ಯಾಸದಿಂದ ಹೃದಯದಲ್ಲಿ ಎರಡು ಕೈಗಳನ್ನಿಟ್ಟು ಎಡಮುಷ್ಟಿಯು ಮೇಲ್ಮುಖವಾದ ಅಂಗುಷ್ಠದಿಂದಲೂ ಬಲಮುಷ್ಟಿಯು ಅಂಗುಷ್ಠ ಬಂಧದಿಂದ ಕೂಡಿಯೂ ಮೇಲ್ಮುಖವಾದ ಅಂಗುಷ್ಠವುಳ್ಳ ಮುಷ್ಟಿಯ ಮೇಲೆ ಮತ್ತೊಂದು ಅಂಗುಷ್ಠವನ್ನು ಇಟ್ಟಲ್ಲಿ ವಾಸುದೇವ ಮುದ್ರೆಯಾಗುತ್ತದೆ. ಇದರ ಬಂಧನವು ಸರ್ವಪಾಪಗಳಿಗೂ ನಾಶಕವಾಗುತ್ತದೆ.

**ಹಸ್ತಯೋರುಭಯೋರೇವ ಕನಿಷ್ಠಾಂಗುಷ್ಠಗರ್ಭಕೌ ।**
**ಶೇಷಾಃ ಪ್ರಸಾರಿತಾಃ ಶ್ಲಿಷ್ಟಾಃ ಮುದ್ರಾ ಸಂಕರ್ಷಣಸ್ಯ ತು ॥ ೧೧೮ ॥**

**ತರ್ಜನ್ಯಾವರ್ಧತಃ ಶ್ಲಿಷ್ಟೌ ಸಮಾಂಗುಷ್ಠೌ ತು ಶ್ಲೇಷಿತೌ ।**
**ಏಷಾ ಮುಷ್ಟಿಂ ತತಃ ಕೃತ್ವಾ ಮುದ್ರಾ ಪ್ರದ್ಯುಮ್ನಸಂಜ್ಞಿತಾ ॥ ೧೧೯ ॥**

**ಅಂಗುಲ್ಯೌ ವಲಿತೌ ಯತ್ರ ಶೂರ್ಪಾಕಾರೌ ತು ಕಾರಯೇತ್ ।**
**ವೇಷ್ಟ್ಯಾಂಗುಷ್ಠಾವಧಃ ಕಾರ್ಯ್ಯಾ ವನಿರುದ್ಧೇ ತು ಕಾರಯೇತ್ ॥ ೧೨೦ ॥**

**ಇತ್ಯುದ್ದೇಶೇ ತು ತೇ ಪ್ರೋಕ್ತಾ ಮುದ್ರಾಹಸ್ತಾ ಮಯಾ ನೃಪ ।**
**ದರ್ಶಯೇನ್ಮಂತ್ರಯುಕ್ತಾನಾಂ ಪರಾಂ ಸಿದ್ಧಿಮಭೀಪ್ಸತಾಂ ॥ ೧೨೧ ॥**

**ಯಥಾ ಮಂತ್ರಂ ಯಥಾ ದೇವಂ ಯಥಾವಿಧಿರತಂದ್ರಿತಃ ।**
**ಮಂತ್ರೇಷು ದೇವತಾ ಯುಕ್ತಾ ಬಹ್ವ್ಯೋ ಮುದ್ರಾಃ ಪ್ರಕೀರ್ತಿತಾಃ ॥**
**ತಾಸಾಂ ಮಂತ್ರಂ ತು ವಿಜ್ಞೇಯ ನಿಯೋಗೋ ನೃಪ ಇಷ್ಯತೇ ॥ ೧೨೩ ॥**

---

೧೧೮-೧೨೦ ಎರಡು ಹಸ್ತಗಳಲ್ಲಿಯೂ ಕನಿಷ್ಠ ಮತ್ತು ಅಂಗುಷ್ಠಗಳನ್ನು ಮಧ್ಯಭಾಗದಲ್ಲಿ ಲೀನಮಾಡಿ ಉಳಿದ ಬೆರಳುಗಳೆಲ್ಲಾ ಒಂದಕ್ಕೊಂದು ಸೇರಿ ನೀಡಿದ್ದಲ್ಲಿ ಇದು ಸಂಕರ್ಷಣಮುದ್ರ ಎನಿಸುತ್ತದೆ ಬೆರಳುಗಳು ಚಮುರಿಸಿದ್ದು ಹಸ್ತಗಳು ಮೊರದಂತೆ ವಿಸ್ತಾರವಾಗಿದ್ದಲ್ಲಿ ಮತ್ತು ಅಂಗುಷ್ಠಗಳು ಕೆಳಭಾಗದಲ್ಲಿ ಒಂದನ್ನೊಂದು ವೇಷ್ಟನಮಾಡಿದ್ದಲ್ಲಿ ಇದು ಅನಿರುದ್ಧ ಮುದ್ರೆಯಾಗುತ್ತದೆ

೧೨೧-೧೨೩. ಎಲೈ ದೊರೆಯೇ ಈ ರೀತಿಯಾದ ಹಸ್ತಮುದ್ರೆಗಳನ್ನೆಲ್ಲಾ ಉದ್ದೇಶಕ್ರಮದಿಂದ ನಿನಗೆ ಹೇಳಿದ್ದಾಯಿತು ಇವು ಮಂತ್ರಸಿದ್ಧಿಯುಳ್ಳವರಿಗೆ ಇಷ್ಟವಾದ ಉತ್ತಮ ಸಿದ್ಧಿಗಳನ್ನೂ ಉಂಟುಮಾಡುತ್ತವೆ ಆಯಾಯ ಮಂತ್ರಕ್ಕೆ ಮತ್ತು ಮಂತ್ರಪ್ರತಿಪಾದ್ಯವಾದ ದೇವತೆಗೆ ತಕ್ಕಂತೆ ಯಥಾವಿಧಿಯಾಗಿ ಜಾಗರೂಕತೆಯಿಂದ ಇದನ್ನು ಪ್ರಯೋಗಿಸಬೇಕು ಮಂತ್ರಗಳಲ್ಲಿ ದೇವತೆಗಳಿಂದ ಕೂಡಿದ ಇಂತಹ ಬಹುಮುದ್ರೆಗಳು ಪ್ರಸಿದ್ಧವಾಗಿವೆ ಆಯಾಯ ಮುದ್ರೆಗಳಿಗೆ ಆಯಾಯ ದೇವತಾಮಂತ್ರವೇ ಪ್ರಯೋಗಕ್ಕೆ ಯೋಗ್ಯವಾದ ನಿಯೋಗವೆಂದು ತಿಳಿಯಬೇಕು

ಏತಾವದುಕ್ತಂ ನೃಪ ನೃತ್ತಶಾಸ್ತ್ರಂ
ಸಮಾಸತಃ ಪಾರ್ಥಿವವಂಶಮುಖ್ಯ ।
ನಿಃಶೇಷಮೇತದ್ಗದಿತಂ ಮಹಾರ್ಥಂ
ವಿಸ್ತಾರತಃ ಸರ್ವಜಗತ್ಪ್ರಧಾನಂ　　॥ ೧೨೪ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ನೃತ್ತಶಾಸ್ತ್ರಮುದ್ರಾನಾಮ
ತ್ರಯಸ್ತ್ರಿಂಶತ್ತಮೋಽಧ್ಯಾಯಃ

---

ದೊರೆಯೇ, ನೃತ್ಯ ಶಾಸ್ತ್ರವೆಲ್ಲವನ್ನೂ ಈ ರೀತಿ ಸಂಗ್ರಹಿಸಿ ಹೇಳಿದ್ದೇನೆ ಅನೇಕ ಪ್ರಯೋಜನಗಳಿಂದ ಕೂಡಿರುವುದರಿಂದ ಜಗತ್ತಿನಲ್ಲೇ ಪ್ರಧಾನವಾದ ಈ ಶಾಸ್ತ್ರವನ್ನು ನಿಃಶೇಷವಾಗಿ ಹೇಳಿದಂತೆಯೇ ಆಗಿದೆ

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯ ಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ನೃತ್ಯಶಾಸ್ತ್ರಮುದ್ರೆ ಎಂಬ ಮೂವತ್ತಮೂರನೆಯ
ಅಧ್ಯಾಯವು ಮುಗಿದಿದೆ



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಚತುಸ್ತ್ರಿಂಶತ್ತಮೋಽಧ್ಯಾಯಃ ||

|| ವಜ್ರ ಉವಾಚ ||

**ನೃತ್ತಮುತ್ಪಾದಿತಂ ಕೇನ ಋಷಿಣಾ ದೈವತೇನ ವಾ ।**
**ಏತನ್ಮೇ ಸಂಶಯಂ ಛಿನ್ಧಿ ತ್ವಂ ಹಿ ಸರ್ವವಿದುಚ್ಯಸೇ || ೧ ||**

|| ಮಾರ್ಕಂಡೇಯ ಉವಾಚ ||

**ಏಕಾರ್ಣವೇ ಪುರಾ ಲೋಕೇ ನಷ್ಟಸ್ಥಾವರಜಂಗಮೇ ।**
**ಶೇಷಪರ್ಯಂಕಶಯನೇ ಸುಪ್ತೇ ಮಧುನಿಷೂದನೇ || ೨ ||**

---

### ಮೂವತ್ತನಾಲ್ಕನೆಯ ಅಧ್ಯಾಯ.

೧ ವಜ್ರನು ಪ್ರಶ್ನೆಮಾಡುತ್ತಾನೆ —ನೃತ್ತವನ್ನು ಮೊದಲು ಯಾರು ಉತ್ಪಾದನೆಮಾಡಿದರು ಋಷಿಯೇ ಅಥವಾ ದೇವತೆಯೇ, ಈ ನನ್ನ ಸಂಶಯವನ್ನು ಸರ್ವಜ್ಞನಾದ ನೀನು ಹೋಗಲಾಡಿಸಬೇಕು ಇದಕ್ಕೆ ಮಾರ್ಕಂಡೇಯರು ಉತ್ತರ ಹೇಳುತ್ತಾರೆ

೨-೪ ಸೃಷ್ಟಿಗೆ ಪೂರ್ವದಲ್ಲಿ ಮಹಾಪ್ರಳಯದಿಂದ ಲೋಕವೆಲ್ಲವೂ ಜಲಮಯವಾಗಿ ಚರಸ್ಥಿರ ವಸ್ತುಗಳೆಲ್ಲವೂ ನಾಶಹೊಂದಿದುವು ಅಂತಹ ಪ್ರಳಯದಲ್ಲಿ ಲಕ್ಷ್ಮೀಪತಿಯಾದ ನಾರಾಯಣನು ಶೇಷನೆಂಬ ಹಾಸಿಗೆಯ ಮೇಲೆ ಮಲಗಿ ಲಕ್ಷ್ಮಿಯಿಂದ ಪಾದಸಂವಾಹನ ಹೊಂದುತ್ತಾ ತನ್ನ ಯೋಗಲೀಲೆಯಲ್ಲಿ ಮಗ್ನ

ಸಂವಾಹ್ಯಮಾನಚರಣೋ ಲಕ್ಷ್ಮ್ಯಾ ಯದುಕುಲೋದ್ವಹ ।
ನಾಭ್ಯಾಂ ತಸ್ಯ ಸಮುತ್ಪನ್ನಂ ಪದ್ಮಂ ಪದ್ಮನಿಭೇಕ್ಷಣ ॥ ೩ ॥

ತತ್ರ ಜಾತಃ ಸ್ವಯಂ ಬ್ರಹ್ಮಾ ದೇವಃ ಶುಭಚತುರ್ಮುಖಃ ।
ದೇವೈಸ್ಸಹ ಮಹಾಭಾಗ ಸಶರೀರೈರ್ನರಾಧಿಪ ॥ ೪ ॥

ಪದ್ಮೋದಬಿಂದುಸಂಭೂತೌ ತತ್ರೈವ ಮಧುಕೈಟಭೌ ।
ರಜಸ್ತಮೋಮಯೌ ಘೋರೌ ದಾನವೌ ತೌ ಭಯಾನಕೌ ॥ ೫ ॥

ತತೋ ಜಗೃಹತುರ್ವೇದಾನ್ ಬ್ರಹ್ಮಣಸ್ತೌ ನರಾಧಿಪ ।
ಹೃತವೇದಸ್ತತೋ ಬ್ರಹ್ಮಾ ತುಷ್ಟಾವ ಮಧುಸೂದನಂ ॥ ೬ ॥

ವೇದಾ ಮೇ ಪರಮಂ ಚಕ್ಷುಃ ವೇದಾ ಮೇ ಪರಮಂ ಬಲಂ ।
ದಾನವಾಪಹೃತಾ ವೇದಾ ಅಂಧೋ ಜಾತೋಽಸ್ಮಿ ಶತ್ರುಹನ್ ॥ ೭ ॥

ಏವಮುಕ್ತಸ್ತದಾ ವಿಷ್ಣುರ್ಬ್ರಹ್ಮಣಾ ಪುರುಷೋತ್ತಮಃ ।
ಉತ್ಥಾಯ ಸಲಿಲಾತ್ತಸ್ಮಾದ್ಬಭ್ರಾಮ ಸಲಿಲಾಶಯೇ ॥ ೮ ॥

---

ನಾಗಿದ್ದನು ಆಗ ಅವನ ನಾಭಿ (ಹೊಕ್ಕಳು) ಯಲ್ಲಿ ಒಂದು ಪದ್ಮವು ಉದಯಿಸಿತು ಆ ಪದ್ಮದಿಂದ ಚತುರ್ಮುಖವುಳ್ಳ ಬ್ರಹ್ಮದೇವರು ತಾನಾಗಿ ಉದ್ಭವಿಸಿದರು ಅವರೊಡನೆ ಶರೀರಸಹಿತರಾದ ಇತರ ದೇವತೆಗಳೂ ಉದ್ಭವಿಸಿದರು

೫–೮ ಆ ಪದ್ಮದ ಉದಕಬಿಂದುಗಳಿಂದ ಮಧುಕೈಟಭರೆಂಬ ದಾನವರು ಅಲ್ಲಿಯೇ ಉದ್ಭವಿಸಿದರು ಆ ದಾನವರು ರಜಸ್ತಮೋಗುಣಪ್ರಚುರರಾದುದರಿಂದ ಘೋರರಾಗಿಯೂ, ಭಯಂಕರರಾಗಿಯೂ ತೋರಿದರು ಅವರು ತಮ್ಮ ಪ್ರಕೃತಿಗೆ ತಕ್ಕಂತೆ ಬ್ರಹ್ಮನಿಂದ ವೇದಗಳನ್ನು ಅಪಹರಿಸಿದರು ಅನಂತರ ವೇದಾಪಹಾರದಿಂದ ದುಃಖಿತನಾದ ಬ್ರಹ್ಮನು ಮಧುಸೂದನನಾದ ಪರಮಾತ್ಮನನ್ನು ಸ್ತೋತ್ರಮಾಡಿದನು ಶತ್ರುನಾಶಕನಾದ ಎಲೈ ಪರಮಾತ್ಮನೇ ನನಗ ವೇದಗಳೇ ಶ್ಲಾಘ್ಯವಾದ ಕಣ್ಣುಗಳು ಆ ವೇದಗಳೇ ನನಗೆ ಬಲ ಅಂತಹ ವೇದಗಳು ದಾನವರಿಂದ ಅಪಹರಿಸಲ್ಪಟ್ಟವು. ನಾನು ಈಗ ಕಣ್ಣಿಲ್ಲದ ಕುರುಡನಂತೆ ಆಗಿದ್ದೇನೆ ಹೀಗೆ ಬ್ರಹ್ಮನಿಂದ ಸ್ತೋತ್ರಮಾಡಲ್ಪಟ್ಟ ಪುರುಷೋತ್ತಮನು ಆ ನೀರಿನಿಂದ ಮೇಲಕ್ಕೆ ಎದ್ದು ನೀರಿನೊಳಗೆಲ್ಲಾ ಸಂಚರಿಸಿದನು

ಅಂಗಹಾರೈಃ ಸುಲಲಿತೈಃ ತಥಾ ಪದಪರಿಕ್ರಮೈಃ ।
ತಥಾ ಭ್ರಮನ್ತಂ ತಂ ದೇವಂ ದದರ್ಶಾಯತಲೋಚನಾ ॥ ೯ ॥

ಅತೀವಲಲಿತಂ ಲಕ್ಷ್ಮೀಃ ಜಾತರಾಗಾ ವಿಶೇಷತಃ ।
ದೇವೋಽಪ್ಯಶ್ವಶಿರಾ ಭೂತ್ವಾ ಪಾತಾಲ ತಲಗಃ ಕ್ಷಣಾತ್ ॥ ೧೦ ॥

ಸ ದೈತ್ಯಾನ್ ದೃಷ್ಟವಾನ್ ವೇದಾಂಸ್ತ್ಯಕ್ತ್ವಾಶ್ವಶಿರಸಸ್ತನುಂ ।
ಜಘಾನ ತೌ ಮಹಾಕಾಯೌ ದಾನವೌ ಮಧುಕೈಟಭೌ ॥ ೧೧ ॥

ಹತ್ವಾ ವೇದಸಹಾಯಸ್ತು ಸಂಪ್ರಾಪ್ತೋ ಬ್ರಹ್ಮಣೋಽನ್ತಿಕೇ ।
ದದೌ ವೇದಾಂಸ್ತತಸ್ತಸ್ಮೈ ದೇವದೇವಃ ಸ್ವಯಂಭುವೇ ॥ ೧೨ ॥

ದತ್ವಾ ವೇದಾಂಸ್ತತಃ ಪ್ರಾಹ ಸೃಷ್ಟಿಂ ಕುರು ಪಿತಾಮಹ ।
ವೇದಗ್ರಾಮಯುತೋ ಬ್ರಹ್ಮಾ ಸರ್ಗಂ ಚಕ್ರೇ ತತಃ ಪ್ರಭುಃ ॥ ೧೩ ॥

---

೯–೧೨ ರಮ್ಯವಾದ ಅಂಗವಿಕ್ಷೇಪದಿಂದಲೂ ಬೆಡಗಿನ ನಡಿಗೆಗಳಿಂದಲೂ ಆ ರೀತಿ ಸಂಚರಿಸುತ್ತಿರುವ ಮಹಾವಿಷ್ಣುವನ್ನು ಲಕ್ಷ್ಮೀದೇವಿಯೂ ಸಹ ಅನುರಾಗ ಪೂರ್ವಕವಾದ ಕಟಾಕ್ಷದಿಂದ ವಿಲಾಸಗಳನ್ನು ಬೀರುತ್ತಾ ಬಹಳ ಮಟ್ಟಿಗೂ ನೋಡಿದಳು ವಿಷ್ಣುವೂ ಸಹ ಕುದುರೆಯ ಮುಖವನ್ನು ಹೊಂದಿ ಕ್ಷಣಕಾಲದಲ್ಲಿಯೇ ಪಾತಾಲದ ಕೆಳಭಾಗವನ್ನು ಸೇರಿದನು ಅಲ್ಲಿ ದೈತ್ಯರನ್ನೂ, ವೇದಗಳನ್ನೂ ನೋಡಿ ತನ್ನ ಕುದುರೆಯ ಶರೀರವನ್ನು ಮರೆಮಾಚಿ ಮಹಾಕಾಯರಾದ ಆ ಮಧುಕೈಟಭ ದಾನವರನ್ನು ಕೊಂದನು ಅನಂತರ ವೇದಗಳೊಡಗೂಡಿ ಬ್ರಹ್ಮನ ಹತ್ತಿರಕ್ಕ ಬಂದು ನಿಂತನು ವೇದಗಳನ್ನು ಸಹ ಆ ಬ್ರಹ್ಮನಿಗೆ ಕೊಟ್ಟು ಸಂತೈಸಿದನು

೧೩–೧೪ ಬ್ರಹ್ಮದೇವರಿಗೆ ವೇದಗಳನ್ನು ಕೊಟ್ಟು ಇನ್ನು ನೀನು ಸೃಷ್ಟಿ ಮಾಡು ಎಂದನು ಅನಂತರ ವೇದಗಳ ಸಹಾಯದಿಂದ ಬ್ರಹ್ಮನು ಸೃಷ್ಟಿಮಾಡ ತೊಡಗಿದನು. ಆಗ ಆದಿಶೇಷನಲ್ಲಿ ಕುಳಿತಿರುವ ಪತಿಯಾದ ಮಹಾವಿಷ್ಣುವನ್ನು ಕುರಿತು ಲಕ್ಷ್ಮಿಯು ಕೇಳುತ್ತಾಳೆ ಶಂಕಚಕ್ರಗದಾಧರನಾಗಿಯೂ ಜಗತ್ಪತಿ

ಶೇಷಸ್ಯಾಂಕಗತಂ ದೇವಂ ಲಕ್ಷ್ಮೀಃ ಪಪ್ರಚ್ಛ ಪಾರ್ಥಿವ ।

॥ ಲಕ್ಷ್ಮ್ಯುವಾಚ ॥

ದೇವದೇವ ಜಗನ್ನಾಥ ಶಂಖಚಕ್ರಗದಾಧರ ॥ ೧೪ ॥

ಪರಿಕ್ರಮನ್ ಮಯಾ ತೋಯೇ ದೃಷ್ಟಃ ಸಲಿಲತಃ ಪ್ರಭೋ ।
ಅತೀವ ರಮಣೀಯಾಙ್ಗಃ ಕಿಂತತ್ಬ್ರೂಹಿ ಮೇ ಪ್ರಭೋ ॥ ೧೫ ॥

॥ ಶ್ರೀ ಭಗವಾನುವಾಚ ॥

ನೃತ್ತಮುತ್ಪಾದಿತಂ ಹ್ಯೇತನ್ಮಯಾ ಪದ್ಮನಿಭೇಕ್ಷಣೇ ।
ಅಂಗಹಾರೈಃ ಸಕರಣೈಃ ಸಂಯುಕ್ತಂ ಸಪರಿಕ್ರಮೈಃ ॥ ೧೬ ॥

ನೃತ್ತೇನಾರಾಧಯಿಷ್ಯಂತಿ ಭಕ್ತಿಮನ್ತಸ್ತು ಮಾಂ ಶುಭೇ ।
ತ್ರೈಲೋಕ್ಯಸ್ಯಾನುಕರಣಂ ನೃತ್ತೇ ದೇವಿ ಪ್ರತಿಷ್ಠಿತಂ ॥ ೧೭ ॥

ಏತಾವದುಕ್ತ್ವಾ ತಾಂ ದೇವೋ ಬ್ರಹ್ಮಾಣಂ ವಾಕ್ಯಮಬ್ರವೀತ್ ।
ಗೃಹಾಣ ನೃತ್ತಂ ಧರ್ಮಜ್ಞ ಲಕ್ಷ್ಯಲಕ್ಷಣಸಂಯುತಂ ॥ ೧೮ ॥

---

ಯಾಗಿಯೂ ಇರುವ ದೇವಾಧಿದೇವನಾದ ಸ್ವಾಮಿಯೇ, ಸಮುದ್ರದ ನೀರಿನಲ್ಲಿ ಸಂಚರಿಸುತ್ತಿದ್ದ ನೀನು ರಮ್ಯವಾದ ಅಂಗೋಪಾಂಗಗಳಿಂದ ಕೂಡಿದ್ದವನಂತೆ ನನಗೆ ತೋರುತ್ತಿದ್ದ ಆ ರೀತಿಯ ನಿನ್ನ ಅಮಾನುಷ ಸೌಂದರ್ಯಕ್ಕೆ ಏನು ಕಾರಣ ವೆಂಬುದನ್ನು ಹೇಳಬೇಕು ಭಗವಂತನು ಹೇಳುತ್ತಾನೆ—

೧೬-೧೮ ಎಲೈ ಪದ್ಮಾಕ್ಷಿಯೇ, ಅನೇಕ ಕರಣಗಳಿಂದ ಕೂಡಿರುವ ಈ ನೃತ್ತವನ್ನು ನಾನೇ ಉತ್ಪಾದನ ಮಾಡಿದ್ದೇನೆ ·ಇದು ಆಯಾಯ ಅಂಗವಿಕ್ಷೇಪ ಗಳಿಂದಲೂ, ಗಮನಗಳಿಂದಲೂ ಕೂಡಿದೆ ನನ್ನಲ್ಲಿ ಭಕ್ತಿಯುಳ್ಳ ಜನರು ಈನೃತ್ತ ದಿಂದ ನನ್ನನ್ನು ಪ್ರೀತಿಗೊಳಿಸುತ್ತಾರೆ ಮೂರುಲೋಕದ ಸುಖ ದುಃಖಾದ್ಯವಸ್ಥೆ ಗಳಿಗೆ ಈನೃತ್ತವೇ ಅನುಕರಣರೂಪವಾಗಿದೆ. ಹೀಗೆ ಹೇಳಿ ಬ್ರಹ್ಮನನ್ನು ಕರೆದು ಧರ್ಮಜ್ಞನೇ ಲಕ್ಷ್ಯಲಕ್ಷಣವಿಭಾಗದಿಂದ ಕೂಡಿದ ಈನೃತ್ತ ಶಾಸ್ತ್ರವನ್ನು ನನ್ನಿಂದ ಈಗ ನೀನು (ಅಧಿಕರಿಸು) ಉಪದೇಶಹೊಂದು, ಎಂದು ಹೇಳಿ ಆ ಬ್ರಹ್ಮನಿಗೆ ಎಲ್ಲವನ್ನೂ ಉಪದೇಶಮಾಡಿದನು

ಏತಾವದುಕ್ತ್ವಾ ಬ್ರಹ್ಮಾಣಂ ಗ್ರಾಹಯಾಮಾಸ ಕೇಶವಃ ।
ತಂ ಗೃಹೀತ್ವಾ ತತೋ ಬ್ರಹ್ಮಾ ದದೌ ರುದ್ರಾಯ ವೇಧಸೇ ॥ ೧೯ ॥

ಗೃಹೀತ್ವಾ ತಚ್ಚ ರುದ್ರೋಽಪಿ ತೋಷಯಾಮಾಸ ಕೇಶವಂ ।
ತೇನ ನೃತ್ತೇನ ಸತತಂ ದೇವೇಶಂ ಭಕ್ತವತ್ಸಲಂ ॥ ೩೦ ॥

ಏವಮುತ್ಪಾದಿತಂ ನೃತ್ತಂ ವಾಸುದೇವೇನ ಪಾರ್ಥಿವ ।
ಏಕಾರ್ಣವೇ ಪುರಾ ಲೋಕೇ ನಷ್ಟಸ್ಥಾವರಜಂಗಮೇ ॥ ೨೧ ॥

ತತಃ ಪ್ರಭೃತಿ ದೇವೇಶಃ ಶಂಕರಃ ಶಂಕರೋ ನೃಣಾಂ ।
ನೃತ್ತೇನಾರಾಧಯನ್ನಾಸ್ತೇ ದೇವಂ ಚಕ್ರಗದಾಧರಂ ॥ ೨೨ ॥

ನೃತ್ತೇಶ್ವರತ್ವಂ ಚಾವಾಪ ತುಷ್ಟಾವ ಮಧುಸೂದನಂ ।
ಸೋಽಪಿ ತುಷ್ಯತಿ ನೃತ್ತೇನ ಸಮ್ಯಗಾರಾಧಿತೋ ಹರಃ ॥ ೨೩ ॥

---

೧೯–೨೨ ಅನಂತರ ಬ್ರಹ್ಮನು ವಿಷ್ಣುವಿನಿಂದ ನೃತ್ತಶಾಸ್ತ್ರವನ್ನು ಗ್ರಹಿಸಿದ ಮೇಲೆ ಅದನ್ನು ರುದ್ರದೇವರಿಗೆ ಉಪದೇಶಮಾಡಿದನು ಅದನ್ನು ಗ್ರಹಿಸಿದ ರುದ್ರನೂ ಸಹ ಆ ನೃತ್ತದಿಂದ ವಿಷ್ಣುವನ್ನು ಸಂತೋಷಪಡಿಸಿದನು ಭಕ್ತವತ್ಸಲನಾದ ವಿಷ್ಣುವೂ ಆ ನೃತ್ತದಿಂದ ಸಂತುಷ್ಟನಾದನು ಈ ರೀತಿ ಈ ನೃತ್ತಶಾಸ್ತ್ರವು ವಾಸುದೇವನಿಂದ ಪ್ರಳಯಕಾಲದಲ್ಲಿ ಎಲ್ಲಾ ಸ್ಥಾವರ ಜಂಗಮಗಳೂ ನಾಶಹೊಂದಿರುವಾಗ ತನ್ನ ಲೀಲೆಗಾಗಿ ಉತ್ಪಾದಿಸಲ್ಪಟ್ಟಿತು ಯಾವಾಗ ಶಂಕರನು ಈ ನೃತ್ತದಿಂದ ವಾಸುದೇವನನ್ನು ಮೆಚ್ಚಿಸಿದನೋ ಅದು ಮೊದಲು ಸರ್ವ ಪ್ರಾಣಿಗಳಿಗೂ ಸುಖಕರನಾದುದರಿಂದ ಶಂಕರನೆಂದು ಪ್ರಸಿದ್ಧಿ ಪಡೆದನು. ಈಗಲೂ ನೃತ್ತದಿಂದ ಚಕ್ರಗಧಾದರನಾದ ವಿಷ್ಣುವನ್ನು ಪೂಜಿಸುತ್ತಲೇ ಇರುತ್ತಾನೆ ತಾನೂ ನೃತ್ತೇಶ್ವರನೂ ಆದನು ವಿಷ್ಣುವನ್ನು ಪೂಜಿಸಿದನು

೨೩–೨೪ ಇತರರಿಂದಲೂ ಸಹ ನೃತ್ತದಿಂದ ಆರಾಧಿತನಾಗಿ ಆ ಶಂಕರನು ತಾನೂ ತೃಪ್ತಿಹೊಂದುತ್ತಾನೆ ಇತರ:ದೇವತೆಗಳೂ ಸಹ ಭಕ್ತರ.ನೃತ್ತದಿಂದ ಸಂತುಷ್ಟರಾಗುತ್ತಾರೆ ದೇವತೆಗಳಿಗೆ ಇಂತಹ ಪ್ರೀತಿಯೇ ಬಹು ಮುಖ್ಯವಾದ ಆಪ್ಯಾಯನ

ಅನ್ಯೇ ಚ ದೇವಾಸ್ತುಷ್ಯಂತಿ ಸಮ್ಯಙ್ನೃತ್ಯೇನ ತೋಷಿತಾಃ ।
ಆಪ್ಯಾಯನಂ ಪರಂ ಹ್ಯೇತತ್ಕಥಿತಂ ತು ದಿವೌಕಸಾಂ ॥ ೨೪ ॥

ಏತದೇವ ಹಿ ದೇವತ್ವಂ ದೀವ್ಯತಾಂ ಸತತಂ ದಿವಿ ।
ಪುಷ್ಪನೈವೇದ್ಯದಾನೇಭ್ಯಃ ನೃತ್ತದಾನಂ ವಿಶಿಷ್ಯತೇ ॥ ೨೫ ॥

ಸ್ವಯಂ ನೃತ್ತೇನ ಯಃ ಕುರ್ಯಾದ್ದೇವದೇವಸ್ಯ ಪೂಜನಂ ।
ವಿಶೇಷೇಣ ಮಹಾಭಾಗ ತಸ್ಯ ತುಷ್ಯತಿ ಕೇಶವಃ ॥ ೨೬ ॥

ನೃತ್ತಂ ಗೀತಂ ತಥಾ ವಾದ್ಯಂ ದತ್ವಾ ದೇವಾಯ ವಿಷ್ಣವೇ ।
ಸರ್ವಕಾಮಸಮೃದ್ಧಸ್ಯ ಯಜ್ಞಸ್ಯ ಫಲಮಶ್ನುತೇ ॥ ೨೭ ॥

ನೃತ್ತೇನ ವೃತ್ತಿಂ ಯಃ ಕುರ್ಯಾತ್ಸ ತು ವರ್ಜ್ಯಃ ಪ್ರಯತ್ನತಃ ।
ಕುಶೀಲವಾದ್ಯೈರ್ಯಃ ಕುರ್ಯಾನ್ನೃತ್ತವಿಕ್ರಯಕಾರಕಃ ॥ ೨೮ ॥

ದೇವತಾರಾಧನಂ ಕುರ್ಯಾದ್ಯಸ್ತು ನೃತ್ತೇನ ಧರ್ಮವಿತ್ ।
ಸ ಸರ್ವಕಾಮಾನಾಪ್ನೋತಿ ಮೋಕ್ಷೋಪಾಯಂ ಚ ವಿಂದತಿ ॥ ೨೯ ॥

---

ಇದೇ ದೇವತೆಗಳ ದೇವತಾತ್ವ ಪ್ರಯುಕ್ತವಾದ ಉತ್ಕರ್ಷ  ಹೂವುಗಳು ನೈವೇದ್ಯ ಮೊದಲಾದವುಗಳಿಂದ ಮಾಡುವ ಪೂಜೆಗಳಿಗೆಗಿಂತಲೂ ನೃತ್ಯ ಪ್ರದಾನವು ವಿಶೇಷವಾದ ಪೂಜೆಯಾಗುತ್ತದೆ

೨೬-೨೮ ಯಾವನು ತನ್ನದೇ ಆದ ನೃತ್ತದಿಂದ ಪರಮಾತ್ಮನ ಪೂಜೆಯನ್ನು ಮಾಡುತ್ತಾನೆಯೋ ಅವನ ವಿಷಯದಲ್ಲಿ ಆ ಕೇಶವನು ವಿಶೇಷವಾದ ಸಂತೋಷ ಹೊಂದುತ್ತಾನೆ  ನೃತ್ತ, ಗೀತ, ವಾದ್ಯ ಇವುಗಳನ್ನು ಮಹಾವಿಷ್ಣುವಿನ ಪ್ರೀತಿಗಾಗಿ ಯಾವನು ಅರ್ಪಿಸುತ್ತಾನೆಯೋ ಅವನು ಸರ್ವವಸ್ತುಸಮೃದ್ಧಿಯಿಂದ ಮಾಡಿದ ಯಜ್ಞದಫಲವನ್ನೇ ಹೊಂದುತ್ತಾನೆ. ಯಾವನು ನೃತ್ತದಿಂದಲೇ ಜೀವಿಸುತ್ತಾನೆಯೋ ಮತ್ತು ನರ್ತಕರಲ್ಲೂ ನೃತ್ಯವಿಕ್ರಯಮಾಡುತ್ತಾನೆಯೋ ಅವನು ಸರ್ವಥಾ ವರ್ಜನೀಯನಾಗುತ್ತಾನೆ

೨೯-೩೨ ಧರ್ಮಜ್ಞನಾದ ಯಾವ ಮನುಷ್ಯನು ನೃತ್ತದಿಂದ ದೇವಪೂಜೆಯನ್ನು ಮಾಡುತ್ತಾನೆಯೋ ಅವನು ಎಲ್ಲಾ ಮನೋರಥಗಳನ್ನೂ ಹೊಂದಿ ಮೋಕ್ಷೋಪಾಯವನ್ನೂ ಹೊಂದುತ್ತಾನೆ  ಈ ನೃತ್ತವು ಧನ್ಯವು ಮತ್ತು

ಧನ್ಯಂ ಯಶಸ್ಯಮಾಯುಷ್ಯಂ ಸ್ವರ್ಗಲೋಕಪ್ರದಂ ತಥಾ ।
ಈಶ್ವರಾಣಾಂ ವಿಲಾಸಂ ತು ಚಾರ್ತಾನಾಂ ದುಃಖನಾಶನಂ ॥ ೩೦ ॥

ಮೂಢಾನಾಮುಪದೇಶಂ ತತ್ ಸ್ತ್ರೀಣಾಂ ಸೌಭಾಗ್ಯವರ್ಧನಂ ।
ಶಾಂತಿಕಂ ಪೌಷ್ಟಿಕಂ ಕಾಮ್ಯಂ ವಾಸುದೇವೇನ ನಿರ್ಮಿತಂ ॥ ೩೧ ॥

ಏತಾವದುಕ್ತಂ ತವ ನೃತ್ತಶಾಸ್ತ್ರಂ
ಸಮಾಸತೋ ಲೋಕಹಿತಾಯ ರಾಜನ್ ।
ನೃತ್ತೇನ ಯತ್ನಃ ಪುರುಷೇಣ ಕಾರ್ಯೋ
ಲೋಕದ್ವಯಂ ಜೇತುಮಭೀಪ್ಸತಾ ನೈ ॥ ೩೨ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ನೃತ್ತಶಾಸ್ತ್ರವರ್ಣನೋ ನಾಮ
ಚತುಸ್ತ್ರಿಂಶತ್ತಮೋಽಧ್ಯಾಯಃ

---

ಯಶಃಪ್ರದವೂ ಸ್ವರ್ಗಲೋಕಸಾಧಕವೂ ಆಗಿದೆ ಇದು ಪ್ರಭುಗಳ ವಿನೋದಕ್ಕೆ ಕಾರಣವಾಗಿಯೂ ದುಃಖಿಗಳ ದುಃಖನಾಶಕವೂ ಆಗಿದ ಮತ್ತು ಮೂಢರಿಗೆ ಯುಕ್ತಾಯುಕ್ತವಿಷಯದಲ್ಲಿ ಉಪದೇಶಪ್ರದ ಮತ್ತು ಸ್ತ್ರೀಯರ ಸೌಭಾಗ್ಯ ವೃದ್ಧಿಗೂ ಕಾರಣವಾಗುತ್ತದೆ ವಾಸುದೇವನಿಂದ ನಿರ್ಮಿತವಾದ ಈ ನೃತ್ತವು ಶಾಂತಿಕಪೌಷ್ಟಿಕಕರ್ಮರೂಪವಾಗಿಯೂ, ಕಾಮ್ಯಕರ್ಮವಾಗಿಯೂ ಉಪಕಾರಿಯಾಗುತ್ತದೆ ಎಲೈರಾಜನೇ ಲೋಕಹಿತಕ್ಕಾಗಿ ನೃತ್ತವನ್ನು ಸಂಗ್ರಹಮಾಡಿ ಇಷ್ಟು ಹೇಳಿರುವೆನು ಈ ನೃತ್ತಶಾಸ್ತ್ರವನ್ನು ತಿಳಿದು ಇಂತಹ ನೃತ್ತದಲ್ಲಿ ಪ್ರಯತ್ನಿಸುವವನು ಉಭಯಲೋಕದ ಸುಖಸಂಪತ್ತುಗಳಿಗೆ ಭಾಗಿಯಾಗುತ್ತಾನೆ

ಇಲ್ಲಿಗೆ ಶ್ರೀವಿಷ್ಣುಧರ್ಮೋತ್ತರ ತೃತೀಯ ಖಂಡದಲ್ಲಿ ಮಾರ್ಕಂಡೇಯ ವಜ್ರ
ಸಂವಾದದಲ್ಲಿ ನೃತ್ತಶಾಸ್ತ್ರವರ್ಣನವೆಂಬ ಮೂವತ್ತನಾಲ್ಕನೆಯ
ಅಧ್ಯಾಯ ಮುಗಿದಿದೆ.



॥ ಓಂ ॥

॥ ಶ್ರೀ ಹಯಗ್ರೀವಾಯ ನಮಃ ॥

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### ॥ ಪಂಚತ್ರಿಂಶತ್ತಮೋಽಧ್ಯಾಯಃ ॥

॥ ಮಾರ್ಕಂಡೇಯ ಉವಾಚ ॥

ಅತಃಪರಂ ಪ್ರವಕ್ಷ್ಯಾಮಿ ಚಿತ್ರಸೂತ್ರಂ ತವಾನಘ ।
ಉರ್ವಶೀಂ ಸೃಜತಃ ಪೂರ್ವಂ ಚಿತ್ರಸೂತ್ರಂ ನೃಪಾತ್ಮಜ ॥ ೧ ॥

ನಾರಾಯಣೇನ ಮುನಿನಾ ಲೋಕಾನಾಂ ಹಿತಕಾಮ್ಯಯಾ ।
ಪ್ರಾಪ್ತಾನಾಂ ವಂಚನಾರ್ಥಾಯ ದೇವಸ್ತ್ರೀಣಾಂ ಮಹಾಮುನಿಃ ॥ ೨ ॥

ಸಹಕಾರರಸಂಗೃಹ್ಯ ಉರ್ವ್ಯಾಂ ಚಕ್ರೇ ವರಸ್ತ್ರಿಯಂ ।
ಚಿತ್ರೇಣ ಸಾ ತತೋ ಜಾತಾ ರೂಪಯುಕ್ತಾ ವರಾಪ್ಸರಾಃ ॥ ೩ ॥

---

### ಮೂವತ್ತೈದನೆಯ ಅಧ್ಯಾಯ.

೧–೪ ಮಾರ್ಕಂಡೇಯರು ಹೇಳುತ್ತಾರೆ—ಎಲೈ ಧೊರೆಯೇ, ಇನ್ನು ಮುಂದೆ ಚಿತ್ರಸೂತ್ರದವಿಧಾನವನ್ನು ನಿನಗೆ ಹೇಳುತ್ತೇನೆ ಪೂರ್ವದಲ್ಲಿ ಮುನಿಯಾಗಿದ್ದ ನಾರಾಯಣನು ತನ್ನಲ್ಲಿ ಬಂದಿದ್ದ ಅಪ್ಸರೆಗಳನ್ನು ವಂಚಿಸಿ ಲೋಕಹಿತವನ್ನು ಮಾಡುವ ಉದ್ದೇಶದಿಂದ ಉರ್ವಶಿಎಂಬ ಅಪ್ಸರೆಯನ್ನು ಸೃಷ್ಟಿಸಿದನು ಅದಕ್ಕೆಮುಂಚೆ ಆ ಮಹಾಮುನಿಯು ಸಿಹಿಮಾವಿನ ಚಿಗುರುಗಳಿಂದ ರಸವನ್ನು ಹಿಂಡಿ ಭೂಮಿಯಲ್ಲಿ ಚಿತ್ರರೂಪದಿಂದ ಒಂದು ಸ್ತ್ರೀರತ್ನವನ್ನು ಮಾಡಿದನು ಆ ಚಿತ್ರದಿಂದ ದಿವ್ಯರೂಪಿಣಿಯಾದ ಅಪ್ಸರೆಯು ಉದ್ಭವಿಸಿದಳು, ಅವಳನ್ನು ನೋಡಿ

**ಯಾಂ ದೃಷ್ಟ್ವಾ ವ್ರೀಡಿತಾಃ ಸರ್ವಾ ಜಗ್ಮುಸ್ತಾ ದೇವಯೋಷಿತಃ ।**
**ಏವಂ ಮಹಾಮುನಿಃ ಕೃತ್ವಾ ಚಿತ್ರಂ ಲಕ್ಷಣಸಂಯುತಂ ॥ ೪ ।**

**ಗ್ರಾಹಯಾಮಾಸ ಸ ತದಾ ವಿಶ್ವಕರ್ಮಾಣಮುಚ್ಯುತಂ ।**
**ಯಥಾ ನೃತ್ತೇ ತಥಾ ಚಿತ್ರೇ ತ್ರೈಲೋಕ್ಯಾನುಕೃತಿಃ ಸ್ಮೃತಾ । ೫ ॥**

**ದೃಷ್ಟಯಶ್ಚ ತಥಾ ಭಾವಾಃ ಅಂಗೋಪಾಂಗಾನಿ ಸರ್ವಶಃ ।**
**ಕರಾಶ್ಚ ಯೇ ಮಹಾನೃತ್ತೇ ಪೂರ್ವೋಕ್ತಾ ನೃಪಸತ್ತಮ ॥ ೬ ॥**

**ತ ಏವ ಚಿತ್ರೇ ವಿಜ್ಞೇಯಾ ನೃತ್ತಂ ಚಿತ್ರಂ ಪರಂ ಮತಂ ।**
**ನೃತ್ತೇ ಪ್ರಮಾಣಂ ಯೇನೋಕ್ತಂ ತತ್ಪ್ರವಕ್ಷ್ಯಾಮ್ಯತಃ ಶೃಣು ॥ ೭ ।**

**ಹಂಸೋ ಭದ್ರೋಽಥ ಮಾಲವ್ಯೋ ರುಚಕಃ ಶಶಕಸ್ತಥಾ ।**
**ವಿಜ್ಞೇಯಾಃ ಪುರುಷಾಃ ಪಂಚ ತೇಷಾಂ ವಕ್ಷ್ಯಾಮಿ ಲಕ್ಷಣಂ ॥ ೮ ।**

---

ಒಡನೆಯೇ ದೇವತಾಸ್ತ್ರೀಯರು •ನಾಚಿಕೆಯಿಂದ ಹೊರಟುಹೋದರು ಈ ರೀತಿ ಆ ಮಹಾಮುನಿಯು ಲಕ್ಷಣಯುತವಾದ ಚಿತ್ರಶಾಸ್ತ್ರವನ್ನು ನಿರ್ಮಿಸಿ ವಿಶ್ವಕರ್ಮನೆಂಬ ಸಮರ್ಥನಾದ ದೇವಶಿಲ್ಪಿಗೆ ಅದನ್ನು ಉಪದೇಶಿಸಿದನು

೫–೭ ನೃತ್ಯದಂತೆ ಚಿತ್ರವೂ ಸಹ ಲೋಕತ್ರಯದ ಅನುಕರಣರೂಪ ದೃಷ್ಟಿಗಳು, ಭಾವಗಳು, ಅಂಗೋಪಾಂಗವಿನ್ಯಾಸಗಳು ಹಿಂದೆ ಮಹಾನೃತ್ಯದಲ್ಲಿ ಹೇಳಿರುವ ಕರವಿನ್ಯಾಸಗಳು ಇವೆಲ್ಲವೂ ನೃತ್ಯದಲ್ಲಿರುವಂತೆಯೇ ಚಿತ್ರದಲ್ಲಿಯೂ ಇರುತ್ತವೆ ಆಯಾಯ ಭಾವಾವೇಶಕ್ಕೆ ತಕ್ಕಂತೆ ಇರುವ ಆಕೃತಿವಿಶೇಷಗಳು ಸಮವಾಗಿರುವುದರಿಂದ ನೃತ್ಯವೂ ಸಹ ಉತ್ಕೃಷ್ಟವಾದ ಚಿತ್ರವೇ ಆಗುತ್ತದೆ ನೃತ್ಯದಲ್ಲಿ ಯಾವ ಯಾವ ಪ್ರಮಾಣವನ್ನು ಹೇಳಿರುವರೋ ಅದನ್ನೇ ಈಗ ಹೇಳುತ್ತೇನೆ ಕೇಳು

೮–೧೦ ಹಂಸ ಭದ್ರ, ಮಾಲವ್ಯ, ರುಚಕ, ಶಶಕ ಎಂದು ಐದು ವಿಧವಾದ ಪುರುಷ ಜಾತಿಗಳಿವೆ ಎಂದು ತಿಳಿಯಬೇಕು ಇವರೆಲ್ಲರೂ ಎತ್ತರ ಸುತ್ತು ಮೊದಲಾದುವುಗಳಿಂದ ಪರಸ್ಪರ ಸಮಪ್ರಮಾಣವುಳ್ಳವರಾಗುತ್ತಾರೆ ಈ ಅಳತೆ

**ಉಚ್ಛ್ರಾಯೋಯಾಮತುಲ್ಯಾಸ್ತೆ ಸರ್ವೇ ಜ್ಞೇಯಾಃ ಪ್ರಮಾಣತಃ ।**
**ಸ್ವೇನೇನಾಂಗುಲಿಮಾನೇನ ಶತಮಷ್ಟಾಧಿಕಂ ಭವೇತ್ ॥ ೯ ॥**

**ಪ್ರಮಾಣಂ ನೃಪ ಹಂಸಸ್ಯ ಭದ್ರಸ್ಯ ತು ಷಡುತ್ತರಂ ।**
**ಚತುರ್ಭಿರಧಿಕಂ ಜ್ಞೇಯಂ ಮಾಲವ್ಯಸ್ಯ ತಥಾ ನೃಪ ॥ ೧೦ ॥**

**ಶತಂ ಚ ರುಚಕಸ್ಯೋಕ್ತಂ ದಶೋನಂ ಶಶಕಸ್ಯ ಚ ।**
**ದ್ವಾದಶಾಂಗುಲಿವಿಸ್ತಾರಸ್ತಾಲ ಇತ್ಯಭಿಧೀಯತೇ ॥ ೧೧ ॥**

**ಆಗುಲ್ಫಂ ತಚ್ಚತುರ್ಭಾಗಃ ಪಾದೋಚ್ಛ್ರಾಯಃ ಪ್ರಕೀರ್ತಿತಃ ।**
**ದ್ವೌ ಚ ತಾಲೌ ತಥಾ ಜಂಘೇ ಪಾದತುಲ್ಯೇ ಚ ಜಾನುನೀ ॥ ೧೨ ॥**

**ಜಂಘಾ ತು ತ್ಯಾ ತಥಾ ಚೋರೂ ನಾಭಿಸ್ಥಾಲಾತ್ ತು ಮೇಢ್ರತಃ ।**
**ತಾವಚ್ಚ ನಾಭಿ ಹೃದಯಂ ಹೃದಯಾತ್ಕಂಠ ಏವ ಚ ॥ ೧೩ ॥**

---

ಯನ್ನು ಆಯಾಯ ಜಾತಿಗೆ ಸೇರಿರುವವನ ಅಂಗುಲಿಮಾನದಿಂದ ನೋಡಬೇಕು ಹಂಸನ ಪ್ರಮಾಣವು ತನ್ನ ಅಂಗುಲಿಯಿಂದ ನೂರೆಂಟು ಅಂಗುಲ ಮಾಲವ್ಯನಿಗೆ ನೂರನಾಲ್ಕು ಅಂಗುಲ ಪ್ರಮಾಣವಿರುತ್ತದೆ ಅವರವರ ಅಂಗುಲಪ್ರಮಾಣದಿಂದ ಇದು ಎಲ್ಲರಿಗೂ ಸಮನಾಗುತ್ತದೆ

೧೧-೧೩ ರುಚಕನಿಗೆ ನೂರು ಅಂಗುಲಿಮಾನ, ಶಶಕನಿಗೆ ತೊಂಭತ್ತು ಅಂಗುಲಿಮಾನ, ಹನ್ನೆರಡು ಅಂಗುಲಿ ಪರಿಮಾಣದ ಅಗಲಕ್ಕೆ ತಾಲವೆಂದು ಹೆಸರು ಕಾಲಿನ ಹರಡಿನ ಭಾಗವೂ ಸೇರಿ ಅದರ ನಾಲ್ಕನೆಯ ಒಂದು ಭಾಗದಷ್ಟೆ ಪಾದಗಳು ಎತ್ತರವಾಗಿರಬೇಕು ಮೊಣಕಾಲುಗಳು ತಾಲದ್ವಯಪ್ರಮಾಣ ಪಾದ ಪರಿಮಾಣಕ್ಕೆ ತಕ್ಕಂತೆ ಮುಂಡಿಗಳು ಮೊಣಕಾಲಿನ ಪರಿಮಾಣಕ್ಕೆ ತಕ್ಕಂತೆ ತೊಡೆಗಳು ಹೊಕ್ಕುಳುಪ್ರದೇಶಕ್ಕೆ ತಾಲಪ್ರಮಾಣದ ಕೆಳಗೆ ಲಿಂಗವೂ, ಆ ನಾಭಿಯಿಂದ ಹೃದಯವೂ ತಾಲಪ್ರಮಾಣದಲ್ಲಿರಬೇಕು

ಕಂಠಸ್ತಾಲತ್ರಿಭಾಗಃ ಸ್ಯಾತ್ತಾಲಂ ಚ ವದನಂ ಭವೇತ್ ।
ತಾಲಷಡ್ಭಾಗಮುಪ್ಯುಕ್ತಂ ಲಲಾಟೋಪರಿ ಮಸ್ತಕಂ ॥ ೧೪ ॥

ಮಧ್ಯೇ ಮೇಢ್ರಂ ತು ವಿಜ್ಞೇಯಮಿತಿ ದೈರ್ಘ್ಯಂ ಪ್ರಕೀರ್ತಿತಂ ।
ತಾಲಃ ಪ್ರೋಕ್ತಃ ಕರೋ ರಾಜನ್ ಬಾಹೂ ಸಪ್ತದಶಾಂಗುಲಾ ॥ ೧೫ ॥

ಪ್ರಬಾಹೂ ತಾವದೇವಾಕ್ತೌ ವಕ್ಷಸೋರ್ಧಮಥಾಷ್ಟಕಂ ।
ಏತದಾಯಾಮತಃ ಪ್ರೋಕ್ತಂ ಮಾನಂ ಹಂಸಸ್ಯ ಪಾರ್ಥಿವ ॥ ೧೬ ॥

ಅನೇನೈವಾನುಸಾರೇಣ ಶೇಷಾಣಾಮಪಿ ಕಲ್ಪಯೇತ್ ।
ಆಯಾಮಪರಿಣಾಹಾಭ್ಯಾಂ ಸಮಾಃ ಸರ್ವೇ ನರಾಧಿಪ । ೧೭ ॥

---

೧೪-೧೬ ಹೃದಯದಿಂದ ಕಂಠವೂ ಅದೇ ಪ್ರಮಾಣದಲ್ಲಿರಬೇಕು ಕಂಠವು ತಾಲಪ್ರಮಾಣದ ಮೂರನೆಯ ಒಂದು ಭಾಗವಿರಬೇಕು ಮುಖವು ತಾಲ ಪ್ರಮಾಣದಲ್ಲಿರಬೇಕು ಹಣೆಯ ಮೇಲಿನ ತಲೆಯ ಭಾಗವು ತಾಲದ ಆರನೆಯ ಒಂದು ಭಾಗವಿರಬೇಕು ದೇಹದ ಒಟ್ಟು ಉಳತೆಯ ಮಧ್ಯಭಾಗದಲ್ಲಿ ಲಿಂಗವಿರಬೇಕು. ಇದು ದೀರ್ಘತೆಯ ಪ್ರಮಾಣ ವಿವರಣೆ ಕೈಗಳು ತಾಲಪ್ರಮಾಣದ ಸುತ್ತಳತೆ ಇರಬೇಕು- ತೋಳುಗಳು ಹದಿನೇಳು ಅಂಗುಲಗಳ ಸುತ್ತಳತೆ ಇರಬೇಕು ಬಾಹುಗಳ ಬುಡವೂ,ಅದೇ ಪ್ರಮಾಣದಲ್ಲಿರಬೇಕು ಹೃದಯಪ್ರದೇಶದಿಂದ ವಾಮ ದಕ್ಷಿಣದ ಅರ್ಧಭಾಗವು ಎಂಟು ಅಂಗುಲ ಪ್ರಮಾಣವಿರಬೇಕು. ಈ ವಿಧವಾದ ದೀರ್ಘತೆ ಮತ್ತು ಸುತ್ತಳತೆಯು ಹಂಸನೆಂಬ ಪುರುಷವಿಶೇಷ ಪ್ರಮಾಣವಾಗುತ್ತದೆ.

೧೭-೧೮ ಇದೇ ರೀತಿಯಲ್ಲಿ ಇತರರ ಪ್ರಮಾಣವನ್ನೂ ಆಯಾಮ ಪರಿಮಾಣಕ್ಕೆ ತಕ್ಕಂತೆ ಕಲ್ಪಿಸಬೇಕು ಅವರವರ ಅಂಗುಲಿ ಪರಿಣಾಮಕ್ಕೆ ತಕ್ಕಂತೆ ಎಲ್ಲರೂ ಎತ್ತರ, ದಪ್ಪ ಇವುಗಳಿಂದ ಸಮವಾಗಿಯೇ ಆಗುತ್ತಾರೆ. ಈ ರೀತಿ ಹಂಸ

**ಸಾಮಾನ್ಯತಸ್ತೇ ನೃಪವರ್ಯಮಾನಂ**
**ಪ್ರೋಕ್ತಂ ಮಯಾ ಹಂಸನರಾಧಿಪಸ್ಯ ।**
**ಪ್ರತ್ಯಙ್ಗಮಾನಂ ಚ ಮಯೋಚ್ಯಮಾನಂ**
**ಸಮಾಸತಃ ತ್ವಂ ಶೃಣು ರಾಜಸಿಂಹ　　॥ ೧೮ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ ವಜ್ರ ಸಂವಾದೇ ಚಿತ್ರಸೂತ್ರೇ ಆಯಾಮೋಚ್ಛ್ರಾಯಮಾನವರ್ಣನಂ ನಾಮ ಪಂಚತ್ರಿಂಶತ್ತಮೋಽಧ್ಯಾಯಃ**

---

ನೆಂಬ ನರಶ್ರೇಷ್ಠನ ಪರಿಮಾಣವನ್ನು ಸಾಮಾನ್ಯವಾಗಿ ನಿನಗೆ ಹೇಳಿದ್ದೇನೆ ಆಯಾಯ ಅವಯವಗಳ ಪರಿಮಾಣವನ್ನು ಮುಂದೆ ಹೇಳುತ್ತೇನೆ ಕೇಳು —

ಇಲ್ಲಿಗೆ ಶ್ರೀವಿಷ್ಣುಧರ್ಮೋತ್ತರ ತೃತೀಯ ಖಂಡದಲ್ಲಿ ಮಾರ್ಕಂಡೇಯ ವಜ್ರ ಸಂವಾದದಲ್ಲಿ ಚಿತ್ರಸೂತ್ರ ಪ್ರಕರಣದ ಆಯಾಮೋಚ್ಛ್ರಾಯಮಾನವೆಂಬ ಮೂವತ್ತೈದನೆಯ ಅಧ್ಯಾಯ ಮುಗಿದಿದ



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಷಟ್‌ತ್ರಿಂಶತ್ತಮೋಽಧ್ಯಾಯಃ ||

**|| ಮಾರ್ಕಂಡೇಯ ಉವಾಚ ||**

**ಗದ್ಯ || ಅಥ ಪ್ರತ್ಯಂಗವಿಭಾಗೋ ಭವತಿ।ತತ್ರ ದ್ವಾದಶಾಂಗುಲ-ಪರಿಣಾಹೋ ಮೂರ್ಧಾ । ಚತುರಂಗುಲೋಚ್ಛ್ರಾಯಂ ಅಷ್ಟಾಂ-ಗುಲಂ ಲಲಾಟಂ। ಶಂಖೌ ಚತುರಂಗುಲೌ ದ್ವ್ಯಂಗುಲೋಚ್ಛ್ರಾಯೌ ಪಂಚಾಂಗುಲೌ ಗಂಡೌ ಚತುರಂಗುಲೋ ಹನುಃ ದ್ವ್ಯಂಗುಲೌ ಕರ್ಣೌ ಚತುರಂಗುಲೋಚ್ಛ್ರಾಯೌ । ಕರ್ಣಮಧ್ಯೇಂಗುಲಂ ತದ್ರಂಧ್ರಮುದಕಂ। ಪಾಲಿರನಿಯಮೇನ(ಕರ್ಣಸ್ಯಲುಟಿಕಾಪಾಲಿಃ)||**

---

### ಮೂವತ್ತಾರನೆಯ ಅಧ್ಯಾಯ.

ಮಾರ್ಕಂಡೇಯರು ಹೇಳುತ್ತಾರೆ.—ಪ್ರತ್ಯಂಗವಿಭಾಗಗಳು ಈ ರೀತಿ ಇರಬೇಕಾಗುತ್ತವೆ ಅವುಗಳಲ್ಲಿ ತಲೆಯು ಹನ್ನೆರಡು ಅಂಗುಲ ವಿಶಾಲ ಇರಬೇಕು ಅದರಲ್ಲಿ ನಾಲ್ಕು ಅಂಗುಲ ಉದ್ದ, ಎಂಟು ಅಂಗುಲ ಅಗಲ ಹಣೆ. ಪಕ್ಕದ ಮೂಳೆಗಳು ನಾಲ್ಕು ಅಂಗುಲ ಅಗಲ ಎರಡು ಅಂಗುಲ ಎತ್ತರವಿರಬೇಕು ಕಪೋಲವು ಐದು ಅಂಗುಲ, ಅದರ ಕೆಳಭಾಗವು ನಾಲ್ಕು ಅಂಗುಲ, ಕಿವಿಗಳು ನಾಲ್ಕು ಅಂಗುಲ ಅಗಲ, ನಾಲ್ಕು ಅಂಗುಲ ಉದ್ದ, ಕಿವಿಯ ಮಧ್ಯದ ರಂಧ್ರವು ಅಂಗುಲ ಪ್ರಮಾಣ ಅದಕ್ಕೆ ಉದಕವೆಂದು ಹೆಸರು ಅದರ ರಂಧ್ರದ ಉದ್ದಕ್ಕೆ ನಿಯಮವಿಲ್ಲ

ನಾಸಾ ಚತುರಂಗುಲಾ ಅಗ್ರೇ ದ್ವ್ಯಂಗುಲೋಚ್ಛ್ರಾಯಾ ತ್ರಿಕಾಯಾಮಾ ಚ । ನಾಸಾಪುಟಾವಂಗುಲೀವಿಸ್ತಾರೌ ದ್ವಿಗುಣ ದ್ವಿಗುಣಾಯಾಮೌ । ನಾಸೌಷ್ಠಮಧ್ಯಮರ್ಧಾಂಗುಲಂ । ಓಷ್ಠಶ್ಚಾಂಗುಲಃ । ಚತುರಂಗುಲಾಯಾಮಮಾಸ್ಯಂ । ಅಧರೋಂಗುಲಂ ದ್ವ್ಯಂಗುಲಂ ಚಿಬುಕಂ ಚತ್ವಾರಿಂಶದ್ದಂತಾಃ । ತೇಷ್ವಷ್ಟೌ ದಂಷ್ಟ್ರಾಃ । ಅರ್ಧಾಂಗುಲೋಚ್ಛ್ರಿತಾ ದಂತಾಃ ಅಂಗುಲದ್ವಾದಶಭಾಗಿಕಾ ದಂಷ್ಟ್ರಾ । ಅಂಗುಲವಿಸ್ತೃತಾ ತ್ರ್ಯಂಗುಲಾಯಾಮೇ ನೇತ್ರೇ । ನೇತ್ರತ್ರಿಭಾಗಂ ಕೃಷ್ಣಮಂಗುಲಂ । ಪಂಚಭಾಗಾಸ್ತಾರಾಃ । ಅಂರ್ಧಾಂಗುಲಿವಿಸ್ತೃತೇ ತ್ರ್ಯಂಗುಲಾಯಾಮೇ ಭ್ರುವೌ । ತಯೋಃ ದ್ವ್ಯಂಗುಲಮಂತರಂ । ಚತುರಂಗುಲಂ ನೇತ್ರಾಂತಕರ್ಣವಿವರಂ ॥

---

ಮೂಗು ನಾಲ್ಕು ಅಂಗುಲ ಉದ್ದ, ಮುಂಭಾಗದಲ್ಲಿ ಎರಡು ಅಂಗುಲ ಎತ್ತರ ಇದರ ಮೂರರಷ್ಟು ಸುತ್ತಳತೆ ಇರಬೇಕು ಮೂಗಿನ ಹೊಳ್ಳೆಗಳು ಒಂದು ಅಂಗುಲ ವಿಸ್ತಾರ ಮತ್ತು ಅದರ ದ್ವಿಗುಣ ಆಳವಾಗಿರಬೇಕು ಮೂಗು ಮತ್ತು ಮೇಲು ತುಟಿಯ ಅಂತರ ಅರ್ಧ ಅಂಗುಲ, ಮೇಲು ತುಟಿಯು ಒಂದು ಅಂಗುಲ, ಬಾಯಿ ನಾಲ್ಕು ಅಂಗುಲ ಅಗಲವಿರಬೇಕು. ಕೆಳತುಟಿಯೂ ಒಂದು ಅಂಗುಲ, ಕೆಳಗಿನ ಗಲ್ಲವು ಎರಡು ಅಂಗುಲ, ನಲವತ್ತು ಹಲ್ಲುಗಳು ಅವುಗಳಲ್ಲಿ ಎಂಟು ದವಡೆ ಹಲ್ಲುಗಳು, ಹಲ್ಲುಗಳು ಅರ್ಧ ಅಂಗುಲ ಎತ್ತರವಿರಬೇಕು ದವಡೆಹಲ್ಲುಗಳ ಅಗ್ರಭಾಗದ ಕೋರೆಯು ಅಂಗುಲದ ಹನ್ನೆರಡನೆಯ ಒಂದುಭಾಗ ಇರಬೇಕು. ಕಣ್ಣುಗಳು ಒಂದು ಅಂಗುಲ ಅಗಲ ಮತ್ತು ಮೂರು ಅಂಗುಲ ಉದ್ದವಾಗಿರಬೇಕು ಕಣ್ಣುಗಳ ಮೂರನೆಯ ಒಂದು ಭಾಗ ಕಪ್ಪಾದ ಕೃಷ್ಣಮಂಡಲಕ್ಕೆ ಸೇರುತ್ತದೆ ಐದನೆಯ ಒಂದು ಭಾಗವು ಕರಿಯುಗುಡ್ಡೆ ಅರ್ಧ ಅಂಗುಲ ವಿಸ್ತಾರ ಮತ್ತು ಮೂರು ಅಂಗುಲ ಉದ್ದವಾಗಿಯೂ ಹುಬ್ಬುಗಳಿರಬೇಕು ಆ ಹುಬ್ಬುಗಳ ಮಧ್ಯದ ಅಂತರ ಎರಡು ಅಂಗುಲವಿರಬೇಕು ಕಡೆಗಣ್ಣಿಗೂ ಕಿವಿಯ ರಂಧ್ರಕ್ಕೂ ನಾಲ್ಕು ಅಂಗುಲ ಅಂತರವಿರಬೇಕು

**ದಶಾಂಗುಲ ವಿಸ್ತೃತಾ ಗ್ರೀವಾ । ಏಕವಿಂಶತ್ಯಂಗುಲಪರಿಣಾಹಾ । ಷೋಡಶಾಂಗುಲಂ ಸ್ತನಾಂತರಂ । ಷಡಂಗುಲಂ ಸ್ತನಜತ್ರ್ವಂತರಂ । ಷೋಡಶಬಾಹುಮೂಲ ಪರಿಣಾಹಃ ದ್ವಾದಶಾಗ್ರೇ । ಸಪ್ತಾಂಗುಲಂ ಕರತಲಂ । ಪಂಚಾಂಗುಲಂ ವಿಸ್ತೃತಂ ಪಂಚಾಂಗುಲಪ್ರಮಾಣಾ ಮಧ್ಯಮಿಕಾ । ತತ್ಪೂರ್ವಂ ದಲಹೀನಾ ಪ್ರದೇಶಿನೀ । ತತ್ತುಲ್ಯಾ ಚಾನಾಮಿಕಾ । ತತ್ಪರಿಹೀನಾ ಕನಿಷ್ಠಿಕಾ । ಸರ್ವಾಃ ಸಮತ್ರಿಭಾಗಪರ್ವಾಃ । ಪರ್ವಾರ್ಧಾಃ ನಖಾಃ । ತ್ರ್ಯಂಗುಲಮಂಗುಷ್ಠಂ ದ್ವಿಪರ್ವಃ ॥**

**ಜಠರಪರಿಣಾಹೋ ದ್ವಾಚತ್ವಾರಿಂಶಾಂಗುಲಃ । ವೇದ್ಯಪ್ರಮಾಣಾಭ್ಯಾಮಂಗುಲಂ ನಾಭಿಃ । ಕಟಿರಷ್ಟಾದಶಾಂಗುಲಾ ವಿಪುಲಾ । ತತ್ಪರಿಧಿಶ್ಚತುಶ್ಚತ್ವಾರಿಂಶತ್ । ಚತುರಂಗುಲವಿಸ್ತೃತೌ ವೃಷಣೌ । ಷಡಂ-**

ಕತ್ತಿನ ವಿಸ್ತಾರ ಹತ್ತುಅಂಗುಲ, ಅದರ ಸುತ್ತಳತೆ ಇಪ್ಪತ್ತೊಂದು ಅಂಗುಲ ಸ್ತನಗಳ ಮತ್ತು ಆಯಾಯ ಪಾರ್ಶ್ವದ ಪಕ್ಕೆಲಬುಗಳ ಅಂತರ ಆರು ಅಂಗುಲ, ತೋಳುಗಳ ಬುಡ ಹದಿನಾರು ಅಂಗುಲ, ಮತ್ತು ಮುಂಭಾಗದಲ್ಲಿ ಹನ್ನೆರಡು ಅಂಗುಲ ಕೈಗಳು ಏಳು ಅಂಗುಲ ಉದ್ದ, ಐದು ಅಂಗುಲ ಅಗಲ ಮತ್ತು ಆ ಹಸ್ತದ ಮಧ್ಯದ ಬೆರಳು ಐದು ಅಂಗುಲ ಉದ್ದವಿರಬೇಕು ಅದಕ್ಕೆ ನೊದಲಿರುವ ತರ್ಜನಿಯು ನಾಲ್ಕನೆಯ ಒಂದುಭಾಗ ಕಡಿಮೆ ಇರಬೇಕು ಅದಕ್ಕೆ ಸಮಾನವಾಗಿ ಅನಾಮಿಕೆ ಅದಕ್ಕಿಂತ ಸ್ವಲ್ಪಕಡಿಮೆಯಾಗಿ ಕನಿಷ್ಠಿಕಾ, ಎಲ್ಲಾ ಬೆರಳುಗಳೂ ಆಯಾಯ ಪರಿಮಾಣಕ್ಕೆ ತಕ್ಕಂತೆ ಅದರ ಮೂರನೆಯ ಒಂದುಭಾಗಕ್ಕೆ ಸರಿಯಾಗಿ ಪರ್ವ(ಗಿಣ್ಣು) ಗಳನ್ನು ಹೊಂದಿರಬೇಕು ಉಗುರುಗಳು ಆ ಪರ್ವಭಾಗದ ಅರ್ಧಕ್ಕೆ ಸರಿಯಾಗಿರಬೇಕು ಅಂಗುಷ್ಠವು ಮೂರು ಅಂಗುಲ ಉದ್ದವಾಗಿಯೂ ಎರಡು ಗಿಣ್ಣುಳ್ಳದ್ದಾಗಿಯೂ ಇರಬೇಕು

ಜಠರದ ಸುತ್ತಳತೆಯು ನಲವತ್ತೆರಡು ಅಂಗುಲ, ಆಳ ಮತ್ತು ಪ್ರಮಾಣ ಇವುಗಳು ನಾಭಿಗೈಒಂದು ಅಂಗುಲ, ಸೊಂಟವು ಹದಿನೆಂಟು ಅಂಗುಲ ವಿಸ್ತಾರವಿರಬೇಕು ಅದರ ಸುತ್ತಳತೆಯು ನಲವತ್ತ ನಾಲ್ಕು ಅಂಗುಲಗಳು, ವೃಷಣಗಳು ನಾಲ್ಕುಅಂಗುಲ ವಿಸ್ತಾರವಿರಬೇಕು ಲಿಂಗವು ಆರು ಅಂಗುಲದೀರ್ಘ ಮತ್ತು ಅಷ್ಟೇಸುತ್ತಳತೆ ಇರಬೇಕು ಅದರ ಮಧ್ಯದಲ್ಲಿ ತೊಡೆಗಳ ಅಂತರ ನಾಲ್ಕು

ಗುಲಂ ತಾವತ್ಪರಿಣಾಹಂ ಮೇಢ್ರಂ । ತನ್ಮಧ್ಯತ ಊರೂ ಚತುರಂಗುಲೌ । ತದ್ವಿಗುಣಪರಿಣಾಹಾಂಗುಲವಿಪುಲೇ ಜಾನುನೀ । ತತ್ತ್ರಿಗುಣ ಪರಿಣಾಹಂ ಜಂಘಾಗ್ರಂ । ಪಂಚಾಂಗುಲಂ ಚತುರ್ದಶಪರಿಣಾಹಂ ದ್ವಾದಶದೀರ್ಘೌ ಷಡಂಗುಲ ವಿಸ್ತೃತೌ ಪಾದೌ ತ್ರಿಕಾಯತಾಂಗುಷ್ಠೌ ॥

ಅಂಗುಷ್ಠತುಲ್ಯಾ ಪ್ರದೇಶಿನೀ । ತದಷ್ಟಾಂಶೋನಾಃ ಶೇಷಾಃ । ಅಂಗುಲಚತುರ್ಭಾಗಹೀನೋಂಗುಷ್ಠನಖಃ । ತದರ್ಧಪ್ರಮಾಣಂ ಪ್ರದೇಶಿನ್ಯಾಃ । ತದಷ್ಟಭಾಗಃ ಶೇಷಾಣಾಂ । ಸರ್ವಪಾದಮಂಗುಲಮಷ್ಟಾಂಗುಲೋತ್ಸೇಧಃ । ತ್ರ್ಯಂಗುಲೇ ಪಾರ್ಷ್ಣೀ । ಚತುರಂಗುಲೋಚ್ಛ್ರಯೌ ಇತಿ ಹಂಸಪ್ರಮಾಣಂ ಭವತಿ । ಭವಂತಿ ಚಾತ್ರ–

ಶ್ಲೋ॥ ಶೇಷಾಣಾಂ ಪಾರ್ಥಿವೇನ್ದ್ರಾಣಾಂ ಮಾನಂ ಯುಕ್ತ್ಯಾ ಪ್ರಕಲ್ಪಯೇತ್ ।
ಅನೇನೈವಾನುಸಾರೇಣ ಸ್ವಮಾನಸ್ಯಾನುಸಾರತಃ ॥ ೧ ॥

---

ಅಂಗುಲ, ಅದರ ಎರಡರಷ್ಟು ಸುತ್ತು ಮತ್ತು ವಿಶಾಲತೆಯು ಮಂಡಿಗಳಿಗೆ ಇರಬೇಕು ಅದರಮೂರರಷ್ಟು ಸುತ್ತು ಮೊಣಕಾಲಿನ ಅಗ್ರಭಾಗದಲ್ಲಿರಬೇಕು ಐದು ಬೆರಳುಗಳುಳ್ಳ ಪಾದಗಳು ಹದಿನಾಲ್ಕು ಅಂಗುಲ ಸುತ್ತು ಮತ್ತು ಹನ್ನೆರಡು ಅಂಗುಲ ಉದ್ದ, ಆರು ಅಂಗುಲ ವಿಸ್ತಾರವಾಗಿಯೂ ಇರಬೇಕು ಅದರ ಮೂರನೆಯ ಒಂದುಭಾಗದಷ್ಟು ಉದ್ದವಾದ ಅಂಗುಷ್ಠಗಳಿರಬೇಕು.

೧-೨ ಪ್ರದೇಶಿನಿಯು ಅಂಗುಷ್ಠಕ್ಕೂ ಸಮನಾಗಿರಬೇಕು ಅದರ ಎಂಟನೆಯ ಒಂದುಭಾಗ ಕಡಿಮೆಯಾಗಿ ಇತರ ಬೆರಳುಗಳಿರಬೇಕು. ಅಂಗುಷ್ಠದ ಉಗುರು ಮುಕ್ಕಾಲು ಅಂಗುಲ ಅದರ ಅರ್ಧದಷ್ಟು ಪ್ರದೇಶಿನಿಯ ಉಗುರು ಅದರ ಎಂಟನೆಯಭಾಗ ಇತರ ಉಗುರುಗಳು, ಪಾದದ ಎಲ್ಲಾ ಎತ್ತರವು ಒಟ್ಟು ಎಂಟ ಅಂಗುಲ, ಪಕ್ಕದ ಹರಡು ಮೂರು ಅಂಗುಲ, ನಾಲ್ಕು ಅಂಗುಲ ಎತ್ತರ ಇದು

**ಮಧ್ವಕ್ಷಶ್ಚಂದ್ರಗೌರಸ್ತು ನಾಗರಾಜಭುಜೋ ಬಲೀ ।**
**ಹಂಸಗಾಮೀ ಸುಮಧ್ಯಶ್ಚ ಹಂಸಶ್ಚ ಸುಮುಖೋ ಭವೇತ್ ॥ ೨ ॥**

**ರೋಮರುದ್ಧಕಪೋಲಸ್ತು ಗಜಗಾಮೀ ಮಹಾಮತಿಃ ।**
**ವೃತ್ತೋಪಚಿತಬಾಹುಸ್ತು ಭದ್ರಃ ಪದ್ಮನಿಭೋ ಭವೇತ್ ॥ ೩ ॥**

**ಮುದ್ಗಶ್ಯಾಮಸ್ತು ಮಾಲವ್ಯಃ ಕುಶಮಧ್ಯತನುಚ್ಛವಿಃ ।**
**ಆಜಾನುಬಾಹುಃ ಪೀನಾಂಸೋ ದನ್ತಿಘೋಣೋ ಮಹಾಹನುಃ ॥ ೪ ॥**

**ಶರದ್ಗೌರಸ್ತು ರುಚಕಃ ಕಂಬುಗ್ರೀವೋ ಮಹಾಮತಿಃ ।**
**ಸತ್ಯಸ್ತು ಸಿಕತಶ್ಚೈವ ಬಲವಾಂಶ್ಚ ಪ್ರಕೀರ್ತಿತಃ ॥ ೫ ॥**

---

ಹಂಸವೆಂಬ ಪುರುಷಜಾತಿಯ ಪ್ರಮಾಣ, ಈ ವಿಷಯದಲ್ಲಿ ಶ್ಲೋಕಗಳೂ ಇವೆ ಇವೇ ರೀತಿಯಾಗಿ ಉಳಿದ ಮನುಷ್ಯಜಾತಿಗಳ ಪ್ರಮಾಣವನ್ನೂ ಸಹ ತನ್ನ ಬೆರಳಿನ ಅಂಗುಲ ಪ್ರಮಾಣಕ್ಕೆ ತಕ್ಕಂತೆ ಯುಕ್ತಿಯಿಂದ ಕಲ್ಪಿಸಬೇಕು ಮಧ್ವಕ್ಷ, ಚಂದ್ರಗೌರ, ನಾಗರಾಜಭುಜ, ಬಲೀ, ಹಂಸಗಾಮಿ, ಸುಮಧ್ಯ, ಸುಮುಖ ಈ ಭೇದಗಳೂ ಹಂಸನೆಂಬ ಮನುಷ್ಯಜಾತಿಯ ಭೇದಗಳಾಗುತ್ತವೆ

೩-೬ ಕಪೋಲಗಳ ಮೇಲೆಲ್ಲಾ ಹೆಚ್ಚಾಗಿ ರೋಮಗಳಿದ್ದು ಆನೆಯಂತೆ ಗಂಭೀರ ಗಮನದಿಂದ ಕೂಡಿ ಬುದ್ಧಿಶಾಲಿಯಾಗಿಯೂ, ದುಂಡಾಗಿಯೂ ಪರಿಪುಷ್ಟವಾಗಿಯೂ ಇರುವ ಬಾಹುಗಳಿಂದ ಕೂಡಿ ಪದ್ಮವರ್ಣವುಳ್ಳ ಮನುಷ್ಯನು ಭದ್ರ ಜಾತಿಗೆ ಸೇರಿದವನು ಹೆಸರಿನ ಬಣ್ಣದಂತೆ ಶ್ಯಾಮನಾಗಿಯೂ, ಕೃಶವಾಗಿಯೂ, ಕಾಂತಿಯುಕ್ತವಾಗಿಯೂ ಇರುವ ಮಧ್ಯಪ್ರದೇಶದಿಂದ ಕೂಡಿ ದೀರ್ಘ ಬಾಹುವಾಗಿಯೂ, ದಪ್ಪವಾದ ಹೆಗಲುಗಳಿಂದ ಕೂಡಿಯೂ, ಆನೆಯಂತಿರುವ ದೀರ್ಘವಾದ ಮೂಗನ್ನೂ ವಿಶಾಲವಾದ ಕಪೋಲ ಪ್ರಾಂತವನ್ನೂ, ಹೊಂದಿರುವವನು ಮಾಲವ್ಯ ಜಾತಿಗೆ ಸೇರುತ್ತಾನೆ ಶರನ್ಮೇಘದಂತೆ ಬಿಳುಪಾಗಿಯೂ ಶಂಖಸದೃಶಕಂಠನೂ, ಬುದ್ಧಿಶಾಲಿಯೂ, ಸತ್ಯಸಂಧನೂ, ಬಲಿಷ್ಠನೂ ಆಗಿರುವವನು ರುಚಕ

**ರಕ್ತಶ್ಯಾಮಸ್ತು ಶಶಕಃ ಕಿಂಚಿತ್ಕಬುರ್ರಕಸ್ತಥಾ |**
**ಪೂರ್ಣಗಂಡಶ್ಚ ಚತುರಃ ಮಧ್ವಕ್ಷಶ್ಚ ಪ್ರಕೀರ್ತಿತಃ　　　　|| ೬ ||**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ**
**ವಜ್ರಸಂವಾದೇ ಚಿತ್ರಸೂತ್ರೇ ಪ್ರಮಾಣವರ್ಣನೋ**
**ನಾಮ ಷಟ್‌ತ್ರಿಂಶತ್ತಮೋಽಧ್ಯಾಯಃ**

ಜಾತಿಗೆ ಸೇರುತ್ತಾನೆ ಕಪ್ಪುಮಿಶ್ರವಾದ ಕೆಂಪುಬಣ್ಣದಿಂದ ಕೂಡಿಯೂ, ಬೂದು ಬಣ್ಣದಿಂದ ಕೂಡಿಯೂ ಇರುವವನು ಶಶಕ ಜಾತಿಗೆ ಸೇರುತ್ತಾನೆ ಗಂಡಪ್ರದೇಶಗಳು ತುಂಬಿಕೊಂಡಿದ್ದು ಚತುರನಾಗಿರುವವನು ಮಧ್ವಕ್ಷನೆಂಬ ಹಂಸಭೇದಕ್ಕೆ ಸೇರುತ್ತಾನೆ

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯ ಖಂಡದಲ್ಲಿ ಮಾರ್ಕಂಡೇಯ
ವಜ್ರ ಸಂವಾದದಲ್ಲಿ ಚಿತ್ರಸೂತ್ರಪ್ರಕರಣದ ಪ್ರಮಾಣವರ್ಣನವೆಂಬ
ಮೂವತ್ತಾರನೆಯ ಅಧ್ಯಾಯ ಮುಗಿದಿದೆ



॥ ಓಂ ॥

॥ ಶ್ರೀ ಹಯಗ್ರೀವಾಯ ನಮಃ ॥

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### ॥ ಸಪ್ತತ್ರಿಂಶತ್ತಮೋಽಧ್ಯಾಯಃ ॥

**॥ ಮಾರ್ಕಂಡೇಯ ಉವಾಚ ॥**

**ಅಂಗಪ್ರತ್ಯಂಗಮಾನೇನ ಯಥಾ ಪಂಚನರಾಃ ಸ್ಮೃತಾಃ ।**
**ಸ್ತ್ರಿಯಃ ಪಂಚ ತಥಾ ಜ್ಞೇಯಾಸ್ತಾ ಏವ ಮನುಜೋತ್ತಮ ॥ ೧ ॥**

**ಪುರುಷಸ್ಯ ಸಮಾಸಸ್ಥಾ ಕರ್ತವ್ಯಾ ಯೋಷಿದೀಶ್ವರ ।**
**ನರಸ್ಕಂಧಪ್ರಮಾಣೇನ ಕಾರ್ಯೈಕಾ ಸಾ ಯಥಾಮಿತಿ ॥ ೨ ॥**

**ಅಂಗುಲೌ ದ್ವೌ ನರತ್ಕ್ಷಾಮಂ ಸ್ತ್ರಿಯೋ ಮಧ್ಯಂ ವಿಧೀಯತೇ ।**
**ಅಧಿಕಾ ಚ ಕಟಿಃ ಕಾರ್ಯಾ ತಥೈವ ಚತುರಂಗುಲಂ ॥ ೩ ॥**

---

### ಮೂವತ್ತೇಳನೆಯ ಅಧ್ಯಾಯ.

೧-೩ ಮಾರ್ಕಂಡೇಯರು ಹೇಳುತ್ತಾರೆ ಹಿಂದೆ ಹೇಳಿರುವ ಅಂಗ ಪ್ರತ್ಯಂಗಗಳ ಪ್ರಮಾಣಾನುಸಾರವಾಗಿ ಪುರುಷರಲ್ಲಿ ಐದುವಿಧವಿರುವಂತೆ ಸ್ತ್ರೀಯರೂ ಐದು ವಿಧವಾಗಿರುತ್ತಾರೆಂದೂ ತಿಳಿಯಬೇಕು. ಸ್ತ್ರೀಯನ್ನು ಪುರುಷನ ಸಮಾಪ ದಲ್ಲಿಯೇ ನಿರ್ಮಿಸಬೇಕು ಅಂತಹ ಸ್ತ್ರೀಯು ಪುರುಷನ ಭುಜದವರಿಗೆ ಎತ್ತರ ಉಳ್ಳವಳಾಗಿರಬೇಕು ಸ್ತ್ರೀಯ ಶರೀರದಲ್ಲಿ ಮಧ್ಯಭಾಗವು ಪುರುಷರ ಶರೀರದ ಮಧ್ಯಭಾಗಕ್ಕಿಂತ ಎರಡು ಅಂಗುಲ ಕಡಿಮೆಯಾಗಿರಬೇಕು ಕಟಿಪ್ರದೇಶವು ನಾಲ್ಕು ಅಂಗುಲ ಹೆಚ್ಚಾಗಿಯೂ ಇರಬೇಕು.

ಉರಃಪ್ರಮಾಣತಃ ಕಾರ್ಯೌ ಸ್ತನೌ ನೃಪ ಮನೋಹರೌ ।
ನೃಪಾಶ್ಚ ಸರ್ವೇ ಕರ್ತವ್ಯಾ ಮಹಾಪುರುಷ ಲಕ್ಷಣಾಃ ॥ ೪ ॥

ಜಾಲಪಾದಕರಾಃ ಕಾರ್ಯಾಃ ತಥಾ ವೈ ಚಕ್ರವರ್ತಿನಃ ।
ಊರ್ಣೇಯಂ ಚ ಭ್ರುವೋರ್ಮಧ್ಯೇ ತೇಷಾಂ ಕಾರ್ಯಂ ತಥಾ ಶುಭಂ ॥

ರೇಖಾಶ್ಚ ಕರಯೋಃ ಕಾರ್ಯಾಸ್ತಿಸ್ರೋ ರಾಜ್ಞಾಂ ಮನೋಹರಾಃ ।
ಶಶಕ್ಷತಜಸಂಕಾಶಾಃ ಶಸ್ತ್ರಾ ವೈ ಕ್ಷಾಮಕೋಟಿಕಾಃ ॥ ೬ ॥

ತದಂಗ ಭಂಗಿನಃ ಸೂಕ್ಷ್ಮಾ ನಿಜಸ್ನೇಹಾಭ್ಯಲಂಕೃತಾಃ ।
ಘನೇಂದ್ರನೀಲಸದೃಶಾಃ ಕೇಶಾಃ ಕಾರ್ಯಾಸ್ತಥಾ ಶುಭಾಃ ॥ ೭ ॥

ಕುಂತಲಾ ದಕ್ಷಿಣಾವರ್ತಾಸ್ತರಂಗಾ ಸಿಹ್ಮಕೇಸರಾ ।
ವರ್ಧರಾ ಜೂಟಟಸರಾ ಇತ್ಯೇತಾಃ ಕೇಶಜಾತಯಃ ॥ ೮ ॥

ಚಾಪಾಕಾರಂ ಭವೇನ್ನೇತ್ರಂ ಮತ್ಸ್ಯೋದರಮಥಾಪಿ ವಾ ।
ನೇತ್ರಮುತ್ಪಲಪತ್ರಾಭಂ ಪದ್ಮಪತ್ರನಿಭಂ ತಥಾ ॥ ೯ ॥

---

೪-೭ ಎದೆಯ ವಿಸ್ತಾರಕ್ಕೆ ತಕ್ಕಂತೆ ರಮ್ಯವಾದ ಸ್ತನಗಳನ್ನು ನಿರ್ಮಿಸಬೇಕು ರಾಜರುಗಳನ್ನು ಮಹಾಪುರುಷರ ಲಕ್ಷಣದಿಂದ ಕೂಡಿರುವಂತೆ ನಿರ್ಮಿಸಬೇಕು ಅದರಲ್ಲಿಯೂ ಚಕ್ರವರ್ತಿಗಳನ್ನು ನಿರ್ಮಿಸುವಾಗ ಅವರ ಕೈಕಾಲುಗಳು ಬಲೆಗಳಂತೆ ವಿರಳವಾದ ಬೆರಳುಗಳಿಂದ ಕೂಡಿರಬೇಕು ಹುಬ್ಬುಗಳ ಮಧ್ಯದ ಸುಳಿಯೂ ಸಹ ಸಲ್ಲಕ್ಷಣಗಳಿಂದ ಕೂಡಿರಬೇಕು ಕೈಗಳಲ್ಲಿ ರಮ್ಯವಾದ ಮೂರು ರೇಖೆಗಳನ್ನು ರಚಿಸಬೇಕು, ಮೊಲದ ರಕ್ತದಂತೆ ಕೆಂಪಾಗಿಯೂ, ಕೃಶವಾದ ಅಗ್ರಭಾಗವುಳ್ಳದ್ದಾಗಿಯೂ ಇರುವ ಶಸ್ತ್ರದ ರೇಖೆಗಳನ್ನೂ ರಚಿಸಬೇಕು ಅವಯವಗಳ ರೇಖೆಗಳನ್ನು ಜಿಡ್ಡಿನಿಂದ ಕೂಡಿಯೂ ಸೂಕ್ಷ್ಮವಾಗಿಯೂ ಇರುವಂತೆ ರಚಿಸಬೇಕು ಇಂದ್ರನೀಲಮಣಿಯಂತೆ ಕಪ್ಪಾಗಿಯೂ, ರಮ್ಯವಾಗಿಯೂ ಇರುವ ಕೇಶಗಳನ್ನು ನಿರ್ಮಿಸಬೇಕು

೮-೧೦ ಕೇಶಪಾಶಗಳು ಪ್ರದಕ್ಷಿಣವಾದ ಸುರುಳಿಗಳಿಂದ ಕೂಡಿರಬೇಕು. ತರಂಗ, ಸಿಂಹಕೇಸರ, ವರ್ಧರ, ಜೂಟ, ಟಸರ ಇತ್ಯಾದಿಗಳು. ಕೇಶಪಾಶದ ಪ್ರಕಾರ ವಿಶೇಷಗಳು ಕಣ್ಣುಗಳು ಚಾಪಾಕಾರವೆಂದೂ, ಮತ್ಸ್ಯೋದರವೆಂದೂ,

**ಶಶಾಕೃತಿರ್ಮಹಾರಾಜ ಪಂಚಮಂ ಪರಿಕೀರ್ತಿತಂ ।**
**ಚಾಪಾಕಾರಂ ಭವೇನ್ನೇತ್ರಂ ಪ್ರಮಾಣೇನ ತಥಾಸ್ತ್ರಿಯಃ ॥ ೧೦ ॥**

**ಮತ್ಸ್ಯೋದರಾಖ್ಯಂ ಕಥಿತಂ ತಥಾ ಯವಚತುಷ್ಟಯಂ ।**
**ನೇತ್ರಮುತ್ಪಲಪತ್ರಾಖ್ಯಂ ಪ್ರಮಾಣಾತ್ ಷಡ್ಯವಂ ಸ್ಮೃತಂ ॥ ೧೧ ॥**

**ಪದ್ಮಪತ್ರನಿಭಂ ನೇತ್ರಂ ಪ್ರಮಾಣೇನ ಯವಾ ನವ ।**
**ಶಶಾಕೃತಿಂ ಚ ವಿಜ್ಞೇಯಂ ತಥೈವ ಚ ಯವಾ ದಶ ॥ ೧೨ ॥**

**ಸ್ವಮಾನಾಙ್ಗುಲಮಾನಸ್ಯ ಯವಾಮಾನಂ ಪ್ರಕಲ್ಪಯೇತ್ ।**
**ಚಾಪಾಕಾರಂ ಭವೇನ್ನೇತ್ರಂ ಯೋಗಭೂಮಿನಿರೀಕ್ಷಣಾತ್ ॥ ೧೩ ॥**

**ಮತ್ಸ್ಯೋದರಾಕೃತಿ ಕಾರ್ಯಂ ನಾರೀಣಾಂ ಕಾಮಿನಾಂ ತಥಾ ।**
**ನೇತ್ರಮುತ್ಪಲಪತ್ರಾಭಂ ನಿರ್ವಿಕಾರಸ್ಯ ಶಾಸ್ಯತೇ ॥ ೧೪ ॥**

**ತ್ರಸ್ತಸ್ಯ ರುದತಶ್ಚೈವ ಪದ್ಮಪತ್ರನಿಭಂ ಭವೇತ್ ।**
**ಕ್ರುದ್ಧಸ್ಯ ವೇದನಾರ್ತಸ್ಯ ನೇತ್ರಂ ಶಶಾಕೃತಿರ್ಭವೇತ್ ॥ ೧೫ ॥**

---

ಉತ್ಪಲಪತ್ರಾಭವೆಂದೂ, ಶ್ಯೇನಾಕೃತಿ ಎಂದೂ ಐದು ವಿಧವಾಗುತ್ತವೆ ಸ್ತ್ರೀಯರಿಗೆ ಪ್ರಮಾಣಕ್ಕೆ ತಕ್ಕಂತೆ ಚಾಪಾಕಾರವಾದ ಕಣ್ಣುಗಳಿರಬೇಕು.

೧೧-೧೨ ನಾಲ್ಕುಯವಪರಿಮಾಣವು ಮತ್ಸ್ಯೋದರಾಖ್ಯವೆಂದೂ ಆರುಯವಪರಿಮಾಣವುಳ್ಳ ನೇತ್ರವು ಉತ್ಪಲಪತ್ರಾಖ್ಯವೆಂದೂ, ಒಂಭತ್ತುಯವಪರಿಮಾಣಉಳ್ಳ ನೇತ್ರವು ಪದ್ಮಪತ್ರನಿಭವೆಂದೂ, ಹತ್ತುಯವದಪರಿಮಾಣಉಳ್ಳ ನೇತ್ರವು ಶಶಾಕೃತಿ ಎಂದೂ ಹೇಳಲಾಗುತ್ತದೆ ತನ್ನ ಪರಿಮಾಣಕ್ಕ ತಕ್ಕಂತೆ ಅಂಗುಲಾನುಸಾರವಾಗಿ ಯುವಪರಿಮಾಣವನ್ನು ಕಲ್ಪಿಸಿಕೊಳ್ಳಬೇಕು

೧೩-೧೫. ಯೋಗದಶೆಯಲ್ಲಿ ನೇತ್ರಗಳು ಚಾಪಾಕಾರದಲ್ಲಿರಬೇಕು ಕಾಮಿಗಳಾದ ಸ್ತ್ರೀಯರಿಗೆ ಮತ್ಸ್ಯೋದರಾಕೃತಿಯುಳ್ಳ ನೇತ್ರಗಳಿರಬೇಕು ಯಾವ ವಿಕಾರವೂ ಇಲ್ಲದಿರುವಾಗ ಉತ್ಪಲಪತ್ರಾಭವೆಂಬ ನೇತ್ರವು ಪ್ರಶಸ್ತವಾದುದು ಭಯಗೊಂಡ ಮತ್ತು ರೋದನಮಾಡುತ್ತಿರುವವರಿಗೆ ಪದ್ಮಪತ್ರನಿಭವೆಂಬ ನೇತ್ರವಿರಬೇಕು ಕೋಪಗೊಂಡ ಮತ್ತು ವೇದನೆಯಿಂದ ಕೂಡಿರುವ ಕಾಲದಲ್ಲಿ

ಋಷಯಃ ಪಿತರಶ್ಚೈವ ದೇವತಾಶ್ಚ ನರಾಧಿಪ ।
ಸ್ವಪ್ರಭಾಭರಣಾಃ ಕಾರ್ಯಾ ದ್ಯುತಿಮನ್ತಸ್ತಥೈವ ಚ ।
ಮುಷನ್ತಸ್ತೇಜಸಾಂ ತೇಜಃ ಪರೇಷಾಂ ನೃಪಸತ್ತಮ ॥ ೧೬ ॥

ಸಮ್ಯಗ್ವಿಚಾರ್ಯ ನೃಪತೇ ಸ್ವಧಿಯಾ ಯಥೋಕ್ತಂ
ಹ್ಯೇತತ್ಪ್ರಮಾಣಮನುರೂಪಮನಿಂದಿತಂ ಚ ।
ಸ್ಥಾನೈರನೇಕಕಿರಣೈಃ ಸ್ಥಿರಭೂಮಿಲಂಬೈಃ
ಕಾರ್ಯಂ ತದೇವ ಸುಕುಮಾರಮಜಿಹ್ಮರೇಖಂ ॥ ೧೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರ ಸಂವಾದೇ ಸಾಮಾನ್ಯಮಾನವರ್ಣನೋ ನಾಮ
ಸಪ್ತತ್ರಿಂಶತ್ತಮೋಽಧ್ಯಾಯಃ

ಶಶಾಕೃತಿ ಎಂಬ ನೇತ್ರವಿರಬೇಕು  ಋಷಿಗಳೂ, ಪಿತೃಗಳೂ, ದೇವತೆಗಳು ಸಹ ಸ್ವಪ್ರಭೆಗಳಿಂದ ಕೂಡಿ ಪ್ರಕಾಶಮಾನರಾಗಿಯೂ, ತೇಜಸ್ವಿಗಳಾಗಿಯೂ ನಿರ್ಮಿಸಲ್ಪಡಬೇಕು  ಅಂತಹವರು ತಮ್ಮ ತೇಜಸ್ಸಿನಿಂದ ಮತ್ತೊಬ್ಬರ ತೇಜಸ್ಸನ್ನು ಅಪಹರಿಸುವಂತಿರಬೇಕು  ಎಲೈ ಧೊರೆಯೇ, ಈಗ ನಾನು ಹೇಳಿರುವ ಪ್ರಕಾರ ಪ್ರಮಾಣಗಳನ್ನು ಸರಿಯಾಗಿ ಆಲೋಚಿಸಿ ಅನುರೂಪವಾಗಿಯೂ, ಅನಿಂದಿತವಾಗಿಯೂ, ಇರುವ ಆಕಾರ ವಿಶೇಷವನ್ನು ಸ್ವಬುದ್ಧಿಯಿಂದಲೂ ವಿಮರ್ಶಿಸಿ ಅನೇಕ ಸ್ಥಾನಾದಿಗಳಿಂದಲೂ ಸ್ಥಿರಪ್ರದೇಶಗಳಿಂದಲೂ ಕೂಡಿರುವ ಇಂತಹ ಚಿತ್ರಗಳನ್ನು ಮುಜಾರೇಖೆಯಿಂದ ಕೂಡಿ ಸುಕುಮಾರವಾಗಿರುವಂತೆ ರಚಿಸಬೇಕು

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯ ಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಸಾಮಾನ್ಯವರ್ಣನವೆಂಬ ಮೂವತ್ತೇಳನೆಯ
ಅಧ್ಯಾಯವು ಮುಗಿದಿದೆ



॥ ಓಂ ॥

॥ ಶ್ರೀ ಹಯಗ್ರೀವಾಯ ನಮಃ ॥

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### ॥ ಅಷ್ಟತ್ರಿಂಶತ್ತಮೋಽಧ್ಯಾಯಃ ॥

॥ ಮಾರ್ಕಂಡೇಯ ಉವಾಚ ॥

ನೇತ್ರಮುತ್ಪಲಪತ್ರಾಭಂ ರಕ್ತಾಂತಂ ಕೃಷ್ಣತಾರಕಂ ।
ಪ್ರಸನ್ನಂ ದೀರ್ಘಪಕ್ಷ್ಮಾಂತಂ ಮನೋಜ್ಞಂ ಮೃದು ಶಸ್ತ್ರಮ ॥ ೧ ॥

ದೇವತಾನಾಂ ಕೃತಂ ರಾಜನ್ ಪ್ರಜಾಹಿತಕರಂ ಭವೇತ್ ।
ಸಮೇ ಗೋಕ್ಷೀರಪರ್ಣಾಭೇ ಸ್ನಿಗ್ಧೇ ಜಿಹ್ಮಾಗ್ರಪಕ್ಷ್ಮಲೇ ॥ ೨ ॥

ಪ್ರಸನ್ನೇ ಪದ್ಮನೇತ್ರಾಂತೇ ಮನೋಜ್ಞೇ ಪ್ರಿಯದರ್ಶನೇ ।
ಕೃಷ್ಣತಾರೇ ವಿಶಾಲೇ ಚ ನಯನೇ ಶ್ರೀಸುಖಪ್ರದೇ ॥ ೩ ॥

---

### ಮೂವತ್ತೆಂಟನೆಯ ಅಧ್ಯಾಯ

೧-೫. ಮಾರ್ಕಂಡೇಯರು ಹೇಳುತ್ತಾರೆ ದೇವತೆಗಳ ಕಣ್ಣುಗಳು ನೈದಿಲೆಯ ಕಾಂತಿಯಂತೆಯೂ ಕೆಂಪಾದ ಅಗ್ರಭಾಗಉಳ್ಳದ್ದಾಗಿಯೂ, ಕಪ್ಪಾದ ಗುಡ್ಡೆಗಳುಳ್ಳದ್ದಾಗಿಯೂ, ದೀರ್ಘವಾದ ರೆಪ್ಪೆಗಳಿಂದಕೂಡಿ ಪ್ರಸನ್ನವಾಗಿಯೂ ಮನೋಹರವಾಗಿಯೂ ಇದ್ದಲ್ಲಿ ಪ್ರಜೆಗಳಿಗೆ ಹಿತಉಂಟಾಗುತ್ತದೆ ಸಮನಾಗಿಯೂ ಗೋಕ್ಷೀರವಂತೆ ಶುಭ್ರವಾಗಿಯೂ ಸ್ನೇಹಮಯವಾಗಿಯೂ, ವಕ್ರವಾದರೆಪ್ಪೆಗಳಿಂದ ಕೂಡಿಯೂ ಪ್ರಸನ್ನವಾಗಿಯೂ ನೋಡಲು ರಮ್ಯವಾಗಿಯೂ ಕಪ್ಪಾದ ಗುಡ್ಡೆಗಳಿಂದಲೂ ಕಮಲದಳದಂತೆ ಅಗ್ರಭಾಗ ಉಳ್ಳದ್ದಾಗಿಯೂ ವಿಶಾಲವಾಗಿಯೂ ಇದ್ದಲ್ಲಿ ಅಂತಹನೇತ್ರಗಳು ಸಂಪತ್ತು ಮತ್ತು ಸುಖ ಇವುಗಳಿಗೆ ಸೂಚಕವಾಗುತ್ತವೆ. ತುಂಬಿಕೊಂಡು ಪೂರ್ಣವಾಗಿರುವ ಕಣ್ಣುಗಳು ಶುಭಲಕ್ಷಣಗಳಿಂದ

**ಚತುರಸ್ರಂ ಸುಸಂಪೂರ್ಣಂ ಪ್ರಸನ್ನಶುಭಲಕ್ಷಣಂ ।**
**ಅತ್ರಿಕೋಣಮವಕ್ರಂ ಚ ಅಧಿಕಾರಮುಖಂ ಭವೇತ್ ॥ ೪ ॥**

**ದೀರ್ಘಮಂಡಲಚಕ್ರಾಣಿ ತ್ರಿಕೋಣಾದೀನಿ ಯಾನಿ ಚ ।**
**ವರ್ಜ್ಯಾನಿ ತಾನಿ ದೇವಾನಾಂ ಪ್ರಜಾಸು ಶಿವಮಿಚ್ಛತಾ ॥ ೫ ॥**

**ಕಾರ್ಯಾ ಹಂಸಪ್ರಮಾಣೇನ ದೇವಾ ಯದುಕುಲೋದ್ವಹ ।**
**ತೇಷಾಂ ಚ ಲೋಮಕರ್ತವ್ಯಮಕ್ಷಿಪಕ್ಷ್ಮಸು ಚ ಭ್ರುವೋಃ ॥ ೬ ॥**

**ಅತಃ ಶೇಷೇಷು ಗಾತ್ರೇಷು ದೇವಾಃ ಸ್ಯುಃ ಲೋಮವರ್ಜಿತಾಃ ।**
**ದ್ವಿರಷ್ಟವರ್ಷಾಕಾರಶ್ಚ ತಥಾ ಕಾರ್ಯಾ ದಿವೌಕಸಃ ॥ ೭ ॥**

**ಪ್ರಸನ್ನವದನಾ ನಿತ್ಯಂ ತಥಾ ಚ ಸ್ಮಿತದೃಷ್ಟಯಃ ।**
**ಮುಕುಟೈಃ ಕುಂಡಲೈಃ ಹಾರೈಃ ಕೇಯೂರೈರಂಗದೈಸ್ತಥಾ ॥ ೮ ॥**

---

ಕೂಡಿರುತ್ತವೆ ತ್ರಿಕೋಣವಾಗಿಯೂ ವಕ್ರವಾಗಿಯೂ ಇರದೆ ರಮ್ಯವಾಗಿದ್ದಲ್ಲಿ ಅಂತಹ ನೇತ್ರವು ಅಧಿಕಾರಕ್ಕೆ ಸೂಚಕವಾಗುತ್ತದೆ ಬಹಳದೀರ್ಘವಾಗಿಯೂ ಮಂಡಲಾಕಾರವಾಗಿಯೂ, ಚಕ್ರದಂತೆಭಯಂಕರವಾಗಿಯೂ ತ್ರಿಕೋಣವಾಗಿಯೂ ಇರುವ ನೇತ್ರಗಳು ಅಪ್ರಶಸ್ತಗಳು ಪ್ರಜೆಗಳಿಗೆ ಮಂಗಳವನ್ನು ಅಪೇಕ್ಷಿಸುವವನು ಅಂತಹ ಕಣ್ಣುಳನ್ನು ದೇವತೆಗಳಿಗೆ ನಿರ್ಮಿಸಬಾರದು

೬-೯ ದೇವತೆಗಳ ವಿಗ್ರಹಗಳನ್ನು ಹಂಸನೆಂಬ ಪುರುಷ ಜಾತಿಯ ಪ್ರಮಾಣಕ್ಕೆ ತಕ್ಕಂತೆ ನಿರ್ಮಿಸಬೇಕು ಅಂತಹ ದೇವತೆಗಳ ವಿಗ್ರಹಕ್ಕೆ ಕಣ್ಣುಗಳ ರೆಪ್ಪೆಗಳಲ್ಲಿಯೂ ಹುಬ್ಬುಗಳಲ್ಲಿಯೂ ರೋಮಗಳನ್ನು ನಿರ್ಮಿಸಬೇಕು ಇತರ ಅವಯವಗಳಲ್ಲಿ ದೇವತೆಗಳಿಗೆ ರೋಮಗಳಿರುವುದಿಲ್ಲ ಹದಿನಾರು ವರ್ಷದ ಪ್ರಾಯ ತೋರುವ ಆಕಾರದಲ್ಲಿರಬೇಕು ಪ್ರಸನ್ನವಾದ ಮುಖದಿಂದಲೂ, ಮಂದಹಾಸದಿಂದ ಕೂಡಿದ ದೃಷ್ಟಿಗಳಿಂದಲೂ ಕೂಡಿ ಕಿರೀಟ, ಹಾರ, ಕುಂಡಲ, ಕಡಗ, ತೋಳುಬಳೆ ಮುಂತಾದ ಆಭರಣಗಳಿಂದ ಭೂಷಿತರಾಗಿರಬೇಕು ಶುಭವಾದ

ಭೂಷಿತಾಸ್ತೇಽಥಕರ್ತವ್ಯಾಃ ಶುಭಸ್ರಗ್ದಾಮಧಾರಿಣಃ ।
ಶ್ರೋಣೀಸೂತ್ರೇಣ ಮಹತಾ ಪಾದಾಭರಣಚಾರಿಣಾ ॥ ೯ ॥

ಯಜ್ಞೋಪವೀತವಂತಶ್ಚ ಸಾವತಂಸಾಸ್ತಥೈವ ಚ ।
ಜಾನ್ವಧೋ ಲಂಬಿನಾ ಕಾರ್ಯಾಃ ಶೋಭಿನಾ ಕಟಿವಾಸಸಾ ॥ ೧೦ ॥

ವಾಮೇ ಮನುಜಶಾರ್ದೂಲ ದಕ್ಷಿಣಂ ಜಾನು ದರ್ಶಯೇತ್ ।
ಅಂಶುಕಂ ಚ ತಥಾ ಕಾರ್ಯಂ ದೇವತಾನಾಂ ಮನೋಹರಂ ॥ ೧೧ ॥

ಪ್ರಭಾ ಚ ತೇಷಾಂ ಕರ್ತವ್ಯಾ ಮೂರ್ಧ್ನಿ ಮೂರ್ಧ್ನಃ ಪ್ರಮಾಣತಃ ।
ಮಂಡಲಾಭಾ ಮಹಾರಾಜ ದೇವತಾತೋಽನುಕಾರಿಣೀ ॥ ೧೨ ॥

ಊರ್ಧ್ವಾ ದೃಷ್ಟಿರಧೋದೃಷ್ಟಿಃ ತಿರ್ಯಕ್‌ತೇಷಾಂ ವಿವರ್ಜಯೇತ್ ।
ಹೀನಾಧಿಕಾ ವಾ ದೀನಾ ವಾ ಕ್ರುದ್ಧಾ ರೂಕ್ಷಾ ತಥೈವ ಚ ॥ ೧೩ ॥

--

ಹೂಮಾಲಿಕೆಯನ್ನೂ ಧರಿಸಿರಬೇಕು ಪಾದಾಭರಣದವರಿಗೂ ವ್ಯಾಪಿಸಿರುವ ದೀರ್ಘವಾದ ಕಟಿಸೂತ್ರದಿಂದಲೂ, ಯಜ್ಞೋಪವೀತದಿಂದಲೂ, ಕಿವಿಗಳ ಮೇಲಿನ ಅವತಂಸಗಳಿಂದಲೂ ಭೂಷಿತರಾಗಿರಬೇಕು

೧೦-೧೩. ಸೊಂಟದಲ್ಲಿರುವ ವಸ್ತ್ರವು ಮಂಡಿಯಿಂದ ಕೆಳಗಿನ ವರಗೂ ಜೋಲಾಡುತ್ತಿರುವಂತೆ ರಮ್ಯವಾಗಿ ರಚಿಸಬೇಕು ಎಡಮಂಡಿಯ ಮೇಲೆ ಬಲ ಮಂಡಿಯನ್ನು ತೋರ್ಪಡಿಸಬೇಕು ಹಾಗೆಯೇ ರಮ್ಯವಾದ ವಸ್ತ್ರವನ್ನೂ ರಚಿಸಬೇಕು ತಲೆಯ ಪ್ರಮಾಣಕ್ಕೆ ತಕ್ಕಂತೆ ಪ್ರಭೆಯನ್ನೂ ರಚಿಸಬೇಕು ಮಂಡಲಾಕಾರವಾದ ಆ ಪ್ರಭೆಯು ಆ ದೇವತೆಗಳ ಪ್ರಭಾವಕ್ಕೆ ಅನುಗುಣವಾಗಿರಬೇಕು ಊರ್ಧ್ವದೃಷ್ಟಿ, ಅಧೋದೃಷ್ಟಿ, ತಿರ್ಯಕ್‌ದೃಷ್ಟಿ ಇವು ದೇವತೆಗಳಿಗೆ ಇರಬಾರದು. ಹಾಗೆಯೇ ಪ್ರಮಾಣಕ್ಕಿಂತ ಚಿಕ್ಕದಾಗಿಯೂ, ಹೆಚ್ಚಾಗಿಯೂ, ದೀನವಾಗಿಯೂ, ಕೋಪಸೂಚಕವಾಗಿಯೂ ಭಯಂಕರವಾಗಿಯೂ ಸಹ ಇರಕೂಡದು

ಊರ್ಧ್ವಾ ತು ಮರಣಾಯೋಕ್ತಾ ಶೋಕಾಯೋಧಃ ಪ್ರಕೀರ್ತಿತಾ ।
ತಿರ್ಯಗ್ಧನವಿನಾಶಾಯ ಹೀನಾ ಭವತಿ ಮೃತ್ಯವೇ　　|| ೧೪ ||

ಅಧಿಕಾ ಶೋಕಜನನೀ ದೀನಾ ಚ ನೃಪಸತ್ತಮ ।
ರೂಕ್ಷಾ ಧನಕ್ಷಯಾಯ ಸ್ಯಾತ್ಕ್ರುದ್ಧಾ ಭಯವಿವರ್ಧಿನೀ　　|| ೧೫ ||

ಕ್ಷಾತೋದರೀ ನ ಕರ್ತವ್ಯಾ ನ ಕಾರ್ಯಾ ಚಾಧಿಕೋದರೀ ।
ಸಕ್ಷತಾ ಚ ನ ಕರ್ತವ್ಯಾ ತಥಾ ಯದುಕುಲೋದ್ವಹ　　|| ೧೬ ||

ಹೀನಾಧಿಕಪ್ರಮಾಣಾ ಚ ರೂಕ್ಷವರ್ಣಾ ತಥೈವ ಚ ।
ವಿವೃತೇನ ಚ ವಕ್ತ್ರೇಣ ನತಾ ಚ ಯದುನಂದನ　　|| ೧೭ ||

ಪ್ರಮಾಣಹೀನೈರಂಗೈಶ್ಚ ತ್ವಧಿಕೈರಪಿ ಪಾರ್ಥಿವ ।
ಕ್ಷಾತೋದರೀ ಕ್ಷುದ್ಭಯದಾ ಮರಣಾಯಾಧಿಕೋದರೀ　　|| ೧೮ ||

---

೧೪-೧೬ ಊರ್ಧ್ವದೃಷ್ಟಿಯು ಮರಣಕ್ಕೆ ಕಾರಣವಾಗುತ್ತದೆ ಅಧೋದೃಷ್ಟಿಯು ಶೋಕಪ್ರದವಾಗುತ್ತದೆ ತಿರ್ಯಕ್‌ದೃಷ್ಟಿಯು ಧನನಾಶಕ್ಕೆ ಕಾರಣವಾಗುತ್ತದೆ ಹೀನಪ್ರಮಾಣದ ದೃಷ್ಟಿಯೂ ಮೃತ್ಯುಪ್ರದವಾಗುತ್ತದೆ ಅಧಿಕ ಪ್ರಮಾಣದ ದೃಷ್ಟಿಯು ಶೋಕಪ್ರದ, ದೀನದೃಷ್ಟಿಯೂ ಭಯಂಕರದೃಷ್ಟಿಯೂ ಧನನಾಶಕ್ಕೆ ಕಾರಣವಾಗುತ್ತವೆ ಕೋಪದಿಂದ ಕೂಡಿದ ಕ್ರುದ್ಧದೃಷ್ಟಿಯು ಭಯಕ್ಕೆ ಕಾರಣವಾಗುತ್ತದೆ ವಿಗ್ರಹದಲ್ಲಿ ಆಯುಧಗಳಿಂದುಂಟಾದ ಕ್ಷತಿಗಳು ಇರಬಾರದು

೧೮-೨೧ ಹೀನ ಪ್ರಮಾಣವಾಗಿಯೂ, ಅಧಿಕ ಪ್ರಮಾಣವಾಗಿಯೂ, ಭಯಂಕರ ವರ್ಣದಿಂದ ಕೂಡಿಯೂ, ತೆರೆದ ಬಾಯಿನಿಂದ ಕೂಡಿಯೂ, ಕುಗ್ಗಿ ಹೋಗಿಯೂ ವಿಗ್ರಹವು ಇರಬಾರದು ವಿಗ್ರಹದ ಉದರ ಭಾಗವು ವಿಹಿತಪ್ರಮಾಣಕ್ಕಿಂತ ತೆಳುವಾಗಿದ್ದಲ್ಲಿ ಕ್ಷುದ್ಭಯಕ್ಕೆ ಕಾರಣವಾಗುತ್ತದೆ ಅಧಿಕವಾಗಿದ್ದಲ್ಲಿ ಮರಣಪ್ರದವಾಗುತ್ತದೆ ಕಚ್ಚುಕಚ್ಚಾಗಿದ್ದರೂ ಮರಣಕ್ಕೆ ಕಾರಣವಾಗುತ್ತದೆ. ಪ್ರಮಾಣಕ್ಕಿಂತಲೂ ಹೀನವಾಗಿದ್ದಲ್ಲಿ ಧನನಾಶಕವಾಗುತ್ತದೆ ಅಧಿಕವಾಗಿದ್ದಲ್ಲಿ ಶೋಕಪ್ರದವೂ ಭಯಂಕರ ವರ್ಣವಿದ್ದಲ್ಲಿ ಭಯಪ್ರದವೂ ಆಗುತ್ತದೆ ತೆರೆದಬಾಯಿ

**ಸಕ್ಷತಾ ಮರಣಾಯೋಕ್ತಾ ಹೀನಾ ಧನವಿನಾಶನೀ ।**
**ಅಧಿಕಾ ಶೋಕಜನನೀ ರೂಕ್ಷವರ್ಣಾ ಭಯಪ್ರದಾ ॥ ೧೯ ॥**

**ವಿವೃತ್ತೇನ ಚ ವಕ್ತ್ರೇಣ ಕುಲನಾಶಕರೀ ಭವೇತ್ ।**
**ಪ್ರಾಚ್ಯಾಭಾಧನನಾಶಾಯ ದಕ್ಷಿಣೇನ ಚ ಮೃತ್ಯವೇ ॥ ೨೦ ॥**

**ಪಶ್ಚಿಮೇನ ಸುತಘ್ನೀ ಚ ಚೋದಗ್ಭಯವಿವೃದ್ಧಯೇ ।**
**ಪ್ರಮಾಣಹೀನಾ ನಾಶಾಯ ಅಧಿಕಾದೇಶನಾಶಿನೀ ॥ ೨೧ ॥**

**ಅಶ್ಲಿಷ್ಟಾ ಮರಣಾಯೋಕ್ತಾ ಕ್ರುದ್ಧಾ ರೂಪವಿನಾಶಿನೀ ।**
**ಪ್ರಮಾಣಹೀನಾಂ ಪ್ರತಿಮಾಂ ತಥಾ ಲಕ್ಷಣವರ್ಜಿತಾಂ ॥ ೨೨ ॥**

**ಆವಾಹಿತಾಂ ಚ ವಿಪ್ರೇಂದ್ರೈಃ ನಾವಿಶಂತಿ ದಿವೌಕಸಃ ॥ ೨೩ ॥**

**ಆವಿಶಂತಿ ತು ತಾಂ ನಿತ್ಯಂ ಪಿಶಾಚಾದೈತ್ಯದಾನವಾಃ ।**
**ತಸ್ಮಾತ್ಸರ್ವಪ್ರಯತ್ನೇನ ಮಾನಹೀನಾಂ ವಿವರ್ಜಯೇತ್ ॥ ೨೪ ॥**

---

ನಿಂದ ಕೂಡಿದ್ದಲ್ಲಿ ಕುಲನಾಶಕವಾಗುತ್ತದೆ. ಮುಂಭಾಗದಲ್ಲಿ ಮಾತ್ರ ಕಾಂತಿಯುಕ್ತ ವಾಗಿದ್ದಲ್ಲಿ ಧನನಾಶಕ್ಕೂ, ದಕ್ಷಿಣ ಭಾಗದಲ್ಲಿ ಮಾತ್ರ ಅ ರೀತಿ ಇದ್ದಲ್ಲಿ ಮೃತ್ಯುವಿಗೂ, ಪಶ್ಚಿಮದಲ್ಲಿ ಸುತನಾಶಕ್ಕೂ, ಉತ್ತರದಲ್ಲಿ ಭಯೋತ್ಪಾತಕ್ಕೂ ಕಾರಣ ವಾಗುತ್ತದೆ. ಪ್ರಮಾಣಹೀನವಾದ ವಿಗ್ರಹವು ಕರ್ತೃವಿನ ನಾಶಕ್ಕೂ ಅಧಿಕ ಪ್ರಮಾಣದ ವಿಗ್ರಹವು ದೇಶನಾಶಕ್ಕೂ ಕಾರಣವಾಗುತ್ತದೆ

೨೨-೨೫ ನುಣುಪಾಗಿರದೆ ಕಚ್ಚುಕಚ್ಚಾಗಿದ್ದಲ್ಲಿ ಮರಣಪ್ರದವಾಗಿಯೂ, ಕೋಪದಿಂದ ಕೂಡಿದ್ದಲ್ಲಿ ರೂಪನಾಶಕವಾಗಿಯೂ, ಆಗುತ್ತದೆ ಪ್ರತಿಮೆಯು ಪ್ರಮಾಣಹೀನವಾಗಿದ್ದರೂ ಅಂತಹ ಪ್ರತಿಮೆಗಳಲ್ಲಿ ಬ್ರಾಹ್ಮಣೋತ್ತಮರಿಂದ ಆವಾಹನೆ ಮಾಡಲ್ಪಟ್ಟರೂ ಸಹ ದೇವತೆಗಳು ಪ್ರವೇಶಿಸುವುದೇ ಇಲ್ಲ ಲಕ್ಷಣ ಬಾಹಿರಗಳಾದ ಅಂತಹ ಪ್ರತಿಮೆಗಳಲ್ಲಿ ದೈತ್ಯದಾನವರೂ ಪಿಶಾಚಿಗಳೂ ಪ್ರವೇಶಿಸಿ ಸಾನ್ನಿಧ್ಯ ಹೊಂದುತ್ತಾರ ಆದುದರಿಂದ ಲಕ್ಷಣ ಶೂನ್ಯವಾದ ಪ್ರತಿಮೆಯನ್ನೂ ಸರ್ವಪ್ರಕಾರದಿಂದಲೂ ತ್ಯಜಿಸಬೇಕು ಈ ಚಿತ್ರಲಕ್ಷಣದಲ್ಲಿ ಹೇಳಿರುವ ಲಕ್ಷಣ ಗಳಿಂದ ಕೂಡಿರುವ ಪ್ರತಿಮೆಯು ಪ್ರಶಸ್ತವೆಂದೇ ಹೇಳಲಾಗಿದೆ ಇಂತಹ ಸಲ್ಲಕ್ಷಣ ಗಳಿಂದ ಕೂಡಿರುವ ಪ್ರತಿಮೆಯು ಆಯುಃಪ್ರದವೂ, ಯಶಃಪ್ರದವೂ, ಧನಧಾನ್ಯ

ಚಿತ್ರಲಕ್ಷಣಸಂಯುಕ್ತಂ ಪ್ರಶಸ್ತಂ ಸರ್ವಮುಚ್ಯತೇ ।
ಆಯುಷ್ಯಂ ಚ ಯಶಸ್ಯಂ ಚ ಧನಧಾನ್ಯವಿವರ್ಧನಂ ॥ ೨೫ ॥

ತದೇವ ಲಕ್ಷಣಾಪೇತಂ ಧನಧಾನ್ಯವಿನಾಶನಂ ।
ದೇವಾ ನರೇಂದ್ರ ಕರ್ತವ್ಯಾಃ ಶೋಭಾವಂತಃ ಸದೈವ ತು ।
ಮೃಗೇಂದ್ರವೃಷನಾಗಾನಾಂ ಹಂಸಾನಾಂ ಗತಿಭಿಃ ಸಮಾಃ ॥ ೨೬ ॥

ಸಲಕ್ಷಣಂ ಚಿತ್ರಮುಶಂತಿ ಧನ್ಯಂ
ದೇಶಸ್ಯ ಕರ್ತುರ್ವಸುಧಾಧಿಪಸ್ಯ ।
ತಸ್ಮಾತ್ಪ್ರಯತ್ನೇನ ಸಲಕ್ಷಣಂ
ತತ್ಕಾರ್ಯಂ ನರೈರ್ಯತ್ನಪರೈರ್ಯಥಾವತ್ ॥ ೨೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಪ್ರತಿಮಾಲಕ್ಷಣವರ್ಣನಂ ನಾಮ
ಅಷ್ಟತ್ರಿಂಶತ್ತಮೋಽಧ್ಯಾಯಃ

---

ವೃದ್ಧಿಕರವೂ ಆಗುತ್ತವ ಅದೇ ಪ್ರತಿಮೆಯು ಲಕ್ಷಣಹೀನವಾದಲ್ಲಿ ಧನಧಾನ್ಯ
ನಾಶಕವಾಗಿಯೂ ಆಗುತ್ತದ

೨೬–೨೭ ಯಾವಾಗಲೂ ದೇವತೆಗಳ ಪ್ರತಿಮೆಗಳನ್ನು ಹೆಚ್ಚಾದ ಕಾಂತಿ
ಯಿಂದ ಕೂಡಿರುವಂತೆ ಮಾಡಬೇಕು ಸಿಂಹ, ಹೋರಿ, ಆನೆ, ಹಂಸ ಇವುಗಳ
ಗಮನದಂತೆ ಗಂಭೀರವಾದ ಗಮನಗಳಿಂದ ಕೂಡಿರಬೇಕು ಸಲ್ಲಕ್ಷಣಗಳಿಂದ
ಕೂಡಿದ ಚಿತ್ರವು ಬಹುಮಟ್ಟಿಗೂ ಶ್ಲಾಘ್ಯವೆನಿಸುತ್ತದೆ ಅಂತಹ ಚಿತ್ರವು ದೇಶಕ್ಕೂ
ಮಾಡಿದವನಿಗೂ, ಧೊರೆಗೂ ಕೂಡ ಶುಭಫಲವನ್ನುಂಟುಮಾಡುತ್ತದೆ. ಆದುದ
ರಿಂದ ಅಂತಹ ಶುಭಲಕ್ಷಣವುಳ್ಳ ಚಿತ್ರವನ್ನು ಏರ್ಪಡಿಸುವ ವಿಷಯದಲ್ಲಿ ಎಲ್ಲರೂ
ಪ್ರಯತ್ನ ಪಡಬೇಕು

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯ ಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಪ್ರತಿಮಾಲಕ್ಷಣವರ್ಣನವೆಂಬ ಮೂವತ್ತೆಂಟನೆಯ
ಅಧ್ಯಾಯ ಮುಗಿದಿದೆ



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಏಕೋನಚತ್ವಾರಿಂಶತ್ತಮೋಽಧ್ಯಾಯಃ ||

**|| ಮಾರ್ಕಂಡೇಯ ಉವಾಚ ||**

**ಶುಭಾಕಾರವಿಹಾರಾಣಿ ನಾನಾವರ್ಣಧರಾಣಿ ಚ ।**
**ನವ ಸ್ಥಾನಾನಿ ರೂಪಾಣಾಂ ಶೃಣು ತಾನ್ಯನುಪೂರ್ವಶಃ ॥ ೧ ॥**

**ಋಜ್ವಾಗತಂ ಭವೇತ್ಪೂರ್ವಮನೃಜು ತದನಂತರಂ ।**
**ಸಾಚೀಕೃತಶರೀರಂ ಚ ಭವತ್ಯರ್ಧವಿಲೋಚನಂ ॥ ೨ ॥**

**ತತಃ ಪಾರ್ಶ್ವಾಗತಂ ನಾಮ ಪರಾವೃತ್ತಮನಂತರಂ ।**
**ಪೃಷ್ಠಾಗತಮಥಃ ಕಾರ್ಯಂ ಪರಿವೃತ್ತಂ ಸಮಾನತಂ ॥ ೩ ॥**

---

### ಮೂವತ್ತೊಂಭತ್ತನೆಯ ಅಧ್ಯಾಯ

೧-೩. ಮಾರ್ಕಂಡೇಯರು ಹೇಳುತ್ತಾರೆ.— ಪ್ರತಿಮೆಗಳ ಅವಯವ ಸನ್ನಿವೇಶಗಳು ರಮ್ಯವಾದ ಆಯಾಯ ಅವಯವಗಳ ಆಕಾರಗಳು ತುಂಬಿತುಳುಕುವಂತೆಯೂ, ನಾನಾ ವರ್ಣಗಳಿಂದ ರಂಜಿತಗಳಾಗಿಯೂ ಇರಬೇಕು ಇಂತಹ ಸನ್ನಿವೇಶಗಳು ಒಂಭತ್ತು ವಿಧವಾಗಿರುತ್ತವೆ. ಅವನ್ನು ಕ್ರಮವಾಗಿ ಹೇಳುತ್ತೇನೆ ಕೇಳು, (ಪೂರ್ವ ಭಾಗದ ಅವಯವಗಳು ಎದುರಾಗಿ ಇದ್ದು ಸಮಪ್ರಮಾಣದಿಂದ ನಿಂತಲ್ಲಿ ಇದು ಋಜ್ವಾಗತವೆನಿಸುತ್ತದೆ) ಋಜ್ವಾಗತ, ಅನೃಜು, ಸಾಚೀಕೃತ ಶರೀರ, ಅರ್ಧವಿಲೋಚನ, ಪಾರ್ಶ್ವಾಗತ, ಪರಾವೃತ್ತ, ಪೃಷ್ಠಾಗತ, ಪರಿವೃತ್ತ, ಸಮಾನತ ಎಂದು ಒಂಭತ್ತು ಸ್ಥಾನಗಳಿವೆ

ಏತಾನ್ಯನೇಕಭೇದಾನಿ ನವಸ್ಥಾನಾನಿ [1]ಭೂಷಿತೇ ।
ಏಕೈಕಸ್ಯೇಹ ಭವತಃ ಶೃಣು ಮೇ ನೃಪ ಲಕ್ಷಣಂ　　　　॥ ೪ ॥

ತತ್ರಾಭಿಮುಖಮೇವಾದೌ ಸ್ಪಷ್ಟಮಾನಗುಣಾನ್ವಿತಂ ।
ಸುಸಂಪೂರ್ಣಂ ಸುಚಾರ್ವಂಗಂ ಸುಶ್ಲಕ್ಷ್ಣಮಲವರ್ತಕಂ　　　　॥ ೫ ॥

ಸುಶುದ್ಧಂ ಮಧುರಂ ಸ್ಪಷ್ಟರೇಖಾ ಸಂಸ್ಕಾರಭೂಷಿತಂ ।
ಯದ್ಭವೇತ್ ಸ್ಥಾನಮುಕ್ಷೀಣಗಾತ್ರಂ ಸ್ಪೃಷ್ಟಗತಂ ತು ತತ್　　　　॥ ೬ ॥

ಮುಖಸ್ಯಾದಾವತೋಽಕ್ಷೀಣಂ ವಕ್ಷಸ ಉದರಂ ತಥಾ ।
ಕಟ್ಯಾ ಚಸ್ಕಂಧದೇಶಾಚ್ಚ ಊರುತಶ್ಚ ಕ್ಷಯಂ ಗತಾ　　　　॥ ೭ ॥

---

೪–೬　ಈ ಒಂಭತ್ತು ಸ್ಥಾನಗಳಿಂದ ಕೂಡಿದ ಚಿತ್ರದಲ್ಲಿ ಅನೇಕ ಭೇದಗಳುಂಟು ಒಂದೊಂದಕ್ಕೂ ಉಂಟಾಗುವ ಆ ಭೇದಗಳನ್ನು ಲಕ್ಷಣದೊಡನೆ ಹೇಳುತ್ತೇನೆ ಕೇಳು, ಅವುಗಳಲ್ಲಿ ಮೊದಲನೆಯದಾಗಿ ಅಭಿಮುಖವಾಗಿರುವ ಅಂಗಾಂಗಗಳಿಂದ ಕೂಡಿಯೂ, ಸ್ಪಷ್ಟವಾದ ಆಳತೆ ಮತ್ತು ಪ್ರಮಾಣಗಳಿಂದ ಕೂಡಿಯೂ, ಎಲ್ಲಾ ಅವಯುವಗಳೂ ಪೂರ್ಣವಾಗಿದ್ದು ಕೋಮಲವಾಗಿಯೂ, ಕಣ್ಣಿಗೆ ಅಂದವಾಗಿರುವಂತಹ ವರ್ಣಸಂಸ್ಕಾರದಿಂದ ಕೂಡಿಯೂ, ಸ್ಪಷ್ಟವಾದ ರೇಖೆಗಳಿಂದ ಕೂಡಿ ಪರಿಪುಷ್ಟವಾದ ದೇಹವಿದ್ದಲ್ಲಿ ಈ ಸನ್ನಿವೇಶವು [2]ಸ್ಪೃಷ್ಟಗತವೆನಿಸುತ್ತದೆ

೭–೯　ಮುಖದ ಮುಂಭಾಗವು ಪರಿಪುಷ್ಟವಾಗಿ ಎತ್ತರವಾಗಿರಬೇಕು. ಎದೆಗಿಂತ ಉದರವೂ ಎತ್ತರವಾಗಿರಬೇಕು ಎರಡು ಕಡೆಯ ಕಂಕುಳಿನಿಂದ ಕೆಳಮುಖವಾಗಿ ಸೊಂಟದ ವರೆಗೂ ಸಣ್ಣದಾಗುತ್ತಿರಬೇಕು ತೊಡೆಗಳೂ ಕೆಳಕೆಳಕ್ಕೆ

---

1 ಇಲ್ಲಿ ನವಸ್ಥಾನ ವಿಭೂಷಿತೇ ಎಂದು ಪಾಠವಿರಬೇಕೆಂದು ತೋರುತ್ತದೆ.

2 ಈ ಭೇದವು ಮೇಲಿನ ಗಣನಗಳಲ್ಲಿ ಸೇರಿಲ್ಲ ಪೃಷ್ಠಾಗತವೆಂಬುದು ಏಳನೆಯ ಭೇದವಾಗಿರುವುದರಿಂದ ಅವನ್ನು ಮೊದಲು ವಿವರಿಸಲು ಅವಕಾಶವಿಲ್ಲ ಋಜ್ವಾಗತವೆಂಬ ಮೊದಲನೆಯ ಭೇದವು ಮುಂದೆ ನಿರೂಪಿಸಲ್ಪಟ್ಟಿದೆ ಆದುದರಿಂದ ಪೃಷ್ಠಗತವೆಂಬ ಈ ಭೇದವೇ ಮೊದಲು ನಿರ್ದೇಶಿಸಲು ಅರ್ಹವಾಗಿರುವುದರಿಂದ ಮೂಲದಲ್ಲಿರುವ ಪಾಠವು ಅಶುದ್ಧವೆಂದು ತಿಳಿಯಬೇಕಾಗಿದೆ ಇದ್ದ ಪಾಠಕ್ಕೆ ಅರ್ಥವನ್ನು ಬರೆಯಲಾಗಿದೆ ಟಿಲಾಂಗ್ ಕಾಮೆಂಟ್ರಿಯಲ್ಲಿಯೂ ಈ ಪಾಠವನ್ನು ಸರಿಪಡಿಸಿಲ್ಲ

**ನಾಸಾಪುಟಾಧರೋಷ್ಠಾನಾಂ ಚತುರ್ಥಾಂಶಂ ಚ ಬುದ್ಧಿಮತ್ ।**
**ಕ್ಷಯಂ ನೀತಂ ತ್ರಿಭಾಗಂ ಚ ಯಸ್ಯಗಾತ್ರೇಭ್ಯ ಏವ ಚ ॥ ೮ ॥**

**ಕಾನ್ತರೂಪಂ ಪರಂ ಸ್ಥಾನಂ ಸ್ಥಾನಲಂಬೋಪಪಾದಿತಂ ।**
**ಏತದೇವರ್ಜುನಾಮೋಕ್ತಮನೇಕ ಕರಣಾನ್ವಿತಂ ॥ ೯ ॥**

**ಯತ್ತಿರ್ಯಗ್ಭೂಮಿಲಂಬೇನ ನೇತ್ರಹಾರಿ ಸುವರ್ತನಂ ।**
**ಸುಕುಮಾರಂ ಚತುರ್ಭಾಗಂ ಕ್ಷೀಣಂ ಸರ್ವಾಂಗಶೋಭನಂ ॥ ೧೦ ॥**

**ಅಧ್ಯರ್ಧಭ್ರೂಲಲಾಟೇ ಚಾಪ್ಯಧ್ಯರ್ಧಘ್ರಾಣಮುತ್ಕಟಂ ।**
**ಭಾಗಕ್ಷಯಾವಶೇಷಾರ್ಧಂ ಕಲಾಪಕ್ಷೀಣಲೋಚನಂ ॥ ೧೧ ॥**

**ಕಲಾವಲುಪ್ತಭ್ರೂಲೇಖಂ ಲಿಖಿತಂ ಸ್ನಿಗ್ಧಲೇಖಯಾ ।**
**ನ ಚ ಛಾಯಾಗತಂ ಕಾಲಂ ನ ಚಾವಋಜುಕೋಪನಂ ॥ ೧೨ ॥**

---

ಸಣ್ಣದಾಗಿರಬೇಕು ಮೂಗಿನ ಹೊಳ್ಳೆಗಳು ಮುಂಭಾಗದಲ್ಲಿರುವ ಪರಿಮಾಣಕ್ಕಿಂತ ನಾಲ್ಕನೆಯ ಒಂದು ಭಾಗ ಮೇಲಮೇಲಕ್ಕೆ ಸಣ್ಣದಾಗಿರಬೇಕು ಕೆಳ ತುಟಿಯೂ ಸಹ ಎದುರಿಗೆ ಇರುವ ಪ್ರಮಾಣಕ್ಕಿಂತ ನಾಲ್ಕನೆಯ ಒಂದರಷ್ಟು ಕಡಿಮೆಯ ಪ್ರಮಾಣವನ್ನು ಎಡ ಬಲ ಪಾರ್ಶ್ವದ ಕೊನೆಯಲ್ಲಿ ಹೊಂದಿರಬೇಕು ತೊಡೆಯೇ ಮೊದಲಾದ ಅವಯವಗಳಲ್ಲಿ ಕಳಕೆಳಕ್ಕೆ ಮೂರನೆಯ ಒಂದು ಭಾಗದಷ್ಟು ಕೃಶವಾಗಿರಬೇಕು ರಮ್ಯವಾದ ಅವಯವ ಸನ್ನಿವೇಶದಿಂದಲೂ ರಮ್ಯವಾದ ದೇಹ ಕಾಂತಿಯಿಂದಲೂ ಎಲ್ಲಾ ಅವಯವಗಳಿಂದಲೂ ಕೂಡಿರುವ ಇಂತಹ ಸ್ಥಾನವು ಋಜ್ವಾಗತವೆನಿಸುತ್ತದೆ

೧೦-೧೨ (ತಿರುಗಿಕೊಂಡಿರುವ) ಪಾರ್ಶ್ವ ಭಾಗದ ಸನ್ನಿವೇಶವನ್ನು ಅವಲಂಬಿಸಿ ನೋಟಕ್ಕೆ ರಮ್ಯವಾಗಿಯೂ, ಸರಿಯಾದ ವರ್ಣವಿನ್ಯಾಸದಿಂದ ಕೂಡಿಯೂ ಇರುವ ದೇಹದ ನಾಲ್ಕನೇ ಒಂದು ಭಾಗದ ಚಿತ್ರಕ್ಕೆ ಸಾಚೀಕೃತವೆಂದು ಹೆಸರು ಪಾರ್ಶ್ವ ಪ್ರದೇಶವಾದುದರಿಂದ ಚಕ್ಕೆಯಂತೆ ತೆಳುವಾಗಿಯೂ ಸರ್ವಾಂಗಸುಂದರವಾಗಿಯೂ ಇರಬೇಕು ಹಣೆ ಹುಬ್ಬು ಇವುಗಳು ಅರ್ಧಭಾಗಮಾತ್ರ ತೋರುವಂತಿರಬೇಕು.

ಚೇಕಾರಿತ್ವಾಚ್ಚ ನೃಪ [2]ಸಾಚೀಕೃತಮಿಹೋಚ್ಯತೇ ।
ಅರ್ಧಂ ನೇತ್ರಂ ಮುಖೇ ಯಸ್ಯ ತಥಾ ಲುಪ್ತಮವಭ್ರುವೇ ।। ೧೩ ।।

ಭಂಗೋ ಲಲಾಟಮಾತ್ರಶ್ಚ ದೃಶ್ಯಾನಾಂ ಸಾರಮೇವ ತು ।
ಮಾತ್ರಾರ್ಧಂಚೈಕತೋಗಂಡಂ ದೃಶ್ಯಮರ್ಧಕೃತಕ್ಷಯಂ ।। ೧೪ ।।

ಮಾತ್ರಾರ್ಧಂ ಗಂಡರೇಖಾಯೋಃ ಯವಮಾವಿಷ್ಕೃತಂ ಹನೋಃ ।
ಉರಸೋರ್ಧಂ ಮುಖಂ ಲುಪ್ತಂ ನಾಭ್ಯಾಸ್ಯಾಚ್ಛಿಷ್ಟಮಂಗುಲಂ ।। ೧೫ ।।

---

ಮುಂದೆ ಚಾಚಿರುವ ಮೂಗೂ ಸಹ ಅರ್ಧ ಭಾಗ ಮಾತ್ರ ತೋರುತ್ತಿರಬೇಕು ಮುಖದ ಒಂದು ಭಾಗವು ಮರೆಯಾಗಿರುವುದರಿಂದ ಉಳಿದ ಅರ್ಧ ಭಾಗ ಮಾತ್ರ ತೋರುತ್ತಿರಬೇಕು ಕಣ್ಣು ಅಸ್ಪಷ್ಟವಾಗಿ ಕಲಾಮಾತ್ರದಿಂದ ತೋರುತ್ತಿರಬೇಕು ಹುಬ್ಬುಗಳೂ ಅಸ್ಪಷ್ಟವಾಗಿ ಛಾಯಾರೂಪದಿಂದ ತೋರುತ್ತಿರಬೇಕು. ರಮ್ಯರೇಖೆ ಯಿಂದ ಬರಯಲ್ಪಟ್ಟು ಕಪ್ಪುಬಣ್ಣವು ಛಾಯಾರೂಪದಿಂದ ಹಚ್ಚಾಗಿ ಕಾಣು ವಂತೆಯೂ ಕೋಪಭಾವಕ್ಕೆ ತಕ್ಕ ವಕ್ರತೆ ಇಲ್ಲದೆಯೂ ಇರಬೇಕು ಇದು ಒಂದು ಪಾರ್ಶ್ವದ ಚಿತ್ರವಾದುದರಿಂದ ಸಾಚೀಕೃತವೆಂದು ಹೇಳಲ್ಪಡುತ್ತದೆ

೧೩–೧೭ ಯಾವ ಸ್ಥಾನಸನ್ನಿವೇಶದಲ್ಲಿ ನೇತ್ರದ ಅರ್ಧ ಭಾಗವು ಕಾಣಿಸದೆ ಹುಬ್ಬು ಸ್ಪಷ್ಟವಾಗಿ ಕಾಣಿಸದೆ ಇರುತ್ತವೆಯೋ, ಹುಬ್ಬಿನ ವಕ್ರತೆಯೂ ಚನ್ನಾಗಿ ಕಾಣಿಸದೆ ದೃಶ್ಯವಾದ ಮುಖವು ಮಾತ್ರ ಅರ್ಧ ಭಾಗ ಕಾಣುವಂತೆಯೂ, ಕಪೋಲ ಗಳಲ್ಲಿ ಒಂದು ಕಾಣಿಸದೆಯೂ, ಮತ್ತೊಂದು ಕಾಣಿಸುವಂತೆಯೂ ಇರುತ್ತದೆಯೋ ಕಪೋಲದ ಮೇಲ್ಭಾಗವು ಸಣ್ಣರೇಖೆಯಿಂದ ಅರ್ಧಾರ್ಧಭಾಗವು ತೋರುವಂತೆಯೂ

1 ಇಲ್ಲಿ ಸಾಚೀಕೃತತ್ವಾಚ್ಚನೃಪ ಎಂದು ಪಾಠವಿರಬೇಕು. ಮೇಲಿರುವ ಪಾಠವು ಅಶುದ್ಧ

2 ಈ ಸಾಚೀಕೃತವೆಂಬ ಸ್ಥಾನವು ಮೇಲಿನ ಮೂಲದ ನಿರ್ದೇಶದಂತೆ ಮೂರನೆಯದಾಗುತ್ತದೆ ಅನೃಜು ಎಂಬ ಸ್ಥಾನವನ್ನು ಎರಡನೆಯದಾಗಿ ಪರಿಗಣಿಸಿದ್ದಾರೆ ಕ್ರಮಪ್ರಾಪ್ತವಾದ ಇದರ ಲಕ್ಷಣವನ್ನು ಮಾತ್ರ ಮುಂದೆ ಹೇಳಿಯೇ ಇಲ್ಲ ಅದುದರಿಂದ ಮುಂದೆ ಸ್ಥಾನಗಳ ಲಕ್ಷಣಗಳನ್ನು ವಿವರಿಸುವ ಸಂದರ್ಭಕ್ಕೆ ತಕ್ಕಂತೆ ಋಜ್ವಾಗತಂ ಭವೇತ್ಪೂರ್ವಂ ಎಂಬ ನಿರ್ದೇಶವಾಕ್ಯವು ಅಪವಾದದಿಂದ ಕೂಡಿದೆ ಎಂದು ನಿರ್ಧರಿಸಲು ಅವಕಾಶವಿದೆ ಅದುದರಿಂದ ಮುಂದಿನ ವಿವರಣೆಯ ದೃಷ್ಟಿಗೆ ತಕ್ಕಂತೆ "ಭವೇತ್ಪೃಷ್ಠಗತಂ ಪೂರ್ವಂ ಋಜ್ವಾಗತಮನಂತರಂ ಎಂಬ ಪಾಠವಿದ್ದಲ್ಲಿ ಈ ಸಂದರ್ಭವು ಸರಿಹೋಗಬಹುದೆಂದು ನಿರ್ಣಯಿಸಲು ಅವಕಾಶವಿದೆ

ಅರ್ಧಾರ್ಧಶೇಷಾ ಚ ಕಟೀ ಅನ್ಯಚ್ಛಾದರ್ಶನೀಕೃತಂ ।
ಅರ್ಧಾರ್ಧಾಕ್ಷಂ ಪರಿಜ್ಞೇಯಮಾಕಾರೇಣೈವಮಾದಿನಾ ॥ ೧೬ ॥

ಚ್ಛಾಯಾಗತಮಿತಿ ಪ್ರೋಕ್ತಂ ಪರ್ಯಾಯೇಣೈತದೇವ ತು ।
ಯಸ್ಯಾವಲೋಕ್ಯತೇ ಪಾರ್ಶ್ವಂ ದಕ್ಷಿಣಂ ಸವ್ಯಮೇವ ವಾ ॥ ೧೭ ॥

ಕೃತ್ಸ್ನಮನ್ಯತ್ ಕ್ಷಯಂ ಯಾತಮಂಗಮಂಗಗತಿಸ್ತಥಾ ।
ಏಕಾಕ್ಷಮೇಕಭ್ರೂಲೇಖಮುರಸಾಮಾ ಲಲಾಟವತ್ ॥ ೧೮ ॥

ಏಕಂ ಶ್ರೋತ್ರಂ ಯದರ್ಧಂ ಸ್ಯಾಚ್ಚಿಬುಕಾರ್ಧಂ ಶಿರೋರುಹಂ ।
ಗೃಹೀತಮಾನಲಾವಣ್ಯಂ ಮಾಧುರ್ಯಾದಿಗುಣಾನ್ವಿತಂ ॥ ೧೯ ॥

---

ಯವದಂತೆ ಸೂಕ್ಷ್ಮವಾದ ಸುಕ್ಕಿನಿಂದ ತೋರುವಂತೆಯೂ ಇದ್ದು ಎದೆಯ ಅರ್ಧ ಭಾಗವು ಲುಪ್ತವಾಗಿ ಉಳಿದ ಅರ್ಧಭಾಗವು ತೋರುತ್ತಲೂ ಇರುತ್ತದೆಯೋ, ನಾಭಿಯ ಕೆಳಭಾಗವು ಅಂಗುಲ ಪ್ರಮಾಣಕ್ಕೆ ತಕ್ಕಂತೆ ಇದ್ದು ಅರ್ಧಭಾಗಕ್ಕಿಂತ ಸ್ವಲ್ಪ ಹೆಚ್ಚಾಗಿ ಸೊಂಟವು ತೋರುತ್ತಿರಬೇಕು. ಉಳಿದ ಭಾಗವು ಕಾಣಿಸದೆ ಇದ್ದಲ್ಲಿ ಇಂತಹ ಆಕಾರ ವಿಶೇಷವುಳ್ಳ ಸ್ಥಾನವು ಅರ್ಧವಿಲೋಕಿತವೆನಿಸುತ್ತವೆ. ಇದನ್ನೇ ಛಾಯಾಗತವೆಂಬ ಹೆಸರಿನಿಂದಲೂ ಕರೆಯುತ್ತಾರೆ

೧೮-೧೯ ಯಾವ ಸ್ಥಾನಸನ್ನಿವೇಶದಲ್ಲಿ ಎಡ ಅಥವಾ ಬಲ ಪಾರ್ಶ್ವವೇ ತೋರುತ್ತಿರುತ್ತದೆಯೋ ಇತರ ಅಂಗ ಉಪಾಂಗಗಳು ಅದೃಶ್ಯವಾಗಿರುತ್ತವೆಯೋ ಒಂದೇ ಹುಬ್ಬು ಚಿಕ್ಕದಾದ ಹಣೆಯ ಭಾಗ, ಒಂದೇ ಕಿವಿ, ಗಲ್ಲ ಮತ್ತು ಕೇಶಪಾಶ ಗಳೂ, ಅರ್ಧಭಾಗದೃಶ್ಯವಾಗಿಯೂ ಇರುತ್ತವೆಯೋ ಅಳತೆ ಮತ್ತು ಕಾಂತಿ ಇವು ಗಳೊಡಗೂಡಿ ಮಧುರವಾಗಿ ತೋರಿಬರುತ್ತದೆಯೋ ಇಂತಹ ಈ ಸನ್ನಿವೇಶಕ್ಕೆ ಪಾರ್ಶ್ವಾಗತವೆಂದು ಹೆಸರು ಇದಕ್ಕೇ ಭಿತ್ತಿಕವೆಂದೂ ಸಂಜ್ಞೆಯುಂಟು

ಪಾರ್ಶ್ವಗತಮಿತಿ ಪ್ರೋಕ್ತಂ ತತ್ಸ್ಯಾತ್ ಭಿತ್ತಿಕಸಂಜ್ಞಿತಂ ।
ಅಪಾಕ್ರದ್ಧೇ ಕಲಕ್ಷೀಣೇ ಕಂಠದೇಶೇ ತಥೈವ ಚ || ೨೦ ||

ಬಾಹುಗಂಡಲಲಾಟೇಷು ಕಾಲಾಖ್ಯಂ ಕ್ಷಯಮಾಗತಂ ।
ಬಾಹುವಕ್ಷಃಕಟಿತಟಸ್ಥಿತಿಗು [1](ಹ್ಯಾದಿಷು ಕ್ರಮಾತ್) || ೨೧ ||

ದ್ವಿಕಲಂ ದ್ವಿಕಲಂ ಜ್ಞಾತ್ವಾ ಯಥಾಭಾಗಂ ಕೃಶೀಕೃತಂ ।
ಅನುರೂಪಪ್ರಮೇಣೇನ ನಾತಿತೀಕ್ಷ್ಣಾಂಗಮೇವ ಚ || ೨೨ ||

ಏತದ್ಗಂಡಪರಾವೃತ್ತಂ ಸ್ಥಾನಂ ಚ ಪರಿಕೀರ್ತಿತಂ ।
ಪೃಷ್ಠತೋ ಯದಪಿ ವ್ಯಕ್ತಂ ದೇಹಬಂಧಂ ಮನೋಹರಂ || ೨೩ ||

ವಕ್ರಭ್ರುಕುಟಿಸರ್ವಾಂಗಸಂಧಿಬಂಧನಮೇವ ಚ ।
ಈಷಚ್ಚ ದರ್ಶಿತಾಪಾಂಗ ಕಪೋಲಜಠರೇ ಪುನಃ || ೨೪ ||

---

೨೦-೨೨ ಯಾವ ಸ್ಥಾನಸನ್ನಿವೇಶದಲ್ಲಿ ಕತ್ತಿನಭಾಗವು ಒಂದು ಕಡೆಗೆ ತಿರುಗಿ ಇರುತ್ತದೆಯೋ ಕಂಠಪ್ರದೇಶದಲ್ಲಿಯೂ ತೋಳು, ಕಪೋಲ, ಹಣೆ ಈ ಭಾಗದಲ್ಲಿಯೂ ಕಪ್ಪುಬಣ್ಣವು ಹೆಚ್ಚಾಗಿಲ್ಲದೆ ಛಾಯಾರೂಪದಿಂದ ಅವಯವಗಳು ತೋರಿಬರುತ್ತವೆಯೋ, ತೋಳು, ಎದೆ, ಸೊಂಟ, ಕುಂಡೆಗಳ ಕೆಳಭಾಗ ಇವು ಮೂರನೆಯ ಎರಡರಷ್ಟು ಕ್ರಮಕ್ರಮವಾಗಿ ಕೃಶವಾಗಿ ತೋರುತ್ತವೆಯೋ, ಅವಯವಗಳ ಅನುರೂಪಪ್ರಮಾಣದಿಂದ ಕೂಡಿ ಮಸುಕಾದ ಅವಯವಗಳಿಂದ ಕೂಡಿರುತ್ತವೆಯೋ, ಇಂತಹ ಈ ಸ್ಥಾನಕ್ಕೆ ಗಂಡಪರಾವೃತ್ತವೆಂದು ಹೆಸರು

೨೩-೨೪ ಯಾವ ಸನ್ನಿವೇಶದಲ್ಲಿ ಬೆನ್ನು ಮೊದಲಾದ ಹಿಂಭಾಗವು ರಮ್ಯವಾದ ದೇಹಬಂಧದೊಡನೆ ತೋರುತ್ತಿದ್ದು ಸ್ವಲ್ಪತಿರುಗಿರುವ ಮುಖದ ಮತ್ತು ವಕ್ರವಾದ ಹುಬ್ಬಿನ ಸನ್ನಿವೇಶದಿಂದ ಕೂಡಿಯೂ ಸ್ವಲ್ಪಮಟ್ಟಿಗೆ ಕಡೆಗಣ್ಣು ಕಪೋಲ ಉದರ ಇವು ತೋರಿಬರುತ್ತವೆಯೋ, ಒಂದೇ ಪಾರ್ಶ್ವದ ಪ್ರಕಾಶದಿಂದ ರಮ್ಯ

---

1 ಕುಂಡಲಿತ ಭಾಗವು ಮೂಲದಲ್ಲಿ ಲುಪ್ತವಾಗಿದೆ ಆದಕ್ಕೆ ತಕ್ಕಂತೆ ಪಾಠವನ್ನು ಊಹಿಸಿ ಬರೆಯಲಾಗಿದೆ

ಪ್ರಕಾಶಿತೈಕಪಾರ್ಶ್ವೇನ ಸುಸ್ಥಿರಂ ದೃಷ್ಟಿಹಾರಿ ಚ ।
ಸ್ವಹೀನಮಾನಲಾವಣ್ಯಮಾಧುರ್ಯಾದಿಗುಣಾನ್ವಿತಂ ॥ ೨೫ ॥

ಲೇಖೇಷು ಪುಸ್ತದೇಶೇಷು ಪೃಷ್ಠಾಗತಮಿತಿ ಸ್ಮೃತಂ ।
ಯಸ್ಯೋರ್ಧ್ವಮಂಗಪಾರ್ಶ್ವೇನ ಭಾಗೇನ ಸಮವಸ್ಥಿತಂ ॥ ೨೬ ॥

ಸ್ಥಿತಿಃ ಪಾರ್ಶ್ವಮುಖೇऽರ್ಧಾಂಗೇ ಪರಿವೃತ್ತಿವಶಾದ್ಭವೇತ್ ।
ಕಿಂಚಿಚ್ಛಾಯಾಗತೌ ಕಾಯೌ ಹ್ಯುಪರಿಷ್ಟಾದಧಃ ಪುರಃ ॥ ೨೭ ॥

ಅರ್ಧಾರ್ಧಗತಸಾರೂಪ್ಯಂ ಚಿರಮಗ್ರ್ಯಮ್ಯಸಂಸ್ಥಿತಂ ।
ಮಧ್ಯೇನ ನೇತ್ರರಮ್ಯೇನ ಯಥಾಯೋಗವಿಲೋಪಿನಾ ॥ ೨೮ ॥

ವಿಜ್ಞೇಯಂ ದಧತಃ ಕಾಯಂ ಪರಿವೃತ್ತಂ ನರೇಶ್ವರ ।
ಸಮಗ್ರದೃಷ್ಟಸ್ಫಿಗ್ದೇಶಂ ದೃಷ್ಟಪಾದತಲಂ ತು ಯತ್ ॥ ೨೯ ॥

---

ವಾಗಿರುತ್ತದೆಯೋ, ಪ್ರಮಾಣ, ಲಾವಣ್ಯ, ಮಾಧುರ್ಯ ಮೊದಲಾದ ಗುಣಗಳಿಂದ ಕೂಡಿರುವ ಈ ಸನ್ನಿವೇಶವು ಪೃಷ್ಠಾಗತವೆನಿಸುತ್ತದೆ ಇದು ಸಾಮಾನ್ಯವಾದ ಲೇಖನದಲ್ಲಿಯೂ ಕನ್ನಡಿಯ ಮೇಲೆ ಬರೆಯುವಾಗಲೂ ಉಪಯೋಗಿಸಲ್ಪಡುತ್ತದೆ

೨೬–೨೮ ಯಾವ ಸನ್ನಿವೇಶದಲ್ಲಿ ಅವಯವಗಳ ಮೇಲ್ಭಾಗವು ಪಾರ್ಶ್ವಕ್ಕೆ ತಿರುಗಿದ್ದು ಅರ್ಧಾಂಗಪರಿವೃತ್ತಿಯುಂಟಾಗುತ್ತದೆಯೋ, ಮೇಲ್ಭಾಗವೆಲ್ಲವೂ ಛಾಯಾರೂಪದಿಂದ ಅಪ್ರಕಾಶವಾಗಿರುತ್ತದೆಯೋ, ಕೆಳಭಾಗವು ಮುಂಭಾಗದಲ್ಲಿ ಮಾತ್ರ ಮೇಲಿನ ಅರ್ಧಾಂಗಪ್ರಮಾಣಕ್ಕೆ ತಕ್ಕಂತೆ ರಮ್ಯಸನ್ನಿವೇಶದಿಂದ ಕೂಡಿರುತ್ತದೆಯೋ, ಸೂಕ್ಷ್ಮವಾದ ಮಧ್ಯವು ಅಪ್ರಕಾಶವಾದ ಹಿಂಭಾಗದಿಂದಲೂ ಪ್ರಕಾಶವಾದ ಮುಂಭಾಗದಿಂದಲೂ ಕೂಡಿ ಕಾರ್ಯೋನ್ಮುಖವಾಗಿರುವಂತೆ ತೋರಿಬರುತ್ತದೆಯೋ ಇದು ಪರಿವೃತ್ತವೆಂದು ಹೇಳಲಾಗುತ್ತಿದೆ

**ಊರ್ಧ್ವತಃ ಕ್ಷೀಣದೃಷ್ಟಾರ್ಧಂ ದೃಶ್ಯಾಶೇಷಕಟಿಸ್ಥಲಂ ।**
**ಲುಪ್ತಪಾದಾಂಗುಲಿತಲಂ ದೃಶ್ಯಾಶೇಷತಲದ್ವಯಂ ॥ ೩೦ ॥**

**ಚತುರಸ್ರಂ ಸುಸಂಪೂರ್ಣಮುಭಯೋನಕದರ್ಶನಂ ।**
**ಪ್ರಕಾಶೀಕೃತಬಾಹುಶ್ಚ ಸುದೃಷ್ಟಮುಖಕಂಧರಂ ॥ ೩೧ ॥**

**ಲುಪ್ತಂ ಜಂಘ್ಯೈಕತೋ ಜ್ಞೇಯಂ ನಾಮ್ನಾ ಸ್ಥಾನಂ ಸಮಾನತಂ ।**
**ನೀಚಾನ್ಯೇತಾನಿ ಸರ್ವಾಣಿ ತಥೋಕ್ತೈರಭಿರಾಜಿತಂ ॥ ೩೨ ॥**

**ಲಕ್ಷಿತೈರ್ಲಕ್ಷಿತವ್ಯಾನಿ ತ್ವಯಾನುಕ್ರಮಶೋ ನವ ।**
**ಏಷಾಂ ಪ್ರಜ್ಞಾವಿಶೇಷೇಣ ವಿಕಾರಾಣಿ ಬಹೂನ್ಯಪಿ ॥ ೩೩ ॥**

**ಏಕೈಕಶಶ್ಚ ಭೂಭಾಗೈಃ ಕರ್ತವ್ಯಾನಿ ಯಥಾವಿಧಿ ।**
**ತ್ವಯಾಸನ್ತಃ ಸಮಾಸಾದ್ಯ ಸಮ್ಯಜ್ಞಾನಂ ತು ಭೂತಲೇ ॥ ೩೪ ॥**

---

೨೯-೩೩ ಬೆನ್ನಿನ ಕಳಭಾಗವು ಚನ್ನಾಗಿ ತೋರುವಂತೆಯೂ ಪಾದಗಳು ಮುಂಭಾಗದಲ್ಲಿ ಬಗ್ಗಿರುವ ಮುಖದಿಂದ ನೋಡಲ್ಪಡುತ್ತಿರುವಂತೆಯೂ ಇದ್ದು ಮೇಲ ಭಾಗದ ಅವಯವಗಳಲ್ಲಿ ಹಿಂಭಾಗವು ಕಾಣದೆಯೂ ಮುಂದೆ ಇರುವ ಅರ್ಧವು ಕಾಣುತ್ತಲೂ ಇರಬೇಕು ಸೊಂಟವೂ ಕಾಣುತ್ತಿರಬೇಕು ಪಾದದ ಬೆರಳುಗಳು ಕಾಣದಂತೆಯೂ ಪಾದದ ಕೆಳಭಾಗವು ಕಾಣುವಂತೆಯೂ ಇರಬೇಕು ಎಲ್ಲಾ ಭಾಗವೂ ಸಂಪೂರ್ಣವಾಗಿದ್ದು ಸೌಮ್ಯತೆಯಿಂದ ಕೂಡಿರಬೇಕು ತೋಳುಗಳೂ ಬಗ್ಗಿದಮುಖ ಮತ್ತು ಕತ್ತಿನ ಭಾಗವೂ ತೋರುವಂತಿರಬೇಕು ಮೊಣಕಾಲಿನ ಒಂದು ಭಾಗವು ಕಾಣದಂತೆ ಇರಬೇಕು ಈ ಸ್ಥಾನಕ್ಕೆ ಸಮಾನತವೆಂದು ಹೆಸರು ಇಲ್ಲಿ ಹೇಳಿರುವಂತೆ ಬಗ್ಗಿದ ಆಯಾಯ ಅವಯವಗಳಿಂದ ಕೂಡಿರುವ ಈ ಒಂಭತ್ತು ಸ್ಥಾನಗಳನ್ನೂ ಆಯಾಯ ಲಕ್ಷಣಗಳಿಂದ ಕ್ರಮವಾಗಿ ತಿಳಿಯಬೇಕು ಇವುಗಳಿಗೂ ಬುದ್ಧಿವಿಕಾಸಕ್ಕೆ ತಕ್ಕಂತೆ ಅನೇಕ ವಿಕಾರಗಳುಂಟಾಗುತ್ತವೆ

೩೪-೩೮ ಒಂದೊಂದು ಸನ್ನಿವೇಶಕ್ಕೂ ತಕ್ಕಂತೆ ಆಯಾಯ ಭೂಭಾಗಕ್ಕನುಗುಣವಾಗಿ ಅನೇಕ ರೀತಿಯಲ್ಲಿ ನಿರ್ಮಿಸಬೇಕಾಗುತ್ತದೆ ನೀನೂ ಸಹ ಇದನ್ನು ಲಕ್ಷಣದೃಷ್ಟಿಯಿಂದ ಸರಿಯಾಗಿ ವಿಚಾರಮಾಡಿ ಸತ್ಪುರುಷರಲ್ಲಿಯೂ

ಸ್ಥಾನಾನೀಮಾನಿ ಮಾನಾದ್ಯೈಃ ಗುಣೈರ್ಲಕ್ಷ್ಯಾನಿ ಯತ್ನತಃ ।
ನವೈವೈತಾನಿ ದೃಷ್ಟಾನಿ ಸರ್ವಭಾವೇಷ್ವನಿಂದಿತ ॥ ೩೫ ॥

ಸ್ಥಾನಾನಿ ನಾಧಿಕಮತಃ ಪರಮಸ್ತಿಹಿ ಕಿಂಚನ ।
ಜೀವಲೋಕಂ ಪರಿಕ್ರಮ್ಯ ಸತತಂ ಸ್ಥಾಣುಜಂಗಮಂ ॥ ೩೬ ॥

ಉತ್ತಮಾಧಮಮಧ್ಯೇಷು ಪ್ರಮಾಣಂ ಗುಣತಃ ಸದಾ ।
1ಚಿತ್ರಂ ವಿಚಿತ್ರಂ ತ್ರಿವಿಧಂ ಪ್ರಮಾಣಂ ತ್ರಯಮೇವ ಚ ॥ ೩೭ ॥

ಕ್ಷಯವೃದ್ಧೀ ಚ ಕಾರ್ತ್ಸ್ನ್ಯೇನ ಮಯಾ ತೇಽಭಿಹಿತೇಽನಘ ।
ಅತಃಪರಂ ಪ್ರವಕ್ಷ್ಯಾಮಿ ಕ್ಷಯವೃದ್ಧಿವಿಧಿಂ ಕ್ರಮಾತ್ ॥ ೩೮ ॥

ಚಿತ್ರವಿದ್ಭಿರಸಂ ಜ್ಞೇಯಂ ಸಮಾಸೇನೇತರೇಣ ಚ ।
ತ್ರಯೋದಶವಿಧೈವಾತ್ರ ಕ್ಷಯವೃದ್ಧಿರುದಾಹೃತಾ ॥ ೩೯ ॥

ಇದನ್ನು ತಿಳಿದುಕೊಂಡು ಈ ಸ್ಥಾನಗಳನ್ನು ಆಯಾಯ ಗುಣಗಳಿಗೆ ಅನುಸಾರವಾಗಿ ಪ್ರಯತ್ನಪೂರ್ವಕವಾಗಿ ಭೂಮಿಯಲ್ಲಿ ಮೊದಲು ಬರೆಯಬೇಕು ಎಲ್ಲಾ ವಿಧವಾದ ಭಾವಗಳಲ್ಲಿಯೂ ಈ ಒಂಭತ್ತು ಸ್ಥಾನಗಳೇ ಅನ್ವಯಿಸತಕ್ಕವುಗಳು ಇದಕ್ಕೆ ಬೇರೆಯಾಗಿ ಯಾವ ಸ್ಥಾನಗಳೂ ಇರುವುದಿಲ್ಲ ಪ್ರಪಂಚದಲ್ಲಿರುವ ಎಲ್ಲಾ ಸ್ಥಾವರಜಂಗಮಗಳಲ್ಲಿಯೂ ಉತ್ತಮಾಧಮಮಧ್ಯಮ ಭೇದದಿಂದ ಈ ಸ್ಥಾನಗಳು ಅಡಗಿರುತ್ತವೆ ಈ ಮೂರು ಭೇದಗಳೂ ಸಹ ಚಿತ್ರಗುಣ ವಿಚಿತ್ರಗುಣ ಪ್ರಮಾಣ ಗುಣ ಎಂದು ಮೂರು ವಿಧವಾಗುತ್ತವೆ ಕ್ಷಯವೃದ್ಧಿ ಸ್ಥಾನಗಳನ್ನೂ ಸಹ ಎಲ್ಲವನ್ನೂ ನಿನಗೆ ಹೇಳಿರುತ್ತೇನೆ ಕೆಲವು ಕ್ಷಯವೃದ್ಧಿ ವಿಧಾನವನ್ನೂ ಸಹ ಮುಂದೆ ಹೇಳುತ್ತೇನೆ

೩೯-೪೨ ಚಿತ್ರವನ್ನು ತಿಳಿದಿರುವವರಿಗೂ ಇದು ಸಾಮಾನ್ಯವಾಗಿ ಅಥವಾ ವಿಶೇಷರೂಪದಿಂದ ತಿಳಿದಿರುವುದಿಲ್ಲ ಆಯಾಯ ಅವಯವಸಂಸ್ಥಾನಗಳಿಂದ ಉಂಟಾಗಬಹುದಾದ ಸ್ಥಾನಗಳು ಅನೇಕವಾಗಿ ಈ ಕ್ಷಯವೃದ್ಧಿವಿಧಾನವು ಹದಿಮೂರೇ ವಿಧವಾಗಿರುತ್ತದೆ ಮೊದಲನೆಯದು ಪೃಷ್ಠಗತ, ಎರಡನೆಯದು ಋಜ್ವಾ

1 ಇದಕ್ಕೆ ಬೇರೆ ವಿಧವಾದ ಯೋಜನೆಯಿಂದ ಅರ್ಥಭೇದವನ್ನೂ ಕೆಲವರು ಹೇಳುವರು

**ಸ್ಥಾನಾನಾಂ ಬಹುಸಂಸ್ಥತ್ವಾದಂಗಾವಯವಸಂಭವಾ ।**
**ಸ್ಥಾನಂ ಪೃಷ್ಠಗತಂ ಪೂರ್ವಮಪವರ್ಗಗತಮೇವ ಚ ॥ ೪೦ ॥**

**ಮಧ್ಯಾರ್ಧಾರ್ಧಂ ತಥಾರ್ಧಾರ್ಧಂ ಸಾಚೀಕೃತಮುಖಂ ತಥಾ ।**
**ನತಂ ಗಂಡಪರಾವೃತ್ತಂ ಪೃಷ್ಠಾಗತಮಥಾಪಿ ಚ ॥ ೪೧ ॥**

**ಪಾರ್ಶ್ವಗತಂ ಚ ವಿಜ್ಞೇಯಮುಲ್ಲೇಪಂ ಚಲಿತಂ ತಥಾ ।**
**ಉತ್ತಾನಂ ವಲಿತಂ ಚೇತಿ ಸ್ಥಾನಾನಿ ತು ತ್ರಯೋದಶ ॥ ೪೨ ॥**

**ಕಾರ್ಯಾಣ್ಯೇತಾನಿ ಸರ್ವಾಣಿ ನಾಮಸಂಸ್ಥಾನತೋ ನೃಪ ।**
**ಮಂಡಲಾನೀಹ ವೈಶಾಖಪ್ರತ್ಯಾಲೀಢಃ ಕ್ರಿಯಾಕ್ರಮೈಃ ॥ ೪೩ ॥**

**ಸಮಾಶ್ಚಾರ್ಧಸಮಾಃ ಪಾದಾಃ ಸುಸ್ಥಿತಾನಿ ಚಲಾನಿ ಚ ।**
**ಸಮಾಸಮಪದಸ್ಥಂ ಚ ದ್ವಿವಿಧಂ ಸ್ಥಾನಕಂ ಭವೇತ್ ॥ ೪೪ ॥**

**ತದ್ಗತ್ವಾ ಪದಭೂಯಿಷ್ಠಂ ಸ್ಥಾನಂ ಸಮಪದಂ ಸ್ಮೃತಂ ।**
**ಮಂಡಲಂ ಚ ದ್ವಿತೀಯಂ ಸ್ಯಾತ್ ಸ್ಥಾನಾನ್ಯನ್ಯಾನಿ ಯಾನಿ ಚ ॥ ೪೫ ॥**

---

ಗತ ಇದರಲ್ಲಿ ಮೊದಲನೆಯದು ಮಧ್ಯಪ್ರದೇಶದಿಂದ ಅರ್ಧಭಾಗ ತಿರುಗಿರುವ ಮೇಲ್ಭಾಗವುಳ್ಳದ್ದು, ಎರಡನೇಯದು ನಾಲ್ಕನೇ ಒಂದು ಭಾಗ ತಿರುಗಿರುವ ಮೇಲ್ಭಾಗವುಳ್ಳದ್ದು. ಅನಂತರ ಸಾಚೀಕೃತಮುಖ, ನತ, ಗಂಡಪರಾವೃತ್ತ, ಪೃಷ್ಠಾಗತ, ಪಾರ್ಶ್ವಗತ, ಉಲ್ಲೇಪ, ಚಲಿತ, ಉತ್ತಾನ ವಲಿತ ಎಂದು [1] ಹದಿಮೂರು ವಿಧವಾಗುತ್ತವೆ.

೪೩–೪೫ ಇವುಗಳನ್ನೆಲ್ಲಾ ಆಯಾಯ ನಾಮಧೇಯಗಳಲ್ಲಿ ತೋರಿಬರುವ ಅರ್ಧಸಂಸ್ಥಾನಕ್ಕೆ ತಕ್ಕಂತೆ ರಚಿಸಬೇಕು ಇವುಗಳಲ್ಲಿ ವೈಶಾಖಪ್ರತ್ಯಾಲೀಢ ಮೊದಲಾದ ಗತಿವಿಶೇಷಗಳಿಂದ ಕೂಡಿದ ಮಂಡಲಗಳನ್ನೂ ಗಮನಿಸಬೇಕು ಈ ಮಂಡಲಗಳಲ್ಲಿ ಕೆಲವು ಸಮಪಾದದಿಂದ ಕೂಡಿಯೂ ಕೆಲವು ಅರ್ಧ ಸಮಪಾದದಿಂದ ಕೂಡಿಯೂ, ಸ್ಥಿರವಾದ ಮತ್ತು ಚಲವಾದ ಪಾದಗಳಿಂದ ಕೂಡಿಯೂ ಇರುತ್ತವೆ ಇವು ಸಮಪದ ಮತ್ತು ಅಸಮಪದವೆಂಬ ಎರಡು ವಿಧವಾದ ಸ್ಥಾನಗಳಾಗುತ್ತವೆ ಹೆಚ್ಚಾದ ಪಾದವಿನ್ಯಾಸದಿಂದ ಮಾಡಿದ ಸ್ಥಾನವು ಸಮಪದವೆನಿಸುತ್ತದೆ ಎರಡ

---

1 ಈ ಹದಿಮೂರು ಭೇದಗಳಲ್ಲಿ ಮೇಲಿನ ಒಂಭತ್ತು ಸ್ಥಾನಗಳೂ ಸೇರಿವೆ ನಾಲ್ಕು ಮಾತ್ರ ಹೆಚ್ಚಾಗಿ ಹೇಳಲ್ಪಟ್ಟಿವೆ.

ತಾನ್ಯೇಕಸಮಪಾದಾನಿ ವಿಚಿತ್ರಾಣಿ ಚಲಾನಿ ಚ ।
ತತ್ರ ವೈಶಾಖಮಾಲೀಢಂ ಪ್ರತ್ಯಾಲೀಢಂ ಚ ಧನ್ವಿನಾಂ ॥ ೪೬ ॥

ಚಿತ್ರಗೋಮೂತ್ರಕಗತಂ ವಿಷಮಂ ಖಡ್ಗಚರ್ಮಿಣಾಂ ।
ಚಲಿತಂ ಸ್ಖಲಿತಾ ಯಸ್ತುಮಾಲೀಢೈಕಪದಕ್ರಮಂ ॥ ೪೭ ॥

ಶಕ್ತಿತೋಮರಪಾಷಾಣಭಿಂದಿವಾಲಾದಿಧಾರಿಣಾಂ ।
ಸವಲ್ಗಿತಂ ಚಕ್ರಶೂಲಗದಾಕುಣಪಧಾರಿಣಾಂ ॥ ೪೮ ॥

ಏಕಪಾದಸಮುಸ್ಥಾನಂ ದ್ವಿತೀಯೇನ ತು ವಿದ್ಗಲಂ ।
ಶರೀರಂ ಚ ಸಲೀಲಂ ಸ್ಯಾತ್ಸಾವಷ್ಟಂಭ್ಯೈಃ ಕ್ವಚಿದ್ಭ್ರುತಂ ॥ ೪೯ ॥

ಲೀಲಾವಿಲಾಸವಿಭ್ರಾಂತಂ ವಿಶಾಲಜಘನಸ್ಥಲಂ ।
ಸ್ಥಿರೈಕಪಾದವಿನ್ಯಾಸಂ ಸ್ತ್ರೀರೂಪಂ ವಿಲಿಖೇದ್ಬುಧಃ ॥ ೫೦ ॥

---

ನೆಯ ಸ್ಥಾನವೇ ಮಂಡಲವೆನಿಸುತ್ತದ. ಇತರ ಸ್ಥಾನಗಳೆಲ್ಲವೂ ಏಕ್ಯಕಸಮಪಾದಗಳಾಗಿಯೂ ಚಲವಾಗಿಯೂ ವಿಚಿತ್ರಸ್ಥಾನಗಳಾಗುತ್ತವೆ

೪೬-೪೯ ಅವುಗಳಲ್ಲಿ ವೈಶಾಖ, ಆಲೀಢ, ಪ್ರತ್ಯಾಲೀಢ ಈ ಗತಿವಿಶೇಷಗಳು ಧನುರ್ಧಾರಿಗಳಿಗೆ ಅನ್ವಯಿಸುತ್ತವೆ ಚಿತ್ರ ಗೋಮೂತ್ರಕಗಳೆಂಬ ವಿಷಮ ಗತಿಗಳು ಕತ್ತಿಗುರಾಣಿ ಇವುಗಳನ್ನು ಧರಿಸುವವರಿಗೆ ಅನ್ವಯಿಸುತ್ತವೆ ಆಯಾಸದಿಂದ ಸ್ಖಲಿತವಾದ ಒಂದು ಪಾದದಗತಿಯುಳ್ಳ ಸ್ಥಾನವು ಚಲಿತವೆನಿಸುತ್ತದ ಇದನ್ನು ಶಕ್ತಿ, ತೋಮರ, ಶಿಲಾ, ಭಿಂದಿವಾಲ ಮೊದಲಾದ ಆಯುಧಧಾರಿಗಳಲ್ಲಿ ಉಪಯೋಗಿಸಬೇಕು ಚಕ್ರ, ಶೂಲ, ಗದಾ, ಶವ, ಇವನ್ನು ಧರಿಸುವವರಲ್ಲಿ ಸವಲ್ಗಿತವೆಂಬ ಗತಿಯನ್ನು ಉಪಯೋಗಿಸಬೇಕು ಸಮಸ್ಥಾನದಿಂದ ಕೂಡಿದ ಒಂದು ಪಾದವು ಎರಡನೆಯ ಪಾದದೊಡನೆ ಸೇರಿದ್ದಲ್ಲಿ ವಿದ್ಗಲವೆಂಬ ಸ್ಥಾನವಾಗುತ್ತದೆ ಶರೀರವೂ ಸಹ ಕೆಲವು ಸಂದರ್ಭದಲ್ಲಿ ವಿಲಾಸದಿಂದ ಕೂಡಿಯೂ ಮತ್ತೆ ಕೆಲವು ಸಂದರ್ಭಗಳಲ್ಲಿ ಗರ್ವವೇಗಮುಂತಾದುವುಗಳಿಂದ ಕೂಡಿಯೂ ಇರಬೇಕು

೫೦-೫೧. ಸ್ತ್ರೀರೂಪವನ್ನು ಬರೆಯುವಾಗ ಬುದ್ಧಿಶಾಲಿಯಾದ ಚಿತ್ರಕಾರನು ಬೆಡಗು, ವಿಲಾಸಗಳಿಂದ ತುಂಬಿತುಳುಕುವಂತೆಯೂ, ವಿಶಾಲವಾದ ಜಘನಸ್ಥಲ ಭೂಷಿತವಾಗಿಯೂ, ಒಂದುಪಾದದಲ್ಲಿ ಸ್ಥಿರವಾಗಿ ನಿಂತು ಮತ್ತೊಂದುಪಾದವು

ಪ್ರಮಾಣಹೀನಸ್ತು ಜನೋನುಭೂಯಾ-
ತ್ಕಾಲಸ್ಯ ಭಾವಸ್ಯ ಬಲಾತ್ಪೃಥಿವ್ಯಾಂ ।
ಇತಿ ಪ್ರಚಿಂತ್ಯಾತ್ಮಧಿಯಾ ಬುಧೇನ
ಕಾರ್ಯಂ ಪ್ರಮಾಣಂ ಕ್ಷಯವೃದ್ಧಿಯೋಗೇ ॥ ೫೧ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಚಿತ್ರಸೂತ್ರೇ ಕ್ಷಯವೃದ್ಧಿರ್ನಾಮೈಕೋನ
ಚತ್ವಾರಿಂಶತ್ತಮೋಽಧ್ಯಾಯಃ

ಅಸ್ನಿಗವಾಗಿರುವಂತೆಯೂ ರಮ್ಯವಾದ ಸನ್ನಿವೇಶದಿಂದ ಆ ರೂಪವನ್ನು ಬರೆಯಬೇಕು ರೂಪದ ಸರಿಯಾದ ಪ್ರಮಾಣವು ತಿಳಿಯದೇ ಹೋದಲ್ಲಿ ಪ್ರಾಪಂಚಿಕ ಪರಿಸ್ಥಿತಿಗ ತಕ್ಕಂತೆ ಆಯಾಯ ಕಾಲಕ್ಕೂ, ಭಾವಕ್ಕೂ ತಕ್ಕ ಪ್ರಮಾಣವನ್ನು ತನ್ನ ಮನಸ್ಸಿನಿಂದಲೇ ಆಲೋಚಿಸಿ ಬುದ್ಧಿಶಾಲಿಯಾದ ಚಿತ್ರಕಾರನು ಆಪ್ರಮಾಣಕ್ಕೆ ತಕ್ಕಂತೆ ಅವಯವಗಳ ಕ್ಷಯವೃದ್ಧಿಯನ್ನು ರಚಿಸಬೇಕು

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯ ಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಚಿತ್ರಸೂತ್ರದಲ್ಲಿ ಕ್ಷಯವೃದ್ಧಿ ಎಂಬ
ಮೂವತ್ತೊಂಭತ್ತನೆಯ ಅಧ್ಯಾಯವು ಮುಗಿದಿದೆ



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಚತ್ವಾರಿಂಶತ್ತಮೋಽಧ್ಯಾಯಃ ||

**|| ಮಾರ್ಕಂಡೇಯ ಉವಾಚ ||**

**ತ್ರಿಪ್ರಕಾರೇಷ್ಟಿಕಾಚೂರ್ಣಂ ತ್ರ್ಯಂಶಂ ಕ್ಷಿಪ್ತ್ವಾ ಮೃದಸ್ತತಃ ।**
**ಗುಗ್ಗುಲಂ ಸಮಧೂಚ್ಛಿಷ್ಟಂ ಮಧುಕಂ ಮುರುಕಂ ಗುಡಂ || ೧ ||**

**ಕುಸುಂಭಂ ತೈಲಸಂಯುಕ್ತಂ ಕೃತ್ವಾ ದಧ್ಯಾತ್ಸಮಾಂಶಕಂ ।**
**ತ್ರಿಭಾಗಮಗ್ನಿದಗ್ಧಾಯಾ ಸುಧಾಯಾಸ್ತತ್ರ ಚೂರ್ಣಯೇತ್ || ೨ ||**

**ಬಿಲ್ವಜಂ ದ್ವ್ಯಂಶಮಿಶ್ರಂ ತತ್ಪ್ರಕ್ಷಿಪ್ಯ ಮಷಕಂ ಕಷಂ ।**
**ವಾಲುಕಾಂಶಂ ತತೋ ದದ್ಯಾತ್ತಸ್ಯಾನುರೂಪೇಣ ಬುದ್ಧಿಮಾನ್ || ೩ ||**

---

### ನಲವತ್ತನೆಯ ಅಧ್ಯಾಯ.

೧–೩ ಮಾರ್ಕಂಡೇಯರು ಹೇಳುತ್ತಾರೆ ಮೂರು ಬಗೆಯ ಇಟ್ಟಿಗೆಯ ಪುಡಿಯನ್ನು ಸಮಪರಿಮಾಣದಲ್ಲಿ ಸೇರಿಸಿ, ಆ ಇಟ್ಟಿಗೆಯ ಪುಡಿಗಿಂತ ಮೂರರಷ್ಟು ಹೆಚ್ಚಾಗಿರುವ ಜೇಡೀ ಮಣ್ಣಿನೊಡನೆ ಮಿಶ್ರಮಾಡಬೇಕು ಅದಕ್ಕೆ ಗುಗ್ಗುಲು ಜೇನುಮೇಣ, ಅತಿಮಧುರ, ಮುರುವೆಂಬ ಗಂಧಿಗರಸರಕು, ಬೆಲ್ಲ ಕುಸುಂಭ ಇವೆಲ್ಲವನ್ನೂ ಚೂರ್ಣಿಸಿ ಸೇರಿಸಿ ಸಮಾಂಶವಾಗಿ ಸೇರಿರುವ ಇದನ್ನು ಎಣ್ಣೆಯಲ್ಲಿ ಕಲಸಿ ಮೇಲೆ ಹೇಳಿರುವ ಮಣ್ಣಿನೊಡನೆ ಸೇರಿಸಿ ಇಡಬೇಕು ಆ ಮಣ್ಣಿಗೆ ಮುಕ್ಕಾಲು ಭಾಗ ಅಗ್ನಿಯಲ್ಲಿ ಸುಟ್ಟಿರುವ ಸುಣ್ಣಕಲ್ಲಿನೊಡನೆ ಪುಡಿಮಾಡಿ ಸೇರಿಸಬೇಕು ಅದರ ಮೂರನೆಯ ಎರಡರಷ್ಟು ಬಿಲ್ವಪತ್ರೆಕಾಯಿನ ಮೇಣವನ್ನು ಅರೆದ ಉದ್ದಿನ ಹಿಟ್ಟನ್ನೂ ಸೇರಿಸಿ ಅದಕ್ಕೆ ತಕ್ಕಂತೆ ಮರಳನ್ನೂ ಸೇರಿಸಿ ಚೆನ್ನಾಗಿ ಮರ್ಧಿಸಿ ಇಡಬೇಕು

**ತತಃ ಕಲಶತೋಯೇನ ಪ್ಲಾವಯೇತ್ಪಿಚ್ಛಿಲೇನ ತಂ ।**
**ಪರಿಕ್ಲಿನ್ನಂ ಸಮಗ್ರಂ ತನ್ಮಾಸಮಾತ್ರಂ ನಿಧಾಪಯೇತ್ ॥ ೪ ॥**

**ಮಾರ್ದವಂ ಮಾಸಮಾತ್ರೇಣ ಗತಮುದ್ಧೃತ್ಯ ಯತ್ನತಃ ।**
**ದದ್ಯಾತ್ಪ್ರಲೇಪಂ ನಿಪುಣಂ ಶುಷ್ಕೇ ಕುಡ್ಯೇ ವಿಮೃಶ್ಯ ತು ॥ ೫ ॥**

**ಶ್ಲಕ್ಷ್ಣಂ ಸಮಂ ಸ್ವವಷ್ಟಬ್ಧಂ ನಿಮ್ನೋನ್ನತವಿನಾಕೃತಂ ।**
**ನ ಚಾತಿಘನತಾಂ ಯಾತಂ ನ ಚಾತಿತನುತಾಂ ಗತಂ ॥ ೬ ॥**

**ಯದಾ ಶುಷ್ಕಂ ಭವೇತ್ಕುಡ್ಯಂ ತತ್ಪ್ರಲಿಪ್ತಮಸತ್ಕೃತಂ ।**
**ತಯಾ ಮೃದಾ ಸರ್ಜರಸತೈಲಭಾಗಾವಿಯುಕ್ತಯಾ ॥ ೭ ॥**

**ಶ್ಲಕ್ಷ್ಣೀಕುರ್ಯಾತ್ಪ್ರಯತ್ನೇನ ಲೇಪನೈಃ ಶ್ಲಕ್ಷ್ಣಮಂಜನೈಃ ।**
**ಮುಹುರ್ಮುಹುಶ್ಚ ಕ್ಷೀರೇಣ ಸಿಕ್ತ್ವಾ ಮಾರ್ಜನಯತ್ನತಃ ॥ ೮ ॥**

---

೪-೬ ಅನಂತರ ಆ ಮಣ್ಣಿನ ರಾಶಿಗೆ ಜಿಡ್ಡಾದ ನೀರನ್ನು ಗಡಿಗೆ ಯಿಂದ ಚೆನ್ನಾಗಿ ಸೇಚನಮಾಡಬೇಕು ನೀರಿನಿಂದ ಚನ್ನಾಗಿ ನೆನೆದ ಆ ಮಣ್ಣಿನ ರಾಶಿಯನ್ನು ಒಂದು ತಿಂಗಳವರಿಗೂ ಪಕ್ವವಾಗುವಂತೆ ರಾಶಿಮಾಡಿಡಬೇಕು ಒಂದು ತಿಂಗಳಿನಲ್ಲಿ ಅದು ಚೆನ್ನಾಗಿ ಮೃದುವಾಗುವುದು ಅನಂತರ ಅದನ್ನು ತೆಗೆದುಕ್ಕೊಂಡು ಚಿತ್ರಕ್ಕೆ ಅರ್ಹವಾದ ಗೋಡೆಯನ್ನು ಆಲೋಚಿಸಿ ಒಣಗಿರುವ ಆ ಗೋಡೆಯ ಮೇಲೆ ಮೃದುವಾದ ಈ ಮಣ್ಣಿನಿಂದ ಲೇಪಿಸಬೇಕು ಆ ಲೇಪವು ಚನ್ನಾಗಿ ಅಂಟುವಂತೆಯೂ, ನುಣುಪಾಗಿಯೂ ಹಳ್ಳತಿಟ್ಟುಗಳಿಲ್ಲದೆ ಒಂದೇ ಸಮನಾಗಿಯೂ ಇರಬೇಕು ಬಹಳ ಮಂದವಾಗಿಯೂ, ಬಹಳ ತೆಳುವಾಗಿಯೂ ಇರಬಾರದು

೭-೧೦ ಲೇಪದಿಂದ ಸಂಸ್ಕೃತವಾದ ಆ ಗೋಡೆಯು ಒಣಗಿದ ಹಾಗೆಲ್ಲಾ ಪುನಃ ಪುನಃ ಅದರಲ್ಲಿರುವ ಅಸಮೀಚೀನವಾದ ಭಾಗಗಳೆಲ್ಲವನ್ನೂ ಸರ್ಜರಸ ಮತ್ತು ಎಣ್ಣೆ ಇವುಗಳಿಂದ ಕೂಡಿದ ಆ ಮಣ್ಣಿನಿಂದ ಲೇಪಿಸಿ ಸರಿಪಡಿಸುತ್ತಿರಬೇಕು ಮೇಲಮೇಲಿನ ಲೇಪನಗಳಿಂದ ಆ ಗೋಡೆಯು ನುಣುಪಾಗಿ ಆಗುವಂತೆ ಎಣ್ಣೆ ಯೊಡನೆ ಉಜ್ಜಿ ನಯಮಾಡಬೇಕು ಆಗಾಗ್ಗೆ ಹಾಲನ್ನು ಅದರ ಮೇಲೆ ಎರಚಿ

ಸದ್ಯಃ ಶೋಷಮುಪಾಯಾತಂ ಕುಡ್ಯಂ ತನ್ಮನುಜೇಶ್ವರ ।
ಅಪಿ ವರ್ಷಶತಸ್ಯಾಂತೇ ನ ಪ್ರಣಶ್ಯೇತ್ತು ಕರ್ಹಿಚಿತ್ ॥ ೯ ॥

ಅನೇನೈವ ಪ್ರಕಾರೇಣ ದ್ವಿವಿಧೈರ್ವರ್ಣಕೈರ್ಯುತಾಃ ।
ಕರ್ತವ್ಯಾಶ್ಚಿತ್ರವಪುಷಾ ವಿವಿಧಾ ಮಣಿಭೂಮಯಃ ॥ ೧೦ ॥

ಕುಡ್ಯೇ ಶುಷ್ಕೇ ತಿಥೌ ಶಸ್ತೇ ರೂಕ್ಷೇ ಚ ಗುಣಸಂಯುತೇ ।
ಚಿತ್ರಾಯೋಗೇ ವಿಶೇಷೇಣ ಶ್ವೇತವಾಸಾ ಯತಾತ್ಮವಾನ್ ॥ ೧೧ ॥

ಬ್ರಾಹ್ಮಣಾನ್ಪೂಜಯಿತ್ವಾ ತು ಸ್ವಸ್ತಿವಾಚ್ಯ ಪ್ರಣಮ್ಯ ಚ ।
ತದ್ವಿದಶ್ಚ ಯಥಾನ್ಯಾಯಂ ಗುರೂಂಶ್ಚ ಗುರುವತ್ಸಲಃ ॥ ೧೨ ॥

ಪ್ರಾಙ್ಮುಖೋ ದೇವತಾಧ್ಯಾಯೀ ಚಿತ್ರಕರ್ಮ ಸಮಾಚರೇತ್ ।
ಶ್ವೇತಕಾದ್ರವಕೃಷ್ಣಾಭಿಃ ವರ್ತಿಕಾಭಿರ್ಯಥಾಕ್ರಮಂ ॥ ೧೩ ॥

---

ತೊಳೆಯುತ್ತಿರಬೇಕು ಹಾಗೆ ತೊಳೆದ ಆ ಗೋಡೆಯು ಅಲ್ಪಕಾಲದಲ್ಲಿಯೇ ಒಣಗಿ ಹೋಗುವಂತೆ ಆದಲ್ಲಿ ಅಂತಹ ಸಂಸ್ಕೃತವಾದ ಗೋಡೆಯು ನೂರುವರ್ಷ ಕಳೆದ ಮೇಲೆಯೂ ಯಾವುದರಿಂದಲೂ ನಾಶವಾಗುವುದಿಲ್ಲ ಇದೇ ರೀತಿಯಲ್ಲಿ ಎರಡು ವಿಧವಾದ ವರ್ಣಗಳಿಂದ ಅಥವಾ ಪದರಗಳಿಂದ ಕೂಡಿದ ಚಿತ್ರವಿಚಿತ್ರವಾದ ನಾನಾ ವಿಧವಾದ ಮಣಿಭೂಮಿಗಳನ್ನೂ ಮಾಡಬಹುದು

೧೧-೧೨ ಮೇಲೆ ಹೇಳಿರುವ ಲೇಪದಿಂದ ಚೆನ್ನಾಗಿ ಒಣಗಿರುವ ಗೋಡೆಯ ಮೇಲೆ ಪ್ರಶಸ್ತವಾದ ಅಥವಾ ಗುಣಯುಕ್ತವಾದ ಕ್ರೂರತಿಥಿಯಲ್ಲಿ ಚಿತ್ರಾನಕ್ಷತ್ರದಲ್ಲಿ ಬಿಳಿಯವಸ್ತ್ರವನ್ನುಟ್ಟು ಜಿತೇಂದ್ರಿಯನಾಗಿ ಬ್ರಾಹ್ಮಣ ಭೋಜನವನ್ನು ಮಾಡಿಸಿ, ಅವರ ಸ್ವಸ್ತಿವಾಚನಹೊಂದಿ ಅವರನ್ನೂ, ಚಿತ್ರಜ್ಞರನ್ನೂ, ಗುರುಗಳನ್ನೂ ನಮಸ್ಕರಿಸಿ ದೇವತಾಧ್ಯಾನವನ್ನು ಮಾಡುತ್ತಾ ಪೂರ್ವಾಭಿಮುಖವಾಗಿ ಕುಳಿತು ಚಿತ್ರಲೇಖನ ವನ್ನು ಪ್ರಾರಂಭಿಸಬೇಕು

೧೩-೧೪ ಬಿಳಿಯ ಬಣ್ಣದ ಮತ್ತು ಕಪ್ಪುಬಣ್ಣದ ತೂಲಿಕೆಗಳಿಂದ (ಬ್ರಷ್) ಮೊದಲು ಲೇಖನ ಮಾಡಬೇಕು ಆ ತೂಲಿಕಗಳು ಬಣ್ಣದ ದ್ರವಭಾಗವನ್ನು ಹೊರಗೆ ಕಾರುವಂತಿರಕೂಡದು ಕ್ರಮವಾಗಿ ಬಿಳುಪು ಅನಂತರ ಕಪ್ಪು ಈ ರೀತಿ

ಆಲಿಖ್ಯ ಸ್ಥಾಪಯೇದ್ವಿದ್ವಾನ್ಪ್ರಮಾಣೇ ಸ್ಥಾನಕೇ ತಥಾ ।
ತತಸ್ತು ರಂಜಯೇದ್ರಂಗೈರ್ಯಥಾಸ್ಥಾನಾನುರೂಪತಃ ॥ ೧೪ ॥

ಶ್ಯಾಮಾ ಗೌರೀ ತಥಾ ತಸ್ಯ ಚ್ಛವಿಃ ಸ್ಯಾತ್ತಾಂ ಪ್ರದರ್ಶಯೇತ್ ।
ತಸ್ಯಾಶ್ಚ ಲಕ್ಷಣಂ ಪ್ರೋಕ್ತಂ ಪ್ರಾಪ್ತಾಯಾ ನೃಪ ವಿಸ್ತರೇ ॥ ೧೫ ॥

ಮೂಲರಂಗಾಃ ಸ್ಮೃತಾಃ ಪಂಚ ಶ್ವೇತಃ ಪೀತೋ ವಿಲೋಮತಃ ।
ಕೃಷ್ಣೋ ನೀಲಶ್ಚ ರಾಜೇಂದ್ರ ಶತಶೋಽನ್ತರತಃ ಸ್ಮೃತಾಃ ॥ ೧೬ ॥

ಪೂರ್ಣರಂಗವಿಭಾಗೇನ ಭಾವಕಲ್ಪನಯಾ ತಥಾ ।
ಸ್ವಬುಧ್ಯಾ ಕಾರಯೇದ್ರಂಗಾನ್ ಶತಶೋಽಥ ಸಹಸ್ರಶಃ ॥ ೧೭ ॥

[1] ನೀಲೇಷ್ವತಿವ್ಯತಿಕೃತಿಃ ಪಾಲಾಶ ಇತಿ ಶಸ್ಯತೇ ।
ಸ ಶುದ್ಧಃ ಶ್ವೇತಮಿಶ್ರಶ್ಚ ನೀಲಾಭ್ಯಧಿಕ ಏವ ಚ ॥ ೧೮ ॥

---

ಬರೆದು ಪ್ರಮಾಣವನ್ನೂ, ಸ್ಥಾನವನ್ನೂ ಹೊಂದಿಸಿಕೊಳ್ಳಬೇಕು ಅನಂತರ ಆಯಾಯ ವೃದ್ಧಿಕ್ಷಯಸ್ಥಾನಕ್ಕೆ ತಕ್ಕಂತೆ ಇತರ ವರ್ಣಗಳಿಂದ ರಂಜಿಸಬೇಕು ಶ್ಯಾಮವರ್ಣ ಮತ್ತು ಬಿಳುಪು ಮಿಶ್ರವಾದ ಹೊಂಬಣ್ಣ ಇವುಗಳನ್ನು ಆಯಾಯ ಸ್ಥಾನಕ್ಕೆ ತಕ್ಕಂತೆ ತೋರಿಸಬೇಕು ಆ ವರ್ಣಗಳ ಲಕ್ಷಣಗಳು ವಿಸ್ತರವೆಂಬ ಗ್ರಂಥದಲ್ಲಿ ಸಂದರ್ಭಕ್ಕೆ ತಕ್ಕಂತೆ ಹೇಳಲ್ಪಟ್ಟಿದೆ

೧೬-೧೮. ಬಿಳುಪು, ಹಳದಿ, ಕೆಂಪು, ಕಪ್ಪು, ನೀಲ ಎಂದು ಮೂಲವರ್ಣಗಳು ಐದು ವಿಧವಾಗಿರುತ್ತದೆ ಇವುಗಳ ಮಿಶ್ರಣದಿಂದ ನೂರಾರು ವರ್ಣಗಳಾಗುತ್ತವೆ ಆದುದರಿಂದ ಶುದ್ಧವಾದ ಮೂಲಬಣ್ಣಗಳ ವಿಭಾಗವನ್ನರಿತು, ಚಿತ್ರದ ಆಯಾಯ ಭಾವಕ್ಕೆ ತಕ್ಕ ಕಲ್ಪನೆಯಿಂದ ಬುದ್ಧಿವಂತನಾದ ಚಿತ್ರಕಾರನು ನೂರಾರು ಸಾವಿರಾರು ಬಣ್ಣಗಳನ್ನಾದರೂ ಮಾಡಿಕೊಳ್ಳಬಹುದು ನೀಲ, ಹಳದಿ ಇವುಗಳ ಮಿಶ್ರಣದಿಂದ ಪಾಲಾಶವೆಂಬ ಬಣ್ಣವಾಗುತ್ತದೆ ಅದೂ ಸಹ ಶುದ್ಧಪಾಲಾಶವೆಂತಲೂ ಬಿಳುಪು ಮಿಶ್ರವಾದ ಪಾಲಾಶವೆಂತಲೂ, ಹೆಚ್ಚಾದ ನೀಲದಿಂದ ಕೂಡಿದ ಪಾಲಾಶವೆಂತಲೂ ನಾನಾವಿಧವಾಗಿರುತ್ತದೆ ಒಂದೊಂದು ಬಣ್ಣವು ಹೆಚ್ಚಾದರೂ ಹೆಚ್ಚು ಭಾಗವುಳ್ಳ ಬಣ್ಣಕ್ಕೆ ತಕ್ಕಂತೆ ಮಿಶ್ರಬಣ್ಣಗಳೂ ಆಗುತ್ತವೆ

---

1 ನೀಲಪೀತವ್ಯತಿಕೃತಿಃ ಎಂಬ ಪಾಠಾನ್ತರವು ಇಲ್ಲಿಗೆ ಅನುಗುಣವೆಂದು ತೋರುತ್ತದೆ

ಏಕಾಧಿಕಂ ಚ ಭವತಿ ಚ್ಛವೀನಾಮನುರೂಪತಃ ।
ಶ್ವೇತಾಧಿಕೋ ವಾ ನ್ಯೂನೋ ವಾ ಸಮಾಂಶಶ್ಚೇತಿ ಸ ತ್ರಿಧಾ ॥ ೧೯ ॥

ಸ ಏಕಸ್ತಂಭನಾಯುಕ್ತೋ ಬಹುಧೈವಂ ವಿಕಲ್ಪ್ಯತೇ ।
ತೇನ ದೂರ್ವಾಂಕುರಾಪೀತಃ ಕಪಿತ್ಥಹರಿತಃ ಶುಭಾಃ ॥ ೨೦ ॥

ಮುದ್ಗಶ್ಯಾಮಪ್ರಕೃತಯಃ ಕರ್ತವ್ಯಾಶ್ಛವಯೋ ನೃಪ ।
ನೀಲಃ ಪಾಂಡುರಸಂಪೃಕ್ತೋ ವಿರಂಗಃ ಸೋಽಪ್ಯನೇಕಧಾ ॥ ೨೧ ॥

ಅನ್ಯೋನ್ಯಾಭ್ಯಧಿಕಂ ನ್ಯೂನಂ ಸಮಾಂಶವಶಕಲ್ಪನಾ ।
ತೇನ ನೀಲೋತ್ಪಲನಿಭಾಃ ಮಾಷಸಚ್ಛಾಯಸುಪ್ರಭಾಃ ॥ ೨೨ ॥

ಕ್ರಿಯಂತೇ ಚ್ಛವಯೋ ರಮ್ಯಾಃ ಯಥಾಯೋಗವಿಮಿಶ್ರಣಾತ್ ।
ಲಾಕ್ಷಯಾ ಶ್ವೇತಯಾ ಯುಕ್ತಾ ಲಾಕ್ಷಾರೋಧ್ರಪಿನದ್ಧಯಾ ॥ ೨೩ ॥

---

೧೯-೨೨ ಅದೂ ಸಹ ಬಿಳುಪು ಹೆಚ್ಚಾಗಿಯೂ, ಕಡಿಮೆಯಾಗಿಯೂ, ಸಮವಾಗಿಯೂ ಅಗುವುದರಿಂದ ಮೂರು ವಿಧವಾಗುತ್ತದೆ ಹೀಗೆಯೇ ಒಂದೇ ಬಣ್ಣದ ಆಧಿಕ್ಯನ್ಯೂನತೆಗಳಿಂದ ನಾನಾರೂಪವಾಗಿ ಪರಿಣಮಿಸುತ್ತವೆ ಇದರಿಂದ ಹುಲ್ಲಿನ ಮೊಳಕೆಯಂತೆ ಸ್ವಲ್ಪ ಹೂಂಬಣ್ಣವಾಗಿಯೂ, ಕಪಿತ್ಥದಂತೆ ಸ್ವಲ್ಪ ಹಸುರಾಗಿಯೂ, ಹೆಸರು ಕಾಳಿನಂತೆ ಶ್ಯಾಮಲವಾದ ವರ್ಣವಿಶೇಷವೂ ಸಹ ಉಂಟಾಗುತ್ತವೆ ನೀಲವು ಬಿಳಿಯ ಬಣ್ಣದೊಡನೆ ಸೇರಿದಲ್ಲಿ ವಿರಂಗವೆಂಬ ಮಿಶ್ರ ವರ್ಣವಾಗುತ್ತದೆ ಅದೂ ಸಹ ಉಭಯ ವರ್ಣಗಳ ಆಧಿಕ್ಯನ್ಯೂನ ಸಮಾವಸ್ಥೆಗಳಿಂದ ನಾನಾವಿಧವಾಗುತ್ತದೆ ಇದರಿಂದ ನೀಲೋತ್ಪಲದಂತೆಯೂ, ಉದ್ದಿನ ಕಾಳಿನ ಕಾಂತಿಯಂತೆಯೂ ಇರುವ ರಮ್ಯಗಳಾದ ನಾನಾವರ್ಣಗಳು ಮಿಶ್ರಣ ತಾರತಮ್ಯದಿಂದ ಮಾಡಲ್ಪಡುತ್ತವೆ

೨೩-೨೬ ಕೆಂಪು ಬಣ್ಣಕ್ಕೆ ಬಿಳಿಯ ಬಣ್ಣದ ಮಿಶ್ರಣದಿಂದ ಮತ್ತು ಲೋಧ್ರ ಬಣ್ಣದ ಮಿಶ್ರಣದಿ ದ ಕೆಂಪು ರಕ್ತೋತ್ಪಲದಂತೆ ಶ್ಯಾಮವಾದ ಕೆಂಪು ಇವೇ

ರಕ್ತಾ ರಕ್ತೋತ್ಪಲಶ್ಯಾಮಾ ಚ್ಛವಿರ್ಭವತಿ ಶೋಭನಾ ।
ಸಾಪಿ ನಾನಾವಿಧಾನ್ವರ್ಣಾನನ್ಯಾನ್ ವಿಕುರುತೇ ಬಹೂನ್ ॥ ೨೪ ॥

ರಂಗದ್ರವ್ಯಾಣಿ ಕನಕಂ ರಜತಂ ತಾಮ್ರಮೇವ ಚ ।
ಅಭ್ರಕಂ ರಾಜದನ್ತಂ ಚ ಸಿಂದೂರಂ ತ್ರಪುರೇವ ಚ ॥ ೨೫ ॥

ಹರಿತಾಲಂ ಸುಧಾ ಲಾಕ್ಷಾ ತಥಾ ಹಿಂಗುಲಕಂ ನೃಪ ।
ನೀಲಂ ಚ ಮನುಜಶ್ರೇಷ್ಠ ತಥಾನ್ಯೇ ಸಂತ್ಯನೇಕಶಃ ॥ ೨೬ ॥

ದೇಶೇ ದೇಶೇ ಮಹಾರಾಜ ಕಾರ್ಯಾಸ್ತೇ ಸ್ತಂಭನಾಯುತಾಃ ।
ಲೋಹಾನಾಂ ಪತ್ರವಿನ್ಯಾಸಂ ಭವೇದ್ವಾಪಿ ರಸಕ್ರಿಯಾ ॥ ೨೭ ॥

ಸಂಕಟಂ ಲೋಹವಿನ್ಯಸ್ತಮಭ್ರಕಂ ದ್ರಾವಣಂ ಭವೇತ್ ।
ಏವಂ ಭವತಿ ಲೋಹಾನಾಂ ಲೇಖನೇ ಕರ್ಮಯೋಗ್ಯತಾ ॥ ೨೮ ॥

---

ಮೊದಲಾದ ರಮ್ಯವಾದ ಬಣ್ಣಗಳಾಗುತ್ತವೆ ಆ ಬಣ್ಣವೂ ಸಹ ಮಿಶ್ರಣದಿಂದ ನಾನಾವಿಧವಾದ ಇತರ ವರ್ಣಗಳನ್ನು ಉಂಟುಮಾಡುತ್ತದೆ ಬಣ್ಣಗಳಿಗೆ ಉತ್ಪಾದಕವಾದ ವಸ್ತುಗಳಲ್ಲಿ ಚಿನ್ನ, ಬೆಳ್ಳಿ, ತಾಮ್ರ, ಅಭ್ರಕ, ರಾಜಾವರ್ತ, ಸಿಂಧೂರ, ತವರ, ಹರಿತಾಲ, ಸುಣ್ಣ, ಅರಗು, ಇಂಗಳ, ನೀಲ ಇವು ಮುಖ್ಯವಾದುವು ಇನ್ನೂ ಅನೇಕ ವಸ್ತುಗಳೂ ಇವೆ

೨೭–೨೮ ಎಲ್ಲಾ ದೇಶದಲ್ಲಿಯೂ ಆಯಾಯ ದೇಶದ ವಸ್ತು ಸೌಲಭ್ಯಕ್ಕೆ ತಕ್ಕಂತೆ ವರ್ಣಗಳಿಗೆ ಸ್ತಂಭನಸಂಸ್ಕಾರವನ್ನು ಮಾಡಬೇಕು ವರ್ಣವು ದೃಢವಾಗಿ ನಿಲ್ಲಲು ಮಾಡುವ ಸಂಸ್ಕಾರಕ್ಕೆ ಸ್ತಂಭನಾ ಎಂದು ಹೆಸರು ಲೋಹಗಳಿಗ ಪತ್ರ ವಿನ್ಯಾಸ ಅಥವಾ ರಸೀಕರಣವೂ ಉಂಟಾಗಬಹುದು ಲೋಹದ ಮೇಲೆ ದಟ್ಟವಾಗಿ ಇಡಲ್ಪಟ್ಟ ಅಭ್ರಕವು ಆ ಲೋಹದಲ್ಲಿ ಪತ್ರವಿನ್ಯಾಸಕ್ಕೆ ಅಥವಾ ರಸಕ್ರಿಯೆಗೆ ಅನುಕೂಲವಾಗಿರುವಂತೆ ದ್ರವೀಭಾವವನ್ನುಂಟುಮಾಡುತ್ತವೆ ಈ ವಿಧವಾದ ಸಂಸ್ಕಾರದಿಂದ ಲೋಹದ ಮೇಲೆ ಚಿತ್ರಲೇಖನಮಾಡಲು ಅನುಕೂಲಿಸುತ್ತದ

**ಅಭ್ರಕದ್ರಾವಣಂ ಪ್ರೋಕ್ತಂ ಸುರಸೇಂದ್ರಜಭೂಮಿಜೇ ।**
**ಚರ್ಮಕ್ವಾಥೋऽಥ ಬಹುಲಾ ನಿರ್ಯಾಸಾಂತ್ ಸ್ತಂಭನಾ ಭವೇತ್ ।**
**ಸರ್ವೇಷಾಮೇವರಂಗಾಣಾಂ ಸಿಂಧೂರಕ್ಷೀರ ಇಷ್ಯತೇ ॥ ೨೯ ॥**

**ಮಾತಂಗ ದೂರ್ವಾರಸಪಟ್ಟಬಂಧೈಃ**
**ಸಂಸ್ತಂಭಿತಂ ಚಿತ್ರಮುದಾರಪುಚ್ಛೈಃ ।**
**ಧೌತಂ ಜಲೇನಾಪಿ ನ ನಾಶಮೇತಿ**
**ತಿಷ್ಠಂತ್ಯನೇಕಾನ್ಯಪಿ ವತ್ಸರಾಣಿ ॥ ೩೦ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ**
**ವಜ್ರ ಸಂವಾದೇ ರಂಗವ್ಯತಿಕರೋ ನಾಮ**
**ಚತ್ವಾರಿಂಶತ್ತಮೋऽಧ್ಯಾಯಃ**

---

ಸುರಸ ಇಂದ್ರಜಭೂಮಿಜವೆಂಬ ಓಷಧಿವಿಶೇಷಗಳು ಅಭ್ರಕವನ್ನೂ ಕರಗಿಸುತ್ತವೆ ಕುದುಸಿದ ಚರ್ಮದ ನೀರಿನಿಂದಲೂ, ಬಹುಲಾ ಎಂಬ ಓಷಧಿವೃಕ್ಷದ ರಸದಿಂದಲೂ ಸಹ ವರ್ಣಗಳಿಗೆ ಸ್ತಂಭನವೆಂಬ ದಾರ್ಢ್ಯ ಉಂಟಾಗುತ್ತದೆ ಎಲ್ಲಾ ಬಣ್ಣಗಳಿಗೂ ಸಿಂಧೂರಸಹಿತವಾದ ಕ್ಷೀರವು ಸ್ತಂಭನ ಸಂಸ್ಕಾರಕ್ಕೆ ಉಪಯೋಗವಾಗುತ್ತದೆ

೩೦ ಗರಿಕೆಯ ರಸದಿಂದ ನೆನೆದ ಹಾವಿನಸೋಲೆಯಿಂದ ದಟ್ಟವಾಗಿ ಕಟ್ಟಿ ಸಂಸ್ಕರಿಸಿದಲ್ಲಿ ಆ ಚಿತ್ರವು ಬಹಳಗಟ್ಟಿಯಾದ ಬಣ್ಣಉಳ್ಳದ್ದಾಗುತ್ತದೆ ನೀರಿನಲ್ಲಿ ತೊಳೆದರೂ ಸಹ ಅದು ಹೋಗುವುದಿಲ್ಲ ಬಹಳವರ್ಷಗಳು ಬಹಳ ಚೆನ್ನಾಗಿರುತ್ತದೆ

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯ ಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ರಂಗವ್ಯತಿಕರವೆಂಬ ನಲವತ್ತನೆಯ
ಅಧ್ಯಾಯವು ಮುಗಿದಿದೆ



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಏಕಚತ್ವಾರಿಂಶತ್ತಮೋಽಧ್ಯಾಯಃ ||

|| ಮಾರ್ಕಂಡೇಯ ಉವಾಚ ||

ಸತ್ಯಂ ಚ ವೈಣಿಕಂ ಚೈವ ನಾಗರಮ್ ಮಿಶ್ರಮೇವ ಚ ।
ಚಿತ್ರಂ ಚತುರ್ವಿಧಂ ಪ್ರೋಕ್ತಂ ತಸ್ಯ ವಕ್ಷ್ಯಾಮಿ ಲಕ್ಷಣಂ || ೧ ||

ಯತ್ಕಿಂಚಿಲ್ಲೋಕಸಾದೃಶ್ಯಂ ಚಿತ್ರಂ ತತ್ಸತ್ಯಮುಚ್ಯತೇ ।
ದೀರ್ಘಾಂಗೇ ಸಪ್ರಮಾಣಂ ಚ ಸುಕುಮಾರಂ ಸುಭೂಮಿಕಂ || ೨ ||

ಚತುರಸ್ರಂ ಸುಸಂಪೂರ್ಣಂ ನ ದೀರ್ಘಂ ನೋಲ್ಬಣಾಕೃತಿ ।
ಪ್ರಮಾಣಂ ಸ್ಥಾನಲಂಬಾಢ್ಯಂ ವೈಣಿಕಂ ತನ್ನಿಗದ್ಯತೇ || ೩ ||

---

### ನಲವತ್ತೊಂದನೆಯ ಅಧ್ಯಾಯ.

೧-೩ ಮಾರ್ಕಂಡೇಯರು ಹೇಳುತ್ತಾರೆ ಸತ್ಯ, ವೈಣಿಕ, ನಾಗರ, ಮಿಶ್ರವೆಂದು ಚಿತ್ರವು ನಾಲ್ಕು ವಿಧವಾಗಿದೆ ಇವುಗಳ ಲಕ್ಷಣಗಳನ್ನೂ ಹೇಳುತ್ತೇನೆ ಲೋಕದಲ್ಲಿ ಪ್ರಸಿದ್ಧವಾಗಿರುವ, ಮರ. ಗಿಡ, ಬಳ್ಳಿ, ಮನುಷ್ಯ ಮುಂತಾದುವುಗಳನ್ನು ಹೋಲಿಕೆಯಿಂದ ಅನುಕರಿಸುವ ಚಿತ್ರಕ್ಕೆ ಸತ್ಯವೆಂದು ಹೆಸರು ಚತುಷ್ಕೋಣವಾಗಿರುವ ಸ್ಥಳದಲ್ಲಿ ಪ್ರಮಾಣಕ್ಕೆ ತಕ್ಕಂತೆ ಅವಯವಗಳ ದೀರ್ಘತೆಯಿಂದ ಕೂಡಿರುವ ನೃತ್ಯವೇ ಮೊದಲಾದ ಕಲೆಯ ಚಿತ್ರವು ವೈಣಿಕವೆನಿಸುತ್ತದೆ ಅವಯವಗಳು ಪ್ರಮಾಣಾನುಸಾರವಾಗಿಯೂ ಸುಕುಮಾರವಾಗಿಯೂ, ಉಲ್ಬಣವಾದ ವರ್ಣವಿನ್ಯಾಸವಿಲ್ಲದೆಯೂ ಇರಬೇಕು ಎಲ್ಲಾ ಅವಯುವಗಳೂ ಸಂಪೂರ್ಣವಾಗಿರಬೇಕು

ದೃಢೋಪಚಿತಸರ್ವಾಂಗಂ ವರ್ತುಲಂ ನಚ್ಯುಲ್ಬಣಂ ।
ಚಿತ್ರಂ ತನ್ನಾಗರಂ ಜ್ಞೇಯಂ ತ್ವಲ್ಪಮಾಲ್ಯವಿಭೂಷಣಂ ॥ ೪ ॥

ಚಿತ್ರಂ ಮಿಶ್ರಂ ಸಮಾಖ್ಯಾತಂ ಸಮಾಸಾನ್ಮನುಜೋತ್ತಮ ।
ತಿಸ್ರಶ್ಚ ವರ್ತನಾಃ ಪ್ರೋಕ್ತಾಃ ಪತ್ರಾಹೈರಿಕಬಿಂದುಜಾಃ ॥ ೫ ॥

ಪತ್ರಾಕೃತಿಭೀರೇಖಾಭಿಃ ಕಥಿತಾತ್ರ ಚ ವರ್ತನಾ ।
ಅತೀವ ಕಥಿತಾ ಸೂಕ್ಷ್ಮಾ ತಥಾ ಹೈರಿಕವರ್ತನಾ ॥ ೬ ॥

ತಥಾ ಚ ಸ್ತಂಭನಾ ಯುಕ್ತಾ ಕಥಿತಾ ಬಿಂದುವರ್ತನಾ ।
ದೌರ್ಬಲ್ಯ ಬಿಂದುರೇಖಾತ್ವಮವಿಭಕ್ತತ್ವಮೇವ ಚ ॥ ೭ ॥

ಬೃಹದಂಡೌಷ್ಠನೇತ್ರತ್ವಮವಿರುದ್ಧತ್ವಮೇವ ಚ ।
ಮಾನವಾಕಾರತಾ ಚೇತಿ ಚಿತ್ರದೋಷಾಃ ಪ್ರಕೀರ್ತಿತಾಃ ॥ ೮ ॥

---

೪ ಪುಷ್ಟವಾಗಿಯೂ ದೃಢವಾಗಿಯೂ ಇರುವ ಎಲ್ಲಾ ಅವಯವಗಳಿಂದ ಕೂಡಿ ಹೆಚ್ಚಾದ ಬಣ್ಣವಿಲ್ಲದಿರುವ ಮತ್ತು ಹೂವಮಾಲಿಕೆ ಒಡವೆ ಇವುಗಳನ್ನು ಮಿತವಾಗಿ ಹೊಂದಿರುವ ದುಂಡಾದ ಚಿತ್ರಕ್ಕೆ ನಾಗರವೆಂದು ಹೆಸರು ಇವುಗಳ ಪರಸ್ಪರ ಮಿಶ್ರಣದಿಂದ ಕೂಡಿದ ಚಿತ್ರಕ್ಕೆ ಮಿಶ್ರಚಿತ್ರವೆಂದು ಸಂಕ್ಷೇಪವಾಗಿ ತಿಳಿಯಬೇಕು

೫-೮. ಪತ್ರ, ಆಹೈರಿಕ, ಬಿಂದುಜ ಎಂಬ ವರ್ಣವಿನ್ಯಾಸವು ಮೂರು ವಿಧವಾಗಿದೆ ಪತ್ರಾಕಾರವಾದ ರೇಖೆಗಳಿಂದ ಕೂಡಿದ ವರ್ಣವಿನ್ಯಾಸವು ಪತ್ರವರ್ತನಾ ಎನಿಸುತ್ತದೆ ಸೂಕ್ಷ್ಮವಾದ ಅಂತಹ ರೇಖೆಗಳು ಆಹೈರಿಕವರ್ತನಾ ಎನಿಸುತ್ತದ ಸ್ತಂಭನದಿಂದ ಕೂಡಿದ ಆ ರೇಖೆಯು ಬಿಂದುವರ್ತನಾ ಎನಿಸುತ್ತದೆ ರೇಖೆಗಳು ಮಧ್ಯಮಧ್ಯದಲ್ಲಿ ಬಿಂದುವಿನಿಂದ ಕೂಡಿರುವಿಕೆ ಅಂತಹ ರೇಖೆಗಳಿಗೆ ವ್ಯತ್ಯಾಸವೇ ತಿಳಿಯದೆ ಸಂಕೀರ್ಣವಾಗಿರುವಿಕೆ. ಅಂಡ, ತುಟಿ, ನೇತ್ರ ಇವುಗಳು ಪ್ರಮಾಣಕ್ಕಿಂತ ಹೆಚ್ಚಾಗಿರುವಿಕೆ, ವೈಲಕ್ಷಣ್ಯವಿಲ್ಲದೇ ಇರುವಿಕೆ, ಬೇರೆ ವಿಧವಾದ ಚಿತ್ರವು ಮನುಷ್ಯನಂತೆ ಅಥವಾ ದೇವಾಕಾರಗಳು ಮನುಷ್ಯಾಕಾರದಂತೆ ತೋರುವಿಕೆ ಇವೆಲ್ಲವೂ ಚಿತ್ರದೋಷಗಳೆನಿಸುತ್ತವೆ.

ಸ್ಥಾನಪ್ರಮಾಣಭೂಲಂಬೋ ಮಧುರತ್ವಂ ವಿಭಕ್ತತಾ ।
ಸಾದೃಶ್ಯಂ ಪಕ್ಷವೃದ್ಧಿಶ್ಚ ಗುಣಾಃ ಚಿತ್ರಸ್ಯ ಕೀರ್ತಿತಾಃ ॥ ೯ ॥

ರೇಖಾ ಚ ವರ್ತನಾ ಚೈವ ಭೂಷಣಂ ವರ್ಣಮೇವ ಚ ।
ವಿಜ್ಞೇಯಾ ಮನುಜಶ್ರೇಷ್ಠ ಚಿತ್ರಕರ್ಮಸು ಭೂಷಣಂ ॥ ೧೦ ॥

ರೇಖಾಂ ಪ್ರಶಂಸಂತ್ಯಾಚಾರ್ಯಾಃ ವರ್ತನಾಂ ಚ ವಿಚಕ್ಷಣಾಃ ।
ಸ್ತ್ರೀಯೋ ಭೂಷಣಮಿಚ್ಛಂತಿ ವರ್ಣಾಢ್ಯಮಿತರೇ ಜನಾಃ ॥ ೧೧ ॥

ಇತಿ ಮತ್ವಾ ತಥಾ ಯತ್ನಃ ಕರ್ತವ್ಯಶ್ಚಿತ್ರಕರ್ಮಣಿ ।
ಸರ್ವಸ್ಯ ಚಿತ್ತಗ್ರಹಣಂ ಯಥಾಸ್ಯಾನ್ಮನುಜೋತ್ತಮ ॥ ೧೨ ॥

ದುರಾಸನಂ ದುರಾನೀತಂ ಪಿಪಾಸಾ ಚಾನ್ಯಚಿತ್ತತಾ ।
ಏತೇ ಚಿತ್ರವಿನಾಶಸ್ಯ ಹೇತವಃ ಪರಿಕೀರ್ತಿತಾಃ ॥ ೧೩ ॥

---

೯–೧೦ ಮೇಲೆ ಹೇಳಿರುವ ಒಂಭತ್ತು ಸ್ಥಾನಗಳಲ್ಲಿ ಯಾವುದಾದರೊಂದು ಸ್ಥಾನಕ್ಕ ಸೇರಿರುವಿಕೆ ಉಕ್ತವಾಗಿರುವ ಪ್ರಮಾಣ, ಚಿತ್ರಕ್ಕೆ ಆಶ್ರಯವಾದ ಭೂಮಿಯ ವಿಸ್ತೀರ್ಣತೆ, ಸ್ಪಷ್ಟವಾಗಿ ತೋರಿಬರುವ ಅವಯವವಿಭಾಗ, ಪ್ರಸಿದ್ಧವಾದ ಪ್ರಕೃತಿಯಸಾದೃಶ್ಯ, ಕ್ಷಯಪಕ್ಷವನ್ನು ಬಿಟ್ಟು ವೃದ್ಧಿಪಕ್ಷವನ್ನೇ ಹೆಚ್ಚಾಗಿ ಅವಲಂಬಿಸುವಿಕೆ, ಇವು ಚಿತ್ರದ ಗುಣಗಳೆನಿಸುತ್ತವೆ ರೇಖೆಗಳು, ವರ್ಣವಿನ್ಯಾಸ, ಅಲಂಕಾರಗಳು, ವರ್ಣ ಇವೆಲ್ಲವೂ ಸರಿಯಾಗಿದ್ದಲ್ಲಿ ಅವೇ ಚಿತ್ರಕರ್ಮಕ್ಕೆ ಭೂಷಣಗಳಾಗುತ್ತವೆ

೧೧–೧೩ ಪೂರ್ವಾಚಾರ್ಯರು ರೇಖೆಯ ಸಮೀಚೀನತೆಯನ್ನೇ ಶ್ಲಾಘಿಸುತ್ತಾರೆ ಬುದ್ಧಿವಂತರು ವರ್ಣಗಳ ರಚನಾಕ್ರಮವನ್ನೂ, ಸ್ತ್ರೀಯರು ಅಲಂಕಾರಗಳನ್ನೂ, ಸಾಮಾನ್ಯರು ಇಂಪಾದ ಬಣ್ಣವನ್ನೂ ಶ್ಲಾಘಿಸುತ್ತಾರೆ. ಈ ವಿಚಾರಗಳನ್ನೆಲ್ಲಾ ತಿಳಿದು ಎಲ್ಲರಿಗೂ ಚಿತ್ತರಂಜಕವಾಗುವಂತೆ ಎಲ್ಲಾ ಗುಣಗಳಿಂದ ಕೂಡಿದ ಚಿತ್ರಕಾರ್ಯದಲ್ಲಿ ಪ್ರಯತ್ನಿಸಬೇಕು ಚಿತ್ರ ಬರೆಯುವಾಗ ಚಿತ್ರಕಾರನ ಸ್ಥಾನದೋಷ ವರ್ಣಗಳ ಸಂಗ್ರಹ ದೋಷ, ಬಾಯಾರಿಕೆ, (ಏಕಾಗ್ರತೆ ಇಲ್ಲದೆ) ಮನಶ್ಚಾಂಚಲ್ಯ ಇವು ಚಿತ್ರದ ನಾಶಕ್ಕೆ ಕಾರಣವಾಗುತ್ತವೆ

ಸ್ವಾನುಲಿಪ್ತಾವಕಾಶಾಚ ನಿದೇಶಂ ಮಧುಕಾ ಶುಭಾ ।
ಸುಪ್ರಸನ್ನಾಭಿಗುಪ್ತಾ ಚ ಭೂಮಿಃ ಸ್ಯಾಚ್ಚಿತ್ರಕರ್ಮಣಿ ॥ ೧೪ ॥

ಸುಸ್ನಿಗ್ಧವಿಸ್ಪಷ್ಟಸುವರ್ಣರೇಖಂ
ವಿದ್ವಾನ್ಯಥಾದೇಶವಿಶೇಷವೇಶಂ ।
ಪ್ರಮಾಣಶೋಭಾಭಿರಹೀಯಮಾನಂ
ಕೃತಂ ಭವೇಚ್ಚಿತ್ರಮತೀವಚಿತ್ರಂ ॥ ೧೫ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ವರ್ತನೋನಾಮೈಕ
ಚತ್ವಾರಿಂಶತ್ತಮೋಽಧ್ಯಾಯಃ

---

೧೪-೧೫ ಚನ್ನಾಗಿ ಲೇಪನಾದಿಗಳಿಂದ ಸಂಸ್ಕರಿಸಲ್ಪಟ್ಟ ಎಲ್ಲಾ ಕಡೆಯಲ್ಲಿಯೂ ಚಿತ್ರವು ಚೆನ್ನಾಗಿ ತೋರಲು ಅರ್ಹವಾದ ಪ್ರದೇಶವು ಚಿತ್ರಲೇಖನಕ್ಕೆ ಅರ್ಹವಾಗುತ್ತದೆ ಅಂತಹ ಸ್ಥಳವು ಮನಸ್ಸಿಗೆ ಆಹ್ಲಾದಕರವಾಗಿಯೂ, ಸುರಕ್ಷಿತವಾಗಿಯೂ ಇರಬೇಕು ರಮ್ಯವಾಗಿಯೂ, ಸ್ಪಷ್ಟವಾಗಿಯೂ ಇರುವ ಸುವರ್ಣರೇಖೆಗಳಿಂದ ಕೂಡಿ ಬರೆಯುವವನ ಪಾಂಡಿತ್ಯಕ್ಕೆ ತಕ್ಕಂತೆ ಪ್ರದೇಶ, ವೇಷ ಇತ್ಯಾದಿಗಳಿಂದ ಕೂಡಿಯೂ, ಪ್ರಮಾಣ ಕಾಂತಿ ಇವುಗಳಿಂದ ಕೂಡಿಯೂ ಬರೆಯಲ್ಪಟ್ಟ ಚಿತ್ರವು ಬಹಳ ಆಶ್ಚರ್ಯಕರವಾಗಿಯೂ ಪ್ರೇಕ್ಷಕರಿಗೆ ರಂಜಕವಾಗಿಯೂ ಆಗುತ್ತದೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯ ಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ವರ್ತನವೆಂಬ ನಲವತ್ತೊಂದನೆಯ
ಅಧ್ಯಾಯ ಮುಗಿದಿದೆ

॥ ಓಂ ॥

॥ ಶ್ರೀ ಹಯಗ್ರೀವಾಯ ನಮಃ ॥

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### ॥ ದ್ವಿಚತ್ವಾರಿಂಶತ್ತಮೋಽಧ್ಯಾಯಃ ॥

॥ ಮಾರ್ಕಂಡೇಯ ಉವಾಚ ॥

ಯಥಾ ದೇವಸ್ತಥಾ ಚಿತ್ರೇ ಕರ್ತವ್ಯಃ ಪೃಥಿವೀಶ್ವರಃ ।
ಏಕೈಕಂ ಕೂಪಕೇ ಲೋಮ ಕರ್ತವ್ಯಂ ಪೃಥಿವೀಕ್ಷಿತಾಂ ॥ ೧ ॥

ಋಷಯಶ್ಚ ಸಗಂಧರ್ವಾ ದೈತ್ಯಾಶ್ಚ ಸಹ ದಾನವಾಃ ।
ಮಂತ್ರಿಣಶ್ಚ ಮಹಾರಾಜ ಸಾಂವತ್ಸರಪುರೋಹಿತಾ ॥ ೨ ॥

ಕಾರ್ಯಾ ಭದ್ರಪ್ರಮಾಣೇನ ಬ್ರಾಹ್ಮಣಾಶ್ಚ ನರೇಶ್ವರ ।
ಋಷಯಸ್ತತ್ರ ಕರ್ತವ್ಯಾ ಜಟಾಜೂಟೋಪಶೋಭಿತಾಃ ॥ ೩ ॥

---

### ನಲವತ್ತೆರಡನೆಯ ಅಧ್ಯಾಯ.

೧-೨ ಮಾರ್ಕಂಡೇಯರು ಹೇಳುತ್ತಾರೆ.—ಚಿತ್ರದಲ್ಲಿ ದೇವತೆಗಳ ರೂಪಕ್ಕೆ ಸಮಾನವಾಗಿ ಧೊರೆಗಳ ರೂಪವನ್ನು ಬರೆಯಬೇಕು ಅಂತಹ ಧೊರೆಗಳ ರೋಮಕೂಪಗಳಲ್ಲಿ ಒಂದೊಂದೇ ರೋಮವನ್ನು ನಿರ್ಮಿಸಬೇಕು (ಒಂದು ಕೂಪದಲ್ಲಿ ಅನೇಕ ರೋಮಗಳಿರಬಾರದು) ಋಷಿಗಳು, ಗಂಧರ್ವರು, ದೈತ್ಯರು, ದಾನವರು, ಮಂತ್ರಿಗಳು, ಜ್ಯೋತಿಷಿಕರು, ಪುರೋಹಿತರು, ಬ್ರಾಹ್ಮಣರು ಇವರುಗಳನ್ನು ಭದ್ರವೆಂಬ ಪುರುಷಜಾತಿಯ ಪ್ರಮಾಣಕ್ಕೆ ತಕ್ಕಂತೆ ಚಿತ್ರಿಸಬೇಕು

೩-೬ ಋಷಿಗಳನ್ನು ಜಟಾಮಾಲೆಯಿಂದ ಕೂಡಿಯೂ ಕೃಷ್ಣಾಜಿನದ ಉತ್ತರೀಯದಿಂದ ಕೂಡಿಯೂ, ದುರ್ಬಲ ದೇಹದಿಂದ ಕೂಡಿ ತೇಜಸ್ವಿಗಳಂತೆ

**ಕೃಷ್ಣಾಜಿನೋತ್ತರಾಸಂಗಾ ದುರ್ಬಲಾಸ್ತೇಜಸಾ ಯುತಾಃ ।**
**ದೇವತಾಶ್ಚಾಪಿ ಗಂಧರ್ವಾ ಮುಕುಟೇನ ವಿವರ್ಜಿತಾಃ ॥ ೪ ॥**

**ಕರ್ತವ್ಯಾಸ್ತೇ ಮಹಾರಾಜ ಶಿಖರೈರುಪಶೋಭಿತಾಃ ।**
**ಬ್ರಹ್ಮವರ್ಚಸ್ವಿನೋ ವಿಪ್ರಾಃ ಶುಕ್ಲಾಂಬರಧರಾಸ್ತಥಾ ॥ ೫ ॥**

**ಮಂತ್ರಿಣಶ್ಚ ಮಹಾರಾಜ ಸಾಂವತ್ಸರಪುರೋಹಿತೌ ।**
**ಸರ್ವಾಲಂಕಾರಸಂಯುಕ್ತಾನೇವೋಲ್ಬಣವಿಭೂಷಣಾನ್ ॥ ೬ ॥**

**ಮುಕುಟೇನ ವಿಹೀನಾಂಸ್ತು ಸೋಷ್ಣೀಷಾನ್ ಕಾರಯೇಚ್ಚ ತಾನ್ ।**
**ದೈತ್ಯಾಶ್ಚ ದಾನವಾಶ್ಚೈವ ಕರ್ತವ್ಯಾ ಭ್ರುಕುಟೀಮುಖಾಃ ॥ ೭ ॥**

**ವರ್ತುಲಾಕ್ಷಾಸ್ತಥಾ ಕಾರ್ಯಾ ಭೀಮವಕ್ತ್ರಾಸ್ತಥೈವ ಚ ।**
**ತೇಷಾಮುಭ್ಯುದ್ಧತೋ ವೇಷಃ ಕರ್ತವ್ಯಃ ಪೃಥಿವೀಪತೇ ॥ ೮ ॥**

**ರುದ್ರಪ್ರಮಾಣಾಃ ಕರ್ತವ್ಯಾಃ ತಥಾ ವಿದ್ಯಾಧರಾ ನೃಪ ।**
**ಸಪತ್ನೀಕಾಶ್ಚ ತೇ ಕಾರ್ಯಾಃ ಮಾಲ್ಯಾಲಂಕಾರಧಾರಿಣಃ ॥ ೯ ॥**

ತೋರಿಬರುವ ಹಾಗೆ ಚಿತ್ರಿಸಬೇಕು ದೇವತೆಗಳನ್ನೂ, ಗಂಧರ್ವರನ್ನೂ ಕಿರೀಟವಿಲ್ಲದೆ ಶಿಖರವೆಂಬ ಶಿರೋಭೂಷಣದಿಂದ ಕೂಡಿರುವಂತೆ ಚಿತ್ರಿಸಬೇಕು ಬ್ರಾಹ್ಮಣರನ್ನು ಬ್ರಹ್ಮತೇಜಸ್ಸು ತೋರಿಬರುವಂತೆಯೂ, ಬಿಳಿಯವಸ್ತ್ರಧರಿಸಿಯೂ ಇರುವಂತೆ ಚಿತ್ರಿಸಬೇಕು ಮಂತ್ರಿಗಳನ್ನೂ, ಜ್ಯೋತಿಷಿಕ ಮತ್ತು ಪುರೋಹಿತ ಇವರುಗಳನ್ನೂ ಎಲ್ಲಾ ಅಲಂಕಾರಗಳಿಂದ ಪ್ರಕಾಶಮಾನರನ್ನಾಗಿಯೂ, ಕಿರೀಟವಿಲ್ಲದೆ ತಲೆಯ ಮೇಲೆ ರುಮಾಲಿನಿಂದ ಕೂಡಿದವರನ್ನಾಗಿಯೂ ಚಿತ್ರದಲ್ಲಿ ರಚಿಸಬೇಕು

೭–೯ ದೈತ್ಯರು, ದಾನವರು ಇವರುಗಳ ಚಿತ್ರವನ್ನು ಮುಖದಲ್ಲಿ ಹುಬ್ಬುಗಂಟಿನಿಂದ ಕೂಡಿರುವಂತೆ ಚಿತ್ರಿಸಬೇಕು ದುಂಡಾದ ಕಣ್ಣುಗಳಿಂದ ಕೂಡಿ ಭಯಂಕರವಾದ ಮುಖವುಳ್ಳವರಾಗಿರಬೇಕು. ಅವರ ವೇಷವೂ ಉದ್ಧಟತನಕ್ಕೆ ಸೂಚಕವಾಗಿರಬೇಕು ವಿದ್ಯಾಧರರನ್ನು ರುದ್ರಪುರುಷ ಜಾತಿಯ ಪ್ರಮಾಣಕ್ಕೆ ತಕ್ಕಂತೆ ಬರೆಯಬೇಕು ಆಕಾಶದಲ್ಲಾಗಲಿ, ಭೂಮಿಯ ಮೇಲಾಗಲಿ ಅವರನ್ನು ಬರೆಯುವಾಗ ಪತ್ನೀಸಹಿತರಾಗಿರುವಂತೆಯೂ, ಮಾಲ್ಯ ಭೂಷಣಗಳಿಂದಕೂಡಿಯೂ

ಖಡ್ಗಹಸ್ತಾಶ್ಚ ತೇ ಕಾರ್ಯಾ ಗಗನೇ ವಾಥವಾ ಭುವಿ ।
ಮಾಲವ್ಯಪರಿಮಾಣೇನ ಕಿನ್ನರೋರಗರಾಕ್ಷಸಾಃ　　　　॥ ೧೦ ॥

ರುಚಕಸ್ಯ ಪ್ರಮಾಣೇನ ಯಕ್ಷಾಃ ಕಾರ್ಯಾ ನರಾಧಿಪ ।
ಶಶಕಸ್ಯ ಪ್ರಮಾಣೇನ ಪ್ರಧಾನಂ ಮಾನವಂ ಲಿಖೇತ್　　　　॥ ೧೧ ॥

ಪಿಶಾಚಾ ವಾಮನಾಃ ಕುಬ್ಜಾಃ ಪ್ರಮಥಾಶ್ಚ ಮಹೀಭುಜಃ ।
ಮಾನಂ ನಿಯಮತಃ ಕಾರ್ಯಂ ರೂಪಂ ನಿಯಮತಸ್ತಥಾ　　　　॥ ೧೨ ॥

ಸ್ವಾನುರೂಪಪ್ರಮಾಣಾಶ್ಚಂ ಸರ್ವೇಷಾಂ ಯೋಷಿತಃ ಸ್ಮೃತಾಃ ।
ಕಿನ್ನರಾ ದ್ವಿವಿಧಾ ಪ್ರೋಕ್ತಾ ನೃವಕ್ತ್ರಾ ಹಯವಿಗ್ರಹಾಃ　　　　॥ ೧೩ ॥

ನೃದೇಹಾಶ್ಚಾಶ್ವವಕ್ತ್ರಾಶ್ಚ ತಥಾನ್ಯೇ ಪರಿಕೀರ್ತಿತಾಃ ।
ಅಶ್ವವಕ್ತ್ರಾಸ್ತು ಕರ್ತವ್ಯಾಃ ಸರ್ವಾಲಂಕಾರಧಾರಿಣಃ　　　　॥ ೧೪ ॥

---

ಖಡ್ಗಧಾರಿಗಳಾಗಿಯೂ ಇರುವಂತೆ ಬರೆಯಬೇಕು ಕಿನ್ನರರು, ನಾಗಪುರುಷರು, ರಾಕ್ಷಸರು ಇವರುಗಳನ್ನು ಮಾಲವ್ಯವೆಂಬ ಪುರುಷಜಾತಿಯ ಪ್ರಮಾಣಕ್ಕೆ ತಕ್ಕಂತೆ ಬರೆಯಬೇಕು ಯಕ್ಷರನ್ನು ರುಚಕಪುರುಷ ಪ್ರಮಾಣದಲ್ಲಿ ಬರೆಯಬೇಕು ಪ್ರಧಾನನಾದ ಪುರುಷನನ್ನು ಶಶಕಜಾತಿಯ ಪುರುಷ ಪ್ರಮಾಣದಿಂದ ಬರೆಯಬೇಕು

೧೨-೧೪ ಪಿಶಾಚಿಗಳು, ವಾಮನರು, ಕುಳ್ಳರು, ಪ್ರಥಮರು, ರಾಜರು ಇವರುಗಳ ಪ್ರಮಾಣ ರೂಪ ಇವನ್ನು ನಿಯಮಕ್ಕೆ ತಕ್ಕಂತೆ ರಚಿಸಬೇಕು ಅವರವರ ಪ್ರಮಾಣಕ್ಕೆ ತಕ್ಕಂತೆ ಬರೆಯಬೇಕು ಕಿನ್ನರರು ಎರಡು ವಿಧವಾಗಿದ್ದಾರೆ ಅವರಲ್ಲಿ ಕುದುರೆಯಂತ ದೇಹವಿದ್ದು ಮನುಷ್ಯನಂತಹ ಮುಖವುಳ್ಳ ಜಾತಿಯೊಂದು ಮನುಷ್ಯನಂತೆ ದೇಹವಿದ್ದು ಕುದುರೆಯಂತೆ ಮುಖವಿರುವ ಜಾತಿಯೊಂದು ಕುದುರೆಯಂತೆ ಮುಖವುಳ್ಳವರನ್ನು ಸರ್ವಾಲಂಕಾರ ಶೋಭಿತರನ್ನಾಗಿ ಚಿತ್ರಿಸಬೇಕು ಅವರನ್ನು ಗಾನ, ವಾದ್ಯಗಳೊಡನೆ ಇರುವಂತೆಯೂ, ತೇಜಸ್ವಿಗಳಾಗಿರುವಂತೆಯೂ ಚಿತ್ರಿಸಬೇಕು

ಗೀತವಾದ್ಯಸಮಾಯುಕ್ತಾ ದ್ಯುತಿಮನ್ತಸ್ತಥೈವ ಚ ।
ಉತ್ಕಚಾ ರಾಕ್ಷಸಾಃ ಕಾರ್ಯಾ ವಿಕಲಾಕ್ಷಾ ವಿಭೀಷಣಾಃ ॥ ೧೫ ॥

ದೇವಾಕಾರಾಶ್ಚ ಕರ್ತವ್ಯಾ ನಾಗಾಃ ಫಣವಿರಾಜಿತಾಃ ।
ಸಾಲಂಕಾರಾಃ ಸ್ಮೃತಾಃ ಸರ್ವೇ ಯಕ್ಷಾಸ್ತೇಽಭಿಹಿತಾ ಮಯಾ ॥ ೧೬ ॥

ಸುರಾಣಾಂ ಪ್ರಮಥಾಃ ಕಾರ್ಯಾಃ ಪ್ರಮಾಣೇನ ವಿವರ್ಜಿತಾಃ ।
ಪಿಶಾಚಾಶ್ಚ ತಥಾ ಕಾರ್ಯಾ ಪ್ರಮಾಣೇನ ವಿವರ್ಜಿತಾಃ ॥ ೧೭ ॥

ನಾನಾಸತ್ತ್ವಮುಖಾಃ ಕಾರ್ಯಾ ದೇವತಾನಾಂ ತಥಾ ಗಣಾಃ ।
ನಾನಾವೇಶಾ ಮಹಾರಾಜ ನಾನಾಯುಧಧರಾಸ್ತಥಾ ॥ ೧೮ ॥

ನಾನಾಕ್ರೀಡಾಪ್ರಸಕ್ತಾಶ್ಚ ನಾನಾಕರ್ಮಕರಾಸ್ತಥಾ ।
ಏಕರೂಪಾಸ್ತು ಕರ್ತವ್ಯಾ ವೈಷ್ಣವಾನಾಂ ತಥಾ ಗಣಾಃ ॥ ೧೯ ॥

---

೧೫-೧೮ ರಾಕ್ಷಸರನ್ನು ಕೇಶಗಳು ಕೆದರಿಕೊಂಡಿರುವಂತೆ ಬರೆಯಬೇಕು ಅವರು ವಿಕೃತವಾದ ಕಣ್ಣುಗಳಿಂದ ಭಯಂಕರರಾಗಿರಬೇಕು, ನಾಗಪುರುಷರನ್ನು ದೇವತೆಗಳ ಆಕಾರದಲ್ಲಿ ಹೆಡೆಗಳಿಂದ ಕೂಡಿರುವಂತೆ ಬರೆಯಬೇಕು ಯಕ್ಷರನ್ನೂ ಅಲಂಕಾರಸಹಿತರನ್ನಾಗಿಯೇ ಬರೆಯಬೇಕು ದೇವತೆಗಳ ಅನುಯಾಯಿಗಳಿಗೆ ಪ್ರಮಾಣನಿಯಮವಿಲ್ಲ ಪಿಶಾಚಿಗಳಿಗೂ ಪ್ರಮಾಣನಿಯಮವಿಲ್ಲ ದೇವತೆಗಳ ಪರಿಜನರನ್ನು ನಾನಾವಿಧವಾದ ಪ್ರಾಣಿಗಳ ಮುಖದಿಂದ ಕೂಡಿರುವಂತೆಯೂ, ನಾನಾವೇಷಗಳಲ್ಲಿರುವಂತೆಯೂ, ನಾನಾಯುಧಧಾರಿಗಳಾಗಿರುವಂತೆಯೂ, ನಾನಾ ವಿಧವಾದ ಕ್ರೀಡೆಗಳಲ್ಲಿಯೂ, ಕಾರ್ಯಗಳಲ್ಲಿಯೂ ಆಸಕ್ತರಾಗಿರುವಂತೆಯೂ ಚಿತ್ರಿಸಬೇಕು

೧೯-೨೨. ವೈಷ್ಣವ ಗಣಗಳನ್ನು ಒಂದೇ ರೂಪದಿಂದ ಚಿತ್ರಿಸಬೇಕು ಆ ವೈಷ್ಣವ ಗಣಗಳಲ್ಲಿ ನಾಲ್ಕೇ ಭೇದಗಳಾಗುತ್ತವೆ. ವಾಸುದೇವನ ಅನುಯಾಯಿ

ತತ್ರಾಪಿ ತೇಷಾಂ ಕರ್ತವ್ಯಾ ಭೇದಾಶ್ಚತ್ವಾರ ಏವ ಚ ।
ವಾಸುದೇವಸಮಾಃ ಕಾರ್ಯಾ ವಾಸುದೇವಗಣಾಃ ಶುಭಾಃ　　॥ ೨೦ ॥

ಸಂಕರ್ಷಣೇನ ಸದೃಶಾಸ್ತದ್ಗಣಾಶ್ಚ ತಥಾ ಸ್ಮೃತಾಃ ।
ಪ್ರದ್ಯುಮ್ನೇನಾನಿರುದ್ಧೇನ ತದ್ಗಣಾ ಸದೃಶಾಸ್ತಥಾ　　॥ ೨೧ ॥

ತತ್ಪ್ರಭಾವಾಃ ಸ್ಮೃತಾಃ ಸರ್ವೇ ತದಾಯುಧಧರಾಸ್ತಥಾ ।
ನೀಲೋತ್ಪಲದಲಶ್ಯಾಮಾಃ ಚಂದ್ರಶುಭ್ರಾಸ್ತಥೈವ ಚ　　॥ ೨೨ ॥

ತಥಾ ಮರಕತಾಕಾರಾಃ ಸಿಂದೂರಸದೃಶಪ್ರಭಾಃ ।
ರುಚಕಸ್ಯ ತು ಮಾನೇನ ವೇಶ್ಯಾಃ ಕಾರ್ಯಾಸ್ತಥಾ ಸ್ತ್ರಿಯಃ　　॥ ೨೩ ॥

ವೇಶ್ಯಾನಾಮುದ್ಧತಂ ವೇಶಂ ಕಾರ್ಯಂ ಶೃಂಗಾರಸಮ್ಮತಂ ।
ಮಾಲವ್ಯಾ ಮಾನತಃ ಕಾರ್ಯಾ ಲಜ್ಜಾವತ್ಯಃ ಕುಲಸ್ತ್ರಿಯಃ　　॥ ೨೪ ॥

---

ಗಳನ್ನು ವಾಸುದೇವನ ರೂಪಕ್ಕೆ ಅನುಗುಣವಾಗಿಯೇ ಇರುವಂತೆಯೂ, ಸಂಕರ್ಷಣಾನುಯಾಯಿಗಳು ಅವನರೂಪಕ್ಕೆ ಅನುಗುಣವಾಗಿರುವಂತೆಯೂ, ಪ್ರದ್ಯುಮ್ನ, ಅನಿರುದ್ಧರ ಅನುಯಾಯಿಗಳು ಅವರವರ ರೂಪಕ್ಕೆ ಅನುಗುಣವಾಗಿಯೂ ಇರಬೇಕು ಅವರವರ ಪ್ರಭಾವವನ್ನು ಹೋಲುವ ಪ್ರಭಾವಗಳಿಂದಲೂ ಆಯುಧಕ್ಕೆ ಸದೃಶವಾದ ಆಯುಧಗಳಿಂದಲೂ ಕೂಡಿರಬೇಕು ಅದರಲ್ಲಿ ಕ್ರಮವಾಗಿ ಮೊದಲನೆಯವರು ಕನ್ನೈದಿಲೆಯಂತೆ ಶ್ಯಾಮಲವರ್ಣಹೊಂದಿಯೂ, ಎರಡನೆಯವರು ಚಂದ್ರನಂತೆ ಶುಭ್ರರಾಗಿಯೂ ಮೂರನೆಯವರು ಪಚ್ಚೆಯಕಲ್ಲಿನ ವರ್ಣದಿಂದ ಕೂಡಿಯೂ, ನಾಲ್ಕನೆಯವರು ಸಿಂಧೂರಕ್ಕೆ ಸಮಾನವಾದ ಕಾಂತಿಯಿಂದ ಕೂಡಿಯೂ ಇರಬೇಕು

೨೩-೨೪ ರುಚಕ ಜಾತಿಯ ಪ್ರಮಾಣಕ್ಕೆ ತಕ್ಕಂತೆ ವೇಶ್ಯಾಸ್ತ್ರೀಯರನ್ನು ಚಿತ್ರಿಸಬೇಕು ಆ ವೇಶ್ಯೆಯರ ವೇಷವು ಶೃಂಗಾರಕ್ಕೆ ತಕ್ಕಂತೆ ಉಲ್ಬಣವಾಗಿರಬೇಕು ಮಾಲವ್ಯ ಜಾತಿಯ ಮನುಷ್ಯರ ಪ್ರಮಾಣಾನುಸಾರವಾಗಿ ಲಜ್ಜೆಯಿಂದ ಕೂಡಿದ ಕುಲಸ್ತ್ರೀಯರನ್ನು ಚಿತ್ರಿಸಬೇಕು ಅಲಂಕಾರಗಳಿಂದ ಕೂಡಿದ ಈ ಕುಲಸ್ತ್ರೀಯರು ಬಹಳ ಉಲ್ಬಣವಾದ ವೇಷದಿಂದ ಕೂಡಿರಬಾರದು ದೈತ್ಯರು, ಯಕ್ಷರು

ನಾತ್ಯುನ್ನತೇನ ವೇಶೇನ ಸಾಲಂಕಾರಾಸ್ತಥೈವ ಚ ।
ದೈತ್ಯದಾನವಯಕ್ಷಾಣಾಂ ರಾಕ್ಷಸಾನಾಂ ತಥೈವ ಚ ॥ ೨೫ ॥

ರೂಪವತ್ಯಸ್ತಥಾಕಾರ್ಯಾಃ ಪತ್ನ್ಯೋ ಮನುಜಸತ್ತಮ ।
ಮಾತರಃ ಸ್ವೇನ ರೂಪೇಣ ತಥಾ ಕಾರ್ಯಾ ನರಾಧಿಪ ॥ ೨೬ ॥

ಪಿಶಾಚಾನಾಂ ಚ ಪತ್ನ್ಯೋಪಿ ಕಾರ್ಯಾಸ್ತದ್ರೂಪಸಂಯುತಾಃ ।
ವಿಧರ್ತೃಕಾಸ್ತು ಕರ್ತವ್ಯಾಸ್ತ್ರಿಯಃ ಪಲಿತಸಂಯುತಾಃ ॥ ೨೭ ॥

ಶುಕ್ಲವಸ್ತ್ರಪರೀಧಾನಾಃ ಸರ್ವಾಲಂಕಾರವರ್ಜಿತಾಃ ।
ಕುಬ್ಜಾ ವಾಮನಿಕಾ ವೃದ್ಧಾ ತಥಾ ರೂಪವತೀ ಭವೇತ್ ॥ ೨೮ ॥

ರಾಜಸ್ತ್ರೀಣಾಂ ಪರೀವಾರೇ ವೃದ್ಧಃ ಸ್ಯಾತ್ಕಂಚುಕೀ ಪುನಃ ।
ರುಚಕಸ್ಯ ತು ಮಾನೇನ ವೈಶ್ಯಮಾನಂ ವಿಧೀಯತೇ ॥ ೨೯ ॥

---

ರಾಕ್ಷಸರು ಇವರುಗಳ ಪತ್ನಿಯರೂ ಸಹ ರೂಪವತಿಗಳಾಗಿ ತೋರುವಂತೆಯೇ ಚಿತ್ರಿಸಬೇಕು

೨೬-೨೮ ಸಪ್ತಮಾತೃಕೆಗಳನ್ನು ಅವರವರ ರೂಪಕ್ಕೆ ತಕ್ಕಂತೆ ಚಿತ್ರಿಸಬೇಕು ಪಿಶಾಚಪತ್ನಿಗಳನ್ನೂ ಸಹ ಪಿಶಾಚರೂಪಕ್ಕೆ ತಕ್ಕಂತೆ ಬರಯಬೇಕು ವಿಧವೆಗಳನ್ನು ಬರೆಯುವಾಗ ಅವರು ಬಿಳಿಯ ಕೂದಲಿನಿಂದ (ನೆರೆ) ಕೂಡಿರುವಂತೆಯೂ, ಬಿಳಿಯವಸ್ತ್ರಧಾರಿಣಿಗಳಾಗಿಯೂ ಅಲಂಕಾರ ರಹಿತ ರಾಗಿಯೂ, ಇರುವಂತೆ ಚಿತ್ರಿಸಬೇಕು ರಾಜರ ಪರಿವಾರಕ್ಕೆ ಸೇರಿರುವ ಅಂತಹ ಸ್ತ್ರೀಯರನ್ನು ಮಾತ್ರ ಕುಬ್ಜರನ್ನಾಗಿಯೂ, ವಾಮನ, ವೃದ್ಧ ಈ ರೂಪದಲ್ಲಿ ರೂಪ ವತಿಯರನ್ನಾಯೇ ಬರೆಯಬೇಕು ಕಂಚುಕಿಯು ಮಾತ್ರ ವೃದ್ಧನೇ ಆಗಿರಬೇಕು

೨೯-೩೨ ರುಚಕಪುರುಷಜಾತಿಯ ಪ್ರಮಾಣಕ್ಕೆ ತಕ್ಕಂತೆ ವೈಶ್ಯನನ್ನೂ ಶಶಕ ಪ್ರಮಾಣಕ್ಕೆ ತಕ್ಕಂತೆ ಶೂದ್ರನನ್ನೂ ಚಿತ್ರಿಸಬೇಕು ಅವರು ಆಯಾಯ ಜಾತಿಗೆ ತಕ್ಕ ವೇಷದಿಂದಿರಬೇಕು. ದೈತ್ಯಾದಿ ಸ್ತ್ರೀಯರಿಗೆ ಪರಿಚಾರಕ ಸ್ತ್ರೀಯರು

ಶಠಕಸ್ಯ ತು ಮಾನೇನ ಶೂದ್ರಮಾನಂ ತಥೈವ ಚ ।
ಯಥಾ ಜಾತ್ಯನುರೂಪೇಣ ವೇಷೇಣ ಮನುಜೇಶ್ವರ ॥ ೩೦ ॥

ದೈತ್ಯಾದಿಯೋಷಿತಾಂ ಕಾರ್ಯಾಃ ಪರಿಚಾರಸ್ತ್ರಿಯಃ ಸದಾ ।
ಮಹಾಶಿರಾ ಮಹೋರಸ್ಕೋ ಮಹಾನಾಸೋ ಮಹಾಹನುಃ ॥ ೩೧ ॥

ಪೀನಸ್ಕಂಧಭುಜಗ್ರೀವಃ ಪರಿಮಾಣೇನ ಚೋಚ್ಛ್ರಿತಃ ।
ತ್ರಿತರಂಗ ಲಲಾಟಶ್ಚ ವ್ಯೋಮದೃಷ್ಟಿರ್ಮಹಾಕಟಿಃ ॥ ೩೨ ॥

ದೃಪ್ತಶ್ಚಿತ್ರವಿಧಾ ಕಾರ್ಯಃ ಸೇನಾಯಾಃ ಪತಿರೂರ್ಜಿತಃ ।
ಯೋಧಾಃ ಕಾರ್ಯಾ ಮಹಾರಾಜ ಪ್ರಾಯಶೋ ಭ್ರುಕುಟೀಮುಖಾಃ ॥

ಕಿಂಚಿದುದ್ಧತವೇಶಾಶ್ಚ ಕಾರ್ಯಾಶ್ಚೋದ್ಧತದರ್ಶನಾಃ ।
ಅಭ್ಯುದ್ಗತಾಶ್ಚ ಕರ್ತವ್ಯಾಃ ಆಯುಧೀಯಾಃ ಪದಾತಯಃ ॥ ೩೪ ॥

ಖಡ್ಗಚರ್ಮಧರಾಃ ಕಾರ್ಯಾಃ ಕರ್ಣಾಟಕವಪುರ್ಧರಾಃ ।
ವರಬಾಣಧರಾಃ ಕಾರ್ಯಾಃ ನಗ್ನಜಂಘಾಶ್ಚ ಧನ್ವಿನಃ ॥ ೩೫ ॥

---

ಯಾವಾಗಲೂ ಸಮೀಪದಲ್ಲಿರುವಂತೆ ಬರೆಯಬೇಕು ಸೇನಾಧಿಪತಿಯನ್ನು ಬರೆಯುವಾಗ ಅವನು ದಪ್ಪವಾದ ತಲೆಯಿಂದಲೂ ವಿಶಾಲವಾದ ಹೃದಯದಿಂದಲೂ, ದಪ್ಪವಾದ ಮೂಗು ಮತ್ತು ಕಪೋಲದ ವಿಶಾಲತೆಯಿಂದ ಕೂಡಿಯೂ, ಕತ್ತು, ಭುಜ ಇವು ದಪ್ಪವಾಗಿರುವಂತೆಯೂ, ಉನ್ನತ ಪ್ರಮಾಣದಲ್ಲಿರುವಂತೆಯೂ ಇರಬೇಕು ಹಣೆಯಲ್ಲಿ ಮೂರು ರೇಖೆಗಳೂ ಇದ್ದು ಆಕಾಶದೃಷ್ಟಿಯಾಗಿಯೂ, ಸೊಂಟವು ದಪ್ಪವಾಗಿಯೂ ಇರಬೇಕು ಗರ್ವಿತನಾಗಿಯೂ ಬಲಿಷ್ಠನಾಗಿಯೂ ಇರಬೇಕು

೩೩–೩೬ ಯೋಧರನ್ನು ಬರೆಯುವಾಗ ಅವರು ಪ್ರಾಯಕವಾಗಿ ಹುಬ್ಬು ಗಂಟುಹಾಕಿದ ಮುಖದಿಂದಲೇ ಕೂಡಿರಬೇಕು ವೇಷವೂ ನೋಟವೂ ಉದ್ಧತರಾಗಿರುವವರಂತೆಯೇ ಇರಬೇಕು ಪದಾತಿದಳವು ಆಯುಧಗಳಿಂದ ಕೂಡಿ ನಡೆಯುವಂತಿರಬೇಕು ಕತ್ತಿಗುರಾಣಿ ಇವನ್ನು ಧರಿಸಿ ಕರ್ಣಾಟಕರ ದೇಹ ಬಂಧಕ್ಕೆ ತಕ್ಕಂತಿರಬೇಕು ಧನುರ್ಧಾರಿಗಳು ಬಾಣಗಳನ್ನು ಧರಿಸಿಯೂ ಮುಂಡಿ

ನಾತ್ಯುದ್ಧತೇನ ವೇಷೇಣ ಸೋಪಾನತ್ಕಾಃ ತಥೈವ ತೇ ।
ಯಥೋಕ್ತಲಕ್ಷಣಾಃ ಕಾರ್ಯಾಃ ಕುಂಜರಾಸ್ತುರಗಾದಯಃ ॥ ೩೬ ॥

ಹಸ್ತ್ಯಾರೋಹಾಸ್ತು ಕರ್ತವ್ಯಾಃ ಮುಹುಃ ಶ್ಯಾಮಾಸ್ತು ವರ್ಣತಃ ।
ಕೇಶೈಶ್ಚ ಜೂಟಮುಕ್ತೈಃ ಸಾಲಂಕಾರಾಸ್ತಥೈವ ಚ ॥ ೬೭ ॥

ಉದೀಚ್ಯವೇಶಾಃ ಕರ್ತವ್ಯಾಃ ತುರಗಾಣಾಂ ತು ಸಾದಿನಃ ।
ಉದ್ಧತೇನ ತು ವೇಷೇಣ ಕರ್ತವ್ಯಾ ಬಂದಿನಸ್ತಥಾ ॥ ೩೮ ॥

ಸಿರಾದರ್ಶಿತಕಂಠಾಶ್ಚ ತಥೈವೋನ್ಮುಖದೃಷ್ಟಯಃ ।
ಆಹ್ವಾನಕಾಸ್ತು ಕರ್ತವ್ಯಾಃ ಕಪಿಲಾಃ ಕೇಕರೇಕ್ಷಣಾಃ ॥ ೩೯ ॥

ಕಿಂಚಿದ್ದಾನವಸಂಕಾಶಾಃ ಪ್ರಾಯಶೋ ದಂಡಪಾಣಯಃ ।
ನ ಕೇಕರಾನ್ನ ಕಪಿಲಾನ್ಯುದ್ಧೇ ದ್ವಂದ್ವಾನ್ ಸಮಾಲಿಖೇತ್ ॥ ೪೦ ॥

---

ಗಳು (ಹೊದಿಕೆಯಿಲ್ಲದೆ) ಕಾಣುವಂತೆಯೂ ಇರಬೇಕು ಬಹಳ ಉದ್ಧತವಾದ ವೇಷವಿರಬಾರದು ಕಾಲಿಗೆ ಪಾದರಕ್ಷೆ ಹಾಕಿಕೊಂಡಿರಬೇಕು ಆನೆ, ಕುದುರೆ ಇವುಗಳನ್ನು ಅವುಗಳಿಗೆ ಹೇಳಿರುವ ಲಕ್ಷಣಗಳಿಗೆ ತಕ್ಕಂತೆ ಬರಯಬೇಕು

೩೭–೩೯ ಆನೆಯ ಮಾವಟಿಗರು ಮತ್ತು ಆನೆಯ ಮೇಲೆ ಕುಳಿತು ಯುದ್ಧ ಮಾಡುವವರು ಇವರನ್ನು ಶಾಮವರ್ಣದಿಂದ ಚಿತ್ರಿಸಬೇಕು ಅವರಿಗೆ ಜಟಾಜೂಟ ಗಳಿಂದ ಕೂಡಿದ ಕೇಶಗಳೂ, ಇತರ ಆಭರಣಗಳೂ ಇರಬೇಕು ಕುದುರೆಯ ಸವಾರರು ಪ್ರಾಯಶಃ ಉತ್ತರದೇಶದವರ ವೇಷದಲ್ಲಿರಬೇಕು, ಬಂದಿಗಳು ಉದ್ಭಟ ವಾದ ವೇಷದಿಂದ ಕೂಡಿರಬೇಕು ಧೊರೆಯ ಸಮೀಪದಲ್ಲಿ ನಿಂತು ಇತರರನ್ನು ಕರೆಯುವ ಭೃತ್ಯರು ನರಗಳು ಕಾಣಿಸುತ್ತಿರುವ ಕಂಠದಿಂದ ಕೂಡಿಯೂ, ಮೇಲ್ಮುಖ ವಾದ ದೃಷ್ಟಿಯಿಂದ ಕೂಡಿಯೂ, ಕಪಿಲವರ್ಣದಿಂದ ಕೂಡಿಯೂ, ಆಕೇಕರವೆಂಬ ವಕ್ರದೃಷ್ಟಿಯಿಂದ ಕೂಡಿಯೂ ಇರಬೇಕು

೪೦–೪೨ ದಂಡಧಾರಿಗಳಾದ ರಾಜಭೃತ್ಯರನ್ನು ಸ್ವಲ್ಪಮಟ್ಟಿಗೆ ದಾನವ ರಂತೆಯೇ ಚಿತ್ರಿಸಬೇಕು ಯುದ್ಧದಲ್ಲಿ ದ್ವಂದ್ವಪ್ರತಿ ದ್ವಂದ್ವಭಾವದಿಂದ ಯೋಧ ರನ್ನು ನಿರ್ಮಿಸುವಾಗ ಕಪಿಲರನ್ನೂ ಕೇಕರರನ್ನೂ ಚಿತ್ರಿಸಬಾರದು ದ್ವಾರಪಾಲಕ

ನಾತ್ಯುನ್ನತೇನ ವೇಷೇಣ ನ ಚ ಶಾಂತೇನ ಶಸ್ಯತೇ ।
ಪಾರ್ಶ್ವಬದ್ಧೇನ ಖಡ್ಗೇನ ಪ್ರತೀಹಾರಸ್ತು ದಂಡವಾನ್ ॥ ೪೧ ॥

ಸಂವೇಷ್ಟಿತಶಿರಸ್ಕಾಶ್ಚ ಕರ್ತವ್ಯಾ ವಣಿಜಸ್ತಥಾ ।
ಗಾಯನಾ ನರ್ತಕಾ ಯೇ ವಾ ವಾದ್ಯವಾದವಿಶುದ್ಧಯೇ ॥ ೪೨ ॥

ಉದ್ಧತೇನ ತು ವೇಷೇಣ ಕಾರ್ಯಾಸ್ತೇ ಮನುಜೋತ್ತಮ ।
ಆಸನ್ನಪಲಿತಾಃ ಕಾರ್ಯಾಃ ಸ್ವವಿಭೂಷಣಭೂಷಿತಾಃ ॥ ೪೩ ॥

ಪೌರಜಾನಪದಾಃ ಶ್ರೇಷ್ಠಾಃ ಶುಭವಸ್ತ್ರವಿಭೂಷಣಾಃ ।
ಪ್ರಸೃತಪ್ರವಣಾಃ ಪ್ರಹ್ವಾಃ ಸ್ವಭಾವಪ್ರಿಯದರ್ಶಿನಃ ॥ ೪೪ ॥

ಸ್ವಕರ್ಮೋಪಸ್ಕರವ್ಯಗ್ರಃ ಕಾರ್ಯಃ ಕರ್ಮಕರೋ ಜನಃ ।
ಪ್ರಾಂಶವಃ ಪೀನಗಾತ್ರಾಶ್ಚ ಪೀನಗ್ರೀವಶಿರೋಧರಾಃ ॥ ೪೫ ॥

---

ನನ್ನು ಚಿತ್ರಿಸುವಾಗ ಅವನ ವೇಷವು ಬಹಳ ಉದ್ಭಟವಾಗಿರದಂತೆಯೂ ಬಹಳ ಶಾಂತವಾಗಿದಂತೆಯೂ ಮಧ್ಯಸ್ಥಾವಸ್ಥೆಯಲ್ಲಿರಬೇಕು ಪಕ್ಕದಲ್ಲಿ ಕತ್ತಿಯನ್ನು ಕಟ್ಟಿಕೊಂಡಿರುವಂತೆಯೂ ದಂಡಧಾರಿಯಾಗಿರುವಂತೆಯೂ ಅವನನ್ನು ಚಿತ್ರಿಸಬೇಕು ವರ್ತಕರನ್ನು ತಲೆಗೆ ವಸ್ತ್ರವನ್ನು ಸುತ್ತಿರುವಂತೆ ಚಿತ್ರಿಸಬೇಕು ಗಾಯಕರನ್ನೂ ನರ್ತಕರನ್ನೂ ಬರೆಯುವಾಗ ಅವರ ವಾದ್ಯದ ರಂಜನೆಗಾಗಿ ಉದ್ಭಟವಾದ ವೇಷ ದಿಂದಲೇ ಅವರನ್ನು ಚಿತ್ರಿಸಬೇಕು

೪೩–೪೪ (ಉತ್ಕೃಷ್ಟರಾದ) ಪ್ರಧಾನರಾದ ಪುರಜನರನ್ನು ಅಥವಾ ದೇಶದ ಜನರನ್ನೂ ಬರೆಯುವಾಗ ಅವರು ಸ್ವಲ್ಪಮಟ್ಟಿಗೆ ಬಿಳಿಯ ಕೂದಲು ಬರುವ ವಯಸ್ಸಿನಲ್ಲಿರಬೇಕು ತಮ್ಮ ಭೂಷಣಗಳಿಂದ ಕೂಡಿಯೂ ಶುಭ್ರವಸ್ತ್ರಧಾರಿ ಗಳಾಗಿಯೂ ಇರಬೇಕು, ಸ್ವಾಭಾವಿಕವಾದ ಸ್ನಿಗ್ಧದೃಷ್ಟಿಯಿಂದ ಕೂಡಿಯೂ ಮುಂಡಿಯುವರೆಗೂ ಬಗ್ಗಿ ನಮ್ರವಾಗಿರುವಂತೆಯೂ ಅವರನ್ನು ಚಿತ್ರಿಸಬೇಕು ಕರ್ಮಕರರನ್ನು ಬರೆಯುವಾಗ ಅವರವರ ಕಸಬಿನ ಸಾಧನಗಳೊಡನೆ ಕೂಡಿರುವಂತೆ ಚಿತ್ರಿಸಬೇಕು

೪೫–೪೬ ಜಟ್ಟಿಗಳನ್ನು ಬರೆಯುವಾಗ ಅವರು ಉನ್ನತರಾಗಿಯೂ ಪುಷ್ಟ ವಾದ ಅವಯವಗಳಿಂದ ಕೂಡಿಯೂ, ದಪ್ಪವಾಗಿರುವ ಕತ್ತು ಮತ್ತು ತಲೆಗಳಿಂದ ಕೂಡಿಯೂ, ಉಗ್ರರಾಗಿಯೂ ಗುಂಗುರುವಾದ ಹ್ರಸ್ವಕೇಶಗಳಿಂದ ಕೂಡಿಯೂ

**ಉಗ್ರಾಶ್ಚ ನೀಚಕೇಶಾಶ್ಚ ಮಲ್ಲಾಃ ಕಾರ್ಯಾಸ್ತಥೋದ್ಧತಾಃ ।**
**ವೃಷಾಃ ಕೇಸರಿಣಶ್ಚೈವ ಯಾಶ್ಚಾನ್ಯಾಃ ಸತ್ವಜಾತಯಃ ॥ ೪೬ ॥**

**ಯಥಾಭೂಮಿನಿವೇಶಾಸ್ತೇ ಲೋಕಂ ದೃಷ್ಟ್ವಾ ನರಾಧಿಪ ।**
**ಏತದ್ರೂಪಸಮುದ್ದೇಶಮದೃಷ್ಟಾನಾಂ ತವೇರಿತಂ ॥ ೪೭ ॥**

**ದೃಷ್ಟಂ ಸುಸದೃಶಂ ಕಾರ್ಯಂ ಸರ್ವೇಷಾಮವಿಶೇಷತಃ ।**
**ಚಿತ್ರೇ ಸಾದೃಶ್ಯಕರಣಂ ಪ್ರಧಾನಂ ಪರಿಕೀರ್ತಿತಂ ॥ ೪೮ ॥**

**ಬುದ್ಧ್ವಾ ರೂಪಂ ಯಥಾವೇಶಂ ವರ್ಣಂ ಚ ಮನುಜೋತ್ತಮ ।**
**ದೇಶೇ ದೇಶೇ ನರಾಃ ಕಾರ್ಯಾಃ ಯಥಾವತ್ತತ್ಸಮುದ್ಭವಾಃ ॥ ೪೯ ॥**

**ದೇಶಂ ನಿಯೋಗಂ ಸ್ಥಾನಂ ಚ ಕರ್ಮ ಬುದ್ಧ್ವಾ ಚ ಯತ್ನತಃ ।**
**ಆಸನಂ ಶಯನಂ ಯಾನಂ ವೇಶಂ ಕಾರ್ಯಂ ನರಾಧಿಪ ॥ ೫೦ ॥**

---

ಉದ್ಧತರಾಗಿಯೂ ಇರಬೇಕು ಎತ್ತು, ಸಿಂಹ ಇವೇ ಮೊದಲಾದ ಪ್ರಾಣಿಗಳನ್ನು ಬರಯುವಾಗ ಅವು ಭೂಮಿಯಲ್ಲಿಹೇಗೆ ತೋರಿಬರುತ್ತಿವೆಯೋ ಅದೇ ರೀತಿ ಯಲ್ಲಿಯೇ ಚಿತ್ರದಲ್ಲಿ ಚಿತ್ರಿಸಬೇಕು ಇದುವರೆಗೆ ಕಣ್ಣಿಗೆ ಕಾಣದಿರುವ ಚಿತ್ರಾರ್ಹ ವಸ್ತುಗಳ ವಿಷಯದಲ್ಲಿ ಸಾಮಾನ್ಯವಾದ ಲೇಖನ ನಿಯಮವನ್ನು ಹೇಳಿ ಆಯಿತು. ಕಣ್ಣಿನಿಂದ ನೋಡಿದ ವ್ಯಕ್ತಿವಿಶೇಷವನ್ನು ಬರೆಯುವಾಗ ಅದಕ್ಕೆ ಹೋಲುವಂತೆಯೇ ಎಲ್ಲಾ ವ್ಯಕ್ತಿಗಳನ್ನೂ ಬರೆಯಬೇಕು ಚಿತ್ರದಲ್ಲಿ ಕಣ್ಣಿನಿಂದ ನೋಡದಿರುವ ವಸ್ತು ವನ್ನು ಬರೆಯುವುದಕ್ಕಿಂತಲೂ ನೋಡಿದ ವಸ್ತುವನ್ನು ಅದಕ್ಕೆ ಹೋಲುವಂತೆ ಬರೆಯುವಿಕೆಯೇ ಮುಖ್ಯ ಚಿತ್ರಕಾರನ ಕುಶಲತಾಪರೀಕ್ಷೆಗೆ ಇದೇ ಪ್ರಧಾನ

೪೯–೫೦ ಚಿತ್ರಿಸುವ ಪ್ರತಿಮೆಗೆ ತಕ್ಕ ರೂಪವನ್ನೂ, ರೂಪಕ್ಕೆ ತಕ್ಕ ವೇಷ ವನ್ನೂ, ವೇಷಕ್ಕೆ ತಕ್ಕ ವರ್ಣವನ್ನೂ ಸ್ವಬುದ್ಧಿಯಿಂದ ಊಹಿಸಿ ಆಯಾಯ ವೇಷದ ಜನರನ್ನೂ ಆ ಜನರ ಸಂತತಿಯನ್ನೂ ಯಥಾಯೋಗ್ಯವಾಗಿ ಚಿತ್ರಿಸಬೇಕು ಚಿತ್ರಿಸುವ ದೇಶವನ್ನೂ ಅಲ್ಲಿಯ ಸಮುದಾಚಾರಗಳನ್ನೂ, ಸ್ಥಾನವನ್ನೂ, ಕಸಬನ್ನೂ ಪ್ರಯತ್ನದಿಂದ ತಿಳಿದು ಅದಕ್ಕೆ ತಕ್ಕಂತೆ ಆಸನ, ಶಯನ, ಯಾನ, ವೇಷ ಇವು ಗಳನ್ನು ಚಿತ್ರಿಸಬೇಕು-

ಸರಿತಾಂ ಸಶರೀರಾಣಾಂ ವಾಹನಾನಿ ಪ್ರದರ್ಶಯೇತ್ ।
ಪೂರ್ಣಕುಂಭಕರಾಃ ಕಾರ್ಯಾಃ ತಥಾ ನಾಮಿತಜಾನವಃ ॥ ೫೧ ॥

ಶೈಲಾನಾಂ ಶಿಖರಂ ಮೂರ್ಧ್ನಿ ದರ್ಶಯೇನ್ಮನುಜೋತ್ತಮ ।
ದ್ವೀಪಾನಾಂ ಚ ಕರೈಃ ಕಾರ್ಯಂ ತಥಾ ಭೂಮಂಡಲಂ ಶುಭಂ ॥ ೫೨ ॥

... ... ರಾಜಂಸ್ತಥಾ ಶಿಖರಪಾಣಯಃ ।
ರತ್ನಪಾತ್ರಕರಾಃ ಕಾರ್ಯಾಃ ಸಾಗರಾ ಮನುಜೋತ್ತಮ ॥ ೫೩ ॥

ಸಮುದ್ರಾಣಾಂ ಪ್ರಭಾಸ್ಥಾನೇ ಸಲಿಲಾನಿ ಪ್ರದರ್ಶಯೇತ್ ।
ಆಯುಧಾನಾಂ ಚ ತಚ್ಚಿಹ್ನಂ ಕಿಂಚಿನ್ಮೂರ್ಧನಿ ದರ್ಶಯೇತ್ ॥ ೫೪ ॥

ನಿಧೀನಾಂ ದರ್ಶಯೇತ್ಕುಂಭಂ ಶಂಖಂ ಶಂಖಸ್ಯ ದರ್ಶಯೇತ್ ।
ಪದ್ಮಂ ಪದ್ಮಸ್ಯ ರಾಜೇಂದ್ರ ಶೇಷಾಣಾಮನುರೂಪತಃ ॥ ೫೫ ॥

---

೫೧-೫೩ ಶರೀರದೊಡನೆ ನದಿಗಳನ್ನು ಬರೆಯುವಾಗ ಆ ನದಿಗಳಿಗೆ ವಾಹನಗಳನ್ನೂ ತೋರಿಸಿ ಬರೆಯಬೇಕು ಮತ್ತು ಆ ನದಿಗಳು ಬಗ್ಗಿದ ಮಂಡಿಯಿಂದ ಕೂಡಿಯೂ, ಕೈಗಳಲ್ಲಿ ಪೂರ್ಣಕುಂಭವನ್ನು ಧರಿಸಿಯೂ ಇರುವಂತೆ ಚಿತ್ರಿಸಬೇಕು ಪರ್ವತಗಳಿಗೆ ಮೇಲ್ಭಾಗದಲ್ಲಿ ಶಿಖರವನ್ನು ತೋರ್ಪಡಿಸಿ ಚಿತ್ರಿಸಬೇಕು ದ್ವೀಪಗಳನ್ನು ಬರೆಯುವಾಗ ಕೈಗಳಲ್ಲಿ ಭೂಮಂಡಲವನ್ನು ಧರಿಸಿರುವಂತೆ ಚಿತ್ರಿಸಬೇಕು ಸಮುದ್ರಗಳನ್ನು ಬರೆಯುವಾಗ ಅವುಗಳ ಕೈಯಲ್ಲಿ ರತ್ನಪಾತ್ರೆಗಳಿರುವಂತೆ ಚಿತ್ರಿಸಬೇಕು

೫೪-೫೬ ಸಮುದ್ರಗಳಿಗೆ ಪ್ರಭೆಯ ಸ್ಥಾನದಲ್ಲಿ ಜಲವನ್ನೇ ಚಿತ್ರಿಸಿ ತೋರಿಸಬೇಕು ಆಯುಧಗಳ ಆಯಾಯ ಚಿಹ್ನೆಯನ್ನು ಸ್ವಲ್ಪಮಟ್ಟಿಗೆ ಮೇಲ್ಭಾಗದಲ್ಲಿ ಬರೆದು ತೋರಿಸಬೇಕು ನಿಧಿಗಳನ್ನು ಬರೆಯುವಾಗ ಕುಂಭಗಳನ್ನು ಚಿತ್ರಿಸಬೇಕು ಶಂಖಕ್ಕೆ ಶಂಖವನ್ನೂ, ಪದ್ಮಕ್ಕೆ ಪದ್ಮವನ್ನೂ ಇತರ ನಿಧಿಗಳಿಗೆ ಅನುಗುಣವಾದ ಚಿಹ್ನೆಗಳನ್ನೂ ಪ್ರದರ್ಶಿಸಬೇಕು ಕಾರ್ಯವಿಶೇಷಗಳನ್ನು ಚಿತ್ರಿಸುವಾಗ ತನ್ನ

ಕಾರ್ಯೇಸ್ಯಾವಯವಾಃ ಕಾರ್ಯಾಃ ಸ್ವೋದ್ದೇಶಸದೃಶಾಃ ಪೃಥಕ್ ।
ದಿವ್ಯಾನಾಂ ದರ್ಶಯೇಚ್ಚಿಹ್ನಮಕ್ಷಮಾಲಾಂ ಚ ಪುಸ್ತಕಂ ॥ ೫೬ ॥

ಅತಃ ಪರಂ ಪ್ರವಕ್ಷ್ಯಾಮಿ ರೂಪಂ ಯದ್ಯಸ್ಯ ದೃಶ್ಯತೇ ।
ಆಕಾಶಂ ದರ್ಶಯೇದ್ವಿದ್ವಾನ್ ವಿವರ್ಣ ಖಗಸಂಕುಲಂ । ೫೭ ॥

ತಥೈವ ದರ್ಶಯೇದ್ರಾಜಂಸ್ತಾರಕಾ ಮಂಡಿತಾಂ ದಿವಂ ।
ಭೂಮಿಂ ಚ ಜಾಂಗಲಾನೂಪಮಿಶ್ರಾಂ ಸ್ವೈಃ ಸ್ವೈಃ ತಥಾ ಗುಣೈಃ ॥ ೫೮ ॥

ಪರ್ವತಂ ತು ಶಿಲಾಜಾಲೈಃ ಶಿಖರೈಃ ಧಾತುಭಿರ್ದ್ರುಮೈಃ ।
ನಿರ್ಝರೈಃ ಭುಜಗೈಶ್ಚೈವ ದರ್ಶಯೇನ್ನೃಪಸತ್ತಮ ॥ ೫೯ ॥

ವನಂ ನಾನಾವಿಧೈಃ ವೃಕ್ಷೈಃ ವಿಹಂಗೈಃ ಶ್ವಾಪದೈಸ್ತಥಾ ।
ತೋಯಂ ಚ ದರ್ಶಯೇದ್ವಿದ್ವಾನನಂತೈರ್ಮತ್ಸ್ಯಕಚ್ಛಪೈಃ ॥ ೬೦ ॥

---

ಉದ್ದೇಶಕ್ಕೆ ತಕ್ಕಂತೆ ಆ ಕಾರ್ಯಾವಯವಗಳನ್ನು ಬೇರೆಬೇರೆಯಾಗಿ ತೋರಿಸ ಬೇಕು ದಿವ್ಯಪುರುಷರನ್ನು ಚಿತ್ರಿಸುವಾಗ ಅಕ್ಷಮಾಲಿಕೆಯನ್ನೂ ಪುಸ್ತಕವನ್ನೂ ಮುಖ್ಯ ಚಿಹ್ನೆಯನ್ನಾಗಿ ತೋರ್ಪಡಿಸಬೇಕು

೫೭-೫೯ ಇನ್ನು ಮುಂದೆ ಯಾವಯಾವ ರೂಪದಿಂದ ಬರೆಯಬೇಕೆಂಬು ದನ್ನು ಹೇಳುತ್ತೇನೆ —ಆಕಾಶವನ್ನು ಬರೆಯುವಾಗ ಸ್ಪಷ್ಟವಾದ ಯಾವ ವರ್ಣವೂ ತೋರದಂತೆಯೂ, ಪಕ್ಷಿಗಳಿಂದ ಕೂಡಿರುವಂತೆಯೂ ಚಿತ್ರಿಸಬೇಕು. ಹಾಗೆಯೇ ನಕ್ಷತ್ರಗಳಿಂದ ಕೂಡಿರುವಂತೆ ಚಿತ್ರಿಸಬೇಕು. ಭೂಮಿಯನ್ನು ಬರೆಯವಾಗ ಮರು ಭೂಮಿ, (ಕಾಡುಭೂಮಿ) ದ್ವೀಪಗಳು ಇವುಗಳಿಂದಲೂ ಆಯಾಯ ಗುಣವಿಶೇಷ ಗಳಿಂದಲೂ ಕೂಡಿರುವಂತೆ ಚಿತ್ರಿಸಬೇಕು ಪರ್ವತವನ್ನು ಕಲ್ಲುಬಂಡೆಗಳಿಂದಲೂ, ಶಿಖರಗಳಿಂದಲೂ, ಧಾತುಗಳಿಂದಲೂ, ಮರಗಳಿಂದಲೂ, ಗಿರಿನದಿಗಳಿಂದಲೂ, ಸರ್ಪಗಳಿಂದಲೂ ಕೂಡಿರುವಂತೆ ಚಿತ್ರಿಸಬೇಕು

೬೦-೬೨. ಕಾಡನ್ನು ಬರೆಯುವಾಗ ನಾನಾವಿಧವಾದ ಮರಗಳಿಂದಲೂ, ಪಕ್ಷಿಗಳಿಂದಲೂ, ಹುಲಿ ಮೊದಲಾದ ಕಾಡುಮೃಗಗಳಿಂದಲೂ, ಕೂಡಿರುವಂತೆ ಚಿತ್ರಿಸಬೇಕು. ಜಲರಾಶಿಯನ್ನು ಬರೆಯುವಾಗ ಅಪರಿಮಿತಗಳಾದ ಮೀನು,

ಪದ್ಮಾಕ್ಷೈಶ್ಚ ಮಹಾರಾಜ ತಥಾನ್ಯೈಃ ಜಲಜೈರ್ಗುಣೈಃ ।
ದೇವತಾವೇಶ್ಮಭಿಃ ಚಿತ್ರೈಃ ಪ್ರಾಸಾದಾಪಣವೇಶ್ಮಭಿಃ ॥ ೬೧ ॥

ನಗರಂ ದರ್ಶಯೇದ್ವಿದ್ವಾನ್ ರಾಜಮಾರ್ಗೈಶ್ಚ ಶೋಭನೈಃ ।
ವಸತ್ಯಾ ದರ್ಶಯೇದ್ಗ್ರಾಮಂ ಕಿಂಚಿದುದ್ಯಾನಭೂಷಿತಂ ॥ ೬೨ ॥

ಸರ್ವೇಷಾಮಥ ದುರ್ಗಾಣಾಂ ಕರ್ತವ್ಯಂ ದರ್ಶನಂ ತಥಾ ।
ಸ್ವಭೂಮಿವಿನಿವೇಶೇನ ವಪ್ರಾಟ್ಟಾಲಕಪರ್ವತೈಃ ॥ ೬೩ ॥

ಪಣ್ಯಯುಕ್ತಾಸ್ತು ಕರ್ತವ್ಯಾಸ್ತಥೈವಾಪಣಭೂಮಯಃ ।
ಅಪಾನಭೂಮಿಃ ಕರ್ತವ್ಯಾ ಪಾನಯುಕ್ತ ನರಾಕುಲಾ ॥ ೬೪ ॥

ಉತ್ತರೀಯ ವಿಹೀನಾಂಶ್ಚ ದ್ಯೂತಸಕ್ತಾನ್ ಪ್ರದರ್ಶಯೇತ್ ।
ಜಿತಾನ್ ಶೋಕಸಮಾಯುಕ್ತಾನ್ ಹೃಷ್ಟಾನ್ ಲಬ್ಧಜಯಾಂಸ್ತಥಾ ॥ ೬೫ ॥

---

ಆಮೆ ಮೊದಲಾದ ಜಲಜಂತುಗಳಿಂದಲೂ, ಪದ್ಮ ಬೀಜಗಳಿಂದಲೂ ಇತರ ಜಲ ಧರ್ಮಗಳಿಂದಲೂ ಕೂಡಿರುವಂತೆ ಚಿತ್ರಿಸಬೇಕು ನಗರಗಳನ್ನು ಬರೆಯುವಾಗ ಚಿತ್ರವಿಚಿತ್ರವಾದ ದೇವಾಲಯಗಳಿಂದಲೂ, ಉಪ್ಪರಿಗೆ, ಅಂಗಡಿಬೀದಿ, ಮನೆಗಳು, ದೊಡ್ಡದೊಡ್ಡ ರಾಜಬೀದಿಗಳು ಇವುಗಳಿಂದ ಕೂಡಿರುವಂತೆ ಚಿತ್ರಿಸಬೇಕು ಜನಗಳ ವಾಸಸ್ಥಾನಗಳಿಂದಲೂ, ಸಾಮಾನ್ಯವಾದ ಉದ್ಯಾನಗಳಿಂದಲೂ ಕೂಡಿರುವಂತೆ ಗ್ರಾಮಗಳನ್ನು ಚಿತ್ರಿಸಬೇಕು

೬೩-೬೫. ದುರ್ಗಗಳನ್ನು ಬರೆಯುವಾಗ ಆಯಾಯ ಭೂಮಿಯ ಸನ್ನಿವೇಶ ವನ್ನೂ ಪ್ರಾಕಾರ, ಅಂತಸ್ತು, ಪರ್ವತ ಇವುಗಳೊಡನೆ ತೋರುವಂತೆ ಚಿತ್ರಿಸಬೇಕು ಅಂಗಡಿಯ ಬೀದಿಗಳನ್ನು ಆಯಾಯ ಮಾರಾಟಮಾಡುವ ಪದಾರ್ಥಗಳಿಂದ ಕೂಡಿರುವಂತೆ ಚಿತ್ರಿಸಬೇಕು. ಮದ್ಯದ ಅಂಗಡಿಗಳನ್ನು ಬರೆಯುವಾಗ ಪಾನದಲ್ಲಿ ಆಸಕ್ತರಾಗಿರುವ ಜನಗಳಿಂದ ನಿಬಿಡವಾಗಿರುವಂತೆ ಚಿತ್ರಿಸಬೇಕು ಜೂಜಾಟದಲ್ಲಿ ಆಸಕ್ತರಾಗಿರುವವರನ್ನು ಉತ್ತರೀಯವಿಲ್ಲದೆ ತೋರುವಂತೆ ಚಿತ್ರಿಸಬೇಕು ಅದ ರಲ್ಲಿಯೂ ಸೋತವರು ದುಃಖದಿಂದ ಕೂಡಿರುವಂತೆಯೂ, ಗೆದ್ದವರು ವಿಜಯದಿಂದ ಸಂತುಷ್ಟರಾಗಿರುವಂತೆಯೂ ತೋರ್ಪಡಿಸಿ ಚಿತ್ರಿಸಬೇಕು.

ಚತುರಂಗ ಬಲೋಪೇತಾಂ ಪ್ರಹರದ್ಭಿರ್ನರೈರ್ಯುತಾಂ ।
ಮೃತಾವಯವರಕ್ತಾಢ್ಯಾಂ ರಣಭೂಮಿಂ ಪ್ರದರ್ಶಯೇತ್ ॥ ೬೬ ॥

ಚಿತಾಕುಣಪಸಂಯುಕ್ತಂ ಶ್ಮಶಾನಂ ಚ ತಥಾ ನೃಪ ।
ಯುಕ್ತಂ ಸಭಾರೈರುಷ್ಟ್ರಾದ್ಯೈರ್ಮಾರ್ಗಂ ಸಾರ್ಥಂ ಪ್ರದರ್ಶಯೇತ್ ॥ ೬೭ ॥

ಸಚಂದ್ರಗ್ರಹನಕ್ಷತ್ರಾಂ ತಥಾ ದರ್ಶಿತತಾಕಿಕಾಂ ।
ಆಸನ್ನತಸ್ಕರಾಂ ರಾತ್ರಿಂ ದರ್ಶಯೇತ್ಸುಪ್ತಮಾನವಾಂ ॥ ೬೮ ॥

ಪ್ರಾಗ್ರಾತ್ರೇ ದರ್ಶಯೇತ್ತತ್ರ ತಥಾ ಚೈವಾಭಿಸಾರಿಕಾಂ ।
ಸಾರುಣೋ ಮ್ಲಾನದೀಪಶ್ಚ ಪ್ರತ್ಯೂಷೋ ರುತಕುಕ್ಕುಟಃ ॥ ೬೯ ॥

ಕರ್ಮವ್ಯಗ್ರಜನಪ್ರಾಯಃ ಕರ್ತವ್ಯೋ ವಾ ನರಸ್ತಥಾ ।
ದ್ವಿಜೈರ್ನಿಯಮಿಭಿರ್ಯುಕ್ತಾಂ ರಕ್ತಾಂ ಸಂಧ್ಯಾಂ ಪ್ರದರ್ಶಯೇತ್ ॥ ೭೦ ॥

ತಮಸೋ ದರ್ಶನಂ ಕಾರ್ಯಂ ವಾಸೇ ಸಂಸರ್ಪಕೈರ್ನರೈಃ ।
ಕುಮುದಾನಾಂ ವಿಕಾಸೇ ಚ ಜ್ಯೋತ್ಸ್ನಾಂ ಚಂದ್ರೇ ಪ್ರದರ್ಶಯೇತ್ ॥

---

೬೬-೬೮ ಯುದ್ಧಭೂಮಿಯನ್ನು ಬರೆಯುವಾಗ ಅದು ಚತುರಂಗ ಸೈನ್ಯದಿಂದ ಕೂಡಿಯೂ, ಪರಸ್ಪರವಾಗಿ ಹೊಡೆದಾಡುವ ಭಟರಿಂದ ಕೂಡಿಯೂ, ಮೃತರಾದವರ ಅವಯವಗಳಿಂದಲೂ, ರಕ್ತದಿಂದಲೂ ಕೂಡಿರುವಂತೆ ಚಿತ್ರಿಸಬೇಕು ಶ್ಮಶಾನವನ್ನು ಚಿತಾಗ್ನಿ ಮತ್ತು ಅಲ್ಲಿರುವ ಶವಗಳಿಂದ ಕೂಡಿಯೂ ಇರುವಂತೆ ಚಿತ್ರಿಸಬೇಕು ಜನಗಳ ಗುಂಪಿನಿಂದಲೂ, ಭಾರವನ್ನು ಹೊತ್ತಿರುವ ಒಂಟೆ ಮೊದಲಾದ ವಾಹನಗಳಿಂದ ಕೂಡಿಯೂ ಇರುವಂತೆ ಮಾರ್ಗವನ್ನು ಚಿತ್ರಿಸಬೇಕು ರಾತ್ರಿಯನ್ನು ಬರೆಯುವಾಗ ಚಂದ್ರ, ಗ್ರಹ, ನಕ್ಷತ್ರಗಳು ಕಾಣಿಸುವಂತೆಯೂ, ಸನ್ನಿಹಿತರಾದ ಕಳ್ಳಕಾಕರಿಂದ ಕೂಡಿಯೂ, ನಿದ್ರಿಸುವ ಜನಗಳಿಂದ ಕೂಡಿಯೂ ಇರುವಂತೆ ಲೋಕಾನುಸಾರವಾಗಿ ಚಿತ್ರಿಸಬೇಕು

೬೯-೭೧ ಅಂತಹ ರಾತ್ರಿಯ ಪ್ರಾರಂಭ ಕಾಲದಲ್ಲಿ ಅಭಿಸಾರಿಕೆಗಳನ್ನೂ ತೋರ್ಪಡಿಸಿ ಚಿತ್ರಿಸಬೇಕು ಬೆಳಗಿನ ಜಾವವನ್ನು ಬರೆಯುವಾಗ ಅರುಣೋದಯದಿಂದ ಕೂಡಿಯೂ, ಕಾಂತಿಹೀನವಾದ ದೀಪಗಳಿಂದಲೂ, ಕೋಳಿಯ ಕೂಗಿದಿಂದಲೂ ಕೂಡಿರುವಂತೆ ಚಿತ್ರಿಸಬೇಕು ಆ ಸಮಯದಲ್ಲಿ ಆಯಾಯ ಕೆಲಸದಲ್ಲಿ ಆಸಕ್ತರಾದ ಜನರನ್ನೂ ಚಿತ್ರಿಸಬೇಕು. ನಿಯಮಶಾಲಿಗಳಾದ ಬ್ರಾಹ್ಮಣರಿಂದ ಕೂಡಿರು

**ದರ್ಶಯೇತ್ಸರಜಸ್ಕಾಂ ಚ ತಯ್ಯಾಂ ವರ್ಣೋತ್ಕರಾವೃತಾಂ ।**
**ಸದ್ವೃತ್ತಮಾನವಪ್ರಾಯಾಂ ವೃಷ್ಟಿಂ ವೃಷ್ಟ್ಯಾಂ ಪ್ರದರ್ಶಯೇತ್ ॥ ೭೨ ॥**

**ಪ್ರಾಣಿನಾಂ ಕ್ಲೇಶತಪ್ತಾನಾಮಾದಿತ್ಯೇನ ನಿದರ್ಶನಂ ।**
**ವೃಕ್ಷೈರ್ವಸಂತಜೈಃ ಪುಲ್ಲೈಃ ಕೋಕಿಲಾಮಧುಪೋತ್ಕಟೈಃ ॥ ೭೩ ॥**

**ಪ್ರಹೃಷ್ಟನರನಾರೀಕಂ ವಸಂತಂ ಚ ಪ್ರದರ್ಶಯೇತ್ ।**
**ಕ್ಲಾಂತೈಃ ಕಾರ್ಯಂ ನರೈರ್ಗ್ರೀಷ್ಮಂ ಮೃಗೈಃ ಛಾಯಾಗತೈಸ್ತಥಾ ॥ ೭೪ ॥**

**ಮಹಿಷೈಃ ಪಂಕಮಲಿನೈಸ್ತಥಾ ಶುಷ್ಕಜಲಾಶಯೈಃ ।**
**ವಿಹಂಗೈಃ ದ್ರುಮಸಂಲೀನೈಃ ಸಿಹ್ಮವ್ಯಾಘ್ರೈಃ ಗುಹಾಗತೈಃ ॥ ೭೫ ॥**

ವಂತೆಯೂ ರಕ್ತವರ್ಣರಂಜಿತವಾಗಿಯೂ ಇರುವಂತೆ ಸಂಧ್ಯಾಕಾಲಗಳನ್ನು ಚಿತ್ರಿಸಬೇಕು ಮನಯಲ್ಲಿ ಮುಟ್ಟಿನಡೆಯುವ ಜನಗಳನ್ನು ತೋರ್ಪಡಿಸಿ ಕತ್ತಲೆಯನ್ನು ಚಿತ್ರಿಸಬೇಕು ಚಂದ್ರನನ್ನೂ ಕುಮುದಪುಷ್ಪಗಳನ್ನೂ ತೋರ್ಪಡಿಸಿ ಬೆಳದಿಂಗಳನ್ನು ಚಿತ್ರಿಸಬೇಕು.

೭೨–೭೫ ಹಾಸಿಗೆಯನ್ನು ಧೂಳಿನಿಂದ ಕೂಡಿಯೂ, ನಾನಾವರ್ಣದಿಂದ ಕೂಡಿಯೂ ಇರುವಂತೆ ಚಿತ್ರಿಸಬೇಕು ಸದಾಚಾರದಿಂದಿರುವ ಮಹಾತ್ಮರ ನಡವಳಿಕೆಯಿಂದ ಮಳೆಯನ್ನು ತೋರ್ಪಡಿಸಿ ಚಿತ್ರಿಸಬೇಕು ಕ್ಲೇಶದಿಂದ ಸಂತಪ್ತರಾದ ಪ್ರಾಣಿಗಳ ಸಂತಾಪವನ್ನು. ಸೂರ್ಯನನ್ನು ನಿರ್ದೇಶಿಸಿ ಚಿತ್ರಿಸಬೇಕು ವಸಂತ ಋತುವಿನಲ್ಲಿ ಚಿಗುರಿ ಹೂವಾಗಿರುವ ಗಿಡಮರಬಳ್ಳಿಗಳಿಂದಲೂ ಕೋಗಿಲೆ ದುಂಬಿ ಇವುಗಳ ಉತ್ಕಟವಿಹಾರದಿಂದಲೂ, ಸಂತುಷ್ಟರಾದಸ್ತ್ರೀಪುರುಷರುಗಳಿಂದಲೂ ವಸಂತಋತುವನ್ನು ತೋರ್ಪಡಿಸಿ ಚಿತ್ರಿಸಬೇಕು ಗ್ರೀಷ್ಮಋತುವನ್ನು ಬಳಲಿದ ಜನಗಳಿಂದಲೂ, ಮರದ ನೆರಳಿನಲ್ಲಿ ಮಲಗಿರುವ ಮೃಗಗಳಿಂದಲೂ, ಕೆಸರಿನಿಂದ ಕೂಡಿ ಮಲಿನವಾಗಿರುವ ಎಮ್ಮೆಗಳಿಂದಲೂ, ಒಣಗಿ ಹೋಗಿರುವ ಜಲಾಶಯಗಳಿಂದಲೂ, ಮರಗಳ ಪೊಟ್ಟರೆಗಳಲ್ಲಿಯೂ ಸ್ಕಂಧಗಳಲ್ಲಿಯೂ ಅಡಗಿಕೊಂಡಿರುವ ಪಕ್ಷಿಗಳಿಂದಲೂ ಗುಹೆಗಳಲ್ಲಿ ಲೀನವಾಗಿರುವ ಸಿಂಹವ್ಯಾಘ್ರಾದಿಗಳಿಂದಲೂ ತೋರ್ಪಡಿಸಬೇಕು

**ತೋಯನಮ್ರಘನೈರ್ಯುಕ್ತಂ ಸೇಂದ್ರಚಾಪವಿಭೂಷಣೈಃ ।**
**ವಿದ್ಯುದ್ವಿದ್ಯೋತನೈರ್ಯುಕ್ತಾಂ ಪ್ರಾವೃಷಂ ದರ್ಶಯೇತ್ತಥಾ ॥ ೭೬ ॥**

**ಸಫಲದ್ರುಮಸಂಯುಕ್ತಾಂ ಪಕ್ವಸಸ್ಯಾಂ ವಸುಂಧರಾಂ ।**
**ಸಹಂಸಪದ್ಮಸಲಿಲಾಂ ಶರದಂ ತು ತಥಾ ಲಿಖೇತ್ ॥ ೭೭ ॥**

**ಸಬಾಷ್ಪಸಲಿಲಸ್ಥಾನಂ ತಥಾ ಲೂನವಸುಂಧರಂ ।**
**ಸನೀಹಾರದಿಗಂತಂ ಚ ಹೇಮಂತಂ ದರ್ಶಯೇದ್ಬುಧಃ ॥ ೭೮ ॥**

**ಹೃಷ್ಟವಾಯಸಮಾತಂಗಂ ಶೀತಾರ್ತಜನಸಂಕುಲಂ ।**
**ಶಿಶಿರಂ ತು ಲಿಖೇದ್ವಿದ್ವಾನ್ ಹಿಮಚ್ಛನ್ನದಿಗಂತರಂ ॥ ೭೯ ॥**

**ವೃಕ್ಷಾಣಾಂ ಪುಷ್ಪಫಲತಃ ಪ್ರಾಣಿನಾಂ ಮದತಸ್ತಥಾ ।**
**ಋತೂನಾಂ ದರ್ಶನಂ ಕಾರ್ಯಂ ಲೋಕಾನ್ ದೃಷ್ಟ್ವಾ ನರಾಧಿಪ ॥ ೮೦ ॥**

---

೭೬–೭೯. ವರ್ಷಾಕಾಲವನ್ನು ನೀರಿನಿಂದ ತುಂಬಿ ಮಳೆಗರೆಯಲು ಜೋಲಾಡುವ ಮೋಡಗಳಿಂದಲೂ, ಆ ಮೋಡಗಳಲ್ಲಿ ಅಲಂಕಾರ ರೂಪದಿಂದಿರುವ ಕಾಮನಬಿಲ್ಲಿನಿಂದಲೂ, ಮಿಂಚಿನ ಸ್ಫುರಣಗಳಿಂದಲೂ ತೋರಿಬರುವಂತೆ ಚಿತ್ರಿಸಬೇಕು. ಫಲವೃಕ್ಷಗಳಿಂದಲೂ, ಪಕ್ವವಾದ ಸಸ್ಯಗಳಿಂದ ಕೂಡಿರುವ ಭೂಮಿಗಳಿಂದಲೂ, ಹಂಸಪದ್ಮಗಳೊಡನೆ ರಮ್ಯವಾಗಿರುವ ಜಲಾಶಯದ ನೀರಿನಿಂದಲೂ ಶರದೃತುವನ್ನು ತೋರ್ಪಡಿಸಿ ಚಿತ್ರಿಸಬೇಕು. ಜಲಾಶಯಗಳಲ್ಲಿ ಮೇಲ್ಭಾಗದಲ್ಲಿ ಉಂಟಾಗುವ ಧೂಮಗಳಿಂದಲೂ, ಕುಯಿದ ಪೈರುಗಳುಳ್ಳ ಭೂಭಾಗದಿಂದಲೂ, ಹಿಮದಿಂದ ಮುಸುಕಿರುವ ದಿಗಂತಗಳಿಂದಲೂ ಹೇಮಂತಋತುವನ್ನು ತೋರ್ಪಡಿಸಿ ಚಿತ್ರಿಸಬೇಕು ಸಂತೋಷದಿಂದ ಕೂಡಿರುವ ಕಾಗೆ, ಆನೆ ಇವುಗಳಿಂದಲೂ ಶೀತದಿಂದ ದುಃಖಿಸುತ್ತಿರುವ ಜನ ಸಮೂಹದಿಂದಲೂ ಹಿಮದಿಂದ ಕವಿದಿರುವ ದಿಕ್ಕುಗಳಿಂದಲೂ ಶಿಶಿರಋತುವನ್ನು ತೋರ್ಪಡಿಸಿ ಚಿತ್ರಿಸಬೇಕು

೮೦–೮೪ ವೃಕ್ಷಗಳ ಫಲಪುಷ್ಪಾದಿಗಳಿಂದಲೂ, ಪ್ರಾಣಿಗಳ ಮದವೇ ಮೊದಲಾದ ವಿಕಾರಗಳಿಂದಲೂ ಸಹ ಲೋಕಪ್ರಸಿದ್ಧಿಗೆ ಅನುಗುಣವಾಗಿ ಆಯಾಯ ಋತುಗಳ ಚಿತ್ರವನ್ನು ನಿರ್ಮಿಸಬೇಕು ನಾನು ಹಿಂದೆ ಹೇಳಿರುವ ರಸಭಾವಾದಿಗಳನ್ನೂ ವಿಮರ್ಶಿಸಿ ನೃತ್ತವಿಧಾನದಲ್ಲಿ ಹೇಳಿರುವ ಭಾವಗಳನ್ನೂ ಆಯಾಯ

ರಸಭಾವಾಶ್ಚ ಕರ್ತವ್ಯಾ ಯಥಾಪೂರ್ವಮುದಾಹೃತಾಃ ।
ಯಥಾಯೋಗಂ ತು ಯುಂಜೀತ ನೃತ್ತಾಭಿಹಿತಮತ್ರ ಚ ॥ ೮೧ ॥

ಶುಷ್ಕಂ ವರ್ತನಯಾ ವಸ್ತು ಚಿತ್ರಂ ತನ್ಮಧ್ಯಮಂ ಸ್ಮೃತಂ ।
ಶುಷ್ಕಾದ್ರ್ರಮಧಮಂ ಪ್ರೋಕ್ತಂ ಚಾದ್ರ್ರಮೇವ ತಥೋತ್ತಮಂ ॥ ೮೨ ॥

ಯಥಾದೇಹಂ ಯಥಾಕಾಲಂ ಯಥಾದೇಶಂ ಯಥಾ ವಯಃ ।
ಕ್ರಿಯಮಾಣಂ ಭವೇಚ್ಛ್ಲಾಘ್ಯಂ ವಿಪರೀತಮತೋಽನ್ಯಥಾ ॥ ೮೩ ॥

ಇತಿ ವಿಚಕ್ಷಣಬುದ್ಧಿವಿಕಲ್ಪಿತೈಃ
ಕರಣಕಾಂತಿವಿಲಾಸರಸಾದಿಭಿಃ ।
ಲಿಖಿತಮೀಕ್ಷಣಲೋಭನಮಾದರಾ-
ದ್ಭವತಿ ಚಿತ್ರಮಭೀಪ್ಸಿತಕಾಮದಂ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ರೂಪನಿರ್ಮಾಣಂ ನಾಮ
ದ್ವಿಚತ್ವಾರಿಂಶತ್ತಮೋಽಧ್ಯಾಯಃ

---

ಪರಿಸ್ಥಿತಿಗೆ ತಕ್ಕಂತೆ ಯಥಾರ್ಥವಾಗಿ ಯೋಜಿಸಬೇಕು ಹೊಳಪಾದ ವರ್ಣ ವಿನ್ಯಾಸದಿಂದ ರಹಿತವಾದ ಚಿತ್ರವು ಶುಷ್ಕವೆನಿಸುತ್ತದೆ ಅದು ಮಧ್ಯಮ ವರ್ಗಕ್ಕೆ ಸೇರಿದುದು ಒಂದು ಭಾಗದಲ್ಲಿ ಅಂತಹ ಶುಷ್ಕವೂ, ಮತ್ತೊಂದು ವಿಭಾಗದಲ್ಲಿ ಹೊಳಪಾದ ವರ್ಣವಿನ್ಯಾಸವೂ ಇದ್ದಲ್ಲಿ ಅದು ಶುಷ್ಕಾರ್ದ್ರವೆನಿಸುತ್ತದೆ ಅದು ಅಧಮವಾದದ್ದು, ಎಲ್ಲಾ ಭಾಗದಲ್ಲಿಯೂ ಅಂತಹ ಹೊಳಪು ಇದ್ದಲ್ಲಿ ಅದು ಆದ್ರ್ರ ವೆನಿಸುತ್ತದೆ ಇದೇ ಉತ್ತಮವಾದದ್ದು ಆಯಾಯ ದೇಹ ಬಂಧಕ್ಕೆ ತಕ್ಕಂತೆಯೂ ಕಾಲ, ದೇಶ, ವಯಸ್ಸು ಇವುಗಳಿಗೆ ತಕ್ಕಂತೆಯೂ ಬರೆಯುವ ಚಿತ್ರವು ಶ್ಲಾಘ್ಯ ವಾಗುತ್ತದೆ ಹಾಗಿಲ್ಲದಿದ್ದಲ್ಲಿ ಅದು ತ್ಯಾಜ್ಯವಾಗುತ್ತದೆ ಈ ರೀತಿ ಬುದ್ಧಿಶಾಲಿ ಯಾದ ಚಿತ್ರಕಾರನ ಬುದ್ಧಿಯ ವಿಕಾಸದಿಂದಲೂ ಅದರಿಂದುಂಟಾದ, ಚಿತ್ರಿಸಿದ ವಸ್ತುವಿನ ಅವಯವದ ಸನ್ನಿವೇಶ, ಕಾಂತಿ, ವಿಲಾಸ, ರಸಭಾವಾದಿಗಳಿಂದಲೂ ಬರೆದ ಚಿತ್ರವು ನೇತ್ರಾಕರ್ಷಕವೂ ಇಷ್ಟಪ್ರಾಪ್ತಿಗೆ ಸಾಧಕವೂ ಆಗುತ್ತದೆ ಆದುದ ರಿಂದ ಅಂತಹ ಯಶಃಪ್ರದವಾದ ಚಿತ್ರವನ್ನು ರಚಿಸುವುದರಲ್ಲಿ ಪ್ರಯತ್ನಿಸಬೇಕು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯ ಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ರೂಪನಿರ್ಮಾಣವೆಂಬ ನಲವತ್ತೆರಡನೆಯ
ಅಧ್ಯಾಯ ಮುಗಿದಿದೆ.

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ತ್ರಿಚತ್ವಾರಿಂಶತ್ತಮೋಽಧ್ಯಾಯಃ ||

|| ಮಾರ್ಕಂಡೇಯ ಉವಾಚ ||

**ಶೃಂಗಾರಹಾಸ್ಯಕರುಣವೀರರೌದ್ರಭಯಾನಕಾಃ |**
**ಬೀಭತ್ಸಾದ್ಭುತಶಾನ್ತಾಶ್ಚ ನವ ಚಿತ್ರರಸಾಃ ಸ್ಮೃತಾಃ ||೧||**

**ತತ್ರ ಯತ್ಕಾಂತಿಲಾವಣ್ಯಲೇಖಾಮಾಧುರ್ಯಸುಂದರಂ |**
**ವಿದಗ್ಧವೇಶಾಭರಣಂ ಶೃಂಗಾರೇ ತು ರಸೇ ಭವೇತ್ ||೨||**

**ಯತ್ಕುಬ್ಜವಾಮನಪ್ರಾಯವಿಕಾಷದ್ವಿಕಟದರ್ಶನಂ |**
**ವೃಥಾ ಚ ಹಸ್ತಂ ಸಂಕೋಚ್ಯ ತತ್ಸ್ಯಾದ್ಧಾಸಕರಂ ರಸೇ ||೩||**

---

### ನಲವತ್ತಮೂರನೆಯ ಅಧ್ಯಾಯ.

೧-೩. ಮಾರ್ಕಂಡೇಯರು ಹೇಳುತ್ತಾರೆ —ಶೃಂಗಾರ, ಹಾಸ್ಯ, ಕರುಣ ವೀರ, ರೌದ್ರ, ಭಯಾನಕ, ಬೀಭತ್ಸ, ಅದ್ಭುತ, ಶಾನ್ತ ಈ ಒಂಭತ್ತೂ ಚಿತ್ರದಲ್ಲಿ ಉಪಯೋಗಿಸಲ್ಪಡುವರಸಗಳೆಂದು ಹೇಳಲ್ಪಟ್ಟಿವೆ ಇವುಗಳಲ್ಲಿ ಕಾಂತಿ, ಲಾವಣ್ಯಾತಿಶಯ, ಮಾಧುರ್ಯ, ಸೌಂದರ್ಯ, ಚಾತುರ್ಯಕ್ಕೆ ತಕ್ಕ ವೇಷ, ಆಭರಣಗಳು ಇವುಗಳಿಂದ ಕೂಡಿದ ಚಿತ್ರವು ಶೃಂಗಾರರಸಕ್ಕೆ ವ್ಯಂಜಕವಾಗುತ್ತದೆ ಕುಬ್ಜರಂತೆಯೂ, ವಾಮನರಂತೆಯೂ ಇದ್ದು, ಸ್ವಲ್ಪ ಮುಖವಿಕಾರವನ್ನು ತೋರಿಸುತ್ತಾ ನಿಷ್ಫಲವಾದ ಹಸ್ತಸಂಕೋಚಾದಿ ಚೇಷ್ಟೆಗಳಿಂದ ಕೂಡಿರುವ ಚಿತ್ರದ ರೂಪವು ಹಾಸ್ಯರಸಕ್ಕೆ ಪ್ರಕಾಶವಾಗುತ್ತದೆ.

ಯಾಚ್ಞಾವಿರಹಸಂತಾಪೇ ವಿಕ್ರಯವ್ಯಸನಾದಿಷು ।
ಅನುಕಂಪಿತಕಂ ಯತ್ಸ್ಯಾಲ್ಲಿಖೇತ್ತತ್ಕರುಣಾರಸೇ ॥ ೪ ॥

ಪಾರುಷ್ಯವಿಕೃತಿಕ್ರೋಧ ವಿಪತ್ತ್ಯರ್ಥಾನುದೂಷಣಂ ।
ದೀಪ್ತಶಸ್ತ್ರಾಭರಣವತ್ಕೃತಂ ರೌದ್ರರಸೇ ಭವೇತ್ ॥ ೫ ॥

ಪ್ರತಿಜ್ಞಾಗರ್ಭಶೌರ್ಯಾದಿಷ್ವರ್ಥೇಷ್ವೌದಾರ್ಯದರ್ಶನಂ ।
ಸಸ್ಮಯಂ ಸಭ್ರುಕುಟಿವದ್ವೀರಂ ವೀರರಸೇಽದ್ಭುತಂ ॥ ೬ ॥

ದುಷ್ಟದುರ್ದರ್ಶನೋನ್ಮತ್ತಹಿಂಸ್ರವ್ಯಾಪಾದಕಾದಿ ಯತ್ ।
ತತ್ಸ್ಯಾದ್ಭಯಾನಕರಸೇ ಪ್ರಯೋಗೇ ಚಿತ್ರಕರ್ಮಣಃ ॥ ೭ ॥

ಶ್ಮಶಾನಗರ್ಹಿತಂ ಘಾತಕರಣಂ ಸ್ಥಾನದಾರುಣಂ ।
ಯಚ್ಚಿತ್ರಂ ಚಿತ್ರವಚ್ಛ್ರೇಷ್ಠಂ ತದ್ಬೀಭತ್ಸರಸೇ ಭವೇತ್ ॥ ೮ ॥

---

೪–೭ ಯಾಚನೆ, ವಿರಹ, ಸಂತಾಪ, ಇಷ್ಟವಸ್ತುವಿನ ವಿಕ್ರಯ, ವ್ಯಸನ ಇವುಗಳಿಂದ ಉಂಟಾಗುವ ಶೋಕವೆಂಬ ಮನೋವೃತ್ತಿಯು ಕರುಣರಸಪ್ರಕಾಶಕವಾಗುತ್ತದೆ ನಿಷ್ಠುರತೆ, ಚಿತ್ತವಿಕಾರ, ಕ್ರೋಧ, ತನಗೆ ಉಂಟಾದ ವಿಪತ್ತು ಅದರ ಧಿಕ್ಕಾರ ಪ್ರಕಾಶವಾದ ಆಯುಧ ಮತ್ತು ಆಭರಣಗಳ ಧಾರಣ, ಇವುಗಳಿಂದ ರೌದ್ರ ರಸವನ್ನು ಸೂಚಿಸಬೇಕು ಪ್ರತಿಜ್ಞಾಪೂರ್ವಕವಾದ ಶೌರ್ಯಾದಿಗಳಲ್ಲಿ ಔದಾರ್ಯವೂ ಅಹಂಕಾರವೂ ಗಂಟುಹಾಕಿರುವ ಹುಬ್ಬು ಇವುಗಳಿಂದ ಕೂಡಿದ ಚಿತ್ರವು ವೀರರಸಕ್ಕೆ ವ್ಯಂಜಕವಾಗುತ್ತದೆ ದುಷ್ಟವಸ್ತುವಿನ ಮತ್ತು ಭಯಂಕರ ವಸ್ತುವಿನ, ಹುಚ್ಚನ ಮತ್ತು ಹಿಂಸಾಪ್ರಾಣಿಗಳ ಹಾಗೂ ಹಂತಕನ ದರ್ಶನದಿಂದ ಉಂಟಾಗುವ ಭಯವೇ ಭಯಾನಕರಸಕ್ಕೆ ಕಾರಣವಾಗುತ್ತದೆ ಇಂತಹ ಭಾವದಿಂದ ಕೂಡಿದ ಚಿತ್ರದಿಂದ ಭಯಾನಕವನ್ನು ಪ್ರದರ್ಶಿಸಬೇಕು

೮–೧೦ ಶ್ಮಶಾನದಲ್ಲಿರುವ ಅಸಹ್ಯ ವಸ್ತುಗಳು, ಜುಗುಪ್ಸಾಕರವಾದ ಘಾತಪಾತಾದಿಗಳು, ಭಯಂಕರವಾದ ರಣಭೂಮಿಯೇ ಮೊದಲಾದ ಸ್ಥಾನಗಳು ಇವುಗಳಿಂದ ದೃಶ್ಯಗಳನ್ನು ಪ್ರತ್ಯಕ್ಷವಾದಂತೆ ತೋರಿಸುವ ಚಿತ್ರವು ಬೀಭತ್ಸರಸಕ್ಕೆ

ಯದಾ ವಿನೀತರೋಮಾಂಚ ಚಿಂತಾಂ ತಾಕ್ಷ್ಯರ್ಮುಖಾನತಂ ।
ಪ್ರದರ್ಶಯತಿ ಚಾನ್ಯೋನ್ಯಂ ತದದ್ಭುತರಸಾಶ್ರಯಂ ॥ ೯ ॥

ಯದ್ಯತ್ಸೌಮ್ಯಾಕೃತಿ ಧ್ಯಾನಧಾರಣಾಸನಬಂಧನಂ ।
ತಪಸ್ವಿಜನಭೂಯಿಷ್ಠಂ ತತ್ತು ಶಾಂತೇ ರಸೇ ಭವೇತ್ ॥ ೧೦ ॥

ಶೃಂಗಾರಹಾಸ್ಯಶಾಂತ್ಯಾಖ್ಯಾ ಲೇಖನೀಯಾ ಗೃಹೇಷು ತೇ ॥ ೧೧ ॥

ಪರಿಶೇಷಾ ನ ಕರ್ತವ್ಯಾಃ ಕದಾಚಿದಪಿ ಕಸ್ಯ ಚಿತ್ ।
ದೇವವೇಶ್ಮನಿ ಕರ್ತವ್ಯಾ ರಸಾಃ ಸರ್ವೇ ನೃಪಾಲಯೇ ॥ ೧೨ ॥

ರಾಜವೇಶ್ಮನಿ ನೋ ಕಾರ್ಯಾ ರಾಜ್ಞಾಂ ವಾಸಗೃಹೇಷು ತೇ ।
ಸಭಾವೇಶ್ಮಸು ಕರ್ತವ್ಯಾಃ ರಾಜ್ಞಾಂ ಸರ್ವರಸಾ ಗೃಹೇ ॥ ೧೩ ॥

---

ಪ್ರಕಾಶಕವಾಗುತ್ತದೆ ಆಶ್ಚರ್ಯಾವೇಶದಿಂದ ಉಂಟಾಗುವ ರೋಮಾಂಚಗಳು ತೆರೆದಬಾಯಿನಿಂದಕೂಡಿ ಸ್ತಬ್ಧವಾಗಿರುವಿಕೆ ಇವುಗಳಿಂದ ಸೂಚಿತವಾಗುವ ಅನ್ಯೋನ್ಯಾಶ್ಚರ್ಯವೇ ಅದ್ಭುತರಸವಾಗುತ್ತದೆ ಇಂತಹ ಭಾವಗಳಿಂದ ಕೂಡಿದ ಚಿತ್ರವು ಅದ್ಭುತರಸಕ್ಕೆ ಪ್ರಕಾಶಕವಾಗುತ್ತದೆ ಸೌಮ್ಯವಾದ ಪರಮಾತ್ಮನ ಆಕೃತಿಯು ಧ್ಯಾನ, ಧಾರಣ, ಆಸನಬಂಧ, ತಪಸ್ವಿಜನಗಳ ಸಮೂಹ ಇವು ಶಾಂತರಸಕ್ಕೆ ವ್ಯಂಜಕವಾಗುತ್ತವೆ.

೧೧-೧೩ ಶೃಂಗಾರ, ಹಾಸ್ಯ, ಶಾಂತ, ರಸಗಳಿಂದ ಕೂಡಿದ ಚಿತ್ರಗಳನ್ನು ಮನೆಗಳಲ್ಲಿ ಬರೆಯಬೇಕು ಇತರ ರಸಗಳ ಚಿತ್ರಗಳನ್ನು ಯಾವ ಮನೆಯಲ್ಲಿಯೂ ಯಾವಾಗಲೂ ಬರೆಯಕೂಡದು ದೇವಾಲಯಗಳಲ್ಲಿಯೂ, ರಾಜಗೃಹದಲ್ಲಿಯೂ ಎಲ್ಲಾ ರಸಗಳಿಂದ ಕೂಡಿದ ಚಿತ್ರಗಳನ್ನು ಬರೆಯಬಹುದು ಇಲ್ಲಿ ರಾಜಗೃಹವೆಂದರೆ ರಾಜನ ಸಭಾಭವನವೆಂದು ತಿಳಿಯಬೇಕು. ವಾಸಗೃಹದಲ್ಲಿ ಮೇಲೆಹೇಳಿರುವ ಮೂರೇರಸಗಳಿಗೆ ಅವಕಾಶವೇ ಹೊರತು ಇತರರಸಗಳನ್ನು ಚಿತ್ರಿಸಕೂಡದು

ವರ್ಜಯಿತ್ವಾ ಸಭಾಂ ರಾಜ್ಞೋ ದೇವವೇಶ್ಮ ತಥೈವ ಚ ।
ಯುದ್ಧಶ್ಮಶಾನಕರುಣಾಮೃತದುಃಖಾರ್ತಕುತ್ಸಿತಾನ್ ॥ ೧೪ ॥

ಅಮಂಗಲ್ಯಾಂಶ್ಚ ನ ಲಿಖೇತ್ಕದಾಚಿದಪಿ ವೇಶ್ಮಸು ।
ನಿಧಿಶೃಂಗಾನ್ವೃಷಾನ್ರಾಜನ್ ನಿಧಿಹಸ್ತಾನ್ಗತಾನ್ಗಜಾನ್ ॥ ೧೫ ॥

ನಿಧಿರ್ವಿದ್ಯಾಧರಾ ರಾಜನ್ ಋಷಯೋ ಗರುಡಸ್ತಥಾ ।
ಹನೂಮಾಂಶ್ಚ ಸುಮಂಗಲ್ಯಾ ಯೇ ಚ ಲೋಕೇ ಪ್ರಕೀರ್ತಿತಾಃ ॥ ೧೬ ॥

ಲಿಖಿತವ್ಯಾ ಮಹಾರಾಜ ಗೃಹೇಷು ಸತತಂ ನೃಣಾಂ ।
ಚಿತ್ರಕರ್ಮ ನ ಕರ್ತವ್ಯಮಾತ್ಮನಾ ಸ್ವಗೃಹೇ ನೃಪ ॥ ೧೭ ॥

ದೌರ್ಬಲ್ಯಂ ಸ್ಥೂಲರೇಖತ್ವಮವಿಭಕ್ತತ್ವಮೇವ ಚ ।
ವರ್ಣಾನಾಂ ಸಂಕರಶ್ಚಾತ್ರ ಚಿತ್ರದೋಷಾಃ ಪ್ರಕೀರ್ತಿತಾಃ ॥ ೧೮ ॥

ಸ್ಥಾನಪ್ರಮಾಣಂ ಭೂಲಂಭೋ ಮಧುರತ್ವಂ ವಿಭಕ್ತತಾ ।
ಸಾದೃಶ್ಯಂ ಕ್ಷಯವೃದ್ಧೀ ಚ ಗುಣಾಷ್ಟಕಮಿದಂ ಸ್ಮೃತಂ ॥ ೧೯ ॥

---

೧೪-೧೭ ರಾಜನ ಸಭಾಭವನವನ್ನೂ ದೇವಗೃಹವನ್ನೂ ಬಿಟ್ಟು ಇತರ ಯಾವ ಗೃಹದಲ್ಲಿಯೂ ಯುದ್ಧ ಶ್ಮಶಾನ ಕರುಣಾನುಬಂಧಿಯಾದ ಮೃತದುಃಖ, ಪೀಡೆ ಮೊದಲಾದವುಗಳಿಂದ ಕೂಡಿದ ಕುತ್ಸಿತ ಚಿತ್ರಗಳು ಮತ್ತು ಅಮಂಗಲಕರವಾದ ಚಿತ್ರಗಳು ಇವುಗಳನ್ನು ಯಾವಾಗಲೂ ಬರೆಯಬಾರದು ನಿಧಿಯನ್ನು ಕೊಂಬಿನಿಂದ ಧರಿಸಿರುವ ಎತ್ತುಗಳು ನಿಧಿಯನ್ನು ಸೊಂಡಲಿನಿಂದ ಧರಿಸಿರುವ ಬಗ್ಗಿದ ಆನೆಗಳು ನಿಧಿಗಳು, ವಿದ್ಯಾಧರರು, ಋಷಿಗಳು, ಗರುಡ, ಹನುಮಾನ್ ಇತರ ಮಂಗಲ ಪ್ರದವಾದ ಚಿತ್ರಗಳು ಇವುಗಳನ್ನು ಯಾವಾಗಲೂ ಜನಗಳು ಸ್ವಗೃಹದಲ್ಲಿ ಬರೆಸಬೇಕು. ತನ್ನ ಮನೆಯ ಚಿತ್ರಕೆಲಸವನ್ನು ತಾನೇ ಮಾಡಬಾರದು.

೧೮-೨೦. ದುರ್ಬಲವಾದರೇಖೆ, ಸ್ಥೂಲವಾದರೇಖೆ, ಸಂಕೀರ್ಣರೇಖೆ, ವರ್ಣಗಳ ಸಾಂಕರ್ಯ ಇವು ಪ್ರಧಾನಗಳಾದ ಚಿತ್ರದೋಷಗಳು, ವಿಹಿತವಾದಸ್ಥಾನ ಪ್ರಮಾಣ ಚಿತ್ರಕ್ಕೆ ಆಶ್ರಯವಾದ ಭೂಮಿಯವಿಸ್ತಾರ, ರಮ್ಯತೆ ಅಸಂಕೀರ್ಣತೆಯಿಂದ ತೋರುವಿಕೆ, ಸಾದೃಶ್ಯ, ಕ್ಷಯವೃದ್ಧಿಗಳ ಪರಿಕಲ್ಪನ ಈ ಎಂಟು ಚಿತ್ರಗುಣಗಳು

ಸ್ಥಾನಹೀನಂ ಗತರಸಂ ಶೂನ್ಯದೃಷ್ಟಿ ಮಲೀಮಸಂ ।
ಚೇತನಾರಹಿತಂ ವಾ ಸ್ಯಾತ್ತದಶಸ್ತಂ ಪ್ರಕೀರ್ತಿತಂ ॥ ೨೦ ॥

ಲಸತೀವ ಚ ಭೂಲಂಭೋ ಬಿಭ್ಯತೀವ ತಥಾ ನೃಪ ।
ಹಸತೀವ ಚ ಮಾಧುರ್ಯಂ ಸಜೀವ ಇವ ದೃಶ್ಯತೇ ॥ ೨೧ ॥

ಸಶ್ವಾಸಇವ ಯಚ್ಚಿತ್ರಂ ತಚ್ಚಿತ್ರಂ ಶುಭಲಕ್ಷಣಂ ।
ಹೀನಾಂಗಂ ಮಲಿನಂ ಶೂನ್ಯಂ ಬದ್ಧಂ ವ್ಯಾಧಿಭಯಾಕುಲೈಃ ॥ ೨೨ ॥

ವೃತ್ತಂ ಪ್ರಕೀರ್ಣಕೇಶೈಶ್ಚ ಸುಮಂಗಲ್ಯೈಃ ವಿವರ್ಜಯೇತ್ ।
ಪ್ರತೀತಂ ಚ ಲಿಖೇದ್ಧೀಮಾನ್ ನಾಪ್ರತೀತಂ ಕಥಂಚನ ॥ ೨೩ ॥

ಶಾಸ್ತ್ರಜ್ಞೈಃ ಸುಕೃತಂ ದಕ್ಷೈಃ ಚಿತ್ರಂ ಹಿ ಮನುಜಾಧಿಪ ।
ಶ್ರಿಯಮಾವಹತಿ ಕ್ಷಿಪ್ರಮಲಕ್ಷ್ಮೀಂ ಚಾಪಕರ್ಷತಿ ॥ ೨೪ ॥

---

ಸ್ಥಾನನಿಯಮದಿಂದ ಹೀನವಾದ ಚಿತ್ರವು ಕಣ್ಣಿಲ್ಲದ ಕುರುಡನಂತೆ ಅಂಧಕಾರಮಯ ಅಥವಾ ಚೈತನವಿಲ್ಲದ ಶರೀರದಂತೆ ಅಪ್ರಶಸ್ತ.

೨೧–೨೩ ವಿಸ್ತಾರವಾದ ಭೂಮಿಯಿಂದ ಕೂಡಿದ ಚಿತ್ರವು ಬಹಳ ಪ್ರಕಾಶ ಹೊಂದುತ್ತದೆ ಚೇತನ ಧರ್ಮದಿಂದ ಚಲಿಸುವಂತೆ ತೋರುತ್ತದೆ ಮಾಧುರ್ಯ ಗುಣವು ಅದರ ಮಂದಹಾಸದಂತೆ ತೋರುತ್ತದೆ ಆದುದರಿಂದ ಶಾಸ್ತ್ರೋಕ್ತವಾದ ಚಿತ್ರವು ಜೀವಕಳೆಯಿಂದ ತುಂಬಿರುವಂತೆ ತೋರುತ್ತದೆ ಯಾವ ಚಿತ್ರವು ಅಚೇತನವಾದರೂ ಗುಣಗಳಿಂದ ಕೂಡಿ ಸಚೇತನದಂತೆ ತೋರಿಬರುತ್ತದೆಯೋ ಅದೇ ಶುಭಲಕ್ಷಣವುಳ್ಳ ಚಿತ್ರವೆನಿಸುತ್ತದೆ. ಅಂಗಹೀನತೆಯಿಂದಲೂ (ಕಳೆ ಇಲ್ಲದೆ) ಮಾಲಿನ್ಯದಿಂದಲೂ, ಶೂನ್ಯತೆಯಿಂದಲೂ ಕೂಡಿರುವ ಚಿತ್ರವು ವ್ಯಾಧಿಭಯಗಳಿಗೆ ಕಾರಣವಾಗುತ್ತದೆ ದುಂಡಾದ ಕಣ್ಣು, ಕೆದರಿದ ಕೇಶ ಮುಂತಾದುವುಗಳಿಂದಲೂ ಕೂಡಿ ಶುಭಲಕ್ಷಣಗಳಿಲ್ಲದಿರುವ ಚಿತ್ರವನ್ನು ತ್ಯಜಿಸಬೇಕು. ಬುದ್ಧಿವಂತನಾದ ಚಿತ್ರಗಾರನು ಲೋಕದಲ್ಲಿ ಪ್ರಸಿದ್ಧವಾಗಿರುವ ವಸ್ತುವನ್ನೇ ಚಿತ್ರಿಸಬೇಕು ಅಪ್ರಸಿದ್ಧವಾದುದನ್ನು ಯಾವಾಗಲೂ ಚಿತ್ರಿಸಬಾರದು

೨೪–೨೬ ಸಮರ್ಥರಾದ ಶಾಸ್ತ್ರಜ್ಞರಿಂದ ಸರಿಯಾಗಿ ಬರೆಯಲ್ಪಟ್ಟ ಚಿತ್ರವು ಸಂಪತ್ತನ್ನು ಉಂಟುಮಾಡುತ್ತದೆ. ದಾರಿದ್ರ್ಯವನ್ನು ಹೋಗಲಾಡಿಸುತ್ತದೆ ಸರಿ

ನಿರ್ಣೇಜಯತಿ ಚೋತ್ಕಂಠಾಂ ನಿರುಣದ್ಧ್ಯಾಗತಂ ಶುಭಂ ।
ಶುದ್ಧಾಂ ಪ್ರಥಯತಿಪ್ರೀತಿಂ ಜನಯತ್ಯತುಲಾಮಪಿ || ೨೫ ||

ದುಃಸ್ವಪ್ನದರ್ಶನಂ ಹಂತಿ ಪ್ರೀಣಾತಿ ಗೃಹದೈವತಂ ।
ನ ತು ಶೂನ್ಯಮಿವಾಭಾತಿ ಯತ್ರ ಚಿತ್ರಂ ಪ್ರತಿಷ್ಠಿತಂ || ೨೬ ||

...... ......[1]ದಕರ್ಣಂಚಾಪ್ಯನಲಂಕೃತಂ ।
ಶಲ್ಯವಿದ್ಧಂ ಚ ವೃದ್ಧಂ ಚ ಯಃ ಕರೋತಿ ಸ ಚಿತ್ರವಿತ್, || ೨೭ ||

ತರಂಗಾಗ್ನಿಶಿಖಾಧೂಮಂ ವೈಜಯಂತ್ಯಸ್ವರಾದಿಕಂ ।
ವಾಯುಗತ್ಯಾಲಿಖೇದ್ಯಸ್ತು ವಿಜ್ಞೇಯೋ ಮತ್ತಚಿತ್ರವಿತ್ || ೨೮ ||

ಸುಪ್ತಂ ಚ ಚೇತನಾಯುಕ್ತಂ ಮೃತಂ ಚೈತನ್ಯವರ್ಜಿತಂ ।
ನಿಮ್ನೋನ್ನತವಿಭಾಗಂ ಚ ಯಃ ಕರೋತಿ ಸ ಚಿತ್ರವಿತ್ || ೨೯ ||

---

ಯಾಗಿ ಇಡಲ್ಪಟ್ಟ ಒಳ್ಳೆಯ ಚಿತ್ರವು ಶುದ್ಧವಾದ ಕುತೂಹಲಕ್ಕ ಕಾರಣವಾಗುತ್ತದೆ ಮಂಗಳ ಪರಂಪರೆಯನ್ನು ಹೊರಗೆ ಹೋಗದಂತೆ ತಡೆದು ನಿಲ್ಲಿಸುತ್ತದೆ ಸ್ವಚ್ಛ ವಾದ ಪ್ರೀತಿಯನ್ನುಂಟುಮಾಡಿ ಪ್ರಚುರಗೊಳಿಸುತ್ತದೆ ದುಃಸ್ವಪ್ನವನ್ನು ಹೋಗ ಲಾಡಿಸಿ ಗೃಹದೇವತೆಯನ್ನು ಸಂತೋಷಪಡಿಸುತ್ತದೆ ಶೂನ್ಯವಾಗಿ ತೋರದ ತುಂಬಿದಂತೆ ಇರುತ್ತದೆ

೨೭-೨೯. ನೀರಿನ ಅಲೆಗಳು ಬೆಂಕಿಯಜ್ವಾಲೆ, ಹೊಗೆ, ಪತಾಕೆಗಳು, ಸ್ವರಗಳು ಇವುಗಳನ್ನು ವಾಯುವಿನ ಗತಿ ಭೇದಕ್ಕೆ ತಕ್ಕಂತೆ ಯಾವನು ಚಿತ್ರಿಸು ತ್ತಾನೆಯೋ ಅವನು ಬಹುಮಟ್ಟಿಗೂ ಕುಶಲತೆಯಿಂದ ಕೊಬ್ಬಿದ ಚಿತ್ರಗಾರನೆನಿಸು ತ್ತಾನೆ ಮಲಗಿದವನನ್ನು ಚೈತನ್ಯಶಕ್ತಿಯಿಂದ ಕೂಡಿರುವಂತೆಯೂ, ಮೃತದೇಹ ವನ್ನು ಚೈತನ್ಯವಿಲ್ಲದೆ ತೋರುವಂತೆಯೂ, ಹಳ್ಳ, ತಿಟ್ಟು, ಪ್ರದೇಶಗಳ ವಿಭಾಗ ವನ್ನೂ ಯಾವನು ಚಿತ್ರದಲ್ಲಿ ಸ್ಪಷ್ಟಗೊಳಿಸುತ್ತಾನೆಯೋ ಅವನು ಚಿತ್ರಜ್ಞನೆನಿಸು ತ್ತಾನೆ ಇವುಗಳಲ್ಲಿ ಮೊದಮೊದಲನೆಯ ಚಿತ್ರದ ಶಿಲ್ಪವು ಪ್ರಶಸ್ತ.

---

1 ಇಲ್ಲಿ ಗ್ರಂಥಭಾಗವು ಲುಪ್ತವಾಗಿದೆ.

ಏತೇಷಾಂ ಖಲು ಸರ್ವೇಷಾಮಾನುಲೋಮ್ಯಂ ಪ್ರಶಸ್ಯತೇ ।
ಸಮ್ಮುಖತ್ವಮಥೈತೇಷಾಂ ಚಿತ್ರೇ ಯತ್ನಾದ್ವಿವರ್ಜಯೇತ್ ॥ ೩೦ ॥

ಯಥಾ ಚಿತ್ರಂ ತಥೈವೋಕ್ತಂ ಖಾತಪೂರ್ವಂ ನರಾಧಿಪ ।
ಸುವರ್ಣರೂಪ್ಯತಾಮ್ರಾದಿ ತಚ್ಚ ಲೋಹೇಷು ದರ್ಶಯೇತ್ ॥ ೩೧ ॥

ಶಿಲಾದಾರುಷು ಲೋಹೇಷು ಪ್ರತಿಮಾಕರಣಂ ಭವೇತ್ ।
ಅನೇನೈವ ವಿಧಾನೇನ ಯಥಾ ಚಿತ್ರಮುದಾಹೃತಂ ॥ ೩೨ ॥

ತಥಾನೇನ ವಿಧಾನೇನ ಪುಸ್ತಕರ್ಮ ವಿಧೀಯತೇ ।
ದ್ವಿವಿಧಂ ತಚ್ಚ ಕಥಿತಂ ಘನಂ ಸುಷಿರಮೇವ ಚ ॥ ೩೩ ॥

ಘನೈಃ ಲೋಹೈಃ ಶಿಲಾಭಿಶ್ಚ ದಾರುಮೃದ್ಭಿಃ ಸದಾ ಭವೇತ್ ।
ಚರ್ಮಣಾ ಸುಷಿರಃ ಕಾರ್ಯಃ ದಾರುಲೋಹೈಸ್ತಥೈವ ಚ ॥ ೩೪ ॥

ದೇಯೋ ಮೃತ್ತಿಕಯಾ ಲೇಪಃ ಪುಸ್ತೇ ಚರ್ಮಕೃತೇ ದೃಢಃ ।
ಸೂತ್ರೇಽನೇನ ವಿಧಾನೇನ ಚಿತ್ರವಸ್ತ್ರೇ ತಥಾ ಲಿಖೇತ್ ॥ ೩೫ ॥

---

೩೦–೩೩ ಮೇಲೆ ಹೇಳಿರುವ ಜ್ವಾಲೆ ಹೊಗೆ ಮುಂತಾದ ಚಿತ್ರಗಳನ್ನು ಎದುರಿಗಿರುವಂತೆ ತೋರಿಸಬಾರದು ನೆಲದಲ್ಲಿ ನೆಟ್ಟು ನಿಲ್ಲಿಸುವ ಪ್ರತಿಮೆಗಳೂ ಚಿತ್ರದಂತೆಯೇ ಮಾಡಲ್ಪಡುತ್ತವೆ ಇಂತಹ ಪ್ರತಿಮೆಗಳನ್ನು ಚಿನ್ನ, ಬೆಳ್ಳಿ, ತಾಮ್ರ, ಕಲ್ಲು, ಮರ, ಇವುಗಳಿಂದಲೂ ಇತರ ಲೋಹಗಳಿಂದಲೂ ಮಾಡಬಹುದು ಇವುಗಳ ರಚನೆಯೂ ಸಹ ನಾವು ಹಿಂದೆ ಹೇಳಿರುವ ವಿಧಾನದಂತೆಯೇ ನಡೆಯ ಬೇಕು ಹಾಗೆಯೇ ಈ ಚಿತ್ರವಿಧಾನದಂತೆಯೇ ಲೇಪ್ಯಕರ್ಮವೂ ನಡೆಯುತ್ತದೆ ಲೇಪ್ಯಕರ್ಮವೂ ಸಹ ಘನ (ಟೊಳ್ಳಿಲ್ಲದೆ ಗಟ್ಟಿಯಾಗಿರುವ ಮರ ಮುಂತಾದವುಗಳ ಮೇಲೆ ಮೆತ್ತಿಮಾಡುವ ಕೆಲಸ) ಸುಷಿರ (ಟೊಲ್ಲಾದ ವಸ್ತುವಿನ ಮೇಲೆ ಮೆತ್ತಿ ಮಾಡುವ ಕೆಲಸ) ಎಂದು ಎರಡು ವಿಧವಾಗಿರುತ್ತದೆ

೩೪–೩೬ ಇವುಗಳಲ್ಲಿ ಮೊದಲನೆಯ ಘನವೆಂಬುದು (ಟೊಳ್ಳಿಲ್ಲದ) ಘಟ್ಟಿ ಯಾದ ಲೋಹ, ಶಿಲಾ, ಮರ, ಮಣ್ಣು ಇತ್ಯಾದಿಗಳಿಂದಲೇ ಮಾಡಬಹುದಾಗು ತ್ತದೆ ಸುಷಿರವೆಂಬ ಎರಡನೆಯದು ಚರ್ಮದಿಂದಲೂ, ಮರ ಮತ್ತು ಲೋಹ ಗಳಿಂದಲೂ ಮಾಡಬಹುದಾಗುತ್ತದೆ ಚರ್ಮದಿಂದ ಮಾಡುವ ಪುಸ್ತಕರ್ಮದಲ್ಲಿ ಮೇಲೆ ಮಣ್ಣಿನಿಂದ ದೃಢ್ಯವಾದ ಲೇಪವನ್ನು ಮಾಡಬೇಕು. ಈ ವಿಧಾನದಿಂದ

ಏತದುದ್ದೇಶಮಾತ್ರೇಣ ಯದಾ ತೇ ಕಥಿತಂ ನೃಪ ।
ಅಶಕ್ಯೋ ವಿಸ್ತರಾದ್ವಕ್ತುಂ ಬಹುವರ್ಷಶತೈರಪಿ ॥ ೩೬ ॥

ಯದತ್ರ ನೋಕ್ತಂ ತನ್ನೃತ್ತಾದ್ವಿಜ್ಞೇಯಂ ವಸುಧಾಧಿಪ ।
ನೃತ್ತೇಽಪಿ ನೋಕ್ತಂ ತಚ್ಚಿತ್ರಂ ನಾತ್ರ ಯೋಜ್ಯಂ ನರಾಧಿಪ ॥ ೩೭ ॥

ಕಲಾನಾಂ ಪ್ರವರಂ ಚಿತ್ರಂ ಧರ್ಮಕಾಮಾರ್ಥಮೋಕ್ಷದಂ ।
ಮಂಗಲ್ಯಂ ಪ್ರಥಮಂ ಚೈತದ್ಗೃಹೇ ಯತ್ರ ಪ್ರತಿಷ್ಠಿತಂ ॥ ೩೮ ॥

ಯಥಾ ಸುಮೇರುಃ ಪ್ರವರೋ ನಗಾನಾಂ
ಯಥಾಂಡಜಾನಾಂ ಗರುಡಃ ಪ್ರಧಾನಃ ।
ಯಥಾ ನರಾಣಾಂ ಪ್ರವರಃ ಕ್ಷಿತೀಶ
ಸ್ತಥಾ ಕಲಾನಾಮಿಹ ಚಿತ್ರಕಲ್ಪಃ ॥ ೩೯ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಶೃಂಗಾರಾದಿಭಾವಕಥನಂ ನಾಮ
ತ್ರಿಚತ್ವಾರಿಂಶತ್ತಮೋಽಧ್ಯಾಯಃ
ಸಮಾಪ್ತಂ ಚಿತ್ರಸೂತ್ರಂ

---

ಚಿತ್ರವಸ್ತ್ರದ ಮೇಲೆಯೂ ಸೂತ್ರಗಳಿಂದ ಚಿತ್ರಿಸಬೇಕು ಇವೆಲ್ಲವನ್ನೂ ಸಂಗ್ರಹವಾಗಿ ನಿನಗೆ ಹೇಳಿದ್ದೇನೆ ಇದಕ್ಕಿಂತಲೂ ವಿಸ್ತಾರವಾಗಿ ನೂರಾರುವರ್ಷಹೇಳಿದರೂ ಸಾಧ್ಯವಾಗುವುದಿಲ್ಲ

೩೭–೩೯ ಧೊರೆಯೇ, ಇಲ್ಲಿ ಹೇಳದಿರುವ ಕೆಲವು ವಿಷಯಗಳನ್ನು ನೃತ್ತ ಪ್ರಕರಣದಿಂದ ತಿಳಿದುಕೊಳ್ಳಬೇಕು ನೃತ್ತದಲ್ಲಿಯೂ ಹೇಳದಿರುವ ವಿಷಯಗಳನ್ನು ಇಲ್ಲಿ ಯೋಜಿಸುವ ಅವಶ್ಯಕತೆ ಇಲ್ಲ ಕಲೆಗಳಲ್ಲಿ ಚಿತ್ರವು ಶ್ರೇಷ್ಠವಾದುದು ಇದು ಧರ್ಮ, ಅರ್ಥ ಕಾಮ, ಮೋಕ್ಷವೆಂಬ ಪುರುಷಾರ್ಥಗಳಿಗೆ ಕಾರಣವಾಗುತ್ತದೆ ಆದ್ದರಿಂದ ಇಂತಹ ಉತ್ತಮಚಿತ್ರಗಳು ಮನೆಯಲ್ಲಿ ಇಡಲ್ಪಟ್ಟಲ್ಲಿ ಒಹುಮಟ್ಟಿಗೂ ಮಂಗಳಪ್ರದವಾಗುತ್ತವೆ ಪರ್ವತಗಳಲ್ಲಿ ಸುಮೇರುವು ಹೇಗೆ ಉತ್ತಮವೋ ಪಕ್ಷಿಗಳಲ್ಲಿ ಗರುಡನು ಹೇಗೆ ಪ್ರಧಾನನೋ, ಜನಗಳಲ್ಲಿ ರಾಜನು ಹೇಗೆ ಶ್ಲಾಘ್ಯನೋ ಹಾಗೆಯೇ ಕಲೆಗಳಲ್ಲಿ ಚಿತ್ರಕಲೆಯು ಶ್ಲಾಘ್ಯವಾದದ್ದು

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ತೃತೀಯ ಖಂಡದಲ್ಲಿ ಮಾರ್ಕಂಡೇಯ
ವಜ್ರ ಸಂವಾದದಲ್ಲಿ ಶೃಂಗಾರಾದಿಭಾವಕಥನವೆಂಬ ನಲವತ್ತಮೂರನೆಯ
ಅಧ್ಯಾಯ ಮುಗಿದಿದೆ

॥ ಓಂ ॥

॥ ಶ್ರೀ ಹಯಗ್ರೀವಾಯ ನಮಃ ॥

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### ॥ ಚತುಶ್ಚತ್ವಾರಿಂಶತ್ತಮೋऽಧ್ಯಾಯಃ ॥

॥ ವಜ್ರ ಉವಾಚ ॥

**ದೇವತಾರೂಪನಿರ್ಮಾಣಂ ಕಥಯಸ್ವ ಮಮಾನಘ ।**
**ಯಸ್ಮಾತ್ಸನ್ನಿಹಿತಾ ನಿತ್ಯಂ ಶಾಸ್ತ್ರವತ್ಸಾಕೃತಾ ಭವೇತ್ ॥ ೧ ॥**

॥ ಮಾರ್ಕಂಡೇಯ ಉವಾಚ ॥

**ದೇವತಾರೂಪನಿರ್ಮಾಣಂ ವದತಃ ಶೃಣು ಪಾರ್ಥಿವ ।**
**ಆದಾವೇವ ಪ್ರವಕ್ಷ್ಯಾಮಿ ತ್ರಿಮೂರ್ತೇಸ್ತವ ಪಾರ್ಥಿವ ॥ ೨ ॥**

---

### ನಲವತ್ತನಾಲ್ಕನೆಯ ಅಧ್ಯಾಯ.

೧-೩ ವಜ್ರನು ಪ್ರಶ್ನೆಮಾಡುತ್ತಾನೆ ಎಲೈ ಸರ್ವಜ್ಞನೇ, ದೇವತೆಯ ರೂಪನಿರ್ಮಾಣವನ್ನು ಹೇಳು ಶಾಸ್ತ್ರವಿಹಿತವಾದ ಯಾವಕ್ರಮದಿಂದ ನಿರ್ಮಿಸಿದಲ್ಲಿ ಅಂತಹ ಬಿಂಬದಲ್ಲಿ ದೇವತೆಯ ಸಾನ್ನಿಧ್ಯವು ನಿತ್ಯವಾಗಿರಬಹುದೋ ಅಂತಹ ಶಾಸ್ತ್ರೀಯಕ್ರಮವನ್ನು ಹೇಳಬೇಕು ಇದಕ್ಕೆ ಉತ್ತರವಾಗಿ ಮಾರ್ಕಂಡೇಯರು ಹೇಳುತ್ತಾರೆ. ದೇವತಾರೂಪನಿರ್ಮಾಣವನ್ನು ಮಾಡುವ ರೀತಿಯಲ್ಲಿ ಮೊಟ್ಟಮೊದಲು ತ್ರಿಮೂರ್ತಿಯ ರೂಪನಿರ್ಮಾಣವನ್ನು ಹೇಳುತ್ತೇನೆ ಕೇಳು. ಅಪರಿಮಿತಪ್ರಭಾವ ಶಾಲಿಯಾದ ಮಹಾವಿಷ್ಣುವಿನ ಶುಭಕರವಾದ ಪ್ರತಿಮಾಲಕ್ಷಣವನ್ನು ಹೇಳುತ್ತೇನೆ ಆ ಮಹಾವಿಷ್ಣುವನ್ನೇ ಅಂತರ್ಯಾಮಿರೂಪದಿಂದ ಹೊಂದಿ ರಜೋಗುಣದ ಕಾರ್ಯವನ್ನು

ವಿಷ್ಣೋರಮಿತವೀರ್ಯಸ್ಯ ಪ್ರತಿಮಾಲಕ್ಷಣಂ ಶುಭಂ ।
ಬ್ರಾಹ್ಮೀ ತು ರಾಜಸೀ ಮೂರ್ತಿಸ್ತಸ್ಯ ಸರ್ವಪ್ರವರ್ತಿನೀ ॥ ೩ ॥

ಸಾತ್ತ್ವಿಕೀ ವೈಷ್ಣವೀ ಜ್ಞೇಯಾ ಸಂಸಾರಪರಿಪಾಲಿನೀ ।
ತಾಮಸೀ ಚ ತಥಾ ರೌದ್ರೀ ಜ್ಞೇಯಾ ಸಂಹಾರಕಾರಿಣೀ ॥ ೪ ॥

ಬ್ರಹ್ಮಾಣಂ ಕಾರಯೇದ್ವಿದ್ವಾನ್ ದೇವಂ ಸೌಮ್ಯಂ ಚತುರ್ಮುಖಂ ।
ಬದ್ಧಪದ್ಮಾಸನಂ ತೋಷ್ಯಂ ತಥಾ ಕೃಷ್ಣಾಜಿನಾಂಬರಂ ॥ ೫ ॥

ಜಟಾಧರಂ ಚತುರ್ಬಾಹುಂ ಸಪ್ತಹಂಸೇ ರಥೇ ಸ್ಥಿತಂ ।
ವಾಮೇ ನ್ಯಸ್ತಂ ಕರತಲೇ ತಸ್ಯೈಕಂ ದೋರ್ಯುಗಂ ಭವೇತ್ ॥ ೬ ॥

ಏಕಸ್ಮಿನ್ ದಕ್ಷಿಣೇ ಪಾಣಾವಕ್ಷಮಾಲಾ ತಥಾ ಶುಭಾ ।
ಕಮಂಡಲುರ್ದ್ವಿತೀಯೇ ಚ ಸರ್ವಾಭರಣಧಾರಿಣಃ ॥ ೭ ॥

---

ಪ್ರಚುರವಾಗಿ ಪ್ರಕಾಶಪಡಿಸುವ ಬ್ರಾಹ್ಮೀಮೂರ್ತಿಯು ಮೊದಲನೆಯದು ಇದು ಸರ್ವಜಗತ್ತಿಗೂ ಸೃಷ್ಟಿಯಿಂದ ಪ್ರವರ್ತಕವಾಗುತ್ತದೆ

೪-೬ ಸತ್ವಗುಣದ ಕಾರ್ಯವನ್ನು ಪ್ರಕಾಶಗೊಳಿಸುವ ವಿಷ್ಣುವಿನ ಸಾಕ್ಷಾನ್ಮೂರ್ತಿಯು ಎರಡನೆಯದು ಇದು ಸರ್ವಜಗತ್ತಿನ ರಕ್ಷಣೆಗಳಿಗೆ ಕಾರಣವಾಗುತ್ತದ ತಮೋಗುಣಪ್ರಚುರವಾದ ಕಾರ್ಯಗಳಿಗೆ ಪ್ರಕಾಶಕವಾಗಿ ವಿಷ್ಣುವಿನ ಅಂತರ್ಯಾಮಿ ರೂಪದಿಂದ ಕೂಡಿರುವ ಮೂರನಯ ಮೂರ್ತಿಯು ರೌದ್ರೀ ಎನಿಸುತ್ತದೆ ಇದು ಸರ್ವಜಗತ್ತಿನ ಸಂಹಾರಕ್ಕೆ ಕಾರಣವಾಗುತ್ತದೆ ಇವುಗಳಲ್ಲಿ ಮೊದಲನೆಯದಾದ ಬ್ರಹ್ಮನ ಮೂರ್ತಿಯನ್ನು ಸೌಮ್ಯವಾದ ನಾಲ್ಕು ಮುಖಗಳಿಂದ ಕೂಡಿಯೂ ಪದ್ಮಾಸವನ್ನು ಹೊಂದಿಯೂ, ಕೃಷ್ಣಾಜಿನದ ವಸ್ತ್ರದಿಂದ ಕೂಡಿಯೂ, ಜಟಾಧಾರಿಯಾಗಿಯೂ, ನಾಲ್ಕು ಬಾಹುಗಳನ್ನು ಹೊಂದಿಯೂ, ಏಳು ಹಂಸಗಳಿಂದ ಕೂಡಿದ ರಥದಲ್ಲಿ ಕುಳಿತಿರುವಂತೆಯೂ, ನಿರ್ಮಿಸಬೇಕು ಆ ಮೂರ್ತಿಯ ಎಡಗೈಯ್ಯಿನ ಮೇಲೆ ಬಲಭಾಗದ ಒಂದು ಕೈಯ್ಯನ್ನು ಇಟ್ಟಿರಬೇಕು.

೭-೮ ಮತ್ತು ಬಲಭಾಗದ ಒಂದು ಕೈಯ್ಯಿನಲ್ಲಿ ಪದ್ಮಾಕ್ಷ ಮಾಲಿಕೆಯೂ ಎಡಭಾಗದ ಮತ್ತೊಂದು ಕೈಯ್ಯಿನಲ್ಲಿ ಕಮಂಡಲವೂ ಇರಬೇಕು ಸರ್ವಾಭರಣ ಧಾರಿಯೂ ಸರ್ವಲಕ್ಷಣಶೋಭಿತವಾಗಿಯೂ, ಪ್ರಸನ್ನವಾಗಿಯೂ ಇರುವ ಆ ಪ್ರತಿ

**ಸರ್ವಲಕ್ಷಣಯುಕ್ತಸ್ಯ ಶಾಂತರೂಪಸ್ಯ ಪಾರ್ಥಿವ ।**
**ಪದ್ಮಪತ್ರದಲಾಗ್ರಾಭಂ ಧ್ಯಾನಸಮ್ಮೀಲಿತೇಕ್ಷಣಂ ॥ ೮ ॥**

**ಅರ್ಚಾಯಾಂ ಕಾರಯೇದ್ದೇವಂ ಚಿತ್ರೇ ವಾ ಪುಸ್ತಕರ್ಮಣಿ ।**
**ದೇವದೇವಂ ತಥಾ ವಿಷ್ಣುಂ ಕಾರಯೇದ್ಗರುಡಸ್ಥಿತಿಂ ॥ ೯ ॥**

**ಕೌಸ್ತುಭೋದ್ಭಾಸಿತೋರಸ್ಕಂ ಸರ್ವಾಭರಣಧಾರಿಣಂ ।**
**ಸಜಲಾಂಬುದಸಚ್ಛಾಯಂ ಪೀತದಿವ್ಯಾಂಬರಂ ತಥಾ ॥ ೧೦ ॥**

**ಮುಖಾಶ್ಚ ಕಾರ್ಯಾಶ್ಚತ್ವಾರೋ ಬಾಹವೋ ದ್ವಿಗುಣಾಸ್ತಥಾ ।**
**ಸೌಮ್ಯಂತು ವದನಂ ಪೂರ್ವಂ ನಾರಸಿಂಹ್ಯಂ ತು ದಕ್ಷಿಣಂ ॥ ೧೧ ॥**

**ಕಾಪಿಲಂ ಪಶ್ಚಿಮಂ ವಕ್ತ್ರಂ ತಥಾ ವಾರಾಹಮುತ್ತರಂ ।**
**ತಸ್ಯ ದಕ್ಷಿಣಹಸ್ತೇಷು ಬಾಣಾಕ್ಷಮುಸಲಾದಯಃ ॥ ೧೨ ॥**

---

ಮೆಯು ಪದ್ಮಪತ್ರಗಳ ಅಗ್ರಭಾಗದಂತೆ ರಮ್ಯವಾದ ವರ್ಣದಿಂದ ಕೂಡಿಯೂ ಧ್ಯಾನಾಸಕ್ತತೆಯಿಂದ ಮುಚ್ಚಿದ ಕಣ್ಣುಗಳಿಂದ ಕೂಡಿಯೂ ಇರಬೇಕು ಈ ಮೂರ್ತಿಯನ್ನು ವಿಗ್ರಹರೂಪದಿಂದಾಗಲಿ, ಚಿತ್ರರೂಪದಿಂದಾಗಲಿ ಲೇಪನದಿಂದ ಮಾಡುವ ಚಿತ್ರದಲ್ಲಿಯಾಗಲಿ ಮೇಲೆ ಹೇಳಿರುವ ರೂಪದಿಂದ ನಿರ್ಮಿಸಬೇಕು

೯-೧೧ ಹಾಗೆಯೇ ದೇವಾಧಿಪತಿಯಾದ ವಿಷ್ಣುವಿನ ರೂಪವನ್ನು ನಿರ್ಮಿಸುವಾಗ, ಗರುಡಾರೂಢನಾಗಿಯೂ, ಕೌಸ್ತುಭದಿಂದ ಪ್ರಕಾಶಮಾನವಾದ ವಕ್ಷಸ್ಥಳದಿಂದ ಕೂಡಿಯೂ, ಸರ್ವಾಭರಣಧಾರಿಯಾಗಿಯೂ, ಜಲಪೂರ್ಣವಾದ ಮೇಘದಂತೆ ಶ್ಯಾಮವರ್ಣದಿಂದ ಕೂಡಿಯೂ, ಹೊಂಬಣ್ಣವಾದ ಪೀತಾಂಬರದಿಂದ ಕೂಡಿಯೂ, ನಾಲ್ಕು ಮುಖಗಳಿಂದ ಕೂಡಿಯೂ, ಎಂಟು ಕೈಗಳಿಂದ ಕೂಡಿಯೂ ಇರುವಂತೆ ನಿರ್ಮಿಸಬೇಕು. ನಾಲ್ಕು ಮುಖವುಳ್ಳ ಆ ಮೂರ್ತಿಯ ಪೂರ್ವಭಾಗದ ಮುಖವು ಸೌಮ್ಯವಾಗಿಯೂ, ದಕ್ಷಿಣಭಾಗದ ಮುಖವು ನರಸಿಂಹರೂಪದಲ್ಲಿಯೂ, ಪಶ್ಚಿಮಭಾಗದ ಮುಖವು ಕಪಿಲರ ಮುಖದಂತೆಯೂ, ಉತ್ತರಭಾಗದ ಮುಖವು ವರಾಹರೂಪದಲ್ಲಿಯೂ ಇರಬೇಕು

೧೨ ೧೫ ಆ ಮೂರ್ತಿಯ ಬಲಭಾಗದ ಹಸ್ತಗಳಲ್ಲಿ ಬಾಣ, ಅಕ್ಷಮಾಲಾ, ಮುಸಲಾದಿ ಆಯುಧಗಳಿರಬೇಕು ಎಡಭಾಗದ ಹಸ್ತಗಳಲ್ಲಿ ಗುರಾಣಿ, ನಾರುಮಡಿ,

**ಚರ್ಮ ಚೀರಂ ಧನುಶ್ಚೇಂದ್ರಚಾಪೇಷೂ ವನಮಾಲಿನಃ ।**
**ಕಾರ್ಯಾಣಿ ವಿಷ್ಣೋಃ ಧರ್ಮಜ್ಞ ಶೃಣು ರೂಪಂ ಪಿನಾಕಿನಃ　|| ೧೩ ||**

**ದೇವದೇವಂ ಮಹಾದೇವಂ ವೃಷಾರೂಢಂ ತು ಕಾರಯೇತ್ ।**
**ತಸ್ಯ ವಕ್ತ್ರಾಣಿ ಕಾರ್ಯಾಣಿ ಪಂಚ ಯಾದವನಂದನ　|| ೧೪ ||**

**ಸರ್ವಾಣಿ ಸೌಮ್ಯರೂಪಾಣಿ ದಕ್ಷಿಣಂ ವಿಕಟಂ ಮುಖಂ ।**
**ಕಪಾಲಮಾಲಿನಂ ಭೀಮಂ ಜಗತ್ಸಂಹಾರಕಾರಕಂ　|| ೧೫ ||**

**ತ್ರಿನೇತ್ರಾಣಿ ಚ ಸರ್ವಾಣಿ ವದನಂ ಹ್ಯುತ್ತರಂ ವಿನಾ ।**
**ಜಟಾಕಲಾಪೇ ಮಹತೀ ತಸ್ಯ ಚಂದ್ರಕಲಾ ಭವೇತ್　|| ೧೬ ||**

**ತಸ್ಯೋಪರಿಷ್ಟಾದ್ವದನಂ ಪಂಚಮಂ ತು ವಿಧೀಯತೇ ।**
**ಯಜ್ಞೋಪವೀತಂ ಚ ತಥಾ ವಾಸುಕಿಂ ತಸ್ಯ ಕಾರಯೇತ್　|| ೧೭ ||**

**ದಶಬಾಹುಸ್ತಥಾ ಕಾರ್ಯೋ ದೇವದೇವೋ ಮಹೇಶ್ವರಃ ।**
**ಅಕ್ಷಮಾಲಾಂ ತ್ರಿಶೂಲಂ ಚ ಶರದಂಡಮಥೋತ್ಪಲಂ　|| ೧೮ ||**

---

ಧನುಸ್ಸು, ಇಂದ್ರಚಾಪ, ಬಾಣಗಳು ಇದ್ದು ವನಮಾಲಿಯಾಗಿ ಆ ರೂಪವಿರಬೇಕು ಮಹಾದೇವನಾದ ರುದ್ರನ ರೂಪವನ್ನು ವೃಷಾರೂಢನನ್ನಾಗಿಯೂ ಐದು ಮುಖಗಳಿಂದ ಕೂಡಿಯೂ ಇರುವಂತೆ ರಚಿಸಬೇಕು ಎಲ್ಲಾ ಮುಖಗಳೂ ಸೌಮ್ಯವಾಗಿದ್ದು ದಕ್ಷಿಣ ಮುಖ ಮಾತ್ರ ಭಯಂಕರವಾಗಿರಬೇಕು ಕಪಾಲಮಾಲಾಧಾರಿಯಾಗಿಯೂ ಭಯಂಕರವಾಗಿಯೂ ಇರುವ ಜಗತ್ಸಂಹಾರ ಮೂರ್ತಿಗೆ ಉತ್ತರ ಭಾಗದ ಮುಖಹೊರತು ಎಲ್ಲಾ ಮುಖಗಳಲ್ಲಿಯೂ ಮೂರು ಮೂರು ಕಣ್ಣುಗಳಿರಬೇಕು

೧೬–೧೮　ತಲೆಯ ಮೇಲೆ ದೊಡ್ಡದಾದ ಜಟಾಸಮೂಹವಿದ್ದು ಅದರಲ್ಲಿ ಚಂದ್ರಕಲೆಯನ್ನು ನಿರ್ಮಿಸಬೇಕು ಅದರ ಮೇಲೆ ಐದನೆಯ ಮುಖವೊಂದಿರಬೇಕು ವಾಸುಕಿಯನ್ನೇ ಯಜ್ಞೋಪವೀತರೂಪದಿಂದ ರಚಿಸಬೇಕು ಆ ಮಹೇಶ್ವರ ಮೂರ್ತಿಗೆ ಹತ್ತು ಬಾಹುಗಳಿರಬೇಕು ಬಲಭಾಗದ ಕೈಗಳಲ್ಲಿ ಅಕ್ಷಮಾಲಿಕ, ತ್ರಿಶೂಲ, ಶರದಂಡ, ನೈದಿಲೆ ಇವನ್ನು ರಚಿಸಬೇಕು

ತಸ್ಯ ದಕ್ಷಿಣಹಸ್ತೇಷು ಕರ್ತವ್ಯಾನಿ ಮಹಾಭುಜ ।
ವಾಮೇಷು ಮಾತುಲಿಂಗಂ ಚ ಚಾಪಾದರ್ಶೌ ಕಮಂಡಲುಂ ॥ ೧೯ ॥

ತಥಾ ಚರ್ಮ ಚ ಕರ್ತವ್ಯಂ ದೇವದೇವಸ್ಯ ಶೂಲಿನಃ ।
ವರ್ಣಾಸ್ತಥಾ ಚ ಕರ್ತವ್ಯಾಃ ಚಂದ್ರಾಂಶುಸದೃಶಪ್ರಭಾಃ ॥ ೨೦ ॥

ಏತತ್ತ್ರಿಮೂರ್ತೇಸ್ತವ ರೂಪಮುಕ್ತಂ
ಮಹಾನುಭಾವಸ್ಯ ಜನಾರ್ದನಸ್ಯ ।
ಪದ್ಮಸ್ವರೂಪಂ ತವ ವಚ್ಮಿ ರಾಜನ್
ಯತ್ರಾರ್ಚನಂ ಕಾರ್ಯಮಥೇಶ್ವರಾಣಾಂ ॥ ೨೧ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ತ್ರಿಮೂರ್ತಿನಿರ್ಮಾಣಂ ನಾಮ
ಚತುಶ್ಚತ್ವಾರಿಂಶತ್ತಮೋಽಧ್ಯಾಯಃ

೧೯-೨೧ ಎಡಭಾಗದ ಕೈಗಳಲ್ಲಿ ಯೋಗದಂಡ ಧನಸ್ಸು, ಕನ್ನಡಿ, ಕಮಂಡಲು, ಗುರಾಣಿ ಇವನ್ನು ರಚಿಸಬೇಕು ಚಂದ್ರಕಿರಣದಂತೆ ಶುಭ್ರವಾದ ವರ್ಣದಿಂದ ಆ ಮೂರ್ತಿಯನ್ನು ನಿರ್ಮಿಸಬೇಕು ಈ ರೀತಿ ಮಹಾಮಾಹಾತ್ಮ್ಯಶಾಲಿಯಾದ ಜನಾರ್ದನನೇ ಅಂತರ್ಯಾಮಿಯಾಗಿಉಳ್ಳ ಮತ್ತು ಸಾಕ್ಷಾತ್ತಾಗಿವುಳ್ಳ ಅವನ ಮೂರು ರೂಪಗಳನ್ನೂ ನಿನಗೆ ಹೇಳಿ ಆಯಿತು ಇನ್ನು ಮುಂದೆ ಯಾವ ಪದ್ಮದಲ್ಲಿ ದೇವತೆಗಳ ಪೂಜೆಯನ್ನು ಮಾಡಬೇಕೋ ಅಂತಹ ಪದ್ಮಸ್ವರೂಪವನ್ನು ನಿನಗೆ ಹೇಳುತ್ತೇನೆ

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯ ಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ತ್ರಿಮೂರ್ತಿನಿರ್ಮಾಣವೆಂಬ
ನಲವತ್ತನಾಲ್ಕನೆಯ ಅಧ್ಯಾಯ ಮುಗಿದಿದೆ.



॥ ಓಂ ॥

॥ ಶ್ರೀ ಹಯಗ್ರೀವಾಯ ನಮಃ ॥

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### ॥ ಪಂಚಚತ್ವಾರಿಂಶತ್ತಮೋಽಧ್ಯಾಯಃ ॥

॥ ಮಾರ್ಕಂಡೇಯ ಉವಾಚ ॥

**ಸೌವರ್ಣಂ ರಾಜತಂ ತಾಮ್ರಮಾರಕೂಟಮಯಂ ತಥಾ ।**
**ದ್ವಿಹಸ್ತಮಾತ್ರಂ ಕರ್ತವ್ಯಂ ಕಮಲಂ ಚಾರುಕೇಸರಂ ॥ ೧ ॥**

**ತಸ್ಯಾಷ್ಟಭಾಗಾಃ ಕರ್ತವ್ಯಾಃ ಕರ್ಣಿಕಾ ನೃಪ ವರ್ತುಲಾ ।**
**ಅಷ್ಟಭಾಗೋಚ್ಛ್ರಿತಾ ಚೈವ ಪತ್ರೇ ನ್ಯಸ್ತಾ ತು ಕಾರಯೇತ್ ॥ ೨ ॥**

**ಏಕತೋನತ್ರಿಪಂಚಾಶತ್ಕರ್ಣಿಕಾಯಾಂ ತು ಕಾರಯೇತ್ ।**
**ವರ್ತುಲಾ ಕರ್ಣಿಕಾಚ್ಛೇದಾ ಯವಮಾತ್ರಸಮನ್ವಿತಾಃ ॥ ೩ ॥**

---

### ನಲವತ್ತೈದನೆಯ ಅಧ್ಯಾಯ.

೧-೩ ಮಾರ್ಕಂಡೇಯರು ಹೇಳುತ್ತಾರೆ.—ಚಿನ್ನ, ಬೆಳ್ಳಿ, ತಾಮ್ರ, ಹಿತ್ತಾಳೆ ಇವುಗಳಲ್ಲಿ ವೈಭವಾನುಸಾರ ಯಾವುದಾದರೊಂದು ಲೋಹದಿಂದ ಎರಡು ಮೊಳ ಉದ್ದ, ಅಗಲವುಳ್ಳ ಕಮಲವನ್ನು ರಮ್ಯವಾದ ಕೇಸರಗಳೊಡನೆ ಕೂಡಿರುವಂತೆ ನಿರ್ಮಿಸಬೇಕು ಅದನ್ನು ಎಂಟು ಭಾಗವಾಗಿ ವಿಂಗಡಿಸಿ ಮಧ್ಯದಲ್ಲಿ ದುಂಡಾದ ಕರ್ಣಿಕೆಯನ್ನು ರಚಿಸಬೇಕು ಪದ್ಮಪರಿಮಾಣದ ಎಂಟನೇ ಒಂದು ಭಾಗ ಎತ್ತರವುಳ್ಳ ಆ ಕರ್ಣಿಕೆಯಲ್ಲಿ ದಳಗಳೆಲ್ಲವೂ ಸಂಬಂಧಿಸಿಕೊಂಡಿರಬೇಕು ಆ ಕರ್ಣಿಕೆಯ ಒಂದೊಂದು ಭಾಗದಲ್ಲಿಯೂ ಐವತ್ತೆರಡು ದಳಗಳಿಗೆ ಕಡಿಮೆಯಾಗಿ ದಳಗಳಿರಬೇಕು ದುಂಡಾದ ಆ ಕರ್ಣಿಕೆಯು ಯವಪರಿಣಾಮದಂತಹ ಸಣ್ಣ ಸಣ್ಣ ಅವಯವಗಳಿಂದ ಕೂಡಿರಬೇಕು

ಷೋಡಶಾಂಶೇನ ಕರ್ತವ್ಯಂ ತದ್ಧಿ ವಿಸ್ತರಸ್ತಥಾ ।
ಶೇಷಂ ಪತ್ರೈಸ್ತು ಸುಸ್ನಿಗ್ಧೈಃ ಪೂರಯೇದಷ್ಟಭಿಸ್ತಥಾ ॥ ೪ ॥

ತಸ್ಯ ಪ್ರತಿಷ್ಠಾ ಕರ್ತವ್ಯಾ ತತ್ರ ದೇವಾಂಸ್ತು ಪೂಜಯೇತ್ ।
ಬ್ರಾಹ್ಮಣಂ ಪೂಜಯೇತ್ತತ್ರ ತತ್ರ ಸಂಪೂಜಯೇದ್ಧರಿಂ ॥ ೫ ॥

ತತ್ರ ಸಂಪೂಜಯೇದ್ರುದ್ರಂ ತತ್ರ ಸಂಪೂಜಯೇಚ್ಛ್ರಿಯಂ ।
ತತ್ರ ಸಂಪೂಜಯೇಚ್ಛಕ್ರಂ ದೇವರಾಜಂ ಜಗತ್ಪತಿಂ ॥ ೬ ॥

ತತ್ರ ಸಂಪೂಜಯೇತ್ಸೂರ್ಯಂ ಶಶಿನಂ ತತ್ರ ಪೂಜಯೇತ್ ।
ಯಮೇವ ಮನಸೋದ್ದಿಶ್ಯ ದೇವಂ ಪದ್ಮಂ ಪ್ರತಿಷ್ಠಿತಂ ।
ತಮೇವ ಪೂಜಯೇತ್ತತ್ರ ನಾನ್ಯಂ ದೇವಂ ಕಥಂಚನ ॥ ೭ ॥

---

೪-೬ ಕಮಲವನ್ನು ಹದಿನಾರು ಭಾಗಮಾಡಿಯೂ ನಿರ್ಮಿಸಬಹುದು. ಆದರೆ ಅದು ವಿಸ್ತಾರವಾದ ಕಲ್ಪ ಮೇಲೆ ಹೇಳಿರುವ ಅಷ್ಟಭಾಗದ ಪದ್ಮವನ್ನು ರಮ್ಯವಾದ ಎಂಟು ದಳಗಳಿಂದ ಪೂರ್ತಿಮಾಡಬೇಕು ಈರೀತಿ ದಳಗಳನ್ನು ನಿರ್ಮಿಸಿ ಅದನ್ನು ಯಥಾವಿಧಿಯಾಗಿ ಪ್ರತಿಷ್ಠೆಮಾಡಬೇಕು ಅಂತಹ ಪ್ರತಿಷ್ಠಿತ ಪದ್ಮದಲ್ಲಿ ದೇವತೆಗಳನ್ನು ಪೂಜಿಸಬೇಕು ಬ್ರಾಹ್ಮಣರನ್ನೂ ಅಲ್ಲಿಯೇ ಪೂಜಿಸಬೇಕು. ಹರಿಯನ್ನೂ, ರುದ್ರನನ್ನೂ, ಲಕ್ಷ್ಮಿಯನ್ನೂ, ಇಂದ್ರನನ್ನೂ, ಸೂರ್ಯ, ಚಂದ್ರ ಮುಂತಾದ ದೇವತೆಗಳನ್ನು ವಿಹಿತಕಾಲಗಳಲ್ಲಿ ಆ ಪದ್ಮದಲ್ಲಿ ಪ್ರತಿಷ್ಠಿಸಿ ಪೂಜಿಸಬೇಕು

೭-೮. ಮೇಲೆ ಹೇಳಿರುವ ದೇವತೆಗಳಲ್ಲಿ ಯಾವ ದೇವತೆಯನ್ನು ಪೂಜಿಸುವ ಉದ್ದೇಶದಿಂದ ಪದ್ಮವನ್ನು ನಿರ್ಮಿಸಿ ಪ್ರತಿಷ್ಠೆಮಾಡಲಾಗುವುದೋ ಅಂತಹ ದೇವತೆಯನ್ನೇ ಅಲ್ಲಿಟ್ಟು ಪೂಜಿಸಬೇಕು ಇತರ ದೇವತೆಯನ್ನು ಆ ಪದ್ಮದಲ್ಲ ಪೂಜಿಸಬಾರದು ಈ ರೀತಿ ಆಸನರೂಪವಾದ ಪದ್ಮದ ಸ್ವರೂಪವನ್ನು ನಿನಗೆ

**ಪದ್ಮಸ್ಯ ರೂಪಂ ಕಥಿತಂ ತವೈತ**
**ತ್ಪದ್ಮಂಸಮಗ್ರಾ ವಸುಧಾ ನಿರುಕ್ತಾ ।**
**ತತ್ರಾರ್ಚನಂ ಕಾರ್ಯಮಥೇಶ್ವರಾಣಾಂ**
**ತತ್ರಾರ್ಚಿತಾಸ್ತೇ ವರದಾ ಭವಂತಿ ॥ ೮ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ ವಜ್ರಸಂವಾದೇ ಪದ್ಮರೂಪನಿರೂಪಣೋ ನಾಮ ಪಂಚಚತ್ವಾರಿಂಶತ್ತಮೋಽಧ್ಯಾಯಃ**

---

ಹೇಳಿದ್ದಾಯಿತು  ಇಂತಹ ಪದ್ಮವೇ ಸಮಗ್ರವಾದ ಭೂಮಿ ಎಂದು ಹೇಳಲ್ಪಟ್ಟಿದೆ ಈ ಪದ್ಮದಲ್ಲಿಯೇ ದೇವತೆಗಳನ್ನು ಪೂಜಿಸಬೇಕು  ಹೀಗೆ ಪೂಜಿಸಲ್ಪಟ್ಟ ದೇವತೆಗಳೇ ವರಪ್ರದರಾಗುತ್ತಾರೆ

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯ ಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದದಲ್ಲಿ ಪದ್ಮನಿರೂಪಣವೆಂಬ ನಲವತ್ತೈದನೆಯ ಅಧ್ಯಾಯ ಮುಗಿದಿದೆ



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಷಟ್ ಚತ್ವಾರಿಂಶತ್ತಮೋऽಧ್ಯಾಯಃ ||

|| ವಜ್ರ ಉವಾಚ ||

**ರೂಪಗಂಧರಸೈರ್ಹೀನಃ ಶಬ್ದಸ್ಪರ್ಶವಿವರ್ಜಿತಃ ।**
**ಪುರುಷಸ್ತು ತ್ವಯಾ ಪ್ರೋಕ್ತಸ್ತಸ್ಯ ರೂಪಮಿದಂ ಕಥಂ ॥ ೧ ॥**

|| ಮಾರ್ಕಂಡೇಯ ಉವಾಚ ||

**ಪ್ರಕೃತಿರ್ವಿಕೃತಿಸ್ತಸ್ಯ ರೂಪೇಣ ಪರಮಾತ್ಮನಃ ।**
**ಅಲಕ್ಷ್ಯಂ ತಸ್ಯ ತದ್ರೂಪಂ ಪ್ರಕೃತಿಸ್ಸಾ ಪ್ರಕೀರ್ತಿತಾ ॥ ೨ ॥**

**ಸಾಕಾರಾ ವಿಕೃತಿರ್ಜ್ಞೇಯಾ ತಸ್ಯ ಸರ್ವಂ ಜಗತ್ಸ್ಮೃತಂ ।**
**ಪೂಜಾಧ್ಯಾನಾದಿಕಂ ಕರ್ತುಂ ಸಾಕಾರಸ್ಯೈವ ಶಕ್ಯತೇ ॥ ೩ ॥**

---

### ನಲವತ್ತಾರನೆಯ ಅಧ್ಯಾಯ.

೧-೩ ವಜ್ರನು ಪ್ರಶ್ನೆಮಾಡುತ್ತಾನೆ — ನೀವು ಇದುವರಿಗೂ ಅನೇಕ ವಿಧರಾದ ಪುರುಷರನ್ನು ಅವರವರ ಆಕಾರನಿರೂಪಣದಿಂದ ಹೇಳಿರುವಿರಿ. ರೂಪ, ಗಂಧ, ರಸ, ಶಬ್ದ, ಸ್ಪರ್ಶ ಇವೆಲ್ಲವೂ ಇಲ್ಲದಿರುವ ಪುರುಷನಿಗೆ ನೀವು ಹೇಳಿರುವ ಈ ಆಕಾರವು ಹೇಗ್ಗೆ ಉಂಟಾದೀತು ಇದಕ್ಕೆ ಉತ್ತರವಾಗಿ ಮಾರ್ಕಂಡೇಯರು ಹೇಳುತ್ತಾರೆ ಅಂತರ್ಯಾಮಿಯಾಗಿ ನಿಂತಿರುವ ಪರಮಾತ್ಮನ ಸಂಕಲ್ಪದಿಂದ ಪ್ರಕೃತಿಗೆ ಅನೇಕ ವಿಕಾರಗಳುಂಟಾಗುತ್ತವೆ ಸೂಕ್ಷ್ಮವಾಗಿರುವ ಆ ಅಂತರ್ಯಾಮಿಯ ರೂಪವು ಅಗೋಚರವಾಗಿರುತ್ತದೆ ಮೇಲೆ ತೋರುವ ರೂಪವೆಲ್ಲವೂ ಪ್ರಕೃತಿಯ ರೂಪವೇ ಆಗಿರುತ್ತದೆ ಸಾಕಾರವಾಗಿ ತೋರುತ್ತಿರುವ ಜಗತ್ತೆಲ್ಲವೂ ಆ ಪ್ರಕೃತಿಯ ವಿಕಾರ ನಿರಾಕಾರವಾದ ವಸ್ತುವು ಅಂತರ್ಯಾಮಿರೂಪ ಪೂಜಾ, ಧ್ಯಾನ ಮೊದಲಾದ ವ್ಯಾಪಾರಗಳು ಸಾಕಾರವಾದ ರೂಪದಲ್ಲೇ ಸಂಭವಿಸುತ್ತವೆ

**ಸ್ವತಸ್ತು ದೇವಸ್ಯಾಕಾರಃ ಪೂಜನೀಯೋ ಯಥಾವಿಧಿ ।**
**ಅವ್ಯಕ್ತಾ ಹಿ ಗತಿರ್ದುಃಖಂ ದೇಹಭೃದ್ಭಿರವಾಪ್ಯತೇ ॥ ೪ ॥**

**ಅತೋ ಭಗವತಾನೇನ ಸ್ವೇಚ್ಛಯಾ ತತ್ಪ್ರದರ್ಶಿತಂ ।**
**ಪ್ರಾದುರ್ಭಾವೇಷ್ವಥಾಕಾರಂ ತಂ ದಿಶಂತಿ ದಿವೌಕಸಃ ॥ ೫ ॥**

**ಏತಸ್ಮಾತ್ಕಾರಣಾತ್ಪೂಜಾ ಸಾಕಾರಸ್ಯ ವಿಧೀಯತೇ ।**
**ಹೇತುಮುಚ್ಚ ತದಾಕಾರಂ ತನ್ಮೇ ನಿಗದತಃ ಶೃಣು ॥ ೬ ॥**

**ಅರುಣಂ ರಜಸಾ ವರ್ಣಂ ತೇನ ಪದ್ಮಾಗ್ರಸನ್ನಿಭಃ ।**
**ಬ್ರಹ್ಮಾ ದೇವವರೋ ಜ್ಞೇಯಃ ಸರ್ವಭೂತನಮಸ್ಕೃತಃ ॥ ೭ ॥**

೪-೬ ದೇವತೆಗಳ ಸ್ವಾಭಾವಿಕವಾದ ಆಕಾರವೇ ಯಥಾವಿಧಿಯಾದ ಪೂಜಾದಿಗಳಿಗೆ ವಸ್ತುತಃ ಅರ್ಹವಾಗುತ್ತದೆ ಅವ್ಯಕ್ತರೂಪವಾದ ಪ್ರಕೃತಿಯು ಪೂಜಾಧ್ಯಾನಾದಿಗಳು ಅವ್ಯಕ್ತಗತಿಗೆ ಕಾರಣವಾಗುವುದರಿಂದ ಅದು ಪ್ರಾಣಿಗಳಿಗೆ ದುಃಖಪ್ರದವೇ ಆಗುತ್ತದೆ ಆದುದರಿಂದ ದೇವತೆಯು ನಿರಾಕಾರವಾದ ಆ ಸ್ವರೂಪವು ಪೂಜಾದಿಗಳಿಗೆ ಅರ್ಹವಾಗುವಂತೆ ಆ ದೇವತೆಯ ಇಚ್ಛೆಯಿಂದಲೇ ಒಂದೊಂದು ಆಕಾರದೊಡನೆ ಪ್ರಕಾಶಗೊಳಿಸಲಾಗುತ್ತದೆ ತಮ್ಮ ತಮ್ಮ ಸ್ವರೂಪವನ್ನು ತೋರ್ಪಡಿಸಿಕೊಳ್ಳುವ ಕಾಲಗಳಲ್ಲಿ ದೇವತೆಗಳೇ ಆಯಾಯ ಆಕಾರವನ್ನು ಹೊಂದುತ್ತಾರೆ ಈ ಕಾರಣದಿಂದ ನಿರಾಕಾರವಾದ ಆಯಾಯ ರೂಪಗಳಿಗೆ ಪೂಜಾದಿಗಳು ವಿಹಿತವಾಗಿವೆ ಆದುದರಿಂದ ನಿರಾಕಾರವಾದ ಪುರುಷನ ಸ್ವರೂಪವು ಅವನ ಇಚ್ಛೆಗೆ ತಕ್ಕ ಸಕಾರಣವಾದ ಆಯಾಯ ಆಕಾರವನ್ನು ಹೊಂದುತ್ತದೆ ಸಕಾರಣವಾದ ಅಂತಹ ಆಕಾರಗಳನ್ನೂ ನಿನಗೆ ಹೇಳುತ್ತೇನೆ ಕೇಳು.

೭-೯ ರಜೋಗುಣದ ಕಾರ್ಯವು ಅರುಣವರ್ಣ. ಆದುದರಿಂದ ರಜೋಗುಣಪ್ರಚುರನಾದ ಬ್ರಹ್ಮನು ಕಮಲದಲದ ಅಗ್ರಭಾಗದಂತೆ ಅರುಣವರ್ಣನಾಗಿರುತ್ತಾನೆ ಆ ಬ್ರಹ್ಮನೇ ಸರ್ವರಿಂದಲೂ ನಮಸ್ಕರಿಸಲ್ಪಟ್ಟ ದೇವತಾಶ್ರೇಷ್ಠನೂ ಆಗಿದ್ದಾನೆ ಅವನ ಪೂರ್ವಭಾಗದ ಮುಖವು ಋಗ್ವೇದದಸ್ವರೂಪ, ದಕ್ಷಿಣಭಾಗದ ಮುಖವು ಯಜುರ್ವೇದದ ಸ್ವರೂಪ, ಪಶ್ಚಿಮಭಾಗದ ಮುಖವು ಸಾಮವೇದದ ಸ್ವರೂಪ,

ಋಗ್ವೇದಃ ಪೂರ್ವವದನಂ ಯಜುರ್ವೇದಸ್ತು ದಕ್ಷಿಣಂ ।
ಪಶ್ಚಿಮಂ ಸಾಮವೇದಃ ಸ್ಯಾದಥರ್ವಣಮಥೋತ್ತರಂ ॥ ೮ ॥

ಯೇ ವೇದಾಸ್ತೇ ಮುಖಾ ಜ್ಞೇಯಾಶ್ಚತಸ್ರೋ ಬಾಹವೋ ದಿಶಃ ।
ಅಪಏವ ಜಗತ್ಸರ್ವಂ ಸ್ಥಾವರಂ ಜಂಗಮಂ ತಥಾ ॥ ೯ ॥

ತಾಶ್ಚ ಧಾರಯತೇ ಬ್ರಹ್ಮಾ ತೇನ ಹಸ್ತೇ ಕಮಂಡಲುಃ ।
ಅಕ್ಷಮಾಲಾ ವಿನಿರ್ದಿಷ್ಟಾ ಕಾಲಸ್ತು ಬ್ರಹ್ಮಣಃ ಕರೇ ॥ ೧೦ ॥

ಕಲನಾತ್ಸರ್ವಭೂತಾನಾಂ ಕಾಲ ಇತ್ಯಭಿಧೀಯತೇ ।
ಯಜ್ಞೋ ವಿಸ್ತಿರ್ಯತೇ ಸರ್ವಃ ಶುಕ್ಲಾ ಶುಕ್ಲೇನ ಕರ್ಮಣಾ ॥ ೧೧ ॥

ಶುಕ್ಲಾಶುಕ್ಲಮತೋ ಜ್ಞೇಯಂ ವಾಸಃ ಕೃಷ್ಣಾಜಿನಂ ವಿಭೋಃ ।
ಭೂಲೋಕಶ್ಚ ಭುವೋಲೋಕಃ ಸ್ವರ್ಲೋಕೋಥ ಮಹತ್ತಥಾ ॥ ೧೨ ॥

---

ಉತ್ತರಭಾಗದ ಮುಖವು ಅಥರ್ವವೇದದ ಸ್ವರೂಪ, ಆದುದರಿಂದ ವೇದಗಳೆಲ್ಲವೂ ಅವನ ಮುಖರೂಪಗಳೇ ಆಗಿವೆ ನಾಲ್ಕು ಬಾಹುಗಳೇ ನಾಲ್ಕು ದಿಕ್ಕುಗಳು, ಜಗತ್ತಿನಲ್ಲಿರುವ ಸ್ಥಾವರಜಂಗಮವಸ್ತುಗಳೆಲ್ಲವೂ ಜಲದ ಪರಿಣಾಮವೇ ಆದುದರಿಂದ ಎಲ್ಲವೂ ಪ್ರಕೃತಿಯಾದ ಜಲಸ್ವರೂಪವೇ ಆಗಿದೆ ಆ ಜಲವನ್ನೆಲ್ಲಾ ಬ್ರಹ್ಮನು ಧರಿಸಿರುವುದರಿಂದಲೇ ಅವನ ಹಸ್ತದಲ್ಲಿ ಕಮಂಡಲುವು ಧರಿಸಲ್ಪಟ್ಟಿದೆ

೧೦–೧೫ ಕಾಲವು ಅಕ್ಷಮಾಲಾ ರೂಪದಿಂದ ಕೈಯ್ಯಲ್ಲಿ ಧರಿಸಲ್ಪಟ್ಟಿದೆ ಸರ್ವಪ್ರಾಣಿಗಳ ಆಯುಃಪರಿಮಿತಿಯನ್ನು ಗಣಿಸಲು ಸಾಧನವಾಗಿರುವುದರಿಂದಲೇ ಅದಕ್ಕೆ ಕಾಲವೆಂದು ಹೆಸರು ಬಂದಿದೆ ಅವನಿಂದ ಆಚರಿಸಲ್ಪಡುವ ಯಜ್ಞಗಳೆಲ್ಲವೂ ಶುಕ್ಲಾಶುಕ್ಲ (ಪುಣ್ಯಾಪಾಪ) ಮಿಶ್ರಿತವಾದ ಕರ್ಮಗಳು ಆದುದರಿಂದಲೇ ಶುಕ್ಲ ಕೃಷ್ಣರೂಪವಾದ ಕೃಷ್ಣಾಜಿನವೇ ಅವನಿಗೆ ವಸ್ತ್ರವಾಗಿದೆ ಭೂಲೋಕ, ಭುವರ್ಲೋಕ, ಸ್ವರ್ಲೋಕ, ಮಹೋಲೋಕ, ಜನೋಲೋಕ, ತಪೋಲೋಕ, ಸತ್ಯಲೋಕಗಳೆಂಬ ಏಳು ಲೋಕಗಳು ಪ್ರಸಿದ್ಧವಾಗಿವೆ ಆ ಏಳು ಲೋಕಗಳೇ ಅವನ ರಥಕ್ಕೆ

ಜನಸ್ತಪಶ್ಚ ಸತ್ಯಂ ಚ ಸಪ್ತ ಲೋಕಾಃ ಪ್ರಕೀರ್ತಿತಾಃ ।
ಯೇ ಲೋಕಾಸ್ತೇ ರಥೇ ಹಂಸಾ ಬ್ರಹ್ಮಣಃ ಪರಮೇಷ್ಠಿನಃ　　॥ ೧೩ ॥

ವಿಷ್ಣುನಾಭೌ ಸಮುತ್ಪನ್ನಂ ಯತ್ಪದ್ಮಂ ಸಾ ಮಹೀಭುಜಃ ।
ಮೇರುಸ್ತು ಕರ್ಣಿಕಾ ತಸ್ಯ ವಿಜ್ಞೇಯಾ ರಾಜಸತ್ತಮ　　॥ ೧೪ ॥

ಸರ್ವತ್ರ ಪಾರ್ಥಿವ ಸ್ಥೈರ್ಯಂ ಧ್ಯಾನಬಂಧಮತಃ ಸ್ಥಿತಂ ।
ಪದ್ಮಾಸನೇನ ಭಗವಾನ್ ವಿಧತ್ತೇ ಪಾರ್ಥಿವೇನ ತು　　॥ ೧೫ ॥

ಆತ್ಮನಃ ಪರಮಂ ಧಾಮ ರೂಪಹೀನಂ ವಿಚಿನ್ತಯೇತ್ ।
ದೃಷ್ಟ್ಯರ್ಥಂ ಜಗತಾಮಾಸ್ತೇ ಧ್ಯಾನಸಮ್ಮೀಲಿತೇಕ್ಷಣಃ　　॥ ೧೬ ॥

ತಥೈವೌಷಧಯೋ ರಾಜನ್ ಜಗದ್ಧಾರಣಕಾರಣಾಃ ।
ಬ್ರಹ್ಮಣಸ್ತಾ ಜಟಾ ಜ್ಞೇಯಾಃ ಸರ್ವಗಸ್ಯ ಮಹಾತ್ಮನಃ　　॥ ೧೭ ॥

ಪ್ರಕಾಶಕಾನಿ ಲೋಕಸ್ಯ ವಿದ್ಯಾಸ್ಥಾನಾನಿ ಯಾನಿ ಚ ।
ತಸ್ಯಾಭರಣಜಾತಾನಿ ಜ್ಞೇಯಾನಿ ಪರಮೇಷ್ಠಿನಃ　　॥ ೧೮ ॥

ವಾಹನಗಳಾದ ಹಂಸರೂಪದಿಂದ ಅವನನ್ನು ಸೇವಿಸುತ್ತಿವೆ ವಿಷ್ಣುವಿನ ನಾಭಿಯಲ್ಲಿ ಹುಟ್ಟಿದ ಪದ್ಮವೇ ಬ್ರಹ್ಮನಿಗೆ ಆಸನವಾಗಿದೆ ಆ ಪದ್ಮಕ್ಕೆ ಮೇರುಪರ್ವತವೇ ಕರ್ಣಿಕೆಯಂತಿದೆ ಆದುದರಿಂದಲೇ ಧ್ಯಾನಬಂಧಕ್ಕೆ ತಕ್ಕ ಸ್ಥೈರ್ಯವೂ ಅದಕ್ಕೆ ಅನುಗುಣವಾದ ಸ್ಥಿತಿಯೂ ಅವನಿಗೆ ಉಂಟಾಗಿದೆ ಪಾರ್ಥಿವವಾದ ಆ ಪದ್ಮಾಸನದಿಂದಲೇ ತನ್ನ ಧ್ಯಾನಸ್ಥೈರ್ಯವನ್ನು ಪೂಜ್ಯನಾದ ಚತುರ್ಮುಖನು ಹೊಂದಿರುತ್ತಾನೆ

೧೬–೧೮ ಅಂತಹ ಧ್ಯಾನದಿಂದ ರೂಪರಹಿತವಾದ ಪರಮಾತ್ಮನ ಪವಿತ್ರವಾದ ಸ್ವರೂಪವನ್ನು ಯಾವಾಗಲೂ ಚಿಂತಿಸುತ್ತಿರುತ್ತಾನೆ ಜಗದ್ವಿಷಯವಾದ ಜ್ಞಾನಲಾಭಕ್ಕಾಗಿ ಧ್ಯಾನದಿಂದ ಮುಚ್ಚಿದ ಕಣ್ಣುಳ್ಳವನಾಗಿರುತ್ತಾನೆ ಹಾಗೆಯೇ ಜಗತ್ ಸ್ಥಿತಿಗೆ ಕಾರಣಗಳಾದ ಓಷಧಿಗಳೆಲ್ಲವೂ ಆ ಮಹಾತ್ಮನ ಜಟೆಗಳಾಗಿ ಪರಿಣಮಿಸಿರುತ್ತವೆ ಜನಗಳ ಜ್ಞಾನಕ್ಕೆ ಸಾಧಕಗಳಾದ ವಿದ್ಯಾಸ್ಥಾನಗಳೆಲ್ಲವೂ ಪ್ರಕಾಶರೂಪದಿಂದ ಆ ಬ್ರಹ್ಮನ ಆಭರಣಗಳಾಗಿವೆ. ಈ ರೀತಿ ಜಗನ್ಮಯ

ಏತದ್ಧಿ ತಸ್ಯಾಪ್ರತಿಮಸ್ಯ ರೂಪಂ
ತವೇರಿತಂ ಸರ್ವಜಗನ್ಮಯಸ್ಯ ।
ಏವಂ ಶರೀರೇಣ ಜಗತ್ಸಮಗ್ರಂ
ಸಂಧಾರಯತ್ಯೇವ ಜಗತ್ಪ್ರಧಾನಃ ॥ ೧೯ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಬ್ರಹ್ಮರೂಪನಿರ್ಮಾಣೋ ನಾಮ
ಷಟ್ ಚತ್ವಾರಿಂಶತ್ತಮೋಽಧ್ಯಾಯಃ

---

ಮೂರ್ತಿಯಾದ ಆ ಬ್ರಹ್ಮನ ಅಸದೃಶವಾದ ರೂಪವನ್ನು ನಿನಗೆ ಹೇಳಿರುತ್ತೇನೆ. ಈ ಪ್ರಕಾರವಾದ ತನ್ನ ಶರೀರದಿಂದ ಬ್ರಹ್ಮನು ಜಗತ್ತಿಗೆ ಪ್ರಧಾನನಾಗಿ ಎಲ್ಲಾ ಲೋಕಗಳನ್ನೂ ಧರಿಸಿರುವನು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ಮೂರನೆಯ ಖಂಡದಲ್ಲಿ ಮಾರ್ಕಂಡೇಯ
ವಜ್ರ ಸಂವಾದದಲ್ಲಿ ಬ್ರಹ್ಮರೂಪನಿರ್ಮಾಣವೆಂಬ
ನಲವತ್ತಾರನೆಯ ಅಧ್ಯಾಯ ಮುಗಿದಿದೆ.



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಸಪ್ತಚತ್ವಾರಿಂಶತ್ತಮೋಽಧ್ಯಾಯಃ ||

### || ಮಾರ್ಕಂಡೇಯ ಉವಾಚ ||

**ಪರಸ್ಯ ಪುರುಷಸ್ಯೈಷಾ ಸಂಸಾರೇ ವಿಕೃತಿರ್ಮತಾ ।**
**ಸರ್ವಾ ಚ ವಿಕೃತಿಃ ಕೃಷ್ಣಾ ತೇನ ಸಂಸಾರಪಾಲನಂ ॥ ೧ ॥**

**ಕೃಷ್ಣರೂಪಂ ಸ ಭಗವಾನ್ ವಿಧತ್ತೇ ಭೂತಭಾವನಃ ।**
**ಬ್ರಹ್ಮಣ್ಯೈವ ಹರೇಃ ಪ್ರೋಕ್ತಂ ಸರ್ವಾಭರಣಧಾರಣಂ ॥ ೨ ॥**

**ಬಿಭರ್ತಿ ವಕ್ಷಸಾ ಜ್ಞಾನಂ ಕೌಸ್ತುಭಂ ವಿಮಲಂ ಹರಿಃ ।**
**ಕೃಷ್ಣಾ ದೀರ್ಘಾ ವಿಚಿತ್ರಾ ಚ ವನಮಾಲಾ ಪ್ರಕೀರ್ತಿತಾ ॥ ೩ ॥**

---

### ನಲವತ್ತೇಳನೆಯ ಅಧ್ಯಾಯ.

೧-೩ ಮಾರ್ಕಂಡೇಯರು ಹೇಳುತ್ತಾರೆ.—ಪರಮಪುರುಷನಾಗಿರುವ ಮಹಾವಿಷ್ಣುವಿಗೂ ಸಹ ಸಂಸಾರಾವಸ್ಥೆಯಲ್ಲಿ ನಾನಾ ವಿಧವಾದ ವಿಕಾರಗಳುಂಟಾಗುತ್ತವೆ ಅವನ ಸಂಪೂರ್ಣರೂಪದ ವಿಕಾರವು ಕೃಷ್ಣವರ್ಣವುಳ್ಳದ್ದು ಇದರಿಂದ ಜಗತ್ತಿನ ಸ್ಥಿತಿ ಸಂಸಾರಗಳು ಉಂಟಾಗುತ್ತವೆ ಅಂತಹ ಪರಮಪುರುಷನು ಜಗತ್ತಿನ ಸ್ಥಿತಿ ರಕ್ಷಣೆಗಳಿಗಾಗಿ ನಾನಾವಿಧವಾದ ಅನಂತಶಕ್ತಿಮಾಹಾತ್ಮ್ಯಗಳಿಂದ ಕೂಡಿ ಕೃಷ್ಣರೂಪವನ್ನು ಹೊಂದುತ್ತಾನೆ ಬ್ರಹ್ಮನಿಗಿರುವಂತೆಯೇ ಹರಿಗೂ ಕೂಡ ಎಲ್ಲಾ ಆಭರಣಧಾರವೂ ಉಂಟು ಆ ಹರಿಯು ಜ್ಞಾನದೇವತೆಯಾಗಿಯೂ, ಶುದ್ಧವಾಗಿಯೂ ಇರುವ ಕೌಸ್ತುಭಮಣಿಯನ್ನು ಹೃದಯದಲ್ಲಿ ಧರಿಸಿರುತ್ತಾನೆ ಕಪ್ಪಾಗಿಯೂ, ದೀರ್ಘವಾಗಿಯೂ ನಾನಾವರ್ಣರಂಜಿತವಾಗಿಯೂ ಇರುವ ವನಮಾಲೆಯನ್ನು ಧರಿಸಿರುವನು

ಯಥಾ ಸರ್ವಮಿದಂ ಬದ್ಧಂ ಜಗದ್ಸ್ಥಾವರಜಂಗಮಂ ।
ಅವಿದ್ಯಾವಸನಂ ತಸ್ಯ ಸಂಸಾರಪರಿಪಾಲಿನೀ ॥ ೪ ॥

ವಿದ್ಯಾ ಶುಕ್ಲಾ ವಿನಿರ್ದಿಷ್ಟಾ ಕೃಷ್ಣಮಜ್ಞಾನಮುಚ್ಯತೇ ।
ಅಜ್ಞಾನವಿದ್ಯಾ ಮಧ್ಯಸ್ಥಾ ತ್ವವಿದ್ಯಾ ಪರಿಕೀರ್ತಿತಾ ॥ ೫ ॥

ನ ಕೃಷ್ಣಾ ನ ತಥಾ ಶುಕ್ಲಾ ತೇನ ವಿದ್ಯೇಯಮುತ್ತಮಾ ।
ಅಂತರಾಲಂ ಬಿಭರ್ತ್ಯೇವ ಸುವರ್ಣಕನಕೋಪಮಂ ॥ ೬ ॥

ಮನಸ್ತು ಗರುಡೋ ಜ್ಞೇಯಃ ಸರ್ವಭೂತಶರೀರಗಂ ।
ತಸ್ಮಾಚ್ಛೀಘ್ರತರಂ ನಾಸ್ತಿ ತಥೈವ ಬಲವತ್ತರಂ ॥ ೭ ॥

ದಿಶಶ್ಚತಸ್ರೋ ಧರ್ಮಜ್ಞ ತಾವತ್ಯೋ ವಿದಿಶಸ್ತಥಾ ।
ಬಾಹವೋಽಷ್ಟೌ ವಿನಿರ್ದಿಷ್ಟಾಃ ತಸ್ಯ ದೇವಸ್ಯ ಶಾರ್ಙ್ಗಿಣಃ ॥ ೮ ॥

೪–೭ ಚರಾಚರಾತ್ಮಕವಾದ ಎಲ್ಲಾ ಜಗತ್ತೂ ಬದ್ಧಾವಸ್ಥೆಗೆ ಸಿಲುಕಿರುತ್ತದೆ ಕರ್ಮರೂಪವಾದ ಅವಿದ್ಯಾ ಎಂಬ ವಿಚಿತ್ರಶಕ್ತಿಯಿಂದ ಆವರಿಸಲ್ಪಟ್ಟು ಇಂತಹ ಜಗತ್ತು ಆ ಪರಮಾತ್ಮನ ಲೀಲೆಗ ಸಾಧನವಾಗಿ ಸಂಸಾರಕ್ಕೆ ಅವಕಾಶ ಕೊಟ್ಟಿದೆ ವಿದ್ಯೆ ಎಂಬುದು ಶುಕ್ಲವರ್ಣ ಉಳ್ಳದ್ದೆಂದೂ ಅಜ್ಞಾನವೆಂಬುದು ಕೃಷ್ಣವರ್ಣ ಉಳ್ಳದ್ದೆಂದೂ ಹೇಳಲ್ಪಟ್ಟಿದೆ ಆ ವಿದ್ಯೆಗೂ, ಅಜ್ಞಾನಕ್ಕೂ ಮಧ್ಯಸ್ಥವಾಗಿ ಉಭಯಮಿಶ್ರವಾದ ಕರ್ಮಶಕ್ತಿಯೇ ಅವಿದ್ಯಾ ಎನಿಸುತ್ತದೆ ಶುಕ್ಲವೂ, ಕೃಷ್ಣವೂ ಆಗದೆ ಇರುವ ಪ್ರಕಾಶವಸ್ತುವೇ ವಿದ್ಯೆ ಎನಿಸುತ್ತದೆ ಆದುದರಿಂದಲೇ ಇದು ಉತ್ತಮವೆಂದು ಹೇಳಲ್ಪಟ್ಟಿದೆ ಷೋಡಶವರ್ಣಸುವರ್ಣದಂತಿರುವ ತೇಜೋಮಯವಾದ ಅಂತರಾಳವನ್ನೂ ಧರಿಸಿರುತ್ತಾನೆ ಸರ್ವಪ್ರಾಣಿಗಳ ಶರೀರದಲ್ಲಿಯೂ ವ್ಯಾಪಿಸಿರುವ ಮನಸ್ಸನ್ನೇ ಗರುಡನ ರೂಪದಲ್ಲಿ ಧರಿಸಿರುತ್ತಾನೆ ಆ ಗರುಡನಿಗಿಂತಲೂ ಬಲವತ್ತರವಾಗಿಯೂ, ವೇಗವಾಗಿಯೂ ಇರುವ ಪ್ರಾಣಿಯು ಯಾವುದೂ ಇಲ್ಲ

೮–೧೦ ನಾಲ್ಕು ದಿಕ್ಕುಗಳು ಮತ್ತು ನಾಲ್ಕು ವಿದಿಕ್ಕುಗಳ ಸೇರಿ ಶಾರ್ಙ್ಗಾಯುಧಧಾರಿಯಾದ ಆ ಮಹಾವಿಷ್ಣುವಿಗೆ ಎಂಟು ಬಾಹುಗಳಾಗಿ ನಿಂತಿವೆ ಬಲ, ಜ್ಞಾನ,

ಬಲಂ ಜ್ಞಾನಂ ತಥೈಶ್ವರ್ಯಂ ಶಕ್ತಿಶ್ಚ ಯದುನಂದನ ।
ವಿಜ್ಞೇಯಂ ದೇವದೇವಸ್ಯ ತಸ್ಯ ವಕ್ತ್ರಚತುಷ್ಟಯಂ　　|| ೯ ||

ವಾಸುದೇವಶ್ಚ ಭಗವಾನ್ ತಥಾ ಸಂಕರ್ಷಣಃ ಪ್ರಭುಃ ।
ಪ್ರದ್ಯುಮ್ನಶ್ಚಾನಿರುದ್ಧಶ್ಚ ಬಲಾದ್ಯಾಃ ಪರಿಕೀರ್ತಿತಾಃ　　|| ೧೦ ||

ದ್ವೌ ದ್ವೌ ಭುಜೌ ತು ವಿಜ್ಞೇಯೌ ಪ್ರತಿವಕ್ತ್ರಂ ಮಹಾತ್ಮನಃ ।
ವಾಸುದೇವಸ್ಯ ಕರಯೋಃ ಜ್ಞಾತವ್ಯೌ ಸೂರ್ಯರಾತ್ರಿಪೌ　　|| ೧೧ ||

ಸಂಕರ್ಷಣಸ್ಯ ಕರಯೋಃ ತಥಾ ಮುಸಲಲಾಂಗಲೇ ।
ಪ್ರದ್ಯುಮ್ನಸ್ಯ ತಥಾ ಜ್ಞೇಯೌ ಚಾಪಬಾಣೌ ಮಹಾಭುಜ　　|| ೧೨ ||

ಅನಿರುದ್ಧಸ್ಯ ವಿಜ್ಞೇಯೌ ಚರ್ಮಖಡ್ಗೌ ವಿಚಕ್ಷಣೈಃ ।
ಪುರುಷಪ್ರಕೃತೀ ಜ್ಞೇಯೌ ಸೂರ್ಯಾಚಂದ್ರಮಸಾವುಭೌ　　|| ೧೩ ||

ಏತೇ ಚ ವಾಸುದೇವಸ್ಯ ಕರೇ ಚಕ್ರಗದೇ ಮತೇ ।
ಕಾಲಂ ಚ ಲಾಂಗಲಂ ವಿದ್ಧಿ ಮೃತ್ಯುಂ ಚ ಮುಸಲಂ ತಥಾ　　|| ೧೪ ||

---

ಐಶ್ವರ್ಯ, ಶಕ್ತಿ ಈ ನಾಲ್ಕೂ ಆ ದೇವದೇವನ ಮುಖಗಳಾಗಿ ಪರಿಣಮಿಸಿವ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಇವು ಆ ಮಹಾವಿಷ್ಣುವಿನ ಬಲಗಳು ಒಂದೊಂದು ಮುಖಕ್ಕೂ ಎರಡೆರಡು ಭುಜಗಳು ಉಂಟಾಗಿವೆ

೧೧-೧೪　ವಾಸುದೇವನ ಎರಡು ಕೈಗಳಲ್ಲಿಯೂ ಇರುವ ಸೂರ್ಯ ಚಂದ್ರರು ಪ್ರಕೃತಿ ಮತ್ತು ಪುರುಷರ ಅಂಶಗಳು　ಇವರು ಚಕ್ರರೂಪದಲ್ಲಿಯೂ, ಗದಾರೂಪದಲ್ಲಿಯೂ ಇರುವರು　ಸಂಕರ್ಷಣನ ಕೈಗಳಲ್ಲಿ ಮುಸಲ (ಒನಕೆ) ಲಾಂಗಲ (ನೇಗಿಲು) ಇವು ಇರುತ್ತವೆ　ಪ್ರದ್ಯುಮ್ನನ ಕೈಗಳಲ್ಲಿ ಧನಸ್ಸು ಮತ್ತು ಬಾಣಗಳು, ಅನಿರುದ್ಧನ ಕೈಗಳಲ್ಲಿ ಕತ್ತಿ, ಗುರಾಣಿ ಇವೂ ಇರುತ್ತವೆ　ಲಾಂಗಲವೇ ಕಾಲನ ರೂಪ　ಮುಸಲವೇ ಮೃತ್ಯುವಿನ ರೂಪ　ಇವುಗಳಿಂದ ಸಂಕರ್ಷಣ ರೂಪಿಯಾದ ರುದ್ರನು ಜಗತ್ತನ್ನು ಸಳೆಯುತ್ತಾನೆ

ತಾಭ್ಯಾಂ ಸಂಕರ್ಷಣೋ ರುದ್ರಃ ಕರ್ಷತೀದಂ ಚರಾಚರಂ ।
ಪ್ರದ್ಯುಮ್ನಸ್ಯ ಕರೇ ವಹ್ನೇಃ ಶಾರ್ಙ್ಗಂ ಚಾಪಂ ಚ ಯತ್ ಸ್ಮೃತಂ ॥
ಧ್ಯೇಯಂ ತು ಪರಮಂ ಲಕ್ಷ್ಯಂ ತಾಭ್ಯಾಂ ಭಿಂದಂತಿ ಯೋಗಿನಃ ।
ಬ್ರಹ್ಮಣಸ್ತ್ವನಿರುದ್ಧಸ್ಯ ಕರೇ ಚರ್ಮ ಮಹಾಭುಜ ॥ ೧೬ ॥

ಅಜ್ಞಾನಾವರಣಂ ಜ್ಞೇಯಂ ಜಗತ್ಸೃಷ್ಟಿಪ್ರಯೋಜನಂ ।
ವೈರಾಗ್ಯಂ ನಂದಕಂ ಖಡ್ಗಂ ಛಿತ್ವಾ ವೈ ತೇನ ಬಂಧನಂ ।
ನದಂತಿ ಯೋಗಿನೋ ಯಸ್ಮಾತ್ತಸ್ಮಾತ್ತನ್ನಂದಕಂ ಸ್ಮೃತಂ ॥ ೧೭ ॥

ಏತದ್ಧಿ ತಸ್ಯಾಪ್ರತಿಮಸ್ಯ ರೂಪಂ
ತವೇರಿತಂ ಸರ್ವಜಗನ್ಮಯಸ್ಯ ।
ಏವಂ ಶರೀರೇಣ ಜಗತ್ಸಮಗ್ರಂ
ಬಿಭರ್ತಿ ದೇವಃ ಸ ಜಗತ್ಪ್ರಧಾನಃ ॥ ೧೮ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ವಿಷ್ಣುರೂಪನಿರ್ಮಾಣೋ ನಾಮ
ಸಪ್ತಚತ್ವಾರಿಂಶತ್ತಮೋಽಧ್ಯಾಯಃ

೧೫-೧೮ ಪ್ರದ್ಯುಮ್ನನ ಕೈಯಲ್ಲಿರುವ ಶಾರ್ಙ್ಗವೆಂಬ ಧನುಸ್ಸು ವಹ್ನಿಯ ಸ್ವರೂಪ ಈ ಧನುಸ್ಸಿಗೆ ಲಕ್ಷ್ಯವಾದ ವಸ್ತುವೇ ಧ್ಯೇಯವಾದ ಪರಮಪುರುಷ ಸ್ವರೂಪ, ಈ ಚಾಪಬಾಣಗಳಿಂದಲೇ ಯೋಗಿಗಳು ಬ್ರಹ್ಮವಸ್ತುವನ್ನು ಸೇಧನ ಮಾಡುತ್ತಾರೆ ಅನಿರುದ್ಧರೂಪಿಯಾದ ಬ್ರಹ್ಮನ ಕೈಯ್ಯಿನಲ್ಲಿ ಗುರಾಣಿಯು ಇರುತ್ತದೆಯಷ್ಟೆ ಇದು ಅಜ್ಞಾನರೂಪವಾದ ಆವರಣವಸ್ತುವಾಗಿ ಜಗತ್ಸೃಷ್ಟಿಗ ಸಾಧಕವಾಗುತ್ತದ ನಂದಕವೆಂಬ ಖಡ್ಗವು ವೈರಾಗ್ಯದ ಸ್ವರೂಪ. ಈ ಖಡ್ಗದಿಂದ ಸಂಸಾರ ಬಂಧವನ್ನು ಛೇದಿಸಿ ಯೋಗಿಗಳು ಪರಮಾತ್ಮ ಪ್ರಾಪ್ತಿಯಿಂದ ಸಂತುಷ್ಟ ರಾಗುತ್ತಾರೆ ಆದುದರಿಂದಲೇ ಇದಕ್ಕೆ ನಂದಕವೆಂದು ಹೆಸರಿದೆ. ಅಸದೃಶ ನಾಗಿಯೂ, ಸರ್ವಜಗನ್ಮಯನಾಗಿಯೂ ಇರುವ ಆ ಮಹಾವಿಷ್ಣುವಿನ ರೂಪವನ್ನು ಈ ರೀತಿ ನಿನಗೆ ಹೇಳಿರುವೆನು ಜಗತ್ಪ್ರಧಾನ ಅ ಮಹಾಪುರುಷನು ಈ ರೀತಿಯಾದ ಅನೇಕ ಶರೀರಗಳಿಂದ ಎಲ್ಲಾ ಜಗತ್ತನ್ನೂ ಸರ್ವಶರೀರಿಯಾಗಿ ನಿಂತು ಧರಿಸುತ್ತಾನೆ

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯ ಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ವಿಷ್ಣುರೂಪನಿರ್ಮಾಣವೆಂಬ
ನಲವತ್ತೇಳನೆಯ ಅಧ್ಯಾಯ ಮುಗಿದಿದೆ

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಅಷ್ಟಚತ್ವಾರಿಂಶತ್ತಮೋಽಧ್ಯಾಯಃ ||

**|| ಮಾರ್ಕಂಡೇಯ ಉವಾಚ ||**

**ಸದ್ಯೋಜಾತಂ ವಾಮದೇವಮಘೋರಂ ಚ ಮಹಾಭುಜ ।**
**ತಥಾ ತಂಪುರುಷಂ ಜ್ಞೇಯಮೀಶಾನಂ ಪಂಚಮಂ ಮುಖಂ || ೧ ||**

**ಸದ್ಯೋಜಾತಂ ಮಹೀ ಪ್ರೋಕ್ತಾ ವಾಮದೇವಂ ತಥಾ ಜಲಂ ।**
**ತೇಜಸ್ತ್ವಘೋರಂ ವಿದ್ಯಾತ್ತಂ ವಾಯುಸ್ತತ್ಪುರುಷಂ ಮತಂ || ೨ ||**

**ಈಶಾನೇ ಚ ತಥಾಕಾಶಮೂರ್ಧ್ವಸ್ಥಂ ಪಂಚಮಂ ಮುಖಂ ।**
**ವಿಭಾಗೇನಾಥ ವಕ್ಷ್ಯಾಮಿ ಶಂಭೋರ್ವದನಪಂಚಕಂ || ೩ ||**

---

### ನಲವತ್ತೆಂಟನೆಯ ಅಧ್ಯಾಯ

೧-೩ ಮಾರ್ಕಂಡೇಯರು ಹೇಳುತ್ತಾರೆ —ಮಹಾದೇವನ ರೂಪನ್ನು ನಿರ್ಮಾಣಮಾಡುವಾಗ ಅವನ ರೂಪವನ್ನು ಈ ರೀತಿ ತಿಳಿಯಬೇಕು ಸದ್ಯೋಜಾತ, ವಾಮದೇವ, ಅಘೋರ ತಂಪುರುಷ ಎಂಬ ನಾಲ್ಕು ಮುಖಗಳಿಂದಲೂ ಈಶಾನವೆಂಬ ಐದನೆಯ ಮುಖದಿಂದಲೂ ಕೂಡಿರುವಂತೆ ನಿರ್ಮಿಸಬೇಕು ಸದ್ಯೋಜಾತವೆಂಬುದು ಭೂಮಿಯ ಅಂಶ, ವಾಮದೇವವೆಂಬುದು ಜಲದ ಅಂಶ, ಅಘೋರವೆಂಬುದು ತೇಜಸ್ಸಿನ ಅಂಶ, ತಂಪುರುಷವೆಂಬುದು ವಾಯುವಿನ ಅಂಶ ಮೇಲಿರುವ ಈಶಾನವೆಂಬ ಮುಖವು ಆಕಾಶದ ಸ್ವರೂಪ, ಅದೇ ಐದನೆಯ ಶಂಭುವಿನ ಮುಖ. ಈ ಐದು ಮುಖಗಳನ್ನೂ ಬೇರೆಬೇರೆಯಾಗಿ ಮುಂದೆ ಹೇಳುತ್ತೇನೆ

ಮಹಾದೇವಮುಖಂ ಜ್ಞೇಯಂ ಪೂರ್ವಂ ಶಂಭೋರ್ಮಹಾತ್ಮನಃ ।
ನೇತ್ರಾಣಿ ತ್ರೀಣಿ ತಸ್ಯಾಂಗ ಸೋಮಸೂರ್ಯಹುತಾಶನಾಃ ॥ ೪ ॥

ದಕ್ಷಿಣಂ ತು ಮುಖಂ ರೌದ್ರಂ ಭೈರವಂ ತತ್ಪ್ರಕೀರ್ತಿತಂ ।
ಪಶ್ಚಿಮಂ ಯನ್ಮುಖಂ ತಸ್ಯ ನಂದಿವಕ್ತ್ರಂ ತದುಚ್ಯತೇ ॥ ೫ ॥

ಉಮಾವಕ್ತ್ರಂ ಚ ವಿಜ್ಞೇಯಂ ತಸ್ಯ ದೇವಸ್ಯ ಚೋತ್ತರಂ ।
ಸದಾಶಿವಾಖ್ಯಂ ವಿಜ್ಞೇಯಂ ಪಾವನಂ ತಸ್ಯ ಪಂಚಮಂ ॥ ೬ ॥

ತ್ರಿಲೋಚನಾನಿ ಸರ್ವಾಣಿ ವಾಮದೇವಂ ದ್ವಿಲೋಚನಂ ।
ಮಹಾದೇವಮುಖಂ ಭೂಮಿಃ ತೇಜಃಸ್ಯಾದ್ಭೈರವಂ ಮುಖಂ ॥ ೭ ॥

ನಂದಿವಕ್ತ್ರಂ ತಥಾ ವಾಯುರುಮೇಯಂ ಚಾಪ ಉಚ್ಯತೇ ।
ಸದಾಶಿವಮುಖಂ ಜ್ಞೇಯಮಾಕಾಶಂ ಯದುನಂದನ ॥ ೮ ॥

ದಿಶೋ ದಶ ಭುಜಾಸ್ತಸ್ಯ ವಿಜ್ಞೇಯಂ ವದನಂ ಪ್ರತಿ ।
ಮಹಾದೇವಕರೇ ಜ್ಞೇಯಾತ್ವಕ್ಷಮಾಲಾಕಮಂಡಲೂ ॥ ೯ ॥

---

೪-೬ ಮಹಾತ್ಮನಾದ ಆ ಶಂಭುವಿನ ಪೂರ್ವಭಾಗದ ಮುಖವು ಮಹಾದೇವಮುಖವೆಂದು ತಿಳಿಯಬೇಕು ಆ ಮುಖಕ್ಕೆ ಚಂದ್ರ, ಸೂರ್ಯ, ಅಗ್ನಿಗಳು ಮೂರು ಕಣ್ಣುಗಳಾಗಿರುತ್ತಾರೆ ರೌದ್ರವಾದ ದಕ್ಷಿಣ ಮುಖವು ಭೈರವವೆಂದು ಹೇಳಲ್ಪಟ್ಟಿದೆ ಪಶ್ಚಿಮ ಭಾಗದ ಮುಖವು ನಂದಿವಕ್ತ್ರವೆಂದು ಹೇಳಲ್ಪಟ್ಟಿದೆ ಉತ್ತರ ಭಾಗದ ಮುಖವು ಉಮಾವಕ್ತ್ರವೆಂದು ಹೇಳಲ್ಪಟ್ಟಿದೆ ಐದನೆಯ ಪವಿತ್ರವಾದ ಮುಖವು ಸದಾಶಿವವೆಂದು ಹೇಳಲ್ಪಟ್ಟಿದೆ

೭-೧೦ ಎಲ್ಲಾ ಮುಖಗಳಿಗೂ ಮೂರು ಕಣ್ಣುಗಳುಂಟು ವಾಮದೇವವೆಂಬ ಮುಖಕ್ಕೆ ಮಾತ್ರ ಎರಡೇ ಕಣ್ಣುಗಳು ಮಹಾದೇವ ಮುಖವು ಭೂಮಿಯ ಸ್ವರೂಪ, ಭೈರವ ಮುಖವು ತೇಜಸ್ಸಿನ ಸ್ವರೂಪ, ನಂದಿವಕ್ತ್ರವೆಂಬ ಮುಖವು ವಾಯುವಿನ ಸ್ವರೂಪ, ಉಮಾವಕ್ತ್ರವು ಬಲದ ಸ್ವರೂಪ, ಸದಾಶಿವ ಮುಖವು ಆಕಾಶ ರೂಪವೆಂದೂ ತಿಳಿಯಬೇಕು ಆಯಾಯ ಮುಖಕ್ಕೆ ತಕ್ಕಂತೆ ಹತ್ತು ದಿಕ್ಕುಗಳೂ ಹತ್ತು ಭುಜಗಳಾಗುತ್ತವೆ ಮಹಾದೇವನ ಕೈಗಳಲ್ಲಿ ಅಕ್ಷಮಾಲೆ

**ಸದಾಶಿವಕರೇ ಜ್ಞೇಯೌ ಚಾಪಬಾಣೌ ಮಹಾಭುಜ ।**
**ಮಾಹೇಶ್ವರಂ ತತಶ್ಚಾಪಂ ಪಿನಾಕಮಿತಿ ಶಬ್ದಿತಂ ॥ ೧೦ ॥**

**ತೇಷಾಂ ತು ಪೂರ್ವಮೇವೋಕ್ತಂ ವ್ಯಾಖ್ಯಾನಂ ರಿಪುಸೂದನ ।**
**ದಂಡಶ್ಚ ಮಾತುಲುಂಗಶ್ಚ ಕರಯೋರ್ಭೈರವಸ್ಯ ತು ॥ ೧೧ ॥**

**ಮೃತ್ಯುದಂಡೌ ವಿನಿರ್ದಿಷ್ಟೌ ಮಾತುಲುಂಗಸ್ತಥಾ ಕರೇ ।**
**ಜಗದ್ಬೀಜಸ್ಯ ಸರ್ವಸ್ಯ ಯೋ ರಾಜನ್ ಪರಮಾಣವಃ ॥ ೧೨ ॥**

**ತೈಃ ಪೂರ್ಣಂ ಬೀಜರತ್ನಂ ತು ಭೈರವಸ್ಯ ಕರೇ ಸ್ಮೃತಂ ।**
**ಚರ್ಮಶೂಲೇ ಕರೇ ಜ್ಞೇಯೇ ನಂದಿನೋ ಯದುನಂದನ ॥ ೧೩ ॥**

**ಪೂರ್ವಮೇವ ಚ ತೇ ಪ್ರೋಕ್ತಂ ಧರ್ಮವ್ಯಾಕರಣಂ ಮಯಾ ।**
**ತ್ರಿಶೂಲದಂಡಮವ್ಯಕ್ತಂ ಶೂಲೇಷು ವ್ಯಕ್ತತಾಂ ಗತಂ ॥ ೧೪ ॥**

ಮತ್ತು ಕಮಂಡಲುಗಳಿರಬೇಕು ಸದಾಶಿವನ ಕೈಗಳಲ್ಲಿ ಧನುಸ್ಸು ಮತ್ತು ಬಾಣಗಳೂ ಇರುತ್ತವೆ ಮಹೇಶ್ವರನ ಈ ಧನುಸ್ಸಿಗೆ ಪಿನಾಕವೆಂದು ಹೆಸರು ಇವುಗಳ ವ್ಯಾಖ್ಯಾನವನ್ನು ಹಿಂದೆಯೇ ಹೇಳಿರುತ್ತೇವೆ.

೧೧-೧೪ ಭೈರವನ ಕೈಗಳಲ್ಲಿ ದಂಡಮಾತುಲುಂಗಗಳಿವೆ ಮೃತ್ಯುವೇ ದಂಡರೂಪದಿಂದಲೂ ಜಗತ್ತಿಗೆ ಕಾರಣಗಳಾದ ಪರಮಾಣುಗಳಿಂದ ಪರಿಪೂರ್ಣವಾದ ಬೀಜರತ್ನವು ಮಾತುಲುಂಗವೆಂಬ ಆಯುಧರೂಪದಿಂದಲೂ ಕೈಗಳಲ್ಲಿವೆ ನಂದಿಯ ಕೈಗಳಲ್ಲಿ ಗುರಾಣಿ ಮತ್ತು ಶೂಲಗಳಿವೆ ಧನುರ್ವಿಷಯವಾದ ವ್ಯಾಖ್ಯಾನವನ್ನೆಲ್ಲಾ ನಿನಗೆ ಮೊದಲೇ ಹೇಳಿರುವೆನು ಅವ್ಯಕ್ತರೂಪವೇ ತ್ರಿಶೂಲದಂಡವಾಗಿ ಅಭಿವ್ಯಕ್ತಿ ಹೊಂದಿದೆ

೧೫-೧೮ ಮೂರು ಶೂಲಗಳುಳ್ಳ ಆ ತ್ರಿಶೂಲ ದಂಡವು ಸತ್ವರಜಸ್ತಮೋರೂಪಗಳಾದ ಪ್ರಕೃತಿಯ ಮೂರು ಭಾಗಗಳುಳ್ಳದ್ದಾಗಿದೆ ದೇವಿಯ ಎರಡು ಕೈ

ಸತ್ತ್ವಂ ರಜಸ್ತಮಶ್ಚೈವ ವಿಜ್ಞಾತವ್ಯಂ ನೃಪೋತ್ತಮ ।
ದರ್ಪಣೇನ್ದೀವರೇ ಜ್ಞೇಯೇ ತಥಾ ದೇವ್ಯಾಃ ಕರದ್ವಯೇ ॥ ೧೫ ॥

ಆದರ್ಶಂ ನಿರ್ಮಲಂ ಜ್ಞಾನಂ ವೈರಾಗ್ಯಂ ಚ ತಥೋತ್ಪಲಂ ।
ಮಹಾದೇವಸ್ಯ ದೇವಸ್ಯ ವ್ಯಾಖ್ಯಾತಾ ಬ್ರಾಹ್ಮಣಾ ಜಟಾಃ ॥ ೧೬ ॥

ಐಶ್ವರ್ಯಂ ತು ಕಲಾ ಚಾಂದ್ರೀ ಮೂರ್ಧ್ನಿ ಶಂಭೋಃ ಪ್ರಕೀರ್ತಿತಾ ।
ತ್ರೈಲೋಕ್ಯಶಮನಃ ಕ್ರೋಧೋ ವಾಸುಕಿರ್ನಾಮತಃ ಸ್ಮೃತಃ ॥ ೧೭ ॥

ತೃಷ್ಣಾ ವಿಶಾಲಾ ಚಿತ್ರಾ ಚ ವ್ಯಾಘ್ರಚರ್ಮ ಪ್ರಕೀರ್ತಿತಂ ।
ವೃಷೋ ಹಿ ಭಗವಾನ್ ಧರ್ಮಃ ಚತುಷ್ಪಾದಃ ಪ್ರಕೀರ್ತಿತಃ ॥ ೧೮ ॥

ಜಗದುತ್ಪಾದಕಂ ವಸ್ತು ಪ್ರಕೃತಿಃ ಸಾ ಪ್ರಕೀರ್ತಿತಾ ।
ಶುಕ್ಲಾ ಚ ಪ್ರಕೃತಿಃ ಸರ್ವಾ ತೇನ ಶುಕ್ಲೋ ಮಹೇಶ್ವರಃ ॥ ೧೯ ॥

---

ಗಳಲ್ಲಿಯೂ ಕನ್ನಡಿ ಮತ್ತು ಇಂದೀವರಗಳಿವೆ ನಿರ್ಮಲವಾದ ಕನ್ನಡಿಯೇ ಜ್ಞಾನರೂಪ, ಇಂದೀವರವೇ ವೈರಾಗ್ಯರೂಪ ಮಹಾದೇವನಾದ ರುದ್ರನ ಮೂರ್ತಿಗೂ ಸಹ ಬ್ರಹ್ಮನಿಗೆ ಹೇಳಿರುವಂತೆ ಜಟಾಕಲಾಪಗಳಿರಬೇಕೆಂದು ಹೇಳಿದ್ದಾಗಿದೆ. ಐಶ್ವರ್ಯರೂಪವಾದ ಚಂದ್ರಕಲೆಯು ಆ ಶಂಭುವಿನ ತಲೆಯ ಮೇಲೆ ಇರುತ್ತದೆ ಲೋಕತ್ರಯವನ್ನೂ ನಾಶಮಾಡುವ ಕ್ರೋಧವೇ ವಾಸುಕಿಯ ರೂಪದಿಂದ ಸೇರಿಕೊಂಡಿದೆ ವಿಶಾಲವಾಗಿಯೂ ವಿಚಿತ್ರವಾಗಿಯೂ ಇರುವ ವ್ಯಾಘ್ರಚರ್ಮವೇ ತೃಷ್ಣಾರೂಪ, ವೃಷಭವೇ ಚತುಷ್ಪಾದ ಉಳ್ಳ ಧರ್ಮದ ಸ್ವರೂಪ

೧೯–೨೦ ಜಗತ್ತಿಗೆ ಉತ್ಪಾದಕವಾದ ವಸ್ತುವೇ ಪ್ರಕೃತಿ, ಅದು ಶುಕ್ಲವರ್ಣವುಳ್ಳದ್ದು ಆದುದರಿಂದ ಮಹೇಶ್ವರನೂ ಶುಕ್ಲವರ್ಣದಿಂದಿರುವನು ಅಸವೃಶನಾಗಿಯೂ ಜಗನ್ಮಯನಾಗಿಯೂ ಇರುವ ರುದ್ರದೇವನ ರೂಪವನ್ನು ಈ ರೀತಿ

**ಏತದ್ಧಿ ತಸ್ಯಾಪ್ರತಿಮಸ್ಯ ರೂಪಂ**
**ತವೇರಿತಂ ಸರ್ವಜಗನ್ಮಯಸ್ಯ ।**
**ಏವಂ ಶರೀರೇಣ ಜಗತ್ಸಮಗ್ರಂ**
**ಸಧಾರಯತ್ಯೇವ ಜಗತ್ಪ್ರಧಾನಃ　　॥ ೨೦ ॥**

**ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ**
**ವಜ್ರಸಂವಾದೇ ಮಹಾದೇವರೂಪನಿರ್ಮಾಣೋ**
**ನಾಮಾಷ್ಟಾಚತ್ವಾರಿಂಶತ್ತಮೋಽಧ್ಯಾಯಃ**

ನಿನಗೆ ಹೇಳಿದ್ದಾಯಿತು ಇಂತಹ ಶರೀರದಿಂದಲೇ ಅವನು ಪ್ರಧಾನನಾಗಿ ಜಗತ್ತನ್ನು ಧರಿಸಿದ್ದಾನೆ

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯ ಖಂಡದಲ್ಲಿ ಮಾರ್ಕಂಡೇಯ
ವಜ್ರ ಸಂವಾದದಲ್ಲಿ ಮಹಾದೇವ ರೂಪನಿರ್ಮಾಣವೆಂಬ
ನಲವತ್ತೆಂಟನೆಯ ಅಧ್ಯಾಯ ಮುಗಿದಿದೆ



॥ ಓಂ ॥

॥ ಶ್ರೀ ಹಯಗ್ರೀವಾಯ ನಮಃ ॥

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### ॥ ಏಕೋನಪಂಚಾಶತ್ತಮೋಽಧ್ಯಾಯಃ ॥

**॥ ವಜ್ರ ಉವಾಚ ॥**

**ನಾಸತ್ಯಯೋರ್ಮಮಾಚಕ್ಷ್ವ ರೂಪನಿರ್ಮಾಣಮುಚ್ಯತೇ ।**
**ನಾಸತ್ಯರೂಪಯೋಶ್ಚೈವ ತ್ವಂ ಹಿ ಸರ್ವವಿದುಚ್ಯಸೇ ॥ ೧ ॥**

**॥ ಮಾರ್ಕಂಡೇಯ ಉವಾಚ ॥**

**ಪದ್ಮಪತ್ರಸವರ್ಣಾಭೌ ಪದ್ಮಪತ್ರಸಮಾಂಬರೌ ।**
**ದ್ವಿಭುಜೌ ದೇವಭಿಷಜೌ ಕರ್ತವ್ಯೌ ದೇವಸಂಯುತೌ ॥ ೨ ॥**

**ಸರ್ವಾಭರಣಸಂಪನ್ನೌ ವಿಶೇಷಾಚ್ಚಾರುಲೋಚನೌ ।**
**ತಯೋರೋಷಧಯಃ ಕಾರ್ಯಾ ದಿವ್ಯಾ ದಕ್ಷಿಣಹಸ್ತಯೋಃ ॥ ೩ ॥**

---

### ನಲವತ್ತೊಂಭತ್ತನೆಯ ಅಧ್ಯಾಯ.

೧-೪ ವಜ್ರನು ಪ್ರಶ್ನೆ ಮಾಡುತ್ತಾನೆ.—ಎಲೈ ಸರ್ವಜ್ಞನೇ, ಅಶ್ವಿನೀದೇವತೆಗಳ ರೂಪ ನಿರ್ಮಾಣವನ್ನು ಹೇಳಬೇಕು ಅಶ್ವಿನೀದೇವತೆಗಳ ಅದ್ಭುತರೂಪವನ್ನು ಹೇಳುವ ವಿಷಯದಲ್ಲಿ ಸರ್ವಜ್ಞನಾದ ನೀನೇ ಸಮರ್ಥನಾಗಿರುವೆ ಮಾರ್ಕಂಡೇಯರು ಹೇಳುತ್ತಾರೆ —ಅಶ್ವಿನೀದೇವತೆಗಳನ್ನು ಪದ್ಮಪತ್ರಕ್ಕೆ ಸಮಾನವಾದ ವರ್ಣದಿಂದ ಕೂಡಿಯೂ ಅದೇ ಪದ್ಮಪತ್ರದಂತಹ ವಸ್ತ್ರಗಳಿಂದ ಕೂಡಿಯೂ, ಎರಡು ಭುಜಗಳಿಂದ ಕೂಡಿಯೂ ಇರುವಂತೆ ನಿರ್ಮಿಸಬೇಕು ಇವರು ದೇವತೆಗಳೊಡನೆ ಕೂಡಿರಬೇಕು ದೇವವೈದ್ಯರಂತೆಯೂ ಇರಬೇಕು ಎಲ್ಲಾ ಆಭರಣಗಳನ್ನೂ ಹೊಂದಿರಬೇಕು ಕಣ್ಣುಗಳು ಬಹುಮಟ್ಟಿಗೂ ರಮ್ಯತೆಯಿಂದ ಕೂಡಿರಬೇಕು. ಬಲಭಾಗದ ಎರಡು ಹಸ್ತಗಳಲ್ಲಿಯೂ ದಿವ್ಯೌಷಧಗಳಿರಬೇಕು ಎಡಭಾಗದ ಹಸ್ತಗಳಲ್ಲಿ ಪುಸ್ತಕಗಳಿರಬೇಕು

ವಾಮಯೋಃ ಪುಸ್ತಕೌ ಕಾರ್ಯೌ ದರ್ಶನೀಯೌ ತಥಾ ದ್ವಿಜ ।
ಏಕಸ್ಯ ದಕ್ಷಿಣೇ ಪಾರ್ಶ್ವೇ ವಾಮೇ ಚಾನ್ಯಸ್ಯ ಯಾದವ ॥ ೪ ॥

ನಾರೀಯುಗಂ ತು ಕರ್ತವ್ಯಂ ಸುರೂಪಂ ಚಾರುದರ್ಶನಂ ।
ತಯೋಶ್ಚ ನಾಮನೀ ಪ್ರೋಕ್ತೇ ರೂಪಸಂಪತ್ತಥಾಕೃತಿಃ ॥ ೫ ॥

ಮಧೂಕಪುಷ್ಪಸಂಕಾಶಾ ರೂಪಸಂಪತ್ಪ್ರಕೀರ್ತಿತಾ ।
ಪ್ರಕೃತಿಃ ಕಥಿತಾ ಲೋಕೇ ಶರಕಾಂಡನಿಭಾ ತಥಾ ।
ನ ತು ಭಾಂಡಕರೇ ಕಾರ್ಯೇ ಚಂದ್ರಶುಕ್ಲಾಂಬರೇ ತಥಾ ॥ ೬ ॥

ನಾಸತ್ಯಯೋರೂಪಮಿದಂ ತವೋಕ್ತಂ
ಮಯಾದ್ಯ ಮುಖ್ಯಂ ಯದುವಂಶಮುಖ್ಯ ।
ಧ್ಯಾನೇನ ಸರ್ವಾಮಯನಾಶಕಾರಿ
ಸಂಪೂಜಿತಂ ವಾ ಭುವಿ ಮಾನವಾನಾಂ ॥ ೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರ ಸಂವಾದೇ ನಾಸತ್ಯರೂಪನಿರ್ಮಾಣೋ
ನಾಮೈಕೋನಪಂಚಾಶತ್ತಮೋಽಧ್ಯಾಯಃ

---

ಈ ಎರಡೆರಡು ಹಸ್ತಗಳಲ್ಲಿ ಓಷಧಿಗಳಿರುವ ಎರಡು ಹಸ್ತಗಳು ಒಬ್ಬನ ಬಲಭಾಗ ವಾಗಿಯೂ, ಪುಸ್ತಕದಿಂದ ಕೂಡಿದ ಎರಡು ಹಸ್ತಗಳು ಮತ್ತೊಬ್ಬನ ಎಡಭಾಗ ವಾಗಿಯೂ ಇರಬೇಕು.

೫–೭ ರೂಪವತಿಯರಾಗಿಯೂ, ರಮ್ಯವಾದ ಶೋಭೆಯಿಂದ ಕೂಡಿಯೂ ಇರುವ ಯುವತಿಯುಗ್ಮವನ್ನೂ ರಚಿಸಬೇಕು ಆ ಇಬ್ಬರು ಯುವತಿಯರಿಗೂ ರೂಪಸಂಪತ್ ಆಕೃತಿ ಎಂದು ಹೆಸರು. ಇವರಲ್ಲಿ ಮೊದಲನೆಯವಳಾದ ರೂಪ ಸಂಪತ್ತು ಹಿಪ್ಪೆಯ ಹೂವಿನ ಬಣ್ಣದಂತಿರಬೇಕು ಆಕೃತಿ ಎಂಬ ಎರಡನೆಯವಳು ಶರವೆಂಬ ಹೂವಿನ ದಂಟಿನ ಬಣ್ಣದಂತಿರಬೇಕು ಇವರು ಪಾತ್ರಹಸ್ತರಾಗಿಯೇ ಆಗಲಿ ಚಂದ್ರನಂತಿರುವ ಶುಕ್ಲವಸ್ತ್ರಧಾರಿಗಳಾಗಿಯೇ ಆಗಲಿ ಇರಕೂಡದು ಎಲೈ ಯದುವಂಶ ತಿಲಕನೇ ಅಶ್ವಿನೀ ದೇವತೆಗಳ ಉತ್ತಮವಾದ ಈ ರೂಪವನ್ನು ನಿನಗೆ ಹೇಳಿದ್ದಾಯಿತು ಈ ರೂಪವು ಧ್ಯಾನಮಾಡುವವರಿಗೂ ಪೂಜಿಸುವ ಮನುಷ್ಯ ರಿಗೂ ಸಹ ಸರ್ವರೋಗನಾಶಕವಾಗಿಯೂ ಶುಭಪ್ರದವಾಗಿಯೂ ಆಗುತ್ತದೆ

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದ ದಲ್ಲಿ ನಾಸತ್ಯರೂಪನಿರ್ಮಾಣವೆಂಬ ನಲವತ್ತೊಂಭತ್ತನೆಯ ಅಧ್ಯಾಯ ಮುಗಿದಿದೆ

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಪಂಚಾಶತ್ತಮೋಽಧ್ಯಾಯಃ ||

**|| ವಜ್ರ ಉವಾಚ ||**

**ಶಕ್ರಕೇಶವರುಣಧನದಾನಾಂ ಭೃಗೂತ್ತಮ |**
**ಸಹೇತುಕಂ ಸಮಾಚಕ್ಷ್ವ ರೂಪನಿರ್ಮಾಣಮಚ್ಯುತ || ೧ ||**

**|| ಮಾರ್ಕಂಡೇಯ ಉವಾಚ ||**

**ಚತುರ್ದಂತೇ ಗಜೇ ಶಕ್ರಃ ಶ್ವೇತಃ ಕಾರ್ಯಃ ಸುರೇಶ್ವರಃ |**
**ವಾಮೋತ್ಸಂಗಗತಾ ಕಾರ್ಯಾ ರಕ್ಷಮಾಣಾ ತಥಾ ಶಚೀ || ೨ ||**

**ನೀಲವಸ್ತ್ರಃ ಸುವರ್ಣಾಭಃ ಸರ್ವಾಭರಣವಾಂಸ್ತಥಾ |**
**ತಿರ್ಯಗ್ಲಲಾಟಗೇನಾಕ್ಷ್ಣಾ ಕರ್ತವ್ಯಶ್ಚ ವಿಭೂಷಿತಃ || ೩ ||**

---

### ಐವತ್ತನೆಯ ಅಧ್ಯಾಯ

೧-೩ ವಜ್ರನು ಪುನಃ ಪ್ರಶ್ನೆಮಾಡುತ್ತಾನೆ —ಎಲೈ ಮಹಾತ್ಮನೇ ಇಂದ್ರ, ಯಮ, ವರುಣ, ಕುಬೇರ ಇವರುಗಳ ರೂಪ ನಿರ್ಮಾಣವನ್ನು ಸಕಾರಣವಾಗಿ ದಯವಿಟ್ಟು ಹೇಳು ಇದಕ್ಕೆ ಉತ್ತರವಾಗಿ ಮಾರ್ಕಂಡೇಯರು ಹೇಳುತ್ತಾರೆ ಸುರಾಧಿಪನಾದ ಇಂದ್ರನು ಬಿಳಿಯ ಬಣ್ಣದಿಂದ ಚಿತ್ರಿಸಲ್ಪಡಬೇಕು ಅವನು ನಾಲ್ಕು ದಂತಗಳುಳ್ಳ ಆನೆಯ ಮೇಲೆ ಕುಳಿತಿರಬೇಕು ಅವನಿಂದ ರಕ್ಷಿತಳಾದ ಶಚೀದೇವಿಯು ಎಡಭಾಗದ ತೊಡೆಯ ಮೇಲೆ ಕುಳಿತಿರಬೇಕು ನೀಲವಾದ ವಸ್ತ್ರದಿಂದ ಕೂಡಿಯೂ ಸರ್ವಾಭರಣಗಳಿಂದ ಕೂಡಿಯೂ ಚಿನ್ನದಂತೆ ಅವನ ರೂಪವು ಹೊಳೆಯುತ್ತಿರಬೇಕು ಅಡ್ಡಲಾಗಿರುವ ಹಣೆಗಣ್ಣಿನಿಂದ ಕೂಡಿ ಶೋಭಿಸುತ್ತಿರಬೇಕು

**ಶಕ್ರಃ ಚತುರ್ಭುಜಃ ಕಾರ್ಯೋ ದ್ವಿಭುಜಾ ಚ ತಥಾ ಶಚೀ ।**
**ಪದ್ಮಾಂಕುಶೌ ತು ಕರ್ತವ್ಯೌ ಶಕ್ರದಕ್ಷಿಣಹಸ್ತಯೋಃ ॥ ೪ ॥**

**ವಾಮಂ ಶಚೀಪೃಷ್ಠಗತಂ ದ್ವಿತೀಯಂ ವಜ್ರಸಂಯುತಂ ।**
**ವಾಮೇ ಶಚ್ಯಾಃ ಕರೇ ಕಾರ್ಯಾ ರಮ್ಯಾ ಸಂತಾನಮಂಜರೀ ॥ ೫ ॥**

**ದಕ್ಷಿಣಂ ಪೃಷ್ಠವಿನ್ಯಸ್ತಂ ದೇವನಾಥಸ್ಯ ಕಾರಯೇತ್ ।**
**ಬ್ರಹ್ಮಣೈವ ವಿನಿರ್ದಿಷ್ಟಂ ತಸ್ಯಾಭರಣಧಾರಣಂ ॥ ೬ ॥**

**ತೇನೈವ ತಸ್ಯ ಕಥಿತಂ ತಥಾ ಬಾಹು ಚತುಷ್ಟಯಂ ।**
**ತ್ರಿನೇತ್ರತಾ ಚ ತಸ್ಯೋಕ್ತಾ ದೇವದೇವೇನ ಶಂಭುನಾ ॥ ೭ ॥**

**ರುಕ್ಮಾಭವರ್ಣತಾ ತಸ್ಯ ತೇಜಸಾಂ ಧಾಮಕಾರಣಾತ್ ।**
**ಯನ್ನೀಲಂ ವಸನಂ ತಸ್ಯ ತದಾಕಾಶಂ ಪ್ರಕೀರ್ತಿತಂ ॥ ೮ ॥**

**ಆಜ್ಞಾ ತಸ್ಯಾಂಕುಶೋ ಹಸ್ತೇ ಸರ್ವಭೂತವಶಂಕರೀ ।**
**ಪದ್ಮಸ್ಥಾಂ ಸಹ ಪದ್ಮೇನ ವಿಭೂತಿಂ ಭುವನಾಧಿಪ ॥ ೯ ॥**

---

೪-೭ ಇಂದ್ರನನ್ನು ನಾಲ್ಕು ಭುಜಗಳಿಂದ ಕೂಡಿಯೂ, ಶಚಿದೇವಿಯನ್ನು ಎರಡು ಭುಜಗಳಿಂದ ಕೂಡಿಯೂ ನಿರ್ಮಿಸಬೇಕು ಇಂದ್ರನ ಬಲಭಾಗದ ಎರಡು ಕೈಗಳಲ್ಲಿಯೂ ಪದ್ಮ ಮತ್ತು ಅಂಕುಶಗಳನ್ನು ರಚಿಸಬೇಕು ಎಡಭಾಗದ ಒಂದು ಹಸ್ತವು ಶಚೀದೇವಿಯ ಬೆನ್ನಿನ ಮೇಲೆಯೂ ಎರಡನೇಯದು ವಜ್ರಾಯುಧದಿಂದ ಕೂಡಿಯೂ ಇರಬೇಕು. ಶಚಿದೇವಿಯ ಎಡಗೈಯ್ಯಲ್ಲಿ ರಮ್ಯವಾದ ಕಲ್ಪವೃಕ್ಷದ ಹೂವುಗಳ ಗೊಂಚಲಿರಬೇಕು ಬಲದ ಹಸ್ತವು ಇಂದ್ರನ ಬೆನ್ನಿನ ಮೇಲಿರಬೇಕು. ಆ ಇಂದ್ರನಿಗೆ ಆಭರಣಧಾರಣವೆಲ್ಲಾ ಇರಬೇಕೆಂದು ಬ್ರಹ್ಮನಿಂದಲೇ ಹೇಳಲ್ಪಟ್ಟಿದೆ ಆ ಬ್ರಹ್ಮನೇ ಇಂದ್ರನಿಗೆ ನಾಲ್ಕು ಬಾಹುಗಳಿರಬೇಕೆಂದೂ ಹೇಳಿರುವನು ಮೂರು ಕಣ್ಣುಗಳಿರಬೇಕೆಂದು ದೇವಾದೀಶನಾದ ಶಂಭುವೇ ಹೇಳಿರುವನು

೮-೧೧ ಅವನು ತೇಜೋನಿಧಿಯಾದುದರಿಂದ ಅವನಿಗೆ ಸುವರ್ಣದ ವರ್ಣವಿರಬೇಕು ಅವನ ನೀಲವಸ್ತ್ರವೇ ಆಕಾಶದ ಸ್ವರೂಪ, ಅವನ ಕೈಯಲ್ಲಿರುವ ಅಂಕುಶವೇ ಸರ್ವಭೂತವಶೀಕರಣವಾದ ಅಜ್ಞಾರೂಪ, ಪದ್ಮದಲ್ಲಿರುವ ಸಂಪತ್ತನ್ನು ಅದರೊಡಗೂಡಿರುವ ಪದ್ಮಧಾರಣದಿಂದ ಅನುಕರಿಸುತ್ತಾ ಸುರಾಧಿಪನಾದ ಇಂದ್ರನು ಕೈಯ್ಯಿನಲ್ಲಿ ಪದ್ಮವನ್ನು ಧರಿಸಿರುತ್ತಾನೆ ದುಷ್ಟರನ್ನು ನಾಶಪಡಿಸುವ ಕ್ರೋಧವೇ

ಕರೇಣ ಧಾರಯನ್ ಶ್ರೀಮಾನ್ಮಘವಾನ್ ಸುರಸತ್ತಮಃ ।
ದುಷ್ಟಸಂಶಮನಂ ಕ್ರೋಧೋ ವಜ್ರಃ ಶಕ್ರಕರಃ ಸ್ಮೃತಃ ॥ ೧೦ ॥

ವಾಸುದೇವಃ ಸ್ಮೃತಃ ಶಕ್ರಃ ತೇನ ಲಕ್ಷ್ಮೀಃ ಶಚೀ ಮತಾ ।
ತಸ್ಯಾಃ ಕರೇ ಚ ಸಂತಾನಂ ಜ್ಞೇಯಾ ಸಂತಾನಮಂಜರೀ ॥ ೧೧ ॥

ಅರ್ಥಸ್ತ್ವೈರಾವಣೋ ಜ್ಞೇಯೋ ದಂತಾಸ್ತಸ್ಯ ತು ಕೀರ್ತಿತಾಃ ।
ದೈವಮಂತ್ರಪ್ರಭೂತ್ಸಾಹಶಕ್ತಯಸ್ತು ಮಹಾಬಲಾಃ ॥ ೧೨ ॥

ಏತದ್ರೂಪಂ ವಾಸುದೇವಸ್ಯ ಶಾಕ್ರಂ
ತುಭ್ಯಂ ಪ್ರೋಕ್ತಂ ದೇವರಾಜಸ್ಯ ರಾಜನ್ ।
ಯಾಮ್ಯಂ ರೂಪಂ ತೇಽಧುನಾಹಂ ಬ್ರವೀಮಿ
ಯಸ್ಯಾಯತ್ತೇ ಸುಖದುಃಖೇ ನರಾಣಾಂ ॥ ೧೩ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಶಕ್ರರೂಪನಿರ್ಮಾಣೋ ನಾಮ
ಪಂಚಾಶತ್ತಮೋಽಧ್ಯಾಯಃ

---

ವಜ್ರಾಯುಧ ಆದುದರಿಂದ ಅವನು ವಜ್ರಧಾರಿಯಾಗಿರುವನು ಇಂದ್ರನು ವಾಸುದೇವನ ಅಂಶವೇ ಆದುದರಿಂದ ಶಚೀದೇವಿಯೂ ಲಕ್ಷ್ಮಿಯ ಅಂಶ ಅವಳ ಕೈಯಲ್ಲಿರುವ ಸಂತಾನ ಪುಷ್ಪಗಳ ಗೊಂಚಲೇ ಜಗತ್ತಿನ ಸಂತಾನರೂಪ.

೧೨-೧೩ ಐರಾವಣನೆಂಬ ಆನೆಯೇ ಅವನ ಅರ್ಥವೆಂಬ ಪುರುಷಾರ್ಥ ಆದರ ನಾಲ್ಕು ದಂತಗಳೇ ದೈವಶಕ್ತಿ, ಮಂತ್ರಶಕ್ತಿ, ಪ್ರಭುಶಕ್ತಿ, ಉತ್ಸಾಹಶಕ್ತಿಗಳೆಂಬ ಬಲಿಷ್ಠವಾದ ನಾಲ್ಕು ಶಕ್ತಿಗಳು ಧೊರೆಯೇ, ವಾಸುದೇವನ ಅಂಶರೂಪನಾದ ಇಂದ್ರನ ಈ ರೂಪವನ್ನು ನಿನಗೆ ಹೇಳಿದ್ದೇನೆ ಇನ್ನು ಮುಂದೆ ಯಮನ ರೂಪವನ್ನು ನಿನಗೆ ಹೇಳುತ್ತೇನೆ ಎಲ್ಲಾ ಮನುಷ್ಯರ ಸುಖದುಃಖಗಳೂ ಅವನಿಗೆ ಅಧೀನವಾಗಿವೆಯಷ್ಟೆ

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯ ಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಶಕ್ರರೂಪನಿರ್ಮಾಣವೆಂಬ ಐವತ್ತನೆಯ
ಅಧ್ಯಾಯ ಮುದಿದೆ.



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಏಕಪಂಚಾಶತ್ತಮೋಽಧ್ಯಾಯಃ ||

**|| ಮಾರ್ಕಂಡೇಯ ಉವಾಚ ||**

**ಸಜಲಾಂಬುದಸಚ್ಛಾಯಸ್ತಪ್ತಚಾಮೀಕರಾಂಬರಃ ।**
**ಮಹಿಷಸ್ಥಶ್ಚ ಕರ್ತವ್ಯಃ ಸರ್ವಾಭರಣವಾನ್ಯಮಃ || ೧ ||**

**ನೀಲೋತ್ಪಲಾಭಾಂ ಧೂಮೋರ್ಣಾಂ ವಾಮೋತ್ಸಂಗೇ ಚ ಕಾರಯೇತ್ ।**
**ಧೂಮೋರ್ಣಾ ದ್ವಿಭುಜಾ ಕಾರ್ಯಾ ಯಮಃ ಕಾರ್ಯಶ್ಚತುರ್ಭುಜಃ || ೨ ||**

**ದಂಡಖಡ್ಗಾವುಭೌ ಕಾರ್ಯೌ ಯಮದಕ್ಷಿಣಹಸ್ತಯೋಃ ।**
**ದಂಡೋಪರಿ ಮುಖಂ ಕಾರ್ಯಂ ಜ್ವಾಲಾಮಾಲಾವಿಭೂಷಣಂ || ೩ ||**

---

### ಐವತ್ತೊಂದನೆಯ ಅಧ್ಯಾಯ.

೧-೫ ಮಾರ್ಕಂಡೇಯರು ಹೇಳುತ್ತಾರೆ.--ಯಮನನ್ನು ನೀರು ತುಂಬಿದ ಮೇಘದಂತೆ ಕಪ್ಪಾಗಿಯೂ ಒಳ್ಳೆಯ ಚಿನ್ನದಂತೆ ಹೊಳಪಾಗಿರುವ ವಸ್ತ್ರದಿಂದ ಕೂಡಿಯೂ, ಸರ್ವಾಭರಣಭೂಷಿತನಾಗಿಯೂ ಮಹಿಷವಾಹನನಾಗಿಯೂ ಇರುವಂತೆ ನಿರ್ಮಿಸಬೇಕು ಅವನ ಎಡಭಾಗದ ತೊಡೆಯ ಮೇಲೆ ನೀಲೋತ್ಪಲದಂತೆ ಕಪ್ಪಾಗಿರುವ ಧೂಮೋರ್ಣಾ ಎಂಬ ನಾಯಕಿಯನ್ನು ನಿರ್ಮಿಸಬೇಕು. ಧೂಮೋರ್ಣೆಯನ್ನು ಎರಡು ಭುಜಗಳಿಂದ ಕೂಡಿಯೂ, ಯಮನನ್ನು ನಾಲ್ಕು ಭುಜದಿಂದ ಕೂಡಿಯೂ ಇರುವಂತೆ ನಿರ್ಮಿಸಬೇಕು ಆ ಯಮನ ಬಲಭಾಗದ ಎರಡು ಕೈಗಳಲ್ಲಿ ದಂಡಾಯುಧವನ್ನೂ, ಖಡ್ಗವನ್ನೂ ರಚಿಸಬೇಕು ಆ ದಂಡದ ಮೇಲು ಭಾಗದಲ್ಲಿ ಜ್ವಾಲಾಸಮೂಹದಿಂದ ಕೂಡಿದ ಮುಖವನ್ನು ನಿರ್ಮಿಸಬೇಕು **ಎಡ**

ಧೂಮ್ರೋರ್ಣಾಪೃಷ್ಠಗಂ ವಾಮಂ ಚಿಮರ್ಯುಕ್ತಂ ತಥಾಪರಂ ।
ಧೂಮ್ರೋರ್ಣಾದಕ್ಷಿಣಂ ಹಸ್ತಂ ಯಮಪೃಷ್ಠಗತಂ ಭವೇತ್ ॥ ೪ ॥

ವಾಮೇ ತಸ್ಯಾಃ ಕರೇ ಕಾರ್ಯಂ ಮಾತುಲುಂಗಂ ಸುದರ್ಶನಂ ।
ಪಾರ್ಶ್ವೇತು ದಕ್ಷಿಣೇ ತಸ್ಯ ಚಿತ್ರಗುಪ್ತಂ ಚ ಕಾರಯೇತ್ ॥ ೫ ॥

ಉದ್ದಿಶ್ಯ ವೇಶಂ ಸ್ವಾಕಾರಂ ದ್ವಿಭುಜಂ ಸೌಮ್ಯದರ್ಶನಂ ।
ದಕ್ಷಿಣೇ ಲೇಖನೀ ತಸ್ಯ ವಾಮೇ ಪತ್ರಂ ತು ಕಾರಯೇತ್ ॥ ೬ ॥

ವಾಮೇ ಪಾಶಧರಃ ಕಾರ್ಯಃ ಕಾಲೋ ವಿಕಟದರ್ಶನಃ ।
ಯಮಂ ಸಂಕರ್ಷಣಂ ವಿದ್ಧಿ ತಾಮಸೀಂ ತನುಮಾಶ್ರಿತಂ ॥ ೭ ॥

ಮರ್ಯಾದಾಪಾಲನಾರ್ಥಾಯ ಲೋಕಸಂಹಾರಕಾರಣಂ ।
ನೀಲೋತ್ಪಲದಲಚ್ಛಾಯಸ್ತಾಮಸತ್ವಾತ್ಪ್ರಕೀರ್ತಿತಃ ॥ ೮ ॥

---

ಭಾಗದ ಒಂದು ಕೈ ಧೂಮೋರ್ಣೆಯ ಬೆನ್ನಿನ ಮೇಲಿರುವಂತೆಯೂ, ಮತ್ತೊಂದು ಕೈಯಲ್ಲಿ ಗುರಾಣಿ ಇರುವಂತೆಯೂ ರಚಿಸಬೇಕು ಧೂಮೋರ್ಣೆಯ ಬಲಭಾಗದ ಹಸ್ತವು ಯಮನ ಬೆನ್ನಿನ ಮೇಲಿರಬೇಕು ಮತ್ತೊಂದು ಹಸ್ತದಲ್ಲಿ ಮಾತುಲುಂಗ ವೆಂಬ ಯೋಗದಂಡವಿರಬೇಕು ಆ ಯಮನ ಬಲಭಾಗದಲ್ಲಿ ಚಿತ್ರಗುಪ್ತನನ್ನು ರಚಿಸಬೇಕು

೬–೮ ಅವನು ತನ್ನ ಕಾರ್ಯಕ್ಕೆ ತಕ್ಕ ವೇಷದಿಂದ ಕೂಡಿ ರಮ್ಯವಾದ ಆಕಾರದಿಂದಲೂ ಭುಜದ್ವಯದಿಂದಲೂ ಕೂಡಿ ಸೌಮ್ಯನಾಗಿರಬೇಕು ಅವನ ಬಲಗೈಯ್ಯಲ್ಲಿ ಲೇಖನಿಯೂ ಎಡಗೈಯ್ಯಲ್ಲಿ ಪತ್ರವೂ ಇರಬೇಕು ಆ ಯಮನ ಎಡಭಾಗದಲ್ಲಿ ಪಾಶಧಾರಿಯಾಗಿಯೂ, ಕಪ್ಪಾಗಿಯೂ, ಭಯಂಕರಾಕಾರನಾಗಿಯೂ ಇರುವ ಪುರುಷನಿರಬೇಕು. ತಮೋಗುಣ ಪ್ರಚುರವಾದ ದೇಹವನ್ನು ಧರಿಸಿರುವ ಯಮನು ಸಂಕರ್ಷಣಮೂರ್ತಿಯ ಅಂಶ, ಲೋಕದ ಎಲ್ಲೆಯನ್ನು ಕಾಪಾಡಲು ಜಗತ್ಸಂಹಾರಕಾರಿಯಾಗಿರುತ್ತಾನೆ ತಾಮಸನಾದುದರಿಂದ ನೈದಿಲೆಯಂತೆ ಕಪ್ಪಾಗಿರುತ್ತಾನೆ

ವಸನಂ ತಸ್ಯ ವಿಖ್ಯಾತಂ ವಾಸುದೇವೇನ ಶತ್ರುಹನ್ ।
ಚತುರ್ಭುಜತ್ವಂ ವಿಖ್ಯಾತಂ ಬ್ರಹ್ಮಣಾ ಪರಮಾತ್ಮನಃ　　॥ ೯ ॥

ಬ್ರಹ್ಮಣಾ ತಸ್ಯ ನಿರ್ದಿಷ್ಟಂ ಸರ್ವಾಭರಣಧಾರಣಂ ।
ಯೋ ಮೋಹೋ ಮರಣಂ ನೄಣಾಂ ವಿಜ್ಞೇಯೋ ಮಹಿಷಸ್ತು ಸಃ ॥ ೧೦ ॥

ಅಮೋಘಂ ತು ಕರೇ ದಂಡಂ ಮೃತ್ಯುಂ ಧಾರಯತೇ ಯಮಃ ।
ಅನಿರುದ್ಧೇನ ತಸ್ಯೋಕ್ತಂ ಧಾರಣಂ ಖಡ್ಗಚರ್ಮಣೋಃ　　॥ ೧೧ ॥

ಕಾಲರಾತ್ರೀ ತು ವಿಜ್ಞೇಯಾ ಧೂಮೋರ್ಣಾ ಯದುನಂದನ ।
ತಸ್ಯಾಸ್ತು ಶೂಲಿನಾ ಪ್ರೋಕ್ತಂ ಬೀಜಪೂರಕಧಾರಣಂ　　॥ ೧೨ ॥

ಚಿತ್ರಗುಪ್ತೋ ವಿನಿರ್ದಿಷ್ಟಸ್ತಥಾತ್ಮಾ ಸರ್ವದೇಹಗಃ ।
ಪತ್ರಂ ಧರ್ಮಮಧರ್ಮಂ ಚ ಕರಸ್ಥಾ ತಸ್ಯ ಲೇಖನೀ　　॥ ೧೩ ॥

ಕಾಲ ಏವ ಸ್ವರೂಪೇಣ ಕಾಲೋ ಯಮಸಮೀಪಗಃ ।
ತಸ್ಯ ಪಾಶಃ ಕರೇ ಘೋರೋ ಯಮಮಾರ್ಗಃ ಸುದುಷ್ಕರಃ　　॥ ೪೧ ॥

---

೯-೧೨. ಅವನ ವಸ್ತ್ರವೂ ಈ ರೀತಿಯಾಗಿರಬೇಕೆಂದು ವಾಸುದೇವನೇ ಹೇಳಿರುವನು ಅವನಿಗೆ ಚತುರ್ಭುಜ ಉಂಟೆಂಬುದನ್ನೂ ಚತುರ್ಮುಖನೇ ಹೇಳಿರುವನು ಎಲ್ಲಾ ಅಭರಣಗಳೂ ಉಂಟೆಂಬುದನ್ನೂ ಅವನೇ ಹೇಳಿರುವನು ಜನಗಳಿಗೆ ಉಂಟಾಗುವ ಮೋಹರೂಪವಾದ ಮರಣವೇ ಮಹಿಷರೂಪದಿಂದ ಅವನನ್ನು ಆಶ್ರಯಿಸಿದೆ ಅಮೋಘವಾದ ದಂಡರೂಪದಿಂದ ಮೃತ್ಯುವೇ ಅವನ ಕೈಯಲ್ಲಿದೆ ಅವನಿಗೆ ಖಡ್ಗ ಮತ್ತು ಗುರಾಣಿಗಳ ಧಾರಣವನ್ನು ಅನಿರುದ್ಧನೇ ಹೇಳಿರುವನು ಅವನನ್ನು ಆಶ್ರಯಿಸಿರುವ ಧೂಮೋರ್ಣೆಯೇ ಕಾಳರಾತ್ರಿಸ್ವರೂಪ ಅವಳು ಬೀಜಪೂರಕವನ್ನು ಧರಿಸಿರಬೇಕೆಂಬುದನ್ನು ಶಂಭುವೇ ಹೇಳಿರುವನು

೧೩-೧೬ ಚಿತ್ರಗುಪ್ತನೇ ಸರ್ವ ಪ್ರಾಣಿಗಳ ದೇಹದಲ್ಲಿರುವ ಆತ್ಮಸ್ವರೂಪನು ಅವನ ಕೈಯ್ಯಲ್ಲಿರುವ ಪತ್ರವೇ ಧರ್ಮಾಧರ್ಮ ಸ್ವರೂಪ ಅದಕ್ಕಾಗಿಯೇ ಕೈಯ್ಯಲ್ಲಿ ಲೇಖನಿಯೂ ಇದೆ ಕಾಲವೆಂಬುದೇ ಕೃಷ್ಣವರ್ಣರೂಪದಿಂದ ಯಮನ ಸಮೀಪವನ್ನು ಹೊಂದಿದೆ ಅವನ ಕೈಯ್ಯಲ್ಲಿರುವ ಪಾಶವೇ ಘೋರವಾಗಿಯೂ ಕ್ಲೇಶಕರವಾಗಿಯೂ ಇರುವ ಯಮಮಾರ್ಗಕ್ಕೆ ಸೂಚಕ ವಜ್ರನು

|| ವಜ್ರ ಉವಾಚ ||

ಸಂಹಾರಹೇತುಕೀ ಮೂರ್ತಿರ್ವಿಷ್ಣೋಃ ಸಂಕರ್ಷಣೋ ಮತಃ |
ಸ ತು ದೇವಸ್ತ್ವಯಾಪ್ರೋಕ್ತಃ ಚಂದ್ರಶುಕ್ಲವಪುರ್ಮಹಾನ್ || ೧೫ ||

ಕಲ್ಪೇ ಸಂಹಾರಿಕರ್ತೃತ್ವೇ ಕೃಷ್ಣಮೂರ್ತಿಃ ಕಥ ಯಮಃ |
ಏತಂ ಮೇ ಸಂಶಯಂ ಛಿನ್ಧಿ ಭೃಗುವಂಶವಿವರ್ಧನ || ೧೬ ||

|| ಮಾರ್ಕಂಡೇಯ ಉವಾಚ ||

ಮೂರ್ತಿಃ ಸಾಂಕರ್ಷಿಣೀ ವಿಷ್ಣೋರುದ್ರಃ ಸಂಹಾರಕಾರಕಃ |
ಕಲ್ಪಕ್ಷಯೇ ತು ಸಂಹಾರಂ ಕರೋತಿ ಜಗತಾಂ ಹಿ ಸಾ || ೧೭ ||

ಪ್ರಕೃತೌ ಯಾತಿ ಧರ್ಮಜ್ಞ ಸಂಹೃತಂ ತು ತದಾ ಜಗತ್ |
ತೇನ ಪ್ರಕೃತಿವರ್ಣಸ್ಥಃ ಕರೋತಿ ಜಗತಾಂ ಕ್ಷಯಂ || ೧೮ ||

ಕೃತ್ವಾಪಿ ಪ್ರಾಣಿಸಂಹಾರಂ ಯಮರೂಪೀ ಪುನಃಪುನಃ |
ಪ್ರಾಣಿನಾಂ ಪ್ರಕೃತೌ ಯೋಗಂ ವಿಧತ್ತೇ ಕದಾ ಚನ || ೧೯ ||

---

ಪ್ರಶ್ನೆಮಾಡುತ್ತಾನೆ —ಸಂಕರ್ಷಣಮೂರ್ತಿಯು ಸಂಹಾರಕ್ಕಾಗಿ ಇರುವ ವಿಷ್ಣುವಿನ ಅಂಶವೆಂದು ಹೇಳಲಾಗಿದೆ ಆ ಸಂಕರ್ಷಣಮೂರ್ತಿಯಾದರೂ ಚಂದ್ರನಂತೆ ಶುಭ್ರನಾಗಿರುತ್ತಾನೆ ಕಲ್ಪಾಂತರದಿಂದ ಸಂಹಾರಕ್ಕೆ ಕಾರಣನಾಗಿ ಅವನು ಯಮರೂಪಿಯಾದರೂ ಕೃಷ್ಣವರ್ಣನಾಗಿ ಹೇಗೆ ಆದಾನು ಎಲೈ ಭೃಗುವಂಶ ಭೂಷಣನೇ ನನ್ನ ಈ ಸಂಶಯವನ್ನು ಹೋಗಲಾಡಿಸಬೇಕು ಇದಕ್ಕೆ ಉತ್ತರವಾಗಿ ಮಾರ್ಕಂಡೇಯರು ಹೇಳುತ್ತಾರೆ —

೧೭-೨೧ ಸಂಹಾರಕಾರಕನಾದ ರುದ್ರನು ವಿಷ್ಣುವಿನ ಸಂಕರ್ಷಣಮೂರ್ತಿಯ ಅಂಶ, ಆ ರುದ್ರಮೂರ್ತಿಯೇ ಕಲ್ಪಕ್ಷಯಕಾಲದಲ್ಲಿ ಜಗತ್ತಿಗೆ ಸಂಹಾರವನ್ನುಂಟುಮಾಡುತ್ತದೆ ಹಾಗೆ ಸಂಹರಿಸಲ್ಪಟ್ಟ ಜಗತ್ತು ಪ್ರಕೃತಿಯಲ್ಲಿ ಏಕೀಭಾವವನ್ನು ಹೊಂದುತ್ತದೆ ಆ ಪ್ರಕೃತಿಯ ವರ್ಣವನ್ನೇ ಹೊಂದಿ ರುದ್ರನೇ ಯಮರೂಪಿಯಾಗಿ ಜಗತ್ತಿಗೆ ಕ್ಷಯವನ್ನುಂಟುಮಾಡುತ್ತಾನೆ ಹಾಗೆ ಸಂಹರಿಸುವ ಯಮನೂ ಸಹ ಪುನಃ ಪುನಃ ಪ್ರಕೃತಿಯಲ್ಲಿ ಲಯವನ್ನುಂಟುಮಾಡದೆ ಪ್ರಾಣಿಗಳನ್ನು ಸುಖದುಃಖರೂಪವಾದ ಪ್ರಕೃತಿ ವಿಕಾರಗಳಿಂದ ಯೋಜಿಸುತ್ತಾನೆ

**ವಿಕಾರೇ ಯೋಜಯತ್ಯೇವ ಸುಖದುಃಖಾತ್ಮಕೇ ತದಾ ।**
**ವಿಕಾರರೂಪವರ್ಣಂ ತು ತೇನ ಸಂಹರತೇ ಜಗತ್　　　॥ ೨೦ ॥**

**ರೂಪಮಿದಂ ಕಥಿತಂ ತವ ಯಾಮ್ಯಂ**
**ಪಾಪವಿನಾಶಕರಂ ವಿಬುಧಾನಾಂ ।**
**ರೂಪಮತಃ ಕಥಯಾಮಿ ಮಹಾತ್ಮಂ-**
**ಸ್ತೋಯಪತೇಃ ವರುಣಸ್ಯ ತವಾಹಂ　　　॥ ೨೧ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ ವಜ್ರಸಂವಾದೇ ಯಮರೂಪನಿರ್ಮಾಣೋ ನಾಮೈಕ ಪಂಚಾಶತ್ತಮೋಽಧ್ಯಾಯಃ**

---

ಅಂತಹ ಪ್ರಕೃತಿಯ ವಿಕಾರಕ್ಕೆ ತಕ್ಕ ರೂಪವರ್ಣಗಳನ್ನು ಹೊಂದಿ ಜಗತ್ತನ್ನು ಸಂಹರಿಸುತ್ತಾನೆ ಪಂಡಿತರಿಗೂ ಸಹ ಶ್ರವಣಮಾತ್ರದಿಂದ ಸರ್ವ ಪಾಪನಾಶಕವಾದ ಯಮನ ರೂಪವನ್ನು ಇದುವರಿಗೂ ಹೇಳಿದ್ದಾಯಿತು ಇನ್ನು ಮುಂದೆ ಜಲಾಧಿಪನಾದ ವರುಣನ ರೂಪವನ್ನು ಹೇಳುತ್ತೇನೆ

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯ ಖಂಡದಲ್ಲಿ ಮಾರ್ಕಂಡೇಯ ವಜ್ರ ಸಂವಾದದಲ್ಲಿ ಯಮರೂಪನಿರ್ಮಾಣವೆಂಬ ಐವತ್ತೊಂದನೆಯ ಅಧ್ಯಾಯ ಮುಗಿದಿದೆ



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ದ್ವಿಪಂಚಾಶತ್ತಮೋಽಧ್ಯಾಯಃ ||

### || ಮಾರ್ಕಂಡೇಯ ಉವಾಚ ||

**ಸಪ್ತಹಂಸೇ ರಥೇ ಕಾರ್ಯೋ ವರುಣೋ ಯಾದಸಾಂಪತಿಃ |**
**ಸ್ನಿಗ್ಧವೈಡೂರ್ಯಸಂಕಾಶಃ ಶ್ವೇತಾಂಬರಧರಸ್ತಥಾ ||೧||**

**ಕಿಂಚಿತ್ಪ್ರಲಂಬಜಠರೋ ಮುಕ್ತಾಹಾರವಿಭೂಷಣಃ |**
**ಸರ್ವಾಭರಣವಾನ್ರಾಜಾ ತಥಾ ದೇವಶ್ಚತುರ್ಭುಜಃ ||೨||**

**ವಾಮಭಾಗಗತಂ ಕೇತುಂ ಮಕರಸ್ಯ ತು ಕಾರಯೇತ್ |**
**ಛತ್ರಂ ಚ ಸುಸಿತಂ ಮೂರ್ಧ್ನಿ ಭಾರ್ಯಾ ಸರ್ವಾಂಗಸುಂದರೀ ||೩||**

### ಐವತ್ತೆರಡನೆಯ ಅಧ್ಯಾಯ.

೧-೪ ಮಾರ್ಕಂಡೇಯರು ಹೇಳುತ್ತಾರೆ :— ಜಲಾಧಿಪನಾದ ವರುಣನನ್ನು ಏಳು ಹಂಸಗಳಿಂದ ಕೂಡಿರುವ ರಥದಲ್ಲಿ ಚಿತ್ರಿಸಬೇಕು ಒಳ್ಳೆಯ ವೈಡೂರ್ಯ ಮಣಿಯಂತಹ ಕಾಂತಿಯಿಂದ ಕೂಡಿ ಬಿಳಿಯ ವಸ್ತ್ರವನ್ನು ಧರಿಸಿರಬೇಕು. ಸ್ವಲ್ಪ ಮಟ್ಟಿಗೆ ಮುಂದೆ ಚಾಚಿಕೊಂಡಿರುವ ಜಠರದಿಂದ ಕೂಡಿಯೂ ಮುತ್ತಿನ ಹಾರಗಳನ್ನು ಧರಿಸಿಯೂ, ಸರ್ವಾಭರಣಭೂಷಿತನಾಗಿಯೂ, ಚತುರ್ಭುಜನಾಗಿಯೂ ಇರುವಂತೆ ಚಿತ್ರಿಸಬೇಕು ಎಡಭಾಗದಲ್ಲಿ ಧ್ವಜವೂ ಆ ಧ್ವಜದಲ್ಲಿ ಮೊಸಳೆಯೂ ಇರಬೇಕು ತಲೆಯ ಮೇಲೆ ಬಹಳ ಬಿಳುಪಾದ ಛತ್ರಿ ಇರಬೇಕು. ಗೌರ ವರ್ಣದಿಂದ ಕೂಡಿ ಸರ್ವಾಂಗಸುಂದರಿಯಾದ ಅವನ ಪತ್ನಿಯು ಎಡಭಾಗದ

ವಾಮೋತ್ಸಂಗಗತಾ ಕಾರ್ಯಾ ಗೌರೀ ತದ್ವಿಭುಜಾ ನೃಪ ।
ಉತ್ಪಲಂ ತು ಕರೇ ವಾಮೇ ದಕ್ಷಿಣಂ ದೇವಪೃಷ್ಠಗಂ || ೪ ||

ಪದ್ಮಪಾಶೌ ಕರೇ ಕಾರ್ಯೌ ದೇವದಕ್ಷಿಣಹಸ್ತಯೋಃ ।
ಶಂಖಂ ಚ ರತ್ನಪಾತ್ರಂ ಚ ವಾಮಯೋಸ್ತಸ್ಯ ಕಾರಯೇತ್ || ೫ ||

ಭಾಗೇ ತು ದಕ್ಷಿಣೇ ಗಂಗಾ ಮಕರಸ್ಥಾ ಸಚಾಮರಾ ।
ದೇವೀ ಪದ್ಮಕರಾ ಕಾರ್ಯಾ ಚಂದ್ರಗೌರೀ ವರಾನನಾ || ೬ ||

ವಾಮೇ ತು ಯಮುನಾ ಕಾರ್ಯಾ ಕೂರ್ಮಸಂಸ್ಥಾ ಸಚಾಮರಾ ।
ನೀಲೋತ್ಪಲಕರಾ ಸೌಮ್ಯಾ ನೀಲನೀರಜಸನ್ನಿಭಾ || ೭ ||

ಸ್ನಿಗ್ಧವೈಡೂರ್ಯಸಂಕಾಶಸ್ತ್ವಪ್ರೋವರ್ಣೋ ಯತೋ ನೃಪ ।
ತಯೋರನುಗ್ರಹಾರ್ಥಾಯ ತದ್ವರ್ಣೋ ವರುಣಸ್ತತಃ || ೮ ||

---

ತೊಡೆಯ ಮೇಲೆ ಕುಳಿತಿರಬೇಕು ಇವಳಿಗೆ ಭುಜದ್ವಯವಿರಬೇಕು ಅವಳ ಎಡಗೈಯ್ಯಿನಲ್ಲಿ ಕನ್ನೈದಿಲೆಯೂ ಬಲಗೈ ವರುಣನ ಬೆನ್ನಿನ ಮೇಲೆಯೂ ಇರಬೇಕು

೫–೮. ಆ ವರುಣನ ಬಲಭಾಗದ ಎರಡು ಕೈಗಳಲ್ಲಿಯೂ ಪದ್ಮ ಮತ್ತು ಪಾಶಗಳನ್ನು ರಚಿಸಬೇಕು ಎಡಭಾಗದ ಎರಡು ಕೈಗಳಲ್ಲಿಯೂ ಶಂಖ ಮತ್ತು ರತ್ನ, ಪಾತ್ರೆ ಇವುಗಳಿರಬೇಕು ಅವನ ಬಲಭಾಗದಲ್ಲಿ ಚಾಮರಗಳಿಂದ ಕೂಡಿ ಮೊಸಳೆಯ ಮೇಲೆ ಕುಳಿತಿರುವ ಗಂಗೆಯನ್ನು ಚಿತ್ರಿಸಬೇಕು ಆ ಗಂಗೆಯು ಪದ್ಮಹಸ್ತೆಯಾಗಿಯೂ, ಚಂದ್ರನಂತೆ ಶುಭ್ರಳಾಗಿಯೂ, ಸುಂದರವಾದ ಮುಖದಿಂದ ಕೂಡಿಯೂ ಇರಬೇಕು ಎಡಭಾಗದಲ್ಲಿ ಆಮೆಯ ಮೇಲೆ ಕುಳಿತು ಚಾಮರಗಳಿಂದ ಶೋಭಿತಳಾದ ಯಮುನೆಯನ್ನು ರಚಿಸಬೇಕು ಅವಳು ನೀಲ ಕಮಲಧಾರಿಣಿಯಾಗಿಯೂ, ಸೌಮ್ಯಳಾಗಿಯೂ, ಕಪ್ಪಾದ ಕಮಲದಂತೆ ಶ್ಯಾಮವರ್ಣದಲ್ಲಿರಬೇಕು ಅವರ ಮಧ್ಯದಲ್ಲಿರುವ ವರುಣನು ಗಂಗಾ ಯಮುನೆಗಳ ವರ್ಣಕ್ಕೆ ತಕ್ಕಂತೆ ವೈಢೂರ್ಯವರ್ಣದಲ್ಲಿರುತ್ತಾನೆ. ವೈಢೂರ್ಯದ ವರ್ಣವು ನೀರಿನ ಬಣ್ಣದಂತೆ ಕಪ್ಪು ಬಿಳಿಪು ಮಿಶ್ರವಾಗಿರುತ್ತದೆ

ಸ್ವರೂಪವರ್ಣಾಃ ಸುಸಿತಾಸ್ತಾ ಏವ ದ್ವಿಜಪುಂಗವ ।
ವಸನಂ ತಸ್ಯ ಕಥಿತಂ ತಾ ಏವ ಸುಸಿತಂ ನೃಪ ॥ ೯ ॥

॥ ವಜ್ರ ಉವಾಚ ॥

ಅಂಭಸಸ್ತು ಕಥಂ ವರ್ಣಃ ಸತ್ಯಾಸತ್ಯೇ ತ್ವಯೋರಿತೇ ।
ಏತತ್ತು ಶ್ರೋತುಮಿಚ್ಛಾಮಿ ಪರಂ ಕೌತೂಹಲಂ ಹಿ ಮೇ ॥ ೧೦ ॥

॥ ಮಾರ್ಕಂಡೇಯ ಉವಾಚ ॥

ವೈಡೂರ್ಯಾಭಮಪಾಂ ವರ್ಣಮತಥ್ಯಂ ಯದುನಂದನ ।
ಛಾಯಾಗತಸ್ಯ ನಭಸಃ ತದ್ರೂಪಂ ತಾಸು ದೃಶ್ಯತೇ ॥ ೧೧ ॥

ಪ್ರಪಾತಪಾತ್ಯೈರ್ಯದ್ರೂಪಮಂಭಸಾಂ ನೃಪ ದೃಶ್ಯತೇ ।
ಶಶಾಂಕಾಂಶುಪ್ರತೀಕಾಶಂ ತತ್ಸ್ವರೂಪೇ ಪ್ರತಿಷ್ಠಿತಂ ॥ ೧೨ ॥

ಪ್ರದ್ಯುಮ್ನೋ ವಾಸುದೇವಸ್ತು ವರುಣೋ ಯಾದಸಾಂ ಪತಿಃ ।
ತಸ್ಯ ಭಾರ್ಯಾ ರತಿರ್ಜ್ಞೇಯಾ ಗೌರೀ ಯಾದವನಂದನ ॥ ೧೩ ॥

---

೯-೧೦ ಆ ನದಿಗಳ ಸ್ವಾಭಾವಿಕವಾದ ತಮ್ಮ ವರ್ಣಗಳಿಗೆ ಅನುಗುಣವಾಗಿರುವ ಶುಭ್ರವಸ್ತ್ರವೇ ವರುಣನಿಗೆ ಉಂಟಾಗಿದೆ ವಜ್ರನು ಪ್ರಶ್ನೆಮಾಡುತ್ತಾನೆ - ನೀರಿನ ವರ್ಣವು ಕಪ್ಪು ಬಿಳುಪು ಮಿಶ್ರವೆಂದು ನೀವು ಹೇಳುತ್ತಿದ್ದೀರಿ ಇದಕ್ಕೆ ಕಾರಣವೇನೆಂಬುದನ್ನು ಕೇಳಲು ನನಗೆ ಕುತೂಹಲವುಂಟಾಗುತ್ತಿದೆ ಇದಕ್ಕೆ ಉತ್ತರವಾಗಿ ಮಾರ್ಕಂಡೇಯರು ಹೇಳುತ್ತಾರೆ—

೧೧-೧೫. ನೀರಿನಲ್ಲಿ ತೋರಿಬರುವ ವೈಡೂರ್ಯವರ್ಣವು ಸತ್ಯವಲ್ಲ ಆ ವರ್ಣವು ಜಲದಲ್ಲಿ ಪ್ರತಿಫಲಿಸಿರುವ ಆಕಾಶದ ಬಣ್ಣ ಆದುದರಿಂದ ಅದು ನೀರಿನ ಸ್ವಾಭಾವಿಕವಾದ ವರ್ಣವಲ್ಲ ನೀರು ಧುಮುಕುವ ಸಮಯದಲ್ಲಿ ತೋರಿಬರುವ ಚಂದ್ರಕಿರಣದಂತೆ ಶುಭ್ರವಾದ ವರ್ಣವೇ ಆ ಜಲದ ಸ್ವಾಭಾವಿಕ ವರ್ಣವೆನಿಸುತ್ತದೆ. ಅಂತಹ ಸ್ವರೂಪ ವರ್ಣಕ್ಕೆ ತಕ್ಕಂತೆ ಶುಭ್ರವಾದ ವಸ್ತ್ರವೇ ವರುಣನಿಗೆ ಇರಬೇಕೆಂದು ನಾವು ಹಿಂದೆ ಹೇಳಿದ್ದೇವೆ ಜಲಾಧಿಪನಾದ ವರುಣನು ವಾಸುದೇವನ ಅಂಶವಾದ ಪ್ರದ್ಯುಮ್ನನ ಸ್ವರೂಪ, ಆದುದರಿಂದಲೇ ಆತನ ಪತ್ನಿಯೂ ರತೀದೇವಿಯ ಸ್ವರೂಪ

ಸೌಭಾಗ್ಯಮುತ್ಪಲಂ ತಸ್ಯಾಃ ಕರೇ ಸುರತಗಂ ವಿಭೋ ।
ವರುಣಸ್ಯ ಕರೇ ಪದ್ಮಂ ವಿದಿಧರ್ಮೋ ಮಹಾಭುಜ ॥ ೧೪ ॥

ಶಂಖಮರ್ಥಂ ವಿಜಾನೀಹಿ ಪಾಶಂ ಸಂಸಾರಬಂಧನಂ ।
ರತ್ನಪಾತ್ರಂ ಕರೇಜ್ಞೇಯಂ ಸರ್ವರತ್ನಧರಾ ಧರಾ ॥ ೧೫ ॥

ಯಶಶ್ಚ ಸುಸಿತಂ ಛತ್ರಂ ಸೌಖ್ಯಂ ಮಕರ ಏವ ಚ ।
ಬ್ರಹ್ಮಣಾ ಕಥಿತಂ ತಸ್ಯ ಭುಜಾಭರಣಧಾರಣಂ ॥ ೧೬ ॥

ಲವಣಕ್ಷೀರಆಜ್ಯಾದಿ ದಧಿಮಂಡಸುರೋದಕಾಃ ।
ತಥೈವೇಕ್ಷುರಸೋದಶ್ಚ ಸುರೋದಶ್ಚ ತಥಾಪರಃ ॥ ೧೭ ॥

ಸಮುದ್ರಾಸ್ತೇ ತು ವಿಖ್ಯಾತಾ ಲೋಕೇ ನರವರೋತ್ತಮ ।
ಸಪ್ತಹಂಸಾ ರಥೇ ತಸ್ಯ ವರುಣಸ್ಯ ಮಹಾತ್ಮನಃ ॥ ೧೮ ॥

ಜಾಯಾ ತು ಯಮುನಾ ಜ್ಞೇಯಾ ಸಿದ್ಧಿರ್ಭಾಗೀರಥೀ ದ್ವಿಜ ।
ವೀರ್ಯಕಾಲೌ ವಿನಿರ್ದಿಷ್ಟೌ ತಥಾ ಮಕರಕಚ್ಛಪೌ ॥ ೧೯ ॥

ಆದ್ದರಿಂದ ಗೌರವರ್ಣದಲ್ಲಿರುತ್ತಾಳೆ ಅವಳ ಕೈಯಲ್ಲಿರುವ ಕಮಲವೇ ರತಿ ಸೌಖ್ಯವಾದ ಸೌಭಾಗ್ಯ, ವರುಣನ ಕೈಯ್ಯಲ್ಲಿ ಪದ್ಮವು ಚತುರ್ಮುಖನಾದ ಬ್ರಹ್ಮನ ರೀತಿಯಿಂದ ಉಂಟಾಗಿದೆ ಅವನ ಕೈಯ್ಯಲ್ಲಿರುವ ಶಂಖವೇ ಅರ್ಥದ ಸ್ವರೂಪ, ಪಾಶವೇ ಸಂಸಾರಬಂಧನ, ರತ್ನಪಾತ್ರೆಯು ಸರ್ವರತ್ನಧಾರಿಣಿಯಾದ ಭೂದೇವಿಯ ಸ್ವರೂಪ

೧೬-೧೯ ಯಶಸ್ಸೇ ಶ್ವೇತಚ್ಛತ್ರಿಯ ಸ್ವರೂಪ ಮೊಸಳೆಯೇ ಸೌಖ್ಯದ ಸ್ವರೂಪ ಅವನ ಭುಜ ಮತ್ತು ಆಭರಣಧಾರಣಗಳು ಚತುರ್ಮುಖನಿಂದಲೇ ಹೇಳಲ್ಪಟ್ಟಿವೆ ಲವಣ (ಉಪ್ಪು) ಕ್ಷೀರ (ಹಾಲು) ಆಜ್ಯ (ತುಪ್ಪ) ದಧಿ (ಮೊಸರು) ಸುರಾ (ಮದ್ಯ) ಇಕ್ಷುರಸ (ಕಬ್ಬಿನಹಾಲು) ಸುರಾ (ಮದ್ಯವಿಶೇಷ) ಇವುಗಳಿಂದ ಕೂಡಿದ ಏಳು ಸಮುದ್ರಗಳು ಪ್ರಸಿದ್ಧವಾಗಿವೆ ಆ ಸಮುದ್ರಗಳೇ ಏಳು ಹಂಸಗಳ ರೂಪದಿಂದ ಅವನ ರಥದಲ್ಲಿ ಸೇರಿವೆ ಅವನ ಜಾಯಾರೂಪಗಳೇ ಯಮುನಾನದಿ, ಗಂಗೆಯೇ ಅವನ ಸಿದ್ಧಿರೂಪ, ಮೊಸಳೆ, ಆಮೆ ಇವು ಬಲ ಮತ್ತು ಕಾಲದ ಸ್ವರೂಪಗಳು

ಸ್ವರ್ಗಗಂಗಾಕರೇ ಪದ್ಮಂ ವೃದ್ಧಿರ್ಯಾಮುನಮುತ್ಪಲಂ ॥ ೨೦ ॥

ರೂಪಂ ಜಲೇಶಸ್ಯ ತವೈತದುಕ್ತಂ
ಮಯಾ ಶಿರಃಪಾಶಧರಸ್ಯ ತಸ್ಯ ।
ಅತಃಪರಂ ವಿತ್ತಪತೇರ್ಬ್ರವೀಮಿ
ರೂಪಂ ತವಾಹಂ ಯದುವಂಶಚಂದ್ರ ॥ ೨೧ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ವರುಣರೂಪನಿರ್ಮಾಣೋ ನಾಮ
ದ್ವಿಪಂಚಾಶತ್ತಮೋಽಧ್ಯಾಯಃ

---

೨೦ ಸ್ವರ್ಗಂಗೆಯ ಕೈಯಲ್ಲಿಯೂ, ಯಮುನೆಯ ಕೈಯಲ್ಲಿಯೂ ಇರುವ ಪದ್ಮ ಮತ್ತು ನೈದಲೆಗಳು ವೃದ್ಧಿರೂಪ ಈ ರೀತಿ ಪಾಶಧರನಾದ ವರುಣನ ರೂಪವನ್ನು ನಿನಗೆ ಹೇಳಿದ್ದಾಯಿತು ಇನ್ನು ಮುಂದೆ ಧನಾಧಿಪನಾದ ಕುಬೇರನ ರೂಪವನ್ನು ಹೇಳುತ್ತೇನೆ

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯ ಖಂಡದಲ್ಲಿ ಮಾರ್ಕಂಡೇಯ ವಜ್ರ
ಸಂವಾದದಲ್ಲಿ ವರುಣರೂಪನಿರ್ಮಾಣವೆಂಬ ಐವತ್ತೆರಡನೆಯ
ಅಧ್ಯಾಯ ಮುಗಿದಿದೆ

॥ ಓಂ ॥

॥ ಶ್ರೀ ಹಯಗ್ರೀವಾಯ ನಮಃ ॥

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### ॥ ತ್ರಿಪಂಚಾಶತ್ತಮೋಽಧ್ಯಾಯಃ ॥

॥ ಮಾರ್ಕಂಡೇಯ ಉವಾಚ ॥

**ಕರ್ತವ್ಯಃ ಪದ್ಮಪತ್ರಾಭೋ ಧನದೋ ನರವಾಹನಃ ।**
**ಚಾಮೀಕರಾಭೋ ಧನದಃ ಸರ್ವಾಭರಣಭೂಷಣಃ ॥ ೧ ॥**

**ಲಂಬೋದರಶ್ಚತುರ್ಬಾಹುರ್ವಾಮಪಿಂಗಲಲೋಚನಃ ।**
**ಅಪೀಚ್ಯವೇಶಃ ಕವಚೀ ಹಾರಭಾರಾರ್ಪಿತೋದರಃ ॥ ೨ ॥**

**ದ್ವೇ ಚ ದಂಷ್ಟ್ರೇ ಮುಖೇ ತಸ್ಯ ಕರ್ತವ್ಯೇ ಶ್ಮಶ್ರುಧಾರಿಣಃ ।**
**ವಾಮೇನ ವಿನತಾಕಾರ್ಯಾ ಮೌಲಿಸ್ತಸ್ಯಾರಿಮರ್ದಿನೀ ॥ ೩ ॥**

---

### ಐವತ್ತಮೂರನೆಯ ಅಧ್ಯಾಯ.

೧-೪ ಮಾರ್ಕಂಡೇಯರು ಹೇಳುತ್ತಾರೆ:—ಕುಬೇರನನ್ನು ಪದ್ಮಪತ್ರದ ಬಣ್ಣದಿಂದ ಕೂಡಿಯೂ, ನರವಾಹನನಾಗಿರುವಂತೆಯೂ ಚಿತ್ರಿಸಬೇಕು ಕುಬೇರನು ಚಿನ್ನದ ಬಣ್ಣದಿಂದ ಕೂಡಿ ಸರ್ವಾಭರಣಧಾರಿಯಾಗಿರುವನು ಹೊಟ್ಟೆಯು ಸ್ವಲ್ಪ ಮುಂದಕ್ಕೆ ಚಾಚಿಯೂ, ನಾಲ್ಕು ಕೈಗಳಿಂದ ಕೂಡಿಯೂ, ಪಿಂಗಲವರ್ಣವುಳ್ಳ ಎಡಗಣ್ಣುಳ್ಳವನಾಗಿಯೂ ಇರುತ್ತಾನೆ ಬಹಳ ಸುಂದರವಾದ ವೇಷದಿಂದ ಕೂಡಿಯೂ ಇರುವನು ಗಡ್ಡಮೀಸೆಗಳುಳ್ಳ ಕುಬೇರನ ಮುಖದಲ್ಲಿ ಎರಡು ಕೋರೆ ಹಲ್ಲುಗಳನ್ನು ನಿರ್ಮಿಸಬೇಕು ಅವನ ಶತ್ರುನಾಶಕವಾದ ತಲೆಯು ಎಡಭಾಗಕ್ಕೆ

ವಾಮೋತ್ಸಂಗಗತಾ ಕಾರ್ಯಾ ಋದ್ಧಿರ್ದೇವೀ ವರಪ್ರದಾ ।
ದೇವಪೃಷ್ಠಗತಂ ಪಾಣಿಂ ದ್ವಿಭುಜಾಯಾಸ್ತು ದಕ್ಷಿಣಂ ॥ ೪ ॥

ರತ್ನಪಾತ್ರಕರಂ ಕಾರ್ಯಂ ವಾಮಂ ರಿಪುನಿಷೂದನ ।
ಗದಾಶಕ್ತೀ ಚ ಕರ್ತವ್ಯೇ ತಸ್ಯ ದಕ್ಷಿಣಹಸ್ತಯೋಃ ॥ ೫ ॥

ಸಿಹ್ಮಾಲಂಕರಣಂ ಕೇತುಂ ಶಿಬಿಕಾಮಪಿ ಪಾದಯೋಃ ।
ಶಂಖಪದ್ಮಾ ನಿಧೀಕಾರ್ಯೌ ಸ್ವರೂಪೌ ನಿಧಿಸಂಸ್ಥಿತೌ ॥ ೬ ॥

ಶಂಖಪದ್ಮಾಂತನಿಷ್ಕ್ರಾಂತಂ ವದನಂ ತಸ್ಯ ಪಾರ್ಶ್ವತಃ ।
ಅನಿರುದ್ಧಸ್ತು ವಿಜ್ಞೇಯಸ್ತ್ವಯಾ ದೇವೋ ಧನಾಧಿಪಃ ॥ ೭ ॥

ಬ್ರಹ್ಮಣಾ ಕಥಿತಂ ತಸ್ಯ ಸರ್ವಾಭರಣಧಾರಣಂ ।
ಸುವರ್ಣಂ ನಾಮ ವಿಖ್ಯಾತಂ ಧನಾನಾಮುತ್ತಮಂ ಧನಂ ॥ ೮ ॥

ತಸ್ಯಾನುಗ್ರಹತೋ ಧತ್ತೇ ವಾಸಃ ಕನಕಸನ್ನಿಭಂ ।
ಶಕ್ತಿರೇವ ಸ್ಮೃತಾ ಶಕ್ತಿಃ ದಂಡನೀತಿಸ್ತಥಾ ಗದಾ ॥ ೯ ॥

---

ಸ್ವಲ್ಪ ಬಗ್ಗಿದಂತಿರಬೇಕು ವರಪ್ರದಳಾದ ಋದ್ಧಿದೇವಿಯನ್ನು ಅವನ ಎಡತೊಡೆಯ ಮೇಲೆ ರಚಿಸಬೇಕು ಎರಡು ಭುಜಗಳುಳ್ಳ ಆ ದೇವಿಯ ಬಲಗೈಯನ್ನು ಕುಬೇರನ ಬೆನ್ನಿನ ಮೇಲಿರುವಂತೆ ಚಿತ್ರಿಸಬೇಕು

೫-೯ ಆ ದೇವಿಯ ಎಡಗೈಯ್ಯಿನಲ್ಲಿ ರತ್ನಪಾತ್ರವಿರಬೇಕು ಕುಬೇರನ ಬಲಭಾಗದ ಎರಡು ಕೈಗಳಲ್ಲಿಯೂ ಗದೆ ಮತ್ತು ಶಕ್ತ್ಯಾಯುಧಗಳಿರಬೇಕು. ಸಿಂಹಚಿಹ್ನಿತವಾದ ಧ್ವಜವನ್ನೂ ಪಾದಪ್ರದೇಶದಲ್ಲಿ ಪಲ್ಲಕ್ಕಿಯನ್ನೂ, ಶಂಖ ಪದ್ಮಗಳೆಂಬ ನಿಧಿಗಳನ್ನೂ ರಚಿಸಬೇಕು ಆ ಶಂಖಪದ್ಮಗಳು ಸ್ವಾಕಾರದಿಂದ ಕೂಡಿ ನಿಧಿಯ ಮೇಲೆ ಇರುವಂತಿರಬೇಕು ಆ ಶಂಖಪದ್ಮಗಳಿಂದ ಹೊರಟ ಮುಖವು ಕುಬೇರನ ಪಾರ್ಶ್ವದಲ್ಲಿ ಕಾಣುತ್ತಿರಬೇಕು ಧನಾಧಿಪನಾದ ಕುಬೇರನು ಅನಿರುದ್ಧನ ಅಂಶವೆಂದು ತಿಳಿಯಬೇಕು. ಇವನಿಗೆ ಎಲ್ಲಾ ಆಭರಣಗಳೂ ಉಂಟೆಂಬುದನ್ನು ಬ್ರಹ್ಮನೇ ಹೇಳಿರುತ್ತಾನೆ ಸುವರ್ಣವೆಂಬ ಉತ್ತಮವಾದ ಧನವು ಅವನಲ್ಲಿದೆ ಅದರ ಅನುಗ್ರಹದಿಂದ ಅವನ ವಸ್ತ್ರವು ಚಿನ್ನದ ಬಣ್ಣದಂತಿದೆ ಶಕ್ತ್ಯಾಯುಧವೇ ಶಕ್ತಿರೂಪ, ಗದೆಯೇ ದಂಡನೀತಿಯ ಸ್ವರೂಪ

ಲೋಕಯಾತ್ರಾ ಚ ಕಥಿತಾ ಋದ್ಧಿರ್ಜ್ಞೇಯಾ ಸ್ವಭಾವತಃ ।
ತತ್ಕರೇ ರತ್ನಪಾತ್ರಂ ತು ಗುಣಾಧಾರಂ ಪ್ರಚಕ್ಷತೇ ॥ ೧೦ ॥

ನರಂ ರಾಜ್ಯಂ ವಿಜಾನೀಹಿ ಯತ್ರಸ್ಥಸ್ತು ಸದಾ ವಿಭುಃ ।
ಸ್ವರೂಪತಸ್ತು ವಿಜ್ಞೇಯೌ ಶಂಖಪದ್ಮೌ ತಥಾ ನಿಧೀ ॥ ೧೧ ॥

ವಿತ್ತತೋಂಶೋ ಜಯತ್ಯಸ್ಮಿಂಸ್ತಾಭ್ಯಾಂ ಪ್ರಸವತೇಽಯುತಃ ।
ಅರ್ಥಃ ಸಕ್ಷಮಯಾ ಜ್ಞೇಯಃ ಕೇತುಃ ಸಿಹ್ಮಾಂಕಲಕ್ಷಣಃ ।
ನಿಗ್ರಹಾನುಗ್ರಹೇ ದ್ರಂಷ್ಟ್ರೇ ತಸ್ಯ ತಾತ ಮಹಾತ್ಮನಃ ॥ ೧೨ ॥

ಯಕ್ಷಾಧಿಪಸ್ಯೇತದನಂತದಂಷ್ಟ್ರಂ
ವಾಮೇ ವನಂ ಯಕ್ಷನದಸ್ಯ ರಾಜನ್ ।
ಅತಃಪರಂ ಕಿಂ ಕಥಯಾಮಿ ತುಭ್ಯಂ
ತನ್ಮೇ ವದಸ್ವಾಯತಲೋಹಿತಾಕ್ಷ ॥ ೧೩ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ವೈಶ್ರವಣರೂಪನಿರ್ಮಾಣೋ ನಾಮ
ತ್ರಿಪಂಚಾಶತ್ತಮೋಽಧ್ಯಾಯಃ

---

೧೦-೧೩ ಕುಬೇರನ ಪತ್ನಿಯಾದ ಋದ್ಧಿಯೇ ಸ್ವಾಭಾವಿಕವಾದ ಲೋಕಯಾತ್ರಾ ಸ್ವರೂಪಳು ಅವಳ ಕೈಯ್ಯಲ್ಲಿರುವ ರತ್ನಪಾತ್ರೆಯೇ ಗುಣಗಳ ಆಶ್ರಯ ಸ್ವರೂಪ, ಅವನಿಗೆ ವಾಹನವಾಗಿರುವ ನರನೇ ರಾಜ್ಯ ಸ್ವರೂಪ, ಶಂಖಪದ್ಮಗಳೇ ನಿಧಿಗಳ ಸ್ವರೂಪ, ಅವುಗಳಿಂದಲೇ ಇವನ ಧನಾಂಶವು ಲೋಕೋತ್ತರವಾಗಿದ. ಸಿಂಹಚಿಹ್ನಿತವಾದ ಧ್ವಜವೇ ಭೂಮಿಯೊಡಗೂಡಿದ ಅರ್ಥಸ್ವರೂಪ, ಅವನ ಕೋರೇಹಲ್ಲುಗಳೇ ನಿಗ್ರಹಾನುಗ್ರಹರೂಪ, ಯಕ್ಷನದದ ಎಡಭಾಗದಲ್ಲಿ ಅನಂತ ದಂಷ್ಟ್ರವೆಂಬ ವನವು ಕುಬೇರನಿಗೆ ಸೇರಿದುದು ಎಲೈ ದೊರೆಯೇ, ನಿನ್ನ ಕೋರಿಕಯಂತೆ ಯಕ್ಷಾಧಿಪನಾದ ಕುಬೇರನ ರೂಪವನ್ನೂ ಹೇಳಿ ಆಯಿತು ಇನ್ನು ಮುಂದೆ ನಿನಗೆ ಏನು ಹೇಳಲಿ ಹೇಳು

ಇಲ್ಲಿಗೆ ಶ್ರೀವಿಷ್ಣುಧರ್ಮೋತ್ತರ ತೃತೀಯ ಖಂಡದಲ್ಲಿ ಮಾರ್ಕಂಡೇಯ
ವಜ್ರ ಸಂವಾದದಲ್ಲಿ ವೈಶ್ರವಣರೂಪನಿರ್ಮಾಣವೆಂಬ
ಐವತ್ತಮೂರನೆಯ ಅಧ್ಯಾಯ ಮುಗಿದಿದೆ

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಚತುಃಪಂಚಾಶತ್ತಮೋಧ್ಯಾಯಃ ||

**|| ವಜ್ರ ಉವಾಚ ||**

**ಸುಪರ್ಣಸ್ಯ ಚ ತಾಳಸ್ಯ ಮಕರಸ್ಯ ಮೃಗಸ್ಯ ಚ ।**
**ಮರುತಾಂ ರೂಪನಿರ್ಮಾಣಂ ಶ್ರೋತುಮಿಚ್ಛಾಮಿ ಭಾರ್ಗವ || ೧ ||**

**|| ಮಾರ್ಕಂಡೇಯ ಉವಾಚ ||**

**ತಾರ್ಕ್ಷ್ಯೋ ಮಾರಕತಪ್ರಖ್ಯಃ ಕೌಶಿಕಾಕಾರನಾಸಿಕಃ ।**
**ಚತುರ್ಭುಜಸ್ತು ಕರ್ತವ್ಯೋ ವೃತ್ತನೇತ್ರಮುಖಸ್ತಥಾ || ೨ ||**

**ಗೃಧ್ರೋರುಜಾನುಚರಣಃ ಪಕ್ಷದ್ವಯವಿಭೂಷಣಃ || ೩ ||**

---

### ಐವತ್ತನಾಲ್ಕನೆಯ ಅಧ್ಯಾಯ

೧. ಪುನಃ ವಜ್ರನು ಪ್ರಶ್ನೆಮಾಡುತ್ತಾನೆ —ಎಲೈ ಭಾರ್ಗವನೇ, ಸುಪರ್ಣ (ಗರುಡ) ತಾಳ, ಮಕರ, ಮೃಗ ಇವುಗಳ ರೂಪನಿರ್ಮಾಣವನ್ನು ಕೇಳಲು ಆಶಿಸುತ್ತೇನೆ. ದಯವಿಟ್ಟು ಹೇಳಬೇಕು ಇದಕ್ಕೆ ಉತ್ತರವಾಗಿ ಮಾರ್ಕಂಡೇಯರು ಹೇಳುತ್ತಾರೆ .—

೨–೫ ಗರುಡನು ಪಚ್ಚೆಯಕಲ್ಲಿನ ಬಣ್ಣದಲ್ಲಿರಬೇಕು ಗೂಬೆಯ ಕೊಕ್ಕಿನಂತಹ ಮೂಗಿರಬೇಕು. ನಾಲ್ಕು ಭುಜಗಳಿರಬೇಕು. ಕಣ್ಣು ಮತ್ತು ಮುಖ ಇವು ದುಂಡಾಗಿರಬೇಕು ತೊಡೆ, ಮಂಡಿ, ಕಾಲುಗಳು ಇವು ಹದ್ದಿನ ಅವಯವಗಳಂತಿರಬೇಕು ಎರಡು ರೆಕ್ಕೆಗಳಿಂದ ಅಲಂಕೃತನಾಗಿರಬೇಕು ಸುವರ್ಣ ಪ್ರಭೆಯಿಂದ ಸುತ್ತುವರಿದು ಪುಕ್ಕವಿಲ್ಲದೆ ಇರಬೇಕು. ಅವನ ಎರಡು ಕೈಗಳಲ್ಲಿ

**ಪ್ರಭಾಸಂಸ್ಥಾನಸೌವರ್ಣಃ ಕಲಾಪೇನ ವಿವರ್ಜಿತಃ ।**
**ಛತ್ರಂ ಚ ಪೂರ್ಣಕುಂಭಂ ಚ ಕರಯೋಸ್ತಸ್ಯ ಕಾರಯೇತ್ ॥ ೪ ॥**

**ಕರದ್ವಯೇ ತು ಕರ್ತವ್ಯಸ್ತಥಾಸ್ಯ ರಚಿತೋಽಂಜಲಿಃ ।**
**ಯದಾಸ್ಯ ಭಗವಾನ್ಪೃಷ್ಠೇ ಛತ್ರಕುಂಭಧರೌ ಕರೌ ॥ ೫ ॥**

**ನ ಕರ್ತವ್ಯೌ ತು ಕರ್ತವ್ಯೌ ದೇವಪಾದಧರಾವುಭೌ ।**
**ಕಿಂಚಿಲ್ಲಂಬೋದರಃ ಕಾರ್ಯಃ ಸರ್ವಾಭರಣಭೂಷಿತಃ ॥ ೬ ॥**

**ತಾಲಸ್ತಾಲಾಕೃತಿಃ ಕಾರ್ಯೋ ಮಕರೋ ಮಕರಾಕೃತಿಃ ।**
**ಉಪರಿಷ್ಟಾತ್ತಥೈವಾಸ್ಯ ಕಾರ್ಯೋ ಯುಗ್ಯವದಚ್ಯುತಃ ॥ ೭ ॥**

**ಮನೋಜಗತ್ತಥಾಕಾಮಂ ಕರ್ಮ ಚೈತೇ ಕ್ರಮಾತ್ಸ್ಮೃತಾಃ ।**
**ವಾಸುದೇವೋಽಚ್ಯುತಶ್ಚೈವ ಪ್ರದ್ಯುಮ್ನಶ್ಚ ಮಹಾಭುಜಃ ।**
**ತಥಾ ಚೈವಾನಿರುದ್ಧಶ್ಚ ಕ್ರಮೇಣೈತೇ ಪ್ರಕೀರ್ತಿತಾಃ ॥ ೮ ॥**

ಛತ್ರಿ ಮತ್ತು ಪೂರ್ಣ ಕುಂಭಗಳನ್ನು ಚಿತ್ರಿಸಬೇಕು ಮುಂಭಾಗದ ಎರಡು ಕೈಗಳನ್ನು ಅಂಜಲಿಬಂಧ ರೂಪದಿಂದ ರಚಿಸಬೇಕು ಈ ಗರುಡನ ಬೆನ್ನಿನ ಮೇಲೆ ಭಗವಂತನು ಕುಳಿತಿರುವಂತೆ ಚಿತ್ರಿಸುವಾಗ ಕೈಗಳಲ್ಲಿ ಛತ್ರಿ ಮತ್ತು ಕುಂಭಗಳನ್ನು ರಚಿಸಬಾರದು ಆ ಕೈಗಳೆರಡೂ ಭಗವಂತನ ಪಾದಗಳನ್ನು ಧರಿಸಿರುವಂತೆ ಚಿತ್ರಿಸಬೇಕು

೬-೯ ಉದರವು ಸ್ವಲ್ಪ ಮಟ್ಟಿಗೆ ಮುಂದಕ್ಕೆ ಚಾಚಿದಂತಿರಬೇಕು ಎಲ್ಲಾ ಆಭರಣಗಳಿಂದಲೂ ಭೂಷಿತನಾಗಿರಬೇಕು ತಾಲವನ್ನು ತಾಲದಂತೆಯೂ ಮಕರವನ್ನು ಮಕರದಂತೆಯೂ ಚಿತ್ರಿಸಬೇಕು. ಮೇಲುಭಾಗದಲ್ಲಿ ಅಚ್ಯುತನನ್ನು ಚಿತ್ರಿಸಬೇಕು ಮನಸ್ಸು, ಜಗತ್ತು, ಕಾಮ ಕರ್ಮ ಇವುಗಳಿಗೆ ಕ್ರಮವಾಗಿ ವಾಸುದೇವ ಅಚ್ಯುತ, ಪ್ರದ್ಯುಮ್ನ, ಅನಿರುದ್ಧ ಇವರುಗಳು ನಿಯಾಮಕರಾಗಿದ್ದಾರೆ ತಾಲ

ತಾರ್ಕ್ಷ್ಯಃ ಸಕಾಲೋ ಮಕರಸ್ತಥಾರ್ಚ್ಯೋ
ದೇವೇಶಕೀನಾಶ ಜಲಾರ್ಥನಾಥಃ ।
ಅಗ್ನ್ಯರ್ಕತೋಯಾಧಿಪಪತ್ರಿನಾಥ
ಸ್ತಏವ ಲೋಕೇಷು ಬುಧೈಃ ಪ್ರದಿಷ್ಟಾಃ ॥ ೯ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಗರುಡರೂಪನಿರ್ಮಾಣೋ ನಾಮ
ಚತುಃಪಂಚಾಶತ್ತಮೋಽಧ್ಯಾಯಃ

---

ಸಹಿತನಾದ ತಾರ್ಕ್ಷ್ಯನೂ, ಮಕರನೂ ಪೂಜೆಗೆ ಅರ್ಹರಾಗುತ್ತಾರೆ ಮತ್ತು ಇಂದ್ರ, ಯಮ, ವರುಣ, ಕುಬೇರ, ಅಗ್ನಿ, ಸೂರ್ಯ, ಗರುಡ ಇವರೂ ಸಹ ಲೋಕದಲ್ಲಿ ಪೂಜ್ಯರೆಂದು ಪಂಡಿತರು ಅಭಿಪ್ರಾಯ ಹೊಂದಿದ್ದಾರೆ

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯ ಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಗರುಡ ನಿರ್ಮಾಣವೆಂಬ ಐವತ್ತನಾಲ್ಕನೆಯ
ಅಧ್ಯಾಯವು ಮುಗಿದಿದೆ.



॥ ಓಂ ॥

॥ ಶ್ರೀ ಹಯಗ್ರೀವಾಯ ನಮಃ ॥

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### ॥ ಪಂಚಪಂಚಾಶತ್ತಮೋಽಧ್ಯಾಯಃ ॥

॥ ವಜ್ರ ಉವಾಚ ॥

**ಶಿವಸ್ಯ ರೂಪನಿರ್ಮಾಣಂ ವಹ್ನೇರ್ನೈರ್ಋತೇಸ್ತಥಾ ।**
**ವಾಯೋಶ್ಚ ಬ್ರೂಹಿ ಧರ್ಮಜ್ಞ ತತ್ರ ಮೇ ಸಂಶಯೋ ಮಹಾನ್ ॥ ೧ ॥**

॥ ಮಾರ್ಕಂಡೇಯ ಉವಾಚ ॥

**ವಾಮಾರ್ಧೇ ಪಾರ್ವತೀ ಕಾರ್ಯಾ ಶಿವಃ ಕಾರ್ಯಶ್ಚತುರ್ಭುಜಃ ।**
**ಅಕ್ಷಮಾಲಾಂ ತ್ರಿಶೂಲಂ ಚ ತಸ್ಯ ದಕ್ಷಿಣಹಸ್ತಯೋಃ ॥ ೨ ॥**

**ದರ್ಪಣೇಂದೀವರೌ ಕಾರ್ಯೌ ವಾಮಯೋರ್ಯದುನಂದನ ।**
**ಏಕವಕ್ತ್ರೋ ಭವೇಚ್ಛಂಭುರ್ವಾಮಾ ಚ ದಯಿತಾ ತನುಃ ॥ ೩ ॥**

---

### ಐವತ್ತೈದನೆಯ ಅಧ್ಯಾಯ.

೧-೬ ವಜ್ರನು ಪುನಃ ಪ್ರಶ್ನೆಮಾಡುತ್ತಾನೆ ಎಲೈ ಧರ್ಮಜ್ಞನೇ, ಶಿವನ ರೂಪನಿರ್ಮಾಣವನ್ನೂ ಮತ್ತು ಅಗ್ನಿ, ನಿಋುಋತಿ, ವಾಯು ಇವರ ರೂಪನಿರ್ಮಾಣ ವನ್ನೂ ನನಗೆ ಹೇಳಬೇಕು ಈ ವಿಷಯದಲ್ಲಿ ನನಗೆ ಬಹಳ ಸಂದೇಹವಿದೆ ಇದಕ್ಕೆ ಉತ್ತರವಾಗಿ ಮಾರ್ಕಂಡೇಯರು ಹೇಳುತ್ತಾರೆ ಶಿವನ ಮೂರ್ತಿಯನ್ನು ನಾಲ್ಕು ಭುಜಗಳಿರುವಂತೆ ನಿರ್ಮಿಸಬೇಕು ಎಡಭಾಗದಲ್ಲಿ ಪಾರ್ವತಿಯನ್ನು ರಚಿಸಬೇಕು ಶಿವನ ಬಲಭಾಗದ ಎರಡು ಹಸ್ತಗಳಲ್ಲಿಯೂ ಅಕ್ಷಮಾಲೆ ಮತ್ತು ತ್ರಿಶೂಲಗಳೂ ಇರಬೇಕು ಎಡಭಾಗದ ಕೈಗಳಲ್ಲಿ ಕನ್ನಡಿ ಮತ್ತು ಇಂದೀವರ ಕುಸುಮಗಳಿರಬೇಕು ಶಂಭುವಿಗೆ ಒಂದೇ ಮುಖ, ಅವನ ಎಡಭಾಗದ ದೇಹವೇ

ದ್ವಿನೇತ್ರಶ್ಚ ಮಹಾಭಾಗ ಸರ್ವಾಭರಣಭೂಷಿತಃ ।
ಅಭೇದಭಿನ್ನಾ ಪ್ರಕೃತಿಃ ಪುರುಷೇಣ ಮಹಾಭುಜ ॥ ೪ ॥

ಗೌರೀಶರ್ವೇತಿ ವಿಖ್ಯಾತಾ ಸರ್ವಲೋಕನಮಸ್ಕೃತಾ ।
ಕಾರಣಂ ಕಥಿತಂ ಪೂರ್ವಂ ಶೂಲಾದೀನಾಂ ಮಯಾ ತವ ॥ ೫ ॥

ಈಶಾನರೂಪಂ ಕಥಿತಂ ತವೇದಂ ರೂಪಂ
ತಥಾಗ್ನೇಃ ಶೃಣು ಧರ್ಮ ನಿತ್ಯಂ ।
ವೇದಾಯದರ್ಥಂ ಜಗತಿ ಪ್ರವೃತ್ತಾಃ
ಮುಖಂ ಚ ಯತ್ಸರ್ವಸುರಾಸುರಾಣಾಂ ॥ ೬ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಗೌರೀಶರ್ವವರ್ಣನೋ ನಾಮ
ಪಂಚಪಂಚಾಶತ್ತಮೋಽಧ್ಯಾಯಃ

---

ಅವನ ಪತ್ನಿಯ ರೂಪ, ಎರಡೇ ಕಣ್ಣುಗಳು, ಸರ್ವಾಭರಣ ಭೂಷಿತನಾಗಿರಬೇಕು ಈ ಮೂರ್ತಿಯು ಅಭೇದ ಮತ್ತು ಭೇದಗಳಿಂದ ಕೂಡಿದ ಪ್ರಕೃತಿಪುರುಷ ಸಂಘಾತ ರೂಪ, ಇದಕ್ಕೆ ಗೌರೀಶ್ವರನೆಂದು ಹೆಸರು ಪ್ರಖ್ಯಾತವಾದ ಈ ಮೂರ್ತಿಯು ಸರ್ವರಿಂದಲೂ ನಮಸ್ಕರಿಸಲ್ಪಟ್ಟಿದೆ ಶೂಲಾದಿಗಳ ಧಾರಣಕ್ಕೆ ಕಾರಣವನ್ನು ಹಿಂದೆಯೇ ಹೇಳಲಾಗಿದೆ ಈ ರೀತಿ ಶಿವನ ರೂಪವನ್ನು ನಿನಗೆ ಹೇಳಿದ್ದಾಯಿತು ಇನ್ನು ಮುಂದೆ ಸ್ಥಿರಧರ್ಮ ಸ್ವರೂಪನಾದ ಅಗ್ನಿಯ ರೂಪವನ್ನು ಹೇಳುತ್ತೇನೆ ಈ ಅಗ್ನಿಯ ಪ್ರೀತಿಗಾಗಿಯೇ ವೇದಗಳು ಪ್ರವೃತ್ತವಾಗಿವೆ ದೇವದಾನವರಿಗೆಲ್ಲರಿಗೂ ಅಗ್ನಿಯೇ ಮುಖದಂತಿದೆ

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯ ಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಗೌರೀಶರ್ವವರ್ಣನವೆಂಬ ಐವತ್ತೈದನೆಯ
ಅಧ್ಯಾಯ ಮುಗಿದಿದೆ



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಷಟ್ಪಂಚಾಶತ್ತಮೋಽಧ್ಯಾಯಃ ||

|| ಮಾರ್ಕಂಡೇಯ ಉವಾಚ ||

**ರಕ್ತಂ ಜಟಾಧರಂ ವಹ್ನಿಂ ಕುರ್ಯಾದ್ಧೈ ಧೂಮ್ರವಾಸಸಂ ।**
**ಜ್ವಾಲಾಮಾಲಾಕುಲಂ ಸೌಮ್ಯಂ ತ್ರಿನೇತ್ರ ಶ್ಮಶ್ರುಧಾರಿಣಂ ॥ ೧ ॥**

**ಚತುರ್ಬಾಹುಂ ಚತುರ್ದಂಷ್ಟ್ರಂ ದೇವೇಶಂ ವಾತಸಾರಥಿಂ ।**
**ಚತುರ್ಭಿಶ್ಚ ಶುಕೈರ್ಯುಕ್ತಂ ಧೂಮಚಿಹ್ನರಥೇಸ್ಥಿತಂ ॥ ೨ ॥**

**ವಾಮೋತ್ಸಂಗಗತಾ ಸ್ವಾಹಾ ಶಕ್ರಸ್ಯೇವ ಶಚೀ ಭವೇತ್ ।**
**ರತ್ನಪಾತ್ರಕರಾ ದೇವೀ ವಹ್ನೇರ್ದಕ್ಷಿಣಹಸ್ತಯೋಃ ॥ ೩ ॥**

---

### ಐವತ್ತಾರನೆಯ ಅಧ್ಯಾಯ

೧-೪ ಮಾರ್ಕಂಡೇಯರು ಹೇಳುತ್ತಾರೆ —ಅಗ್ನಿಯನ್ನು ಕೆಂಪುಬಣ್ಣದಿಂದ ಕೂಡಿಯೂ, ಜಟಾಧಾರಿಯಾಗಿರುವಂತೆಯೂ, ಧೂಮ್ರಬಣ್ಣದ ವಸ್ತ್ರದಿಂದ ಕೂಡಿಯೂ ಇರುವಂತೆ ನಿರ್ಮಿಸಬೇಕು ಜ್ವಾಲಾಸಮೂಹದಿಂದ ಕೂಡಿಯೂ, ಮೂರು ಕಣ್ಣುಗಳಿಂದ ಕೂಡಿಯೂ, ಗಡ್ಡ ಮೀಸೆಗಳನ್ನು ಧರಿಸಿ ಸೌಮ್ಯನಾಗಿರುವಂತೆಯೂ ಚಿತ್ರಿಸಬೇಕು ನಾಲ್ಕು ಬಾಹುಗಳಿಂದ ಕೂಡಿ ನಾಲ್ಕು ಕೋರೆಹಲ್ಲುಗಳಿಂದ ಕೂಡಿ ವಾಯು ರಥನಾಗಿರಬೇಕು ನಾಲ್ಕು ಗಿಣಿಗಳಿಂದ ಕೂಡಿದ ಹೊಗೆಯ ಚಿಹ್ನೆಯ ರಥದಲ್ಲಿ ಕುಳಿತಿರುವಂತೆಯೂ ಇರಬೇಕು ಇಂದ್ರನಿಗೆ ಶಚಿದೇವಿಯಂತೆ ಈ ಅಗ್ನಿಗೂ ಎಡಭಾಗದಲ್ಲಿ ಸ್ವಾಹಾದೇವಿ ಕುಳಿತಿರಬೇಕು ದೇವಿಯ ಕೈಯ್ಯಿನಲ್ಲಿ ರತ್ನಗಳ ಪಾತ್ರೆ ಇರಬೇಕು ಅಗ್ನಿಯ ಬಲಭಾಗದ ಎರಡು

ಜ್ವಾಲಾತ್ರಿಶೂಲೌ ಕರ್ತವ್ಯೌ ಚಾಕ್ಷಮಾಲಾ ತು ವಾಮಕೇ ।
ರಕ್ತಂ ಹಿ ತೇಜಸೋ ರೂಪಂ ರಕ್ತವರ್ಣಂ ತತಃ ಸ್ಮೃತಂ ॥ ೪ ॥

ವಾತಸಾರಥಿತಾ ತಸ್ಯ ಪ್ರತ್ಯಕ್ಷಂ ಧೂಮ್ರಕೇತುತಾ ।
ಪ್ರತ್ಯಕ್ಷಾ ಚ ತಥಾ ಪ್ರೋಕ್ತಾ ಯೋಗಧೂಮ್ರಾಭವಸ್ತ್ರತಾ ॥ ೫ ॥

ಅಕ್ಷಮಾಲಾ ತ್ರಿಶೂಲಂ ಚ ಜಟಾಜೂಟಸ್ತ್ರಿನೇತ್ರತಾ ।
ಸರ್ವಾಭರಣಧಾರಿತ್ವಂ ವ್ಯಾಖ್ಯಾತಂ ತಸ್ಯ ಶಂಭುನಾ ॥ ೬ ॥

ಜ್ವಾಲಾಕಾರಂ ಪರಂ ಧಾಮ ಹುತಂ ತೇನ ಪ್ರತೀಚ್ಛತಿ ।
ಗೃಹೀತ್ವಾ ಸರ್ವದೇವೇಭ್ಯೋ ತತೋ ನಯತಿ ಶತ್ರುಹನ್ । ೭ ॥

ವಾಗ್ದಂಡಮಥ ಧಿಗ್ದಂಡಂ ಧನದಂಡಂ ತಥೈವ ಚ ।
ಚತುರ್ಥಂ ವಧದಂಡಂ ಚ ದಂಷ್ಟ್ರಾಸ್ತಸ್ಯ ಪ್ರಕೀರ್ತಿತಾಃ ॥ ೮ ॥

---

ಕೈಗಳಲ್ಲಿ ಜ್ವಾಲೆಯೂ ತ್ರಿಶೂಲವೂ ಇರಬೇಕು, ಎಡಗೈಯ್ಯಲ್ಲಿ ಅಕ್ಷಮಾಲಿಕೆ ಇರಬೇಕು ತೇಜಸ್ಸಿನ ರೂಪವು ಕೆಂಪಾಗಿರುವುದರಿಂದ ಅಗ್ನಿಯ ವರ್ಣವೂ ಕೆಂಪಾಗಿರಬೇಕು

೫-೮ ಅಗ್ನಿಯು ವಾಯು ಸಾರಥಿಯಾಗಿರುವುದೂ, ಧೂಮಕೇತುವಾಗಿರುವುದೂ ಸಹ ಪ್ರತ್ಯಕ್ಷಸಿದ್ಧ. ಹಾಗೆಯೇ ಯಾಗಧೂಮದಂತಹ ವಸ್ತ್ರವೂ ಸಹ ಅವನಿಗೆ ಪ್ರತ್ಯಕ್ಷ ಸಿದ್ಧ ಮತ್ತು ಅಕ್ಷಮಾಲಾ, ತ್ರಿಶೂಲ, ಜಟಾಕಲಾಪ, ತ್ರಿನೇತ್ರ, ಸರ್ವಾಭರಣಧಾರಿತ್ವ ಇವೆಲ್ಲವೂ ಉಂಟೆಂದು ಶಂಭುವೇ ವ್ಯಾಖ್ಯಾನ ಮಾಡಿದ್ದಾನೆ ಜ್ವಾಲಾಕಾರವೇ ಅವನ ಮುಖ್ಯವಾದ ದೇಹ ಆದರಿಂದಲೇ ಆಹುತಿಗಳನ್ನೆಲ್ಲಾ ಅವನು ಸ್ವೀಕರಿಸುತ್ತಾನೆ ತಾನು ಸ್ವೀಕರಿಸಿ ಎಲ್ಲಾ ದೇವತೆಗಳಿಗೂ ಅದನ್ನು ಒಯ್ಯುತ್ತಾನೆ ಅವನ ನಾಲ್ಕು ಕೋರೆದಾಡೆಗಳೂ, ವಾಗ್ದಂಡ, ಧಿಗ್ದಂಡ, ಧನದಂಡ, ವಧದಂಡಗಳೆಂಬ ನಾಲ್ಕು ದಂಡಸ್ವರೂಪಗಳು

ಶ್ಮಶ್ರು ತಸ್ಯ ವಿನಿರ್ದಿಷ್ಟಂ ದರ್ಭಾಃ ಪರಮಪಾವನಂ ।
ಯೇ ವೇದಾಸ್ತೇ ಶುಕಾಸ್ತಸ್ಯ ರಥಯುಕ್ತಾ ಮಹಾತ್ಮನಃ ॥ ೯ ॥

ಆಗ್ನೇಯಮೇತತ್ತವರೂಪಮುಕ್ತಂ
ಪಾಪಾಪಹಂ ಸಿದ್ಧಿಕರಂ ನರಾಣಾಂ ।
ಧ್ಯೇಯಂ ತವೈತನ್ನೃಪ ಹೋಮಕಾಲೇ
ಸರ್ವಾಗ್ನಿಕರ್ಮಣ್ಯಪರಾಜಿತೇನ ॥ ೧೦ ॥

ಇತಿ ಶ್ರೀ ವಿಷ್ಣು ಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಅಗ್ನಿರೂಪನಿರ್ಮಾಣೋ ನಾಮ
ಷಟ್‌ಪಂಚಾಶತ್ತಮೋಽಧ್ಯಾಯಃ

---

೯–೧೦ ಅವನ ಗಡ್ಡ ಮೀಸೆಗಳೇ ಪವಿತ್ರವಾದ ದರ್ಭೆಗಳ ಸ್ವರೂಪ ನಾಲ್ಕು ವೇದಗಳೇ ಗಿಣಿಗಳ ರೂಪದಿಂದ ಅವನ ರಥವನ್ನು ಹೊಂದಿವೆ ಈ ವಿಧವಾದ ಅಗ್ನಿಯ ರೂಪವನ್ನು ನಿನಗೆ ಹೇಳಿದ್ದಾಯಿತು ಇದರ ಶ್ರವಣವೂ ಸಹ ನರರಿಗೆ ಪಾಪನಾಶಕವೂ ಸಿದ್ಧಿಪ್ರದವೂ ಆಗುತ್ತದೆ ಅಗ್ನಿಯ ಇಂತಹ ಸ್ವರೂಪವು ಹೋಮಕಾಲದಲ್ಲಿಯೂ ಇತರ ಅಗ್ನಿ ಕಾರ್ಯಗಳಲ್ಲಿಯೂ ಧ್ಯಾನಿಸತಕ್ಕದ್ದು ಇದು ಸರ್ವ ವಿಧವಾದ ವಿಜಯಕ್ಕೂ ಕಾರಣವಾಗುತ್ತದೆ

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ ವಜ್ರ
ಸಂವಾದದಲ್ಲಿ ಅಗ್ನಿರೂಪನಿರ್ಮಾಣವೆಂಬ ಐವತ್ತಾರನೆಯ
ಅಧ್ಯಾಯ ಮುಗಿದಿದೆ

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಸಪ್ತಪಂಚಾಶತ್ತಮೋऽಧ್ಯಾಯಃ ||

**|| ಮಾರ್ಕಂಡೇಯ ಉವಾಚ ||**

**ವಿರೂಪಾಕ್ಷೋ ವಿವೃತ್ತಾಕ್ಷಃ ಪ್ರಾಂಶುದಂಡೋಜ್ಜ್ವಲಾನನಃ |**
**ಊರ್ಧ್ವಕೇಶೋ ಹರಿಶ್ಮಶ್ರುರ್ದ್ವಿಬಾಹುರ್ಭೀಷಣಾನನಃ || ೧ ||**

**ವರ್ಣೇನ ರಕ್ತಕೃಷ್ಣಾಂಗಃ ಕೃಷ್ಣಾಂಬರಧರಸ್ತಥಾ |**
**ಸರ್ವಾಭರಣಧಾರೀ ಚ ದಂಡರಶ್ಮಿಕರಸ್ತಥಾ || ೨ ||**

**ಭಾರ್ಯಾ ಚ ತಸ್ಯ ಕರ್ತವ್ಯಾ ದೇವೀ ನಿರ್‍ಋತಿಕಸ್ತಥಾ |**
**ಕೃಷ್ಣಾಂಗೀ ಕೃಷ್ಣವದನಾ ಪಾಶಹಸ್ತಾ ತು ವಾಮತಃ || ೩ ||**

---

### ಐವತ್ತೇಳನೆಯ ಅಧ್ಯಾಯ

೧-೬ ಮಾರ್ಕಂಡೇಯರು ಹೇಳುತ್ತಾರೆ —ವಿರೂಪಾಕ್ಷನನ್ನು ತಿರುಗಿದ ಕಣ್ಣುಗಳಿಂದ ಕೂಡಿಯೂ ದೀರ್ಘವಾದ ದಂಡಾಯುಧವನ್ನು ಧರಿಸಿ ಉಜ್ವಲವಾದ ಮುಖದಿಂದ ಕೂಡಿರುವಂತೆಯೂ, ನಿರ್ಮಿಸಬೇಕು ಮೇಲ್ಮುಖಗಳಾದ ಕೇಶಪಾಶಗಳಿಂದ ಕೂಡಿಯೂ, ಹಸುರಾದ ಗಡ್ಡಮೀಸೆಗಳಿಂದ ಕೂಡಿಯೂ, ಎರಡು ಬಾಹುಗಳಿಂದ ಕೂಡಿಯೂ, ಭಯಂಕರವಾದ ಮುಖದಿಂದ ಕೂಡಿಯೂ ಅವನ ಮೂರ್ತಿ ಇರಬೇಕು. ಕೆಂಪು ಮಿಶ್ರವಾದ ಕಪ್ಪುಬಣ್ಣದಿಂದ ಕೂಡಿಯೂ, ಕೃಷ್ಣವಸ್ತ್ರಧಾರಿಯಾಗಿಯೂ, ಸರ್ವಾಭರಣ ಧಾರಿಯಾಗಿಯೂ, ದಂಡ ಮತ್ತು ಲಗಾಮು ಇದನ್ನು ಕೈಯಲ್ಲಿ ಧರಿಸಿಯೂ ಇರಬೇಕು ಅವನ ಎಡಭಾಗದಲ್ಲಿ ಕಪ್ಪಾದ ಅವಯವಗಳಿಂದಲೂ, ಕಪ್ಪಾದ ಮುಖದಿಂದಲೂ ಕೂಡಿ ಪಾಶಧಾರಿಣಿಯಾದ ನಿರ್‍ಋತಿ ಎಂಬ ಭಾರ್ಯೆಯನ್ನು ಚಿತ್ರಿಸಬೇಕು ವಿರೂಪಾಕ್ಷನು ಕಾಲರೂಪಿ, ಅವನ ಭಾರ್ಯೆಯು

ಕಾಲಃ ಪ್ರೋಕ್ತೋ ವಿರೂಪಾಕ್ಷೋ ಮೃತ್ಯುರ್ಹಿನಿರ್ಋತಿಸ್ತಥಾ ।
ಬಿಭರ್ತಿ ತಾಮಸಂ ರೂಪಂ ವಾಸಾಂಸಿ ಚ ತತೋ ನೃಪ ॥ ೪ ॥

ಮಾರಣಂ ತತ್ಕರೇ ದಂಡಂ ಬಂಧನಂ ಚೋಷ್ಟ್ರರಶ್ಮಯಃ ।
ಮಹಾಮೋಹಸ್ತಥೈವೋಷ್ಟ್ರಃ ಕಥಿತಸ್ತಸ್ಯ ವಾಹನಃ ॥ ೫ ॥

ವಪುರ್ವಿರೂಪಾಕ್ಷಮಿಂದಂ ಪ್ರದಿಷ್ಟಂ
ರಕ್ಷೋಧಿಪಸ್ಯಾಪ್ರತಿಮಸ್ಯ ತಸ್ಯ ।
ಅತಃಪರಂ ವಚ್ಮಿ ತವಾದ್ಯ ರಾಜ
ನ್ವಾಯೋಸ್ತುರೂಪಂ ಪರಮಸ್ಯ ಧಾಮ್ನಃ ॥ ೬ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ವಿರೂಪಾಕ್ಷನಿರ್ಮಾಣೋ ನಾಮ
ಸಪ್ತಪಂಚಾಶತ್ತಮೋಽಧ್ಯಾಯಃ

ಮೃತ್ಯುರೂಪಳು　ಆದುದರಿಂದಲೇ ತಾಮಸವಾದ ರೂಪವನ್ನೂ, ವಸ್ತ್ರವನ್ನೂ ಧರಿಸಿರುತ್ತಾರೆ ಕೈಯ್ಯಲ್ಲಿರುವ ದಂಡವೇ ಮರಣ ಸ್ವರೂಪ, ಮತ್ತೊಂದು ಕೈಯ್ಯಲ್ಲಿರುವ (ವಾಹನವಾದ ಒಂಟೆಯ) ಲಗಾಮೇ ಬಂಧನರೂಪ, ವಾಹನರೂಪವಾದ ಒಂಟೆಯೇ ಮಹಾಮೋಹಸ್ವರೂಪ, ಈ ರೀತಿ ರಾಕ್ಷಸಾಧಿಪನಾದ ವಿರೂಪಾಕ್ಷನ ರೂಪವನ್ನು ನಿನಗೆ ಹೇಳಿದ್ದಾಯಿತು ಇನ್ನು ಮುಂದೆ ಉತ್ಕೃಷ್ಟ ದೇಹಧಾರಿಯಾದ ವಾಯುವಿನ ರೂಪವನ್ನು ಹೇಳುತ್ತೇನೆ

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯ ಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ವಿರೂಪಾಕ್ಷ ನಿರ್ಮಾಣವೆಂಬ ಐವತ್ತೇಳನೆಯ
ಅಧ್ಯಾಯ ಮುಗಿದಿದೆ



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಅಷ್ಟಪಂಚಾಶತ್ತಮೋಽಧ್ಯಾಯಃ ||

|| ಮಾರ್ಕಂಡೇಯ ಉವಾಚ ||

**ವಾಯುರಂಬರವರ್ಣಸ್ತು ತದಾಕಾರೋಂಬರೋ ಭವೇತ್ ।**
**ವಾಯ್ವಾಪೂರಿತವಸ್ತ್ರಶ್ಚ ದ್ವಿಭುಜೋ ರೂಪಸಂಯುತಃ ॥ ೧ ॥**

**ಗಮನೇಚ್ಛಾ ಶಿವಾ ಭಾರ್ಯಾ ತಸ್ಯ ಕಾರ್ಯಾ ಚ ವಾಮತಃ ।**
**ಕಾರ್ಯೋ ಗೃಹೀತವಸ್ತ್ರಾಂತಃ ಕರಾಭ್ಯಾಂ ಪವನೋ ದ್ವಿಜ ॥ ೨ ॥**

**ತಥೈವ ದೇವೀ ಕರ್ತವ್ಯಾ ಶಿವಾ ಪರಮಸುಂದರೀ ।**
**ವ್ಯಾಧಿತಾಸ್ಯಸ್ತಥಾ ಕಾರ್ಯೋ ದೇವೋ ವ್ಯಾಕುಲಮೂರ್ಧಜಃ ॥ ೩ ॥**

### ಐವತ್ತೆಂಟನೆಯ ಅಧ್ಯಾಯ.

೧–೬ ಮಾರ್ಕಂಡೇಯರು ಹೇಳುತ್ತಾರೆ — ವಾಯುವನ್ನು ಆಕಾಶದ ಬಣ್ಣದಂತಹ ಬಣ್ಣದಿಂದ ನಿರ್ಮಿಸಬೇಕು ಅವನ ವಸ್ತ್ರವೂ ಅದೇ ಬಣ್ಣದಲ್ಲಿರಬೇಕು ವಾಯುವಿನಿಂದ ತುಂಬಿದ ವಸ್ತ್ರದಿಂದ ಕೂಡಿ, ಎರಡು ಭುಜಗಳುಳ್ಳ ಸುಂದರವಾದ ರೂಪವಿರಬೇಕು ಅವನ ಗಮನೇಚ್ಛಾ ರೂಪಳಾದ ಶಿವಾ ಎಂಬ ಭಾರ್ಯೆಯು ಎಡಭಾಗದಲ್ಲಿರಬೇಕು ವಾಯುವಿನ ರೂಪವನ್ನು ಎರಡು ಕೈಗಳಿಂದಲೂ ವಸ್ತ್ರದ ಸೆರಗಯನ್ನು ಹಿಡಿದುಕೊಂಡಿರುವಂತೆ ರಚಿಸಬೇಕು ಅವನ ಭಾರ್ಯೆಯಾದ ಶಿವೆಯನ್ನೂ ಮಹಾಸುಂದರಿಯನ್ನಾಗಿ ಚಿತ್ರಿಸಬೇಕು ವಾಯುವಿನ ಮುಖವು ವ್ಯಾಧಿಗ್ರಸ್ತವಾಗಿರುವಂತೆಯೂ, ಕೇಶಪಾಶಗಳು ವ್ಯಾಕುಲವಾಗಿರುವಂತೆಯೂ ಇರಬೇಕು ವಾಯುವು ಆಶ್ರಯವಸ್ತುಗಳ ಗಂಧವರ್ಣಾದಿ

ವಾಯುರಾಶ್ರಯತೋ ಧತ್ತೇ ಗಂಧವರ್ಣಾದಿಕಂ ಯತಃ ।
ತಸ್ಮಾದಂಜನವರ್ಣಸ್ತು ಗಗನಸ್ಯ ಸಮಾಶ್ರಯಾತ್ ॥ ೪ ॥

ತದೇವ ವಸನಂ ತಸ್ಯ ಗಗನಂ ಪರಿಕೀರ್ತಿತಂ ।
ಯಾ ಗತಿಃ ಸಾ ಶಿವಾ ದೇವೀ ಯೋಽನಿರುದ್ಧಶ್ಚ ಸೋಽನಿಲಃ ॥ ೫ ॥

ಏತದ್ಧಿ ರೂಪಂ ಪವನಸ್ಯ ರಾಜಂ-
ಸ್ತವೋದಿತಂ ಸರ್ವಜಗನ್ಮಯಸ್ಯ ।
ದೇವ್ಯಾಃ ಶಿವಾಯಾಶ್ಚ ಮಹಾನುಭಾವ
ಪರಂ ಪವಿತ್ರಂ ವಿದಿತಂ ದ್ವಿಜಾನಾಂ ॥ ೬ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಮಾರ್ಕಂಡೇಯ ವಜ್ರ ಸಂವಾದೇ
ವಾಯುರೂಪನಿರ್ಮಾಣೋ ನಾಮ
ಅಷ್ಟಪಂಚಾಶತ್ತಮೋಽಧ್ಯಾಯಃ

ಗಳನ್ನು ಧರಿಸುವ ಸ್ವಭಾವವಿರುವುದರಿಂದ ಗಗನವನ್ನು ಆಶ್ರಯಿಸಿರುವ ಅವನು ಗಗನದಂತಹ ಬಣ್ಣವನ್ನೂ ವಸ್ತ್ರವನ್ನೂ ಹೊಂದಿರುತ್ತಾನೆ. ಅವನ ಗತಿಯೇ ಶಿವಾ ಎಂಬ ದೇವಿಯ ಸ್ವರೂಪ ವಾಯುವೂ ಸಹ ಅನಿರುದ್ಧನ ಸ್ವರೂಪ, ಸರ್ವ ಜಗದ್ವ್ಯಾಪಿಯಾದ ವಾಯುವಿನ ರೂಪವನ್ನು ನಿನಗೆ ಹೇಳಿದ್ದಾಯಿತು. ದೇವಿಯಾದ ಶಿವೆಯ ರೂಪವನ್ನೂ ಹೇಳಿದ್ದಾಯಿತು ಈ ಜ್ಞಾನವು ದ್ವಿಜರಿಗೆ ಬಹಳ ಪವಿತ್ರಕರವಾದ್ದು

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ತೃತೀಯ ಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ವಾಯುವಿನ ರೂಪನಿರ್ಮಾಣವೆಂಬ
ಐವತ್ತೆಂಟನೆಯ ಅಧ್ಯಾಯ ಮುಗಿದಿದೆ

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಏಕೋನಷಷ್ಟಿತಮೋಽಧ್ಯಾಯಃ ||

|| ಮಾರ್ಕಂಡೇಯ ಉವಾಚ ||

**ಅಥಾತೋ ರೂಪನಿರ್ಮಾಣಂ ವಕ್ಷ್ಯೇಹಂ ಭೈರವಸ್ಯ ತೇ |**
**ಲಂಬೋದರಂ ತಥಾ ಕುರ್ಯಾದ್ವೃತ್ತಪಿಂಗಲಲೋಚನಂ || ೧ ||**

**ದಂಷ್ಟ್ರಾಕರಾಲವದನಂ ಫುಲ್ಲನಾಸಾಪುಟಂ ತಥಾ |**
**ಕಪಾಲಮಾಲಿನಂ ರೌದ್ರಂ ಸರ್ವತಃ ಸರ್ಪಭೂಷಣಂ || ೨ ||**

**ವ್ಯಾಲೇನ ತ್ರಾಸಯಂತಂ ಚ ದೇವೀಂ ಪರ್ವತನಂದಿನೀಂ |**
**ಸಜಲಾಂಬುದಸಂಕಾಶಂ ಗಜಚರ್ಮೋತ್ತರಚ್ಛದಂ || ೩ ||**

---

### ಐವತ್ತೊಂಭತ್ತನೆಯ ಅಧ್ಯಾಯ

೧–೪ ಮಾರ್ಕಂಡೇಯರು ಹೇಳುತ್ತಾರೆ.—ಭೈರವನ ರೂಪನಿರ್ಮಾಣವನ್ನು ಇನ್ನು ಮುಂದೆ ಹೇಳುತ್ತೇನೆ ಭೈರವಮೂರ್ತಿಯನ್ನು ದಪ್ಪವಾದ ಉದರದಿಂದ ಕೂಡಿಯೂ, ದುಂಡಾದ ಮತ್ತು ಪಿಂಗಲವರ್ಣದ ಕಣ್ಣುಗಳಿಂದ ಕೂಡಿಯೂ ಇರುವಂತೆ ನಿರ್ಮಿಸಬೇಕು ಅವನ ಮುಖವು ಕೋರೆದಾಡೆಗಳಿಂದ ಕ್ರೂರವಾಗಿಯೂ, ಅರಳಿರುವ ಮೂಗಿನ ರಂಧ್ರದಿಂದ ಕೂಡಿಯೂ ಇರಬೇಕು. ಕಪಾಲಮಾಲಾಧಾರಿಯಾಗಿಯೂ, ರೌದ್ರವಾಗಿಯೂ, ಎಲ್ಲಾ ಕಡೆಗಳಲ್ಲಿಯೂ ಸರ್ಪಭೂಷಣಗಳಿಂದ ಕೂಡಿಯೂ ಅವನ ಮೂರ್ತಿ ಇರಬೇಕು ಪಾರ್ವತಿಯನ್ನು ಸರ್ಪಗಳಿಂದ ಭಯಪಡಿಸುತ್ತಿರುವಂತೆಯೂ ಚಿತ್ರಿಸಬೇಕು ಕೃಷ್ಣಮೇಘದಂತೆ ಕಪ್ಪಾಗಿಯೂ, ಆನೆಯ ಚರ್ಮದ ಮೇಲು ಹೊದಕೆಯಿಂದ ಕೂಡಿಯೂ, ಎಲ್ಲಾ

ಬಾಹುಭಿರ್ಬಹುಭಿರ್ವ್ಯಾಪ್ತಂ ಸರ್ವಾಯುಧವಿಭೂಷಣೈಃ ।
ಬೃಹತ್ತಾಲಪ್ರತೀಕಾಶೈಸ್ತಥಾ ತೀಕ್ಷ್ಣನಖೈಃ ಶುಭೈಃ ॥ ೪ ॥

ಸಾಚೀಕೃತಮಿದಂ ರೂಪಂ ಭೈರವಸ್ಯ ಪ್ರಕೀರ್ತಿತಂ ।
ಮಹಾಕಾಲಸ್ಯ ಕಥಿತಮೇತದೇವ ಚ ಸಮ್ಮುಖಂ ॥ ೫ ॥

ದೇವೀ ತು ವಾಮತಃ ಕಾರ್ಯಾ ಕರೇ ಕಾರ್ಯಸ್ತು ಪನ್ನಗಃ ।
ನ ಚಾಸ್ಯ ಪುರತಃ ಕಾರ್ಯಾ ದೇವೀ ಪರ್ವತನಂದಿನೀ ॥ ೬ ॥

ಶುಕ್ಲಾ ನ ಕಾರ್ಯಾ ನ ತಥಾಸ್ಯ ರಕ್ತಾ
ಸಮಾಪತೋ ಮಾತೃಗಣಪ್ರಧಾನೇ ।
ಕಾರ್ಯಸ್ತ್ವಥಾನ್ಯಃ ಪರಿಬರ್ಹಮಸ್ಯ
ಗಣಾಶ್ಚ ಕಾರ್ಯಾ ಬಹುರೂಪರೂಪಾಃ ॥ ೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಭೈರವರೂಪನಿರ್ಮಾಣೋ
ನಾಮೈಕೋನಷಷ್ಟಿತಮೋಽಧ್ಯಾಯಃ

---

ಆಯುಧಗಳನ್ನೂ ಧರಿಸಿರುವ ಅನೇಕ ಬಾಹುಗಳಿಂದ ಕೂಡಿಯೂ ಇರಬೇಕು ಬಾಹುಗಳೂ ತಾಳವೃಕ್ಷಗಳಂತೆ ದೀರ್ಘವಾಗಿರಬೇಕು ಕೈಗಳು ಹರಿತವಾದ ಉಗುರುಗಳಿಂದ ಕೂಡಿಯೂ ಇರಬೇಕು.

೫-೭ ಈ ರೂಪವು ಪಾರ್ಶ್ವಭಾಗಕ್ಕೆ ತಿರುಗಿರುವಂತೆ ಚಿತ್ರಿಸಿದಲ್ಲಿ ಇದು ಭೈರವನ ರೂಪವಾಗುತ್ತದೆ. ಅಭಿಮುಖವಾಗಿ ಚಿತ್ರಿಸಿದಲ್ಲಿ ಇದೇ ಮಹಾಕಾಲನ ರೂಪವಾಗುತ್ತದೆ ದೇವಿಯು ಎಡಭಾಗದಲ್ಲಿರಬೇಕು. ಅವಳ ಕೈಯಲ್ಲಿ ಸರ್ಪ ವಿರಬೇಕು ಪಾರ್ವತಿಯನ್ನು ಎದುರು ಭಾಗದಲ್ಲಿ ಚಿತ್ರಿಸಬಾರದು. ಅವಳು ಬಿಳುಪಾಗಿಯೂ ಕೆಂಪಾಗಿಯೂ ಇರಬಾರದು. ಮಾತೃಗಣಗಳನ್ನೇ ಮುಖ್ಯವಾಗಿ ಚಿತ್ರಿಸುವ ಸಂಭವವಿದ್ದಲ್ಲಿ ಬೇರೆ ಪರಿಚಾರಿಕರ ವರ್ಗವನ್ನು ಬರೆಯಬೇಕು. ಅನೇಕ ರೂಪಿಗಳಾದ ಗಣಗಳನ್ನೂ ಪರಿಜನ ಸಂಘದಲ್ಲಿ ಚಿತ್ರಿಸಬಹುದು

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ತೃತೀಯ ಖಂಡದಲ್ಲಿ ಮಾರ್ಕಂಡೇಯ
ವಜ್ರ ಸಂವಾದದಲ್ಲಿ ಭೈರವರೂಪನಿರ್ಮಾಣವೆಂಬ ಐವತ್ತೊಂಭತ್ತನೆಯ
ಅಧ್ಯಾಯ ಮುಗಿದಿದೆ.

॥ ಓಂ ॥

॥ ಶ್ರೀ ಹಯಗ್ರೀವಾಯ ನಮಃ ॥

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### ॥ ಷಷ್ಟಿತಮೋಽಧ್ಯಾಯಃ ॥

**॥ ವಜ್ರ ಉವಾಚ ॥**

**ವಿಷ್ಣುಭೂಮ್ಯಂಬರಾಣಾಂ ತ್ವಂ ಬ್ರಹ್ಮಣಶ್ಚ ತಥಾ ವಿಭೋ ।**
**ರೂಪನಿರ್ಮಾಣಮಾಚಕ್ಷ್ವ ಭೃಗುವಂಶವಿವರ್ಧನ ॥ ೧ ॥**

**॥ ಮಾರ್ಕಂಡೇಯ ಉವಾಚ ॥**

**ಏಕವಕ್ತ್ರೋ ದ್ವಿಬಾಹುಶ್ಚ ಗದಾಚಕ್ರಧರಃ ಪ್ರಭುಃ ।**
**ದೇಹವಿನ್ಯಾಸಮಪರಂ ಪ್ರಾಗುಕ್ತಂ ಕೀರ್ತಿತಂ ಹರೇಃ ॥ ೨ ॥**

**ಗಾಂಧಾರೀ ತು ಸ್ಮೃತಾ ಮಾಯಾ ಜಗದ್ಬಂಧಾಯ ವೈಷ್ಣವೀ ।**
**ಗದಾ ದೇವಕರೀ ನಿತ್ಯಂ ಸರ್ವಭೂತವಶಂಕರೀ ॥ ೩ ॥**

---

### ಅರವತ್ತನೆಯ ಅಧ್ಯಾಯ.

೧-೬ ವಜ್ರನು ಪುನಃ ಪ್ರಶ್ನೆಮಾಡುತ್ತಾನೆ —ಎಲೈ ಭೃಗೂತ್ತಮನೇ, ವಿಷ್ಣು, ಭೂಮಿ, ಆಕಾಶ, ಬ್ರಹ್ಮ ಇವರ ರೂಪನಿರ್ಮಾಣವನ್ನು ಹೇಳಬೇಕು ಇದಕ್ಕೆ ಉತ್ತರವಾಗಿ ಮಾರ್ಕಂಡೇಯರು ಹೇಳುತ್ತಾರೆ ವಿಷ್ಣುಮೂರ್ತಿಯು ಒಂದು ಮುಖದಿಂದ ಕೂಡಿ ಎರಡು ಬಾಹುಗಳುಳ್ಳದ್ದಾಗಿರಬೇಕು. ಗದಾ ಚಕ್ರಧಾರಿಯಾಗಿರಬೇಕು ವಿಷ್ಣುವಿನ ಮಹತ್ತಾದ ಮತ್ತೊಂದು ದೇಹವಿನ್ಯಾಸವನ್ನು ಹಿಂದೆ ಹೇಳಿರುವೆನು ಗಾಂಧಾರಿ ಎಂಬ ವೈಷ್ಣವ ಮಾಯೆಯು ಜಗತ್ತಿನ ಬಂಧನಕ್ಕಾಗಿ ಸಿದ್ಧವಾಗಿದೆ. ಅದೇ ಮಾಯೆಯು ಸರ್ವ ಪ್ರಾಣಿಗಳ ವಶೀಕರಣಕ್ಕಾಗಿ ಗದಾರೂಪದಿಂದ ವಿಷ್ಣುವಿನ ಕೈಯ್ಯಿನಲ್ಲಿ ಯಾವಾಗಲೂ ಇರುತ್ತದೆ ಆ ವೈಷ್ಣವ

ಸೈವ ಲಕ್ಷ್ಮೀರ್ಧೃತಿಃ ಕೀರ್ತಿಃ ಪುಷ್ಟಿಃ ಶ್ರದ್ಧಾ ಸರಸ್ವತೀ ।
ಗಾಯತ್ರೀ ವೇದಜನನೀ ಕಾಲರಾತ್ರಿಸ್ತಥೈವ ಸಾ　　॥ ೪ ॥

ಸಂಸಾರಭ್ರಮಣಂ ಚಕ್ರಂ ಚಕ್ರಂ ವಿಷ್ಣುಕರೇ ಸ್ಥಿತಂ ।
ಧರ್ಮಚಕ್ರಂ ಕಾಲಚಕ್ರಂ ಭಚಕ್ರಂ ಚ ಮಹಾಭುಜ　　॥ ೫ ॥

ಧ್ರುವೋ ಹಿ ವಿಷ್ಣುರ್ಭಗವಾನ್ಪ್ರದಿಷ್ಟಃ
ಚಕ್ರಂ ಸದಾ ಭ್ರಾಮಯತೇ ಸ ವೀರಃ ।
ಏತೇನ ಕಾರ್ಯೇಣ ಜಗತ್ಪ್ರಧಾನಃ
ಸ ಚಕ್ರಹಸ್ತೋ ಭಗವಾನ್ ಪ್ರದಿಷ್ಟಃ　　॥ ೬ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ವಿಷ್ಣುರೂಪನಿರ್ಮಾಣೋ ನಾಮ
ಷಷ್ಟಿತಮೋಽಧ್ಯಾಯಃ

ಮಾಯೆಯೇ ಲಕ್ಷ್ಮಿ ಎಂದೂ ಧೃತಿ, ಕೀರ್ತಿ, ಪುಷ್ಟಿ, ಶ್ರದ್ಧಾ, ಸರಸ್ವತೀ, ವೇದಮಾತೆಯಾದ ಗಾಯತ್ರೀ, ಹಾಗೂ ಕಾಲರಾತ್ರಿ ಎಂದೂ ವ್ಯವಹರಿಸ್ಪಡುತ್ತದೆ ಸಂಸಾರದಲ್ಲಿ ಭ್ರಮಣಕ್ಕೆ ಸೂಚಕವಾದ ಚಕ್ರಾಕಾರವಾದ ಚಕ್ರವು ವಿಷ್ಣುವಿನ ಕೈಯಲ್ಲಿ ನೆಲಸಿದೆ. ಅದೇ ಧರ್ಮಚಕ್ರ, ಕಾಲಚಕ್ರ, ಭಚಕ್ರ. ಮಹಾಮಹಿಮನಾದ ವಿಷ್ಣುವು ಸ್ಥಿರನೆಂದು ಹೇಳಲ್ಪಟ್ಟಿರುವನು. ಅವನು ತನ್ನ ಚಕ್ರವನ್ನು ಯಾವಾಗಲೂ ಸುತ್ತಿಸುತ್ತಿರುವನು ಈ ಕಾರಣದಿಂದಲೇ ಜಗತ್ತಿಗೆ ಪ್ರಧಾನ ಪುರುಷನಾದ ಅವನನ್ನು ಚಕ್ರಹಸ್ತನೆಂದು ಹೇಳಲಾಗುತ್ತಿದೆ

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ಮೂರನೆಯ ಖಂಡದಲ್ಲಿ ಮಾರ್ಕಂಡೇಯ
ವಜ್ರ ಸಂವಾದದಲ್ಲಿ ವಿಷ್ಣುರೂಪ ನಿರ್ಮಾಣವೆಂಬ
ಅರವತ್ತನೆಯ ಅಧ್ಯಾಯ ಮುಗಿದಿದೆ



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಏಕಷಷ್ಟಿತಮೋಽಧ್ಯಾಯಃ ||

**|| ಮಾರ್ಕಂಡೇಯ ಉವಾಚ ||**

**ಶುಕ್ಲವರ್ಣಾ ಮಹೀ ಕಾರ್ಯಾ ದಿವ್ಯಾಭರಣಭೂಷಿತಾ |**
**ಚತುರ್ಭುಜಾ ಸೌಮ್ಯವಪುಃ ಚಂದ್ರಾಂಶುಸದೃಶಾಂಬರಾ || ೧ ||**

**ರತ್ನಪಾತ್ರಂ ಸಸ್ಯಪಾತ್ರಂ ಪಾತ್ರಮೋಷಧಿಸಂಯುತಂ |**
**ಪದ್ಮಂ ಕರೇ ಚ ಕರ್ತವ್ಯಂ ಭುವೋ ಯಾದವನಂದನ || ೨ ||**

**ದಿಙ್ನಾಗಾನಾಂ ಚತುರ್ಣಾಂ ಸಾ ಕಾರ್ಯಾ ಪೃಷ್ಠಗತಾ ತಥಾ |**
**ಸರ್ವೌಷಧಿಯುತಾ ದೇವೀ ಶುಕ್ಲವರ್ಣಾ ತತಃ ಸ್ಮೃತಾ || ೩ ||**

---

### ಅರವತ್ತೊಂದನೆಯ ಅಧ್ಯಾಯ.

೧–೩. ಮಾರ್ಕಂಡೇಯರು ಹೇಳುತ್ತಾರೆ —ಭೂಮಿಯನ್ನು ಬಿಳಿಯ ಬಣ್ಣದಿಂದಕೂಡಿ ದಿವ್ಯಾಭರಣಧಾರಿಣಿಯಾಗಿರುವಂತೆಯೂ, ಚತುರ್ಭುಜದಿಂದ ಕೂಡಿ ಸೌಮ್ಯಳಾಗಿಯೂ ಚಂದ್ರನಂತೆ ಬಿಳಿಯ ವಸ್ತ್ರದಿಂದಕೂಡಿಯೂ, ಇರುವಂತೆ ನಿರ್ಮಿಸಬೇಕು ಅವಳ ನಾಲ್ಕು ಕೈಗಳಲ್ಲಿಯೂ, ರತ್ನಪಾತ್ರೆ, ಸಸ್ಯಪಾತ್ರೆ, ಓಷಧಿಯಿಂದ ಕೂಡಿದ ಪಾತ್ರೆ, ಪದ್ಮ ಇವುಗಳಿರಬೇಕು. ನಾಲ್ಕು ದಿಗ್ಗಜಗಳ ಮೇಲೆ ಕುಳಿತ್ತಿರುವಂತೆ ಚಿತ್ರಿಸಬೇಕು. ಭೂದೇವಿಯು ಎಲ್ಲಾ ಔಷಧಿಮಯ ಳಾದುದರಿಂದ ಅವಳು ಬಿಳಿಯ ಬಣ್ಣದಿಂದ ಕೂಡಿರಬೇಕೆಂದು ಹೇಳಲಾಗಿದೆ

ಧರ್ಮೋ ವಸ್ತ್ರಂ ಸಿತಂ ತಸ್ಯಾಃ ಪದ್ಮಮುರ್ಧಂ ತಥಾ ಕರೇ ॥ ೪ ॥

ಹೇತುಶ್ಚ ಶೇಷೋ ವಿದಿತೋ ಬುಧಾನಾ-
ಮತೋ ಮಯಾ ತೇ ಕಥಿತೋದ್ಯ ರಾಜನ್ ।
ರೂಪಂ ತ್ವರೂಪಸ್ಯ ತು ವಕ್ಷ್ಯತೋಽಹಂ
ಪ್ರಕರ್ಷಿತಂ ಯದ್ಗಗನಸ್ಯ ಸಿದ್ಧ್ಯೈಃ ॥ ೫ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಭೂಮಿರೂಪನಿರ್ಮಾಣೋ
ನಾಮೈಕಷಷ್ಟಿತಮೋಽಧ್ಯಾಯಃ

---

ಅವಳ ಬಿಳಿಯ ವಸ್ತ್ರವೇ ಧರ್ಮದ ಸ್ವರೂಪ, ಉಳಿದ ರೂಪಕ್ಕೆ ಕಾರಣವು ಪಂಡಿತರಿಗೆ ತಿಳಿದಿರುವುದರಿಂದ ಇಷ್ಟು ಮಾತ್ರವನ್ನು ನಾನು ಹೇಳಿದ್ದೇನೆ ಇನ್ನು ಮುಂದೆ ಆಕಾಶದ ಸ್ವರೂಪವನ್ನು ನಿನಗೆ ಹೇಳುತ್ತೇನೆ ಆಕಾಶದ ಇಂತಹ ರೂಪವು ಸಿದ್ಧರಿಂದ ಬಹುಮಟ್ಟಿಗೂ ಕೊಂಡಾಲ್ಪಟ್ಟಿದೆ

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯ ಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಭೂಮಿರೂಪ ನಿರ್ಮಾಣವೆಂಬ
ಅರವತ್ತೊಂದನೆಯ ಅಧ್ಯಾಯ ಮುಗಿದಿದೆ

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ದ್ವಿಷಷ್ಟಿತಮೋಽಧ್ಯಾಯಃ ||

**|| ಮಾರ್ಕಂಡೇಯ ಉವಾಚ ||**

**ನೀಲೋತ್ಪಲಾಭಂ ಗಗನಂ ತದ್ವರ್ಣಾಬರಧಾರಿ ಚ ।**
**ಚಂದ್ರಾರ್ಕಹಸ್ತಂ ಕರ್ತವ್ಯಂ ದ್ವಿಭುಜಂ ಸೌಮ್ಯದರ್ಶನಂ || ೧ ||**

**ಏತದ್ವಿರೂಪಂ ಗಗನಸ್ಯ ರಾಜನ್ ಪ್ರೋಕ್ತಂ**
**ಮಯಾ ತೇ ಪರಿಕಲ್ಪಿತಂ ಯತ್ ।**
**ರೂಪಂ ಪ್ರವಕ್ಷ್ಯಾಮಥ ತೇ ನಿಬೋಧ**
**ಪಿತಾಮಹಸ್ಯಾಪ್ರತಿಮಸ್ಯ ತಸ್ಯ || ೨ ||**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ ವಜ್ರಸಂವಾದೇ ಗಗನರೂಪವರ್ಣನೋ ನಾಮ ದ್ವಿಷಷ್ಟಿತಮೋಽಧ್ಯಾಯಃ**

---

### ಅರವತ್ತೆರಡನೆಯ ಅಧ್ಯಾಯ.

೧–೨ ಮಾರ್ಕಂಡೇಯರು ಹೇಳುತ್ತಾರೆ —ಆಕಾಶವನ್ನು ನೀಲಕಮಲದಂತೆ ಶ್ಯಾಮವರ್ಣದಿಂದ ಕೂಡಿಯೂ, ಅದೇ ಬಣ್ಣದ ವಸ್ತ್ರವನ್ನು ಧರಿಸಿರುವಂತೆಯೂ ಚಿತ್ರಿಸಬೇಕು ಸೌಮ್ಯವಾದ ರೂಪದಿಂದ ಕೂಡಿ ಎರಡು ಕೈಗಳನ್ನು ಧರಿಸಿರಬೇಕು ಎರಡು ಕೈಗಳಲ್ಲಿಯೂ ಚಂದ್ರ ಸೂರ್ಯರಿರಬೇಕು ಆಕಾಶವು ರೂಪರಹಿತವಾಗಿದ್ದರೂ ಕಲ್ಪಿತವಾದ ಈ ರೂಪವನ್ನು ನಿನಗೆ ಹೇಳಿದ್ದೇನೆ ಇನ್ನು ಅಸದೃಶ ಪ್ರಭಾವಶಾಲಿಯಾದ ಪಿತಾಮಹನ ರೂಪವನ್ನು ನಿನಗೆ ಹೇಳುತ್ತೇನೆ

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯ ಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದದಲ್ಲಿ ಗಗನರೂಪವರ್ಣನವೆಂಬ ಅರವತ್ತೆರಡನೆಯ ಅಧ್ಯಾಯವು ಮುಗಿದಿದೆ

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

**|| ತ್ರಿಷಷ್ಟಿತಮೋಽಧ್ಯಾಯಃ ||**

**|| ಮಾರ್ಕಂಡೇಯ ಉವಾಚ ||**

**ಪದ್ಮಪತ್ರಾಸನಸ್ಥಸ್ತು ಬ್ರಹ್ಮಾ ಕಾರ್ಯಶ್ಚತುರ್ಮುಖಃ |**
**ಸಾವಿತ್ರೀ ತಸ್ಯ ಕರ್ತವ್ಯಾ ವಾಮೋತ್ಸಂಗಗತಾ ತಥಾ || ೧ ||**

**ಆದಿತ್ಯವರ್ಣಾ ಧರ್ಮಜ್ಞ ಸಾಕ್ಷಮಾಲಾಕರಾ ತಥಾ |**
**ರೂಪಂ ಪೂರ್ವೋದಿತಂ ಕಾರ್ಯಂ ಸರ್ವಮನ್ಯಜ್ಜಗತ್ಪತೇ || ೨ ||**

**ಏತದ್ಧಿ ರೂಪಂ ವರದಸ್ಯ ಕಾರ್ಯಂ**
**ಪಿತಾಮಹಸ್ಯಾಪ್ರತಿಮಸ್ಯ ಸೌಮ್ಯ |**

---

**ಅರವತ್ತಮೂರನೆಯ ಅಧ್ಯಾಯ.**

೧–೩. ಮಾರ್ಕಂಡೇಯರು ಹೇಳುತ್ತಾರೆ:— ಬ್ರಹ್ಮನನ್ನು ಕಮಲದಳದ ಆಸನದಲ್ಲಿ ನಾಲ್ಕು ಮುಖಗಳಿಂದ ಕೂಡಿರುವಂತೆ ಬರೆಯಬೇಕು ಅವನ ಎಡ ತೊಡೆಯ ಮೇಲೆ ಸಾವಿತ್ರೀದೇವಿಯನ್ನು ಚಿತ್ರಿಸಬೇಕು ಆ ಸಾವಿತ್ರೀದೇವಿಯು ಸೂರ್ಯವರ್ಣದಂತೆ ಇದ್ದು ಕೈಯಲ್ಲಿ ಅಕ್ಷಮಾಲಿಕೆಯನ್ನು ಧರಿಸಿರಬೇಕು ಇತರ ರೂಪಗಳೆಲ್ಲವೂ ಹಿಂದೆ ಹೇಳಲಾಗಿದೆ ಅಸದೃಶನಾದ ಪಿತಾಮಹನ ರೂಪವನ್ನು ನಿನಗೆ ಹೇಳಿದ್ದೇನೆ.

ಪೂರ್ವೋದಿತಂ ವಾ ವರದಸ್ಯ ತಸ್ಯ
ಲೋಕಂ ಸಮಗ್ರಂ ವಶಗಂ ಹಿ ಯಸ್ಯ ॥ ೩ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಬ್ರಹ್ಮರೂಪನಿರ್ಮಾಣೋ ನಾಮ
ತ್ರಿಷಷ್ಟಿತಮೋಽಧ್ಯಾಯಃ

---

ಹಿಂದೆ ಹೇಳಿರುವ ರೂಪವೂ ಸಹ ಅವನಿಗೆ ಉಂಟು, ಎಲ್ಲಾ ಲೋಕಗಳೂ ಅವನಿಗೆ ಅಧೀನವಾಗಿವೆಯಷ್ಟೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಬ್ರಹ್ಮರೂಪನಿರ್ಮಾಣವೆಂಬ
ಅರವತ್ತಮೂರನೆಯ ಅಧ್ಯಾಯ ಮುಗಿದಿದೆ



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಚತುಷ್ಷಷ್ಟಿತಮೋಽಧ್ಯಾಯಃ ||

### || ಮಾರ್ಕಂಡೇಯ ಉವಾಚ ||

**ದೇವೀ ಸರಸ್ವತೀ ಕಾರ್ಯಾ ಸರ್ವಾಭರಣಭೂಷಿತಾ |**
**ಚತುರ್ಭುಜಾ ಸಾ ಕರ್ತವ್ಯಾ ತಥೈವ ಚ ಸಮುತ್ಥಿತಾ || ೧ ||**

**ಪುಸ್ತಕಂ ಚಾಕ್ಷಮಾಲಾಂ ಚ ತಸ್ಯಾ ದಕ್ಷಿಣಹಸ್ತಯೋಃ |**
**ವಾಮಯೋಶ್ಚ ತಥಾ ಕಾರ್ಯಾ ವೈಷ್ಣವೀ ಚ ಕಮಂಡಲುಃ || ೨ ||**

**ಸಮಪಾದಪ್ರತಿಷ್ಠಾ ಚ ಕಾರ್ಯಾ ಸೋಮಮುಖೀ ತಥಾ |**
**ವೇದಾಸ್ತಸ್ಯಾ ಭುಜಾ ಜ್ಞೇಯಾಃ ಸರ್ವಶಾಸ್ತ್ರಾಣಿ ಪುಸ್ತಕಂ || ೩ ||**

---

### ಅರವತ್ತನಾಲ್ಕನೆಯ ಅಧ್ಯಾಯ.

೧-೭. ಮಾರ್ಕಂಡೇಯರು ಹೇಳುತ್ತಾರೆ —ಸರಸ್ವತಿಯನ್ನು ನಾಲ್ಕು ಭುಜಗಳಿಂದ ಕೂಡಿಯೂ, ಸರ್ವಾಭರಣ ಭೂಷಿತಳಾಗಿಯೂ ನಿರ್ಮಿಸಬೇಕು ಮೇಲಕ್ಕೆ ಎದ್ದು ನಿಂತಿರುವಂತೆ ಚಿತ್ರಿಸಬೇಕು ಬಲಭಾಗದ ಎರಡು ಕೈಗಳಲ್ಲಿ ಪುಸ್ತಕ ಮತ್ತು ಅಕ್ಷಮಾಲೆಗಳಿರಬೇಕು ಎಡಭಾಗದ ಎರಡು ಕೈಗಳಲ್ಲಿ ವೈಷ್ಣವ ಶಕ್ತಿ ಮತ್ತು ಕಮಂಡಲುಗಳಿರಬೇಕು ಚಂದ್ರಮುಖಿಯಾಗಿಯೂ, ಸಮಪಾದ ಗಳಿಂದ ನಿಂತಿರುವಂತೆಯೂ ಚಿತ್ರಿಸಬೇಕು. ವೇದಗಳೇ ಅವಳ ನಾಲ್ಕು ಭುಜಗಳು ಸರ್ವಶಾಸ್ತ್ರಗಳೇ ಅವಳ ಕೈಯಲ್ಲಿರುವ ಪುಸ್ತಕರೂಪ, ಕೈಯಲ್ಲಿರುವ ಕಮಂಡಲುವೇ

ಸರ್ವಶಾಸ್ತ್ರಾಮೃತರಸೋ ದೇವ್ಯಾ ಜ್ಞೇಯಃ ಕಮಂಡಲುಃ ।
ಅಕ್ಷಮಾಲಾ ಕರೇ ತಸ್ಯಾಃ ಕಾಲೋ ಭವತಿ ಪಾರ್ಥಿವ ॥ ೪ ॥

ಸಿದ್ಧಿರ್ಮೂರ್ತಿಮತೀ ಜ್ಞೇಯಾ ವೈಷ್ಣವೀ ನಾತ್ರ ಸಂಶಯಃ ।
ಸಾವಿತ್ರೀ ವದನಂ ತಸ್ಯಾಃ ಸರ್ವಾದ್ಯಾ ಪರಿಕೀರ್ತಿತಾ ॥ ೫ ॥

ಚಂದ್ರಾರ್ಕಲೋಚನಾ ಜ್ಞೇಯಾ ಸಾ ಚ ರಾಜೀವಲೋಚನಾ ॥ ೬ ॥

ಸಾರಸ್ವತಂ ತೇ ಕಥಿತಂ ಮಯೈತದ್ರೂಪಂ
ಪವಿತ್ರಂ ಪರಮಂ ಮನೋಜ್ಞಂ ।
ಧ್ಯೇಯಂ ಚ ಕಾರ್ಯಂ ಚ ಮಹೀಪಮುಖ್ಯ
ಸರ್ವಾರ್ಥಸಿದ್ಧಿಂ ಸಮಭೀಪ್ಸಮಾನೈಃ ॥ ೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ :ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಸರಸ್ವತೀರೂಪನಿರ್ಮಾಣೋ ನಾಮ
ಚತುಃಷಷ್ಟಿತಮೋಽಧ್ಯಾಯಃ

---

ಸರ್ವಶಾಸ್ತ್ರಗಳ ಸಾರಭೂತವಾದ ಅಮೃತರಸ, ಅಕ್ಷಮಾಲಿಕೆಯೇ ಕಾಲಸ್ವರೂಪ, ವೈಷ್ಣವ ಶಕ್ತಿಯೇ ಸರ್ವಸಿದ್ಧಿಸ್ವರೂಪ, ಆದಿಮೂರ್ತಿಯಾದ ಸಾವಿತ್ರಿಯೇ ಅವಳ ಮುಖ, ಕಮಲಗಳಂತೆ ಸುಂದರವಾಗಿರುವ ಅವಳ ನೇತ್ರಗಳೇ ಸೂರ್ಯ, ಚಂದ್ರ ಸ್ವರೂಪ, ಪವಿತ್ರವಾಗಿಯೂ, ರಮ್ಯವಾಗಿಯೂ ಇರುವ ಸರಸ್ವತಿಯ ರೂಪವನ್ನು ಈ ರೀತಿ ನಿನಗೆ ಹೇಳಿದ್ದಾಯಿತು ಎಲ್ಲಾ ವಿಧವಾದ ಸಿದ್ಧಿಗಳನ್ನು ಹೊಂದಲು ಆಶಿಸುವವರು ಈ ರೂಪವನ್ನು ಧ್ಯಾನಮಾಡಬೇಕು, ಮೂರ್ತಿಯನ್ನು ನಿರ್ಮಿಸ ಬೇಕು

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಸರಸ್ವತಿ ರೂಪನಿರ್ಮಾಣವೆಂಬ
ಅರವತ್ತನಾಲ್ಕನೆಯ ಅಧ್ಯಾಯವು ಮುಗಿದಿದೆ.



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಪಂಚಷಷ್ಟಿತಮೋಽಧ್ಯಾಯಃ ||

**|| ವಜ್ರ ಉವಾಚ ||**

**ಆಚಕ್ಷ್ವ ರೂಪನಿರ್ಮಾಣಂ ಮಮಾನನ್ತಸ್ಯ ದೇವಜ ।**
**ವಿಷ್ಣೋರಮಿತವೀರ್ಯಸ್ಯ ಶೇಷಸ್ಯ ಧರಣೀ ಭೃತಃ || ೧ ||**

**|| ಮಾರ್ಕಂಡೇಯ ಉವಾಚ ||**

**ಕುರ್ಯಾಚ್ಛಶಾಂಕಸಂಕಾಶಂ ರತ್ನೋಜ್ವಲಫಣಾನ್ವಿತಂ ।**
**ನೀಲವಸ್ತ್ರಂ ಚತುರ್ಬಾಹುಂ ಸರ್ವಾಭರಣಧಾರಿಣಂ || ೨ ||**

**ಫಣಾಶ್ಚ ಬಹವಃ ಕಾರ್ಯಾ ಯತ್ಫಣಂ ತಸ್ಯ ಮಧ್ಯಮಂ ।**
**ತತ್ರ ರೂಪವತೀ ಕಾರ್ಯಾ ವಸುಧಾ ಯದುನಂದನ || ೩ ||**

---

### ಅರವತ್ತೈದಯನೆಯ ಅಧ್ಯಾಯ.

೧-೪ ವಜ್ರನು ಪ್ರಶ್ನೆ ಮಾಡುತ್ತಾನೆ —ಎಲೈ ಮಹಾಪುರುಷನೇ, ಪ್ರಭಾವ ಶಾಲಿಯಾದ ವಿಷ್ಣುವನ್ನು ಆಶ್ರಯಿಸಿ ಯಾವ ಶೇಷನು ಭೂಭಾರವನ್ನು ಹೊತ್ತಿರುತ್ತಾನೋ ಅಂತಹ ಅನಂತ ಮೂರ್ತಿಯಾದ ಶೇಷನ ಸ್ವರೂಪವನ್ನು ಹೇಳಬೇಕು ಇದಕ್ಕೆ ಉತ್ತರವಾಗಿ ಮಾರ್ಕಂಡೇಯರು ಹೇಳುತ್ತಾರ —ಶೇಷನನ್ನು ಚಂದ್ರನಂತೆ ಧವಲವರ್ಣದಿಂದ ಕೂಡಿಯೂ, ರತ್ನಗಳಿಂದ ಪ್ರಕಾಶಮಾನವಾದ ಹೆಡೆಗಳಿಂದ ಕೂಡಿಯೂ ನಿರ್ಮಿಸಬೇಕು ಅವನು ನೀಲಾವಸ್ತ್ರಧಾರಿಯಾಗಿಯೂ, ನಾಲ್ಕು ಕೈಗಳಿಂದ ಕೂಡಿಯೂ, ಸರ್ವಾಭರಣಧಾರಿಯಾಗಿಯೂ ಇರಬೇಕು ಅವನಿಗೆ ಅನೇಕ ಹೆಡೆಗಳಿರಬೇಕು ಆ ಹೆಡೆಗಳಲ್ಲಿ ಯಾವುದು ಮಧ್ಯಭಾಗಕ್ಕೆ ಸೇರಿರುವುದೋ ಆ ಹೆಡೆಯಲ್ಲಿ ರೂಪವತಿಯಾದ ಭೂದೇವಿಯ ಮೂರ್ತಿಯನ್ನು ರಚಿಸ

ಪದ್ಮಂ ಸಮುಸಲಂ ಕಾರ್ಯಂ ದೇವದಕ್ಷಿಣಹಸ್ತಯೋಃ ।
ವಾಮಯೋಃ ಸೀರಶಂಖೇ ಚ ಕರೇ ತಸ್ಯ ಸುರಾಂಬುಧಿಃ ॥ ೪ ॥

ತಾಲವೃಕ್ಷಂ ಜಗತ್ಸರ್ವಂ ಕಥಿತಂ ತು ಮಹಾಭುಜ ।
ವಿಖ್ಯಾತೌ ಸೀರಮುಸಲೌ ಪೂರ್ವಮೇವ ಮಯಾ ತವ ॥ ೫ ॥

ವನಮಾಲಾ ಚ ವಿಖ್ಯಾತಾ ತಥಾ ಯದುಕುಲೋದ್ವಹ ।
ಪೃಥಿವೀ ಧಾರ್ಯತೇ ತೇನ ಸಶೈಲವನಕಾನನಾ ॥ ೬ ॥

ಪೃಥಿವೀ ತೇನ ಕರ್ತವ್ಯಾ ಫಣೇ ತಸ್ಯ ತು ಮಧ್ಯಮೇ ।
ಫಣಾವಲಿಸ್ತಸ್ಯ ತಯಾ ಪ್ರತಿಷ್ಠಾ
ಕಾಮಾಸ್ತು ತೇ ಯಾದವವಂಶಮುಖ್ಯ ।
ಏತದ್ಧಿ ರೂಪಂ ಪರಮೇಶ್ವರಸ್ಯ
ವಿಷ್ಣೋರಚಿಂತ್ಯಸ್ಯ ಮಯೇರಿತಂ ತೇ ॥ ೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಅನಂತರೂಪನಿರೂಪಣೋ ನಾಮ
ಪಂಚಷಷ್ಟಿತಮೋಽಧ್ಯಾಯಃ

---

ಬೇಕು ಬಲಭಾಗದ ಎರಡು ಕೈಗಳಲ್ಲಿ ಪದ್ಮ ಮತ್ತು ಮುಸಲಾಯುಧವಿರಬೇಕು ಎಡಭಾಗದ ಕೈಗಳಲ್ಲಿ ನೇಗಿಲು ಮತ್ತು ಶಂಖಗಳಿರಬೇಕು

೫-೭ ಅವನ ಕೈಯಲ್ಲಿರುವ ಶಂಖವೇ ಸುರಾಸಮುದ್ರದ ಸ್ವರೂಪ ತಾಲ ವೃಕ್ಷಗಳಂತೆ ಉನ್ನತವಾಗಿರುವ ಹೆಡೆಗಳೇ ಸರ್ವಜಗದ್ರೂಪ ಪ್ರಸಿದ್ಧವಾದ ನೇಗಿಲು ಮತ್ತು ಮುಸಲಾಯುಧಗಳಿಗೆ ಕಾರಣವನ್ನು ಹಿಂದೆಯೇ ಹೇಳಿರುವೆನು. ವನ ಮಾಲಾಧಾರಣವು ಪ್ರಸಿದ್ಧವಾಗಿದೆ. ಈ ರೂಪದಿಂದಲೇ ಪರ್ವತ ಮತ್ತು ಕಾಡು ಗಳಿಂದ ಕೂಡಿದ ಭೂಮಿಯು ಧರಿಸಲ್ಪಟ್ಟಿದೆ, ಆದುದರಿಂದಲೇ ಮಧ್ಯಭಾಗದ ಹೆಡೆಯಲ್ಲಿ ಭೂಮಿಯು ಧರಿಸಲ್ಪಟ್ಟಿದೆ ಹೆಡೆಗಳಿಂದಲೇ ಗೌರವವನ್ನು ಹೊಂದಿ ರುವ ಅನಂತಮೂರ್ತಿಗೆ ಆ ಹೆಡೆಗಳಿಂದಲೇ ಪೂಜ್ಯತೆ, ಆ ಹೆಡೆಗಳೇ ಇಷ್ಟಾರ್ಥಗಳು ವಿಷ್ಣುವಿನ ಅಂಶರೂಪನಾದ ಅನಂತನ ರೂಪವನ್ನು ಈ ರೀತಿ ಹೇಳಿರುತ್ತೇನೆ

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯ ಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಅನಂತರೂಪನಿರೂಪಣವೆಂಬ ಅರವತ್ತೈದನೆಯ
ಅಧ್ಯಾಯ ಮುಗಿದಿದೆ

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಷಟ್‍ಷಷ್ಟಿತಮೋಽಧ್ಯಾಯಃ ||

**|| ಮಾರ್ಕಂಡೇಯ ಉವಾಚ ||**

**ಕರ್ತವ್ಯಸ್ತುಂಬುರುರ್ದೇವೋ ಮಾತೃಮಧ್ಯಗತಃ ಪ್ರಭುಃ |**
**ಉಪವಿಷ್ಟೋ ವೃಷೇಕಾರ್ಯಃ ಶರ್ವವತ್ಸ ಚತುರ್ಮುಖಃ** || ೧ ||

**ಉಪವಿಷ್ಟಸ್ತು ಕರ್ತವ್ಯಃ ಸ ತು ಪಾರ್ಥಿವಸತ್ತಮ |**
**ಮಹಾದೇವೇನ ತಸ್ಯೋಕ್ತಂ ರೂಪಂ ತೇ ಸಕಲಂ ಮಯಾ** || ೨ ||

**ಕಪಾಲಂ ತಸ್ಯ ಕರ್ತವ್ಯಂ ಮಾತುಲುಂಗಧರೇ ಕರೇ |**
**ಮಾತುಲುಂಗಂ ಚ ಕರ್ತವ್ಯಂ ತ್ರ್ಯಂಬಕೇಣ ತದೀರಿತಂ** || ೩ ||

**ತಸ್ಯ ದಕ್ಷಿಣತಃ ಕಾರ್ಯಂ ತಥಾ ಮಾತೃದ್ವಯಂ ಭವೇತ್ |**
**ವಾಮತಸ್ತಸ್ಯ ಕರ್ತವ್ಯಂ ಮಾತೃದ್ವಿತಯಮೇವ ಚ** || ೪ ||

---

**ಅರವತ್ತಾರನೆಯ ಅಧ್ಯಾಯ.**

೧-೪ ಮಾರ್ಕಂಡೇಯರು ಹೇಳುತ್ತಾರೆ —ತಂಬುರುದೇವನನ್ನು ಮಾತೃಗಳ ಮಧ್ಯದಲ್ಲಿ ಚಿತ್ರಿಸಬೇಕು. ವೃಷಭದ ಮೇಲೆ ಕುಳಿತಿರುವಂತೆಯೂ, ಶಂಭುವಿನಂತೆ ಚತುರ್ಮುಖದಿಂದ ಕೂಡಿರುವಂತೆಯೂ ಇರಬೇಕು ಕುಳಿತಿರುವಂತೆಯೇ ಚಿತ್ರಿಸಬೇಕು ಮಹಾದೇವನೇ ಅವನ ರೂಪವನ್ನು ಹೇಳಿರುವನು, ಅದನ್ನೇ ನಾನು ನಿನಗೆ ಹೇಳುತ್ತಿದ್ದೇನೆ ಕಪಾಲ ಮತ್ತು ಮಾತುಲುಂಗವೆಂಬ ಯೋಗದಂಡವೂ ಅವನ ಕೈಯಲ್ಲಿರಬೇಕು ಇದನ್ನು ತ್ರ್ಯಂಬಕನೇ ಹೇಳಿದ್ದಾನೆ ಅವನ ಬಲಭಾಗದಲ್ಲಿ ಇಬ್ಬರು ಮಾತೃಗಳಿರಬೇಕು ಎಡಭಾಗದಲ್ಲಿಯೂ ಇಬ್ಬರು ಮಾತೃಗಳಿರಬೇಕು

**ಜಯಾ ಚ ವಿಜಯಾ ಚೈವ ಕರ್ತವ್ಯಾ ದಕ್ಷಿಣೇನ ತು ।**
**ಜಯಂತೀ ವಾಮತಃ ಕಾರ್ಯಾ ತಥಾ ಚೈವಾಪರಾಜಿತಾ ॥ ೫ ॥**

**ಸರ್ವಾಶ್ಚ ದ್ವಿಭುಜಾಃ ಕಾರ್ಯಾಃ ಚತುರ್ವಕ್ತ್ರಾಸ್ತಥೈವ ಚ ।**
**ಸರ್ವಾಸಾಂ ವಾಮಹಸ್ತೇಷು ಕಪಾಲಾನಿ ತು ಕಾರಯೇತ್ ॥ ೬ ॥**

**ದಂಡಃ ಕಾರ್ಯೋ ಮಹಾರಾಜ ದಕ್ಷಿಣೇ ತು ಜಯಾ ಕರೇ ।**
**ವಿಜಯಾಯಾಃ ಕರೇ ಖಡ್ಗಃ ಕಾರ್ಯೋ ಭಿನ್ನಾಂಜನಪ್ರಭಃ ॥ ೭ ॥**

**ಅಕ್ಷಮಾಲಾಧರಕರಾಂ ಜಯಂತೀಂ ನೃಪ ಕಾರಯೇತ್ ।**
**ಭಿಂಧಿಪಾಲಕರಾ ಕಾರ್ಯಾ ತಥಾ ದೇವ್ಯಪರಾಜಿತಾ ॥ ೮ ॥**

**ಪಾದಪೀಠಗತಂ ಪಾದಂ ಸರ್ವಾಸಾಮೇವ ಕಾರಯೇತ್ ।**
**ದಕ್ಷಿಣಂ ಯಾನಗಂ ವಾಮಂ ಕರ್ತವ್ಯಂ ನೃಪ ಕುಂಚಿತಂ ॥ ೯ ॥**

**ಜಯಾ ಪುರುಷಗಾ ಕಾರ್ಯಾ ವಿಜಯಾ ಕೌಶಿಕೋಪಮಾ ।**
**ಜಯಂತೀ ತುರಗಾರೂಢಾ ಮೇಷಗಾ ಚಾಪರಾಜಿತಾ ॥ ೧೦ ॥**

---

೫-೧೦ ಜಯಾ ಮತ್ತು ವಿಜಯಾ ಎಂಬ ಮಾತೃಗಳಿಬ್ಬರು ಬಲಭಾಗದಲ್ಲಿರಬೇಕು ಜಯಂತೀ, ಅಪರಾಜಿತಾ ಎಂಬ ಮಾತೃಗಳು ಎಡಭಾಗದಲ್ಲಿರಬೇಕು ಎಲ್ಲರೂ ಎರಡು ಕೈಗಳಿಂದಲೂ ನಾಲ್ಕು ಮುಖಗಳಿಂದಲೂ ಕೂಡಿರಬೇಕು ಎಲ್ಲರಿಗೂ ಎಡಗೈಗಳಲ್ಲಿ ಕಪಾಲಗಳಿರಬೇಕು ಜಯಾ ಎಂಬ ಮಾತೃಕೆಯ ಬಲಗೈಯಿನಲ್ಲಿ ದಂಡವಿರಬೇಕು ವಿಜಯೆಯ ಕೈಯ್ಯಿನಲ್ಲಿ ಕಪ್ಪಾದ ಖಡ್ಗವಿರಬೇಕು ಜಯಂತಿಯ ಕೈಯ್ಯಲ್ಲಿ ಅಕ್ಷಮಾಲೆಯಿರಬೇಕು ಅಪರಾಜಿತೆಯ ಹಸ್ತದಲ್ಲಿ ಭಿಂಧಿವಾಲವೆಂಬ ಆಯುಧವಿರಬೇಕು ಎಲ್ಲರಿಗೂ ಒಂದೊಂದು ಪಾದವು ಪಾದಪೀಠದ ಮೇಲಿರಬೇಕು. ಬಲಗಾಲು ಯಾನದ ಮೇಲೆಯೂ, ಎಡಪಾದವು ಮಡಿಸಿಯೂ ಇರಬೇಕು ಜಯೆಯು ಪುರುಷವಾಹನೆಯಾಗಿಯೂ, ವಿಜಯೆಯು ಇಂದ್ರನಂತೆ ಗಜವಾಹನೆಯಾಗಿಯೂ, ಜಯಂತಿಯು ಅಶ್ವವಾಹನೆಯಾಗಿಯೂ, ಅಪರಾಜಿತೆಯು ಮೇಷವಾಹನೆಯಾಗಿಯೂ ಇರಬೇಕು

ಚಂದ್ರಾಂಶುಗೌರಃ ಕರ್ತವ್ಯೋ ಮಹಾದೇವಸ್ತು ತುಂಬುರಃ　　॥ ೧೧ ॥

ದೇವೀಪ್ರಿಯಾರ್ಥಂ ಭುವನಸ್ಯ ಗೋಪ್ತಾ
ತಾಸಾಂ ಸ ಮಧ್ಯೇ ಭಗವಾನಥೇಶಃ ।
ಭಕ್ತೇಷು ಕಾಮಾನ್ವಿದಧನ್ನಥಾಸ್ತೇ
ಸಪೂಜನೀಯಸ್ತ್ರಿದಶಾರಿಹನ್ತಾ　　॥ ೧೨ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ ವಜ್ರಸಂವಾದೇ ದೇವೀಚತುಷ್ಟಯಸಹಿತ ತುಂಬುರುರೂಪ ನಿರ್ಮಾಣಂ ನಾಮ ಷಟ್‌ಷಷ್ಟಿತಮೋಽಧ್ಯಾಯಃ

---

೧೧-೧೨. ದೇವತಾ ಶ್ರೇಷ್ಠನಾದ ತುಂಬುರುವನ್ನು ಚಂದ್ರಕಿರಣಗಳಂತೆ ಧವಳವರ್ಣದಿಂದ ಚಿತ್ರಿಸಬೇಕು ದೇವಿಗಳ ಪ್ರೀತಿಗೋಸ್ಕರ ಅವರ ಮಧ್ಯದಲ್ಲಿ ರುತ್ತಾ ಜಗತ್ತನ್ನು ಈ ದೇವಾಧಿಪನು ರಕ್ಷಿಸುತ್ತಿದ್ದಾನೆ ಭಕ್ತರುಗಳಿಗೆ ಎಲ್ಲಾ ಪುರುಷಾರ್ಥಗಳನ್ನೂ ಉಂಟುಮಾಡುವ ಮತ್ತು ದೈತ್ಯನಾಶಕನಾದ ಈ ದೇವನನ್ನು ಎಲ್ಲರೂ ಪೂಜಿಸಬೇಕು

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯ ಖಂಡದಲ್ಲಿ ಮಾರ್ಕಂಡೇಯ
ವಜ್ರ ಸಂವಾದದಲ್ಲಿ ದೇವೀ ಚತುಷ್ಟಯಸಹಿತ ತುಂಬುರು
ರೂಪನಿರ್ಮಾಣವೆಂಬ ಅರವತ್ತಾರನೆಯ
ಅಧ್ಯಾಯ ಮುಗಿದಿದೆ



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಸಪ್ತಷಷ್ಟಿತಮೋಽಧ್ಯಾಯಃ ||

**|| ವಜ್ರ ಉವಾಚ ||**

**ಪ್ರಾಗುಕ್ತಂ ರೂಪನಿರ್ಮಾಣಂ ತ್ವಯಾ ವಹ್ನ್ಯಂಬುನಾಥಯೋಃ |**
**ತಯೋರೇವಾಪರಂ ಬ್ರೂಹಿ ರೂಪಮರ್ಕೇಂದು ರೂಪಯೋಃ || ೧ ||**

**|| ಮಾರ್ಕಂಡೇಯ ಉವಾಚ ||**

**ರವಿಃ ಕಾರ್ಯಃ ಶುಭಶ್ಮಶ್ರುಃ ಸಿಂದೂರಾಭರಣಪ್ರಭಃ |**
**ಸುದೀಪ್ತವೇಶಃ ಸ್ವಾಕಾರಃ ಸರ್ವಾಭರಣಸಂಯುತಃ || ೨ ||**

**ಚತುರ್ಬಾಹುರ್ಮಹಾತೇಜಾಃ ಕವಚೇನಾಭಿಸಂವೃತಃ |**
**ಕರ್ತವ್ಯಾ ರಶನಾ ಚಾಸ್ಯ ಯಾವಿಯಾಂಗೇತಿಸಂಜ್ಞಿತಾ || ೩ ||**

---

### ಅರವತ್ತೇಳನೆಯ ಅಧ್ಯಾಯ

೧-೩ ವಜ್ರನು ಪ್ರಶ್ನೆಮಾಡುತ್ತಾನೆ — ಮೊದಲು ತಾವು ಅಗ್ನಿವರುಣ ನಿರ್ಮಾಣವನ್ನು ಹೇಳಿದ್ದೀರಿ ಹಾಗೆಯೇ ಅವರದೇ ಆದ ಸೂರ್ಯ ಚಂದ್ರರ ರೂಪನಿರ್ಮಾಣವನ್ನು ದಯವಿಟ್ಟು ಹೇಳಬೇಕು ಮಾರ್ಕಂಡೇಯರು ಹೇಳುತ್ತಾರ — ಸೂರ್ಯನನ್ನು ಸೊಗಸಾದ ಗಡ್ಡಮೀಸೆಗಳಿಂದ ಕೂಡಿಯೂ, ಸಿಂಧೂರದಂತೆ ಕೆಂಪಾದ ಆಭರಣ ಪ್ರಭೆಯಿಂದ ಕೂಡಿಯೂ, ಪ್ರಕಾಶಮಾನವಾದ ವೇಷದಿಂದಲೂ, ರಮ್ಯವಾದ ಆಕಾರದಿಂದಲೂ, ಸರ್ವಾಭರಣಗಳಿಂದ ಕೂಡಿಯೂ ಇರುವಂತೆ ನಿರ್ಮಿಸಬೇಕು ನಾಲ್ಕು ಕೈಗಳಿದ್ದು ಮಹಾ ತೇಜಸ್ವಿಯಾಗಿಯೂ ಇರಬೇಕು ಈ ಸೂರ್ಯನಿಗೆ ಯಾವಿಯಾಂಗಾ ಎಂಬ ವಡ್ಯಾಣವನ್ನೂ ರಚಿಸಬೇಕು. ಎರಡು ಹಸ್ತಗಳಲ್ಲಿಯೂ ರಶ್ಮಿಗಳನ್ನು ರಚಿಸಬೇಕು

ರಶ್ಮಯಸ್ತಸ್ಯ ಕರ್ತವ್ಯಾ ವಾಮದಕ್ಷಿಣಹಸ್ತಯೋಃ ।
ಊರ್ಧ್ವಸ್ರಗ್ದಾಮಸಂಸ್ಥಾನಾಃ ಸರ್ವಪುಷ್ಪಾಂಚಿತಾಃ ಶುಭಾಃ ॥ ೪ ॥

ಸುರೂಪರೂಪಃ ಸ್ವಾಕಾರೋ ದಂಡೀ ಕಾರ್ಯೋಽಸ್ಯ ವಾಮತಃ ।
ದಕ್ಷಿಣೇ ಪಿಂಗಲೋ ಭಾಗೇ ಕರ್ತವ್ಯಶ್ಚಾತಿಪಿಂಗಲಃ ॥ ೫ ॥

ಉದ್ದೀಪ್ತವೇಶೌ ಕರ್ತವ್ಯೌ ತಾವುಭಾವಪಿ ಯಾದವ ।
ತಯೋರ್ಮೂರ್ಧನಿ ವಿನ್ಯಸ್ತೌ ಕರೌ ಕಾರ್ಯೌ ವಿಭಾವಸೋಃ ॥ ೬ ॥

ಲೇಖನೀಪತ್ರಕಕರಃ ಕಾರ್ಯೋ ಭವತಿ ಪಿಂಗಲಃ ।
ಚರ್ಮಶೂಲಧರೋ ದೇವಸ್ತಥಾ ಯತ್ನಾದ್ವಿಧೀಯತೇ ॥ ೭ ॥

ಸಿಂಹೋ ಧ್ವಜಶ್ಚ ಕರ್ತವ್ಯಸ್ತಥಾ ಸೂರ್ಯಸ್ಯ ವಾಮತಃ ।
ಚತ್ವಾರಶ್ಚಾಸ್ಯ ಕರ್ತವ್ಯಾಸ್ತನಯಾಸ್ತಸ್ಯ ಪಾರ್ಶ್ವಯೋಃ ॥ ೮ ॥

ರೇವಂತಶ್ಚ ಯಮಶ್ಚೈವ ಮನುದ್ವಿತಯಮೇವ ಚ ।
ಗ್ರಹರಾಜೋ ರವಿಃ ಕಾರ್ಯೋ ಗ್ರಹೈರ್ವಾ ಪರಿವಾರಿತಃ ॥ ೯ ॥

---

೪-೮ ಇವನ ಎಲ್ಲಾಭಾಗದ ಪ್ರದೇಶಗಳೆಲ್ಲವೂ ನಾನಾವಿಧವಾದ ಹೂವುಗಳಿಂದ ಕೂಡಿದ ಮಾಲಿಕೆಗಳಿಂದ ಅಲಂಕರಿಸಲ್ಪಟ್ಟಿರಬೇಕು ಇವನ ಎಡಭಾಗದಲ್ಲಿ ಒಳ್ಳೆಯ ರೂಪದಿಂದಲೂ ಆಕಾರದಿಂದಲೂ ಕೂಡಿರುವ ದಂಡಧಾರಿಯಾದ ಪುರುಷನಿರಬೇಕು ಬಲಭಾಗದಲ್ಲಿ ಬಹಳ ಪಿಂಗಳ ವರ್ಣದಿಂದ ಕೂಡಿದ ಪಿಂಗಲನಿರಬೇಕು ಇವರಿಬ್ಬರೂ ಉಜ್ಜ್ವಲ ವೇಷದಿಂದ ಕೂಡಿರಬೇಕು ಸೂರ್ಯನ ಎರಡು ಕೈಗಳೂ ಇವರ ತಲೆಯ ಮೇಲೆ ಇಟ್ಟಿರುವಂತೆ ಚಿತ್ರಿಸಬೇಕು ಪಿಂಗಲನು ಲೇಖನೀ ಮತ್ತು ಪತ್ರವನ್ನೂ ಕೈಗಳಲ್ಲಿ ಧರಿಸಿರಬೇಕು ಸೂರ್ಯನು ಶೂಲ ಮತ್ತು ಗುರಾಣಿಗಳನ್ನು ಧರಿಸಿರಬೇಕು ಸೂರ್ಯನ ಎಡಭಾಗದಲ್ಲಿ ಸಿಂಹಧ್ವಜವನ್ನು ರಚಿಸಬೇಕು ಅವನ ಪಕ್ಕದಲ್ಲಿ ಅವನ ನಾಲ್ಕು ಮಕ್ಕಳನ್ನೂ ಬರೆಯಬೇಕು.

೯-೧೩ ರೇವಂತ, ಯಮ, ಇಬ್ಬರು ಮನುಗಳು ಇವರೇ ಅವನ ಪುತ್ರರು ಸೂರ್ಯನನ್ನು ಗ್ರಹಗಳ ರಾಜನಂತೆಯಾಗಲಿ ಆ ಗ್ರಹಗಳಿಂದ ಸುತ್ತುವರಿಯ

ರಾಜ್ಞೀ ಚ ರಿಕ್ಷುಭಾ ಚ್ಛಾಯಾ ತಥಾ ದೇವೀ ಸುವರ್ಚಸಾ ।
ಚತಸ್ರಶ್ಚಾಸ್ಯ ಕರ್ತವ್ಯಾಃ ಪತ್ನ್ಯಶ್ಚ ಪರಿಪಾರ್ಶ್ವಯೋಃ ॥ ೧೦ ॥

ಏಕ ಚಕ್ರೇಽಥಸಪ್ತಾಶ್ವೇ ಷಡ್ರೇಖಾಂಕೇ ರಥೋತ್ತಮೇ ।
ಉಪವಿಷ್ಟಸ್ತು ಕರ್ತವ್ಯೋ ದೇವೋ ವಾರುಣಸಾರಥಿಃ ॥ ೧೧ ॥

ಗಾಯತ್ರ್ಯುಷ್ಣಿಗನುಷ್ಟುಪ್ಚ ಬೃಹತೀಪಜ್ಕ್ತಿರೇವ ಚ ।
ತ್ರಿಷ್ಟುಪ್ಚ ಜಗತೀ ಸಪ್ತ ಛಂದಾಂಸ್ಯರ್ಕರಥೇ ಹಯಾಃ ॥ ೧೨ ॥

ರಶ್ಮಿಭಿಃ ಕರಸಂಸ್ಥೈಸ್ತು ಧಾರಯತ್ಯಖಿಲಂ ಜಗತ್ ।
ಸಿಹೋ ಧ್ವಜಗತಶ್ಚಾಸ್ಯ ಸಾಕ್ಷಾದ್ಧರ್ಮಃ ಪ್ರಕೀರ್ತಿತಃ ॥ ೧೩ ॥

ರಶನಾಸ್ಥಂ ಜಗತ್ಸರ್ವಂ ದೇವೋ ಧಾರಯತೇ ತಥಾ ।
ರಾಜ್ಞೀ ಭೂರಿಕ್ಷುಭಾ ದ್ಯೌಶ್ಚ ಚ್ಛಾಯಾ ಚ್ಛಾಯಾ ಪ್ರಕೀರ್ತಿತಾ ॥ ೧೪ ॥

---

ಲ್ಪಟ್ಟಂತೆಯಾಗಲಿ ಚಿತ್ರಿಸಬೇಕು ರಾಜ್ಞಿ, ರಿಕ್ಷುಭಾ, ಚ್ಛಾಯಾ, ಸುವರ್ಚಸಾ ಈ ನಾಲ್ಕು ಪತ್ನಿಗಳನ್ನೂ ಅವನ ಪಾರ್ಶ್ವಗಳಲ್ಲಿ ಚಿತ್ರಿಸಬೇಕು ಆರು ಸರಳುಗಳಿಂದ ಕೂಡಿರುವ ಒಂದೇ ಚಕ್ರವಿರುವ ಏಳು ಕುದುರೆಗಳಿಂದ ಕೂಡಿದ ರಥದಲ್ಲಿ ಅರುಣ ಸಾರಥಿಯಾಗಿ ಕುಳಿತಿರುವಂತೆ ರಚಿಸಬೇಕು ಗಾಯತ್ರೀ, ಉಷ್ಣಿಕ್, ಅನುಷ್ಟುಪ್ ಬೃಹತೀ, ಪಜ್ಕ್ತಿ, ತ್ರಿಷ್ಟುಪ್, ಜಗತೀ ಎಂಬ ಏಳು ಛಂದಸ್ಸುಗಳೇ ಸೂರ್ಯನ ರಥದ ಕುದುರೆಗಳು ತನ್ನ ಕೈಯ್ಯಲ್ಲಿರುವ ಲಗಾಮುಗಳಿಂದ ಎಲ್ಲಾ ಜಗತ್ತನ್ನೂ ಸೂರ್ಯನು ಧರಿಸಿರುತ್ತಾನೆ ಇವನ ಧ್ವಜದಲ್ಲಿರುವ ಸಿಂಹವು ಸಾಕ್ಷಾದ್ಧರ್ಮದ ಸ್ವರೂಪ

೧೪-೧೭ ಎಲ್ಲಾ ಜಗತ್ತನ್ನೂ ಲಗಾಮುಗಳಲ್ಲಿ ಸೇರಿರುವಂತೆಯೇ ಧರಿಸಿದ್ದಾನೆ ರಾಜ್ಞೀ ಎಂಬ ಪತ್ನಿಯೇ ಭೂಮಿಯ ಸ್ವರೂಪ ರಿಕ್ಷುಭಾ ಎಂಬುವಳು ಅಂತರಿಕ್ಷ ಸ್ವರೂಪ ಅವನ ಛಾಯೆಯೇ ಛಾಯಾದೇವಿಯ ಸ್ವರೂಪ

ಪ್ರಭಾ ಸುವರ್ಚಸಾ ಪ್ರೋಕ್ತಾಸ್ತಸ್ಯದೇವಸ್ಯ ಪತ್ನಯಃ ।
ರಕ್ತವರ್ಣಃ ಸ ಭಗವಾಂಸ್ತೇಜಸಾಂ ಧಾಮಕಾರಣಾತ್ ॥ ೧೬ ॥

ಅಸಹ್ಯತೇಜೋಧಾರಿತ್ವಾತ್ ಗೂಢಗಾತ್ರಸ್ತಥೈವ ಚ ।
ಏವಂ ಸರ್ವಮಯಂ ಧಾಮ ಸೂರ್ಯ ಏವಪ್ರಕೀರ್ತಿತಃ ॥ ೧೬ ॥

ರೂಪಂ ತಥೈತದ್ದಿವಸಸ್ಯ ಭರ್ತುರ್ಮ-
ಯೇರಿತಂ ಸರ್ವಜಗನ್ಮಯಸ್ಯ ।
ತೇಜೋನಿಧಾನಸ್ಯ ಪರೋಜ್ವಲಸ್ಯ
ಸರ್ವಾಧಿನಾಥಸ್ಯ ಸನಾತನಸ್ಯ ॥ ೧೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಆದಿತ್ಯರೂಪವರ್ಣನಂ ನಾಮ
ಸಪ್ತಷಷ್ಠಿತಮೋಽಧ್ಯಾಯಃ

---

ಸುವರ್ಚಸಾ ಎಂಬುವಳು ಪ್ರಭೆಯ ಸ್ವರೂಪ ಎಲ್ಲಾ ತೇಜಸ್ಸಿಗೂ ನಿಧಿಯಾದುದರಿಂದ ಅವನು ರಕ್ತವರ್ಣದಿಂದ ಕೂಡಿರುತ್ತಾನೆ ಸಹಿಸಲಸಾಧ್ಯವಾದ ತೇಜಸ್ಸನ್ನು ಧರಿಸಿರುವುದರಿಂದ ಅವನ ಶರೀರವು ತೇಜಸ್ಸಿನ ಮಧ್ಯದಲ್ಲಿ ನಿಗೂಢವಾಗಿರುತ್ತದೆ. ಈ ರೀತಿ ಪ್ರಪಂಚದ ಎಲ್ಲಾ ವಸ್ತುಗಳ ಸಮಷ್ಟಿಯಾದ ತೇಜಸ್ಸೇ ಸೂರ್ಯನೆಂದು ಹೇಳಲಾಗಿದ ಈ ರೀತಿ ಜಗನ್ಮೂರ್ತಿಯಾದ ಸೂರ್ಯನ ರೂಪವನ್ನು ನಿನಗೆ ಹೇಳಿದ್ದಾಯಿತು ಈ ಸೂರ್ಯನೇ ತೇಜೋನಿಧಿಯಾಗಿಯೂ, ಉಜ್ವಲ ಮೂರ್ತಿಯಾಗಿಯೂ, ಗ್ರಹಾಧಿಪತಿಯಾಗಿಯೂ, ಚಿರಂತನಮೂರ್ತಿಯಾಗಿಯೂ ಇರುತ್ತಾನೆ

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರ ಸಂವಾದದಲ್ಲಿ ಆದಿತ್ಯವರ್ಣನವೆಂಬ ಅರವತ್ತೇಳನೆಯ
ಅಧ್ಯಾಯ ಮುಗಿದಿದೆ



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಅಷ್ಟಷಷ್ಠಿತಮೋಽಧ್ಯಾಯಃ ||

**|| ಮಾರ್ಕಂಡೇಯ ಉವಾಚ ||**

**ಚಂದ್ರಃ ಶ್ವೇತವಪುಃ ಕಾರ್ಯಸ್ತಥಾ ಶ್ವೇತಾಂಬರಃಪ್ರಭುಃ ।**
**ಚತುರ್ಬಾಹುರ್ಮಹಾತೇಜಾಃ ಸರ್ವಾಭರಣವಾಂಸ್ತಥಾ || ೧ ||**

**ಕುಮುದೌ ಚ ಸಿತೌ ಕಾರ್ಯೌ ತಸ್ಯ ದೇವಸ್ಯ ಹಸ್ತಯೋಃ ।**
**ಕಾಂತಿರ್ಮೂರ್ತಿಮತೀಕಾರ್ಯಾ ತಸ್ಯ ಪಾರ್ಶ್ವೇ ತು ದಕ್ಷಿಣೇ || ೨ ||**

**ವಾಮೇ ಶೋಭಾ ತಥಾ ಕಾರ್ಯಾ ರೂಪೇಣಾಪ್ರತಿಮಾ ಭುವಿ ।**
**ಚಿಹ್ನಂ ತಥಾಸ್ಯ ಸಿಹ್ಮಾಂಕಂ ವಾಮಪಾರ್ಶ್ವೆಗತಂ ಭವೇತ್ || ೩ ||**

---

### ಅರವತ್ತೆಂಟನೆಯ ಅಧ್ಯಾಯ.

೧-೫. ಮಾರ್ಕಂಡೇಯರು ಹೇಳುತ್ತಾರೆ —ಚಂದ್ರನನ್ನು ಬಿಳುಪಾದ ದೇಹದಿಂದ ಕೂಡಿರುವಂತೆ ರಚಿಸಬೇಕು ಹಾಗೆಯೇ ಅವನ ವಸ್ತ್ರವೂ ಬಿಳುಪಾಗಿರಬೇಕು ನಾಲ್ಕು ಬಾಹುಗಳಿಂದ ಕೂಡಿ ತೇಜಸ್ವಿಯಾಗಿಯೂ, ಸರ್ವಾಭರಣಧಾರಿಯಾಗಿಯೂ ಇರಬೇಕು ಅವನ ಎರಡು ಹಸ್ತಗಳಲ್ಲಿಯೂ ಬಿಳುಪಾದ ಕುಮುದಪುಷ್ಪಗಳಿರಬೇಕು ಅವನ ಬಲಭಾಗದಲ್ಲಿ ಕಾಂತಿದೇವಿಯ ಮೂರ್ತಿ ಇರಬೇಕು. ಎಡಭಾಗದಲ್ಲಿ ಅಸದೃಶ ಸೌಂದರ್ಯವುಳ್ಳ ಶೋಭಾದೇವಿಯನ್ನು ಚಿತ್ರಿಸಬೇಕು ಅವನ ಎಡಭಾಗದಲ್ಲಿ ಸಿಂಹದಂತಿರುವ ಚಿಹ್ನೆ ಇರಬೇಕು ಹತ್ತು

ದಶಾಶ್ವೋ ವಾ ರಥಃ ಕಾರ್ಯೋ ದ್ವಿಚಕ್ರೋಂಬರಸಾರಥೀ ।
ಸ್ರಜಶ್ಚ ತ್ರಿಮುನಾಶ್ಚೈವ ವೃಷೋ ವಾದೀ ನರೋ ಹಯಃ ॥ ೪ ॥

ಅಥೋ ವಾಕ್ಸಪ್ತಧಾತುಶ್ಚ ಹಂಸೋ ವ್ಯೋಮೋ ಮೃಗ ಸ್ತಥಾ ।
ಏತೇ ತೇ ವಾಮತಃ ಸರ್ವೇ ದಶ ಚಂದ್ರಮಸೋ ಹಯಾಃ ॥ ೫ ॥

ಅಥವ್ಯೈವಾಸ್ಯ ಕರ್ತವ್ಯಾ ಅಷ್ಟಾವಿಂಶತಿಸಂಖ್ಯಕಾಃ ।
ಅತ್ಯರ್ಥಂ ರೂಪಸಂಯುಕ್ತಾಃ ಪತ್ನ್ಯೋ ನಕ್ಷತ್ರಸಂಜ್ಞಿತಾಃ ॥ ೬ ॥

ಅಶೀತಿದ್ವ್ಯಧಿಕಾಃ ಕಾರ್ಯಾ ಭಾವಾ ವಾ ದೇಹಭೇದಯೋಃ ।
ಪುರಾ ದೇವಾಸುರೇ ಯುದ್ಧೇ ಪ್ರಾಕಾಮ್ಯೇನ ನೃಪೋಡುಭಿಃ ॥ ೭ ॥

ಕೃತಾನಿ ಸ್ವಶರೀರಾಣಿ ಬಹೂನಿ ಯದುನಂದನ ।
ಸ್ವನಾಥದೇವರೂಪಾಣಿ ತತಸ್ತೇ ದಾನವಾ ಹತಾಃ ॥ ೮ ॥

---

ಕುದುರೆಗಳಿಂದ ಕೂಡಿದ ಎರಡು ಚಕ್ರದ ರಥವಿರಬೇಕು, ಅದಕ್ಕೆ ಆಕಾಶವೇ ಸಾರಥಿ ಹೂವಿನ ಮಾಲಿಕೆಗಳನ್ನೂ ರಥದಲ್ಲಿ ರಚಿಸಬೇಕು ತ್ರಿಮುನಾ, ವೃಷ, ವಾದೀ, ನರ, ಹಯ, ವಾಕ್ಕು, ಸಪ್ತಧಾತುಗಳು, ಹಂಸ, ಆಕಾಶ, ಮೃಗ ಇವೇ ಆ ಚಂದ್ರ ರಥದ ಕುದುರೆಗಳು

೬-೧೦ ಅಥವಾ ಆ ಚಂದ್ರನಿಗೆ ಪ್ರಿಯರಾದ ಇಪ್ಪತ್ತೆಂಟು ನಕ್ಷತ್ರಗಳನ್ನು ಅವನ ಪತ್ನಿಗಳ ರೂಪದಿಂದ ಕೂಡಿ ಸುರೂಪಿಣಿಗಳಾಗಿರುವಂತೆ ಬರೆಯಬೇಕು ಅಥವಾ ಎಂಬತ್ತೆರಡು ದೇಹಭೇದಗಳನ್ನೂ ಆಯಾಯ ಭಾವಗಳೊಡನೆ ಬರೆಯಬೇಕು ಪೂರ್ವದಲ್ಲಿ ದೇವಾಸುರ ಯುದ್ಧಕಾಲದಲ್ಲಿ ನಕ್ಷತ್ರಗಳು ಪ್ರಾಕಾಮ್ಯವೆಂಬ ಸಿದ್ಧಿಯಿಂದ ಅನೇಕ ದೇವಶರೀರಗಳನ್ನು ಧರಿಸಿದವು, ಆ ದೇಹಗಳೆಲ್ಲವೂ ತಮ್ಮ ತಮ್ಮ ಸ್ವಾಮಿಯಾದ ದೇವತೆಯ ದೇಹಕ್ಕೆ ಅನುರೂಪವಾಗಿದ್ದವು, ಆ ದೇಹಗಳೊಡನೆ ಅಲ್ಲಿ ನಡೆದ ಯುದ್ಧದಲ್ಲಿ ದಾನವರೆಲ್ಲಾ ಹತರಾದರು ನಕ್ಷತ್ರಗಳು

ನಕ್ಷತ್ರೇಣ ಕೃತಂ ರೂಪಂ ಯಸ್ಯಯಸ್ಯ ಸುರಸ್ಯ ತು ।
ಸಾ ಚೈವ ದೇವತಾ ತಸ್ಯ ನಕ್ಷತ್ರಸ್ಯ ಪ್ರಕೀರ್ತಿತಾ ॥ ೯ ॥

ದೇವಾಸುರೇ ತತೋ ವೃತ್ತೇ ಸ್ವಾಕಾಮ್ಯೇನೈವ ಯಾದವ ।
ಸ್ತ್ರೀರೂಪಧಾರಿಣೋ ದೇವಾಸ್ತಾವಂತಸ್ತು ತತಃ ಕೃತಾಃ ॥ ೧೦ ॥

ಸರ್ವಲೋಕಸ್ಯ ಧರ್ಮಜ್ಞ ಚಂದ್ರಮಾ ವೈ ಪಿತಾ ಸ್ಮೃತಃ ।
ತಸ್ಮಿನ್ ದೃಷ್ಟೇ ಜಗತ್ಸರ್ವಂ ಪರಂ ಹರ್ಷಮುಪೈತಿ ಚ ॥ ೧೧ ॥

ಸೌಮ್ಯಮೂರ್ತಿಃ ಪರಾಜ್ಞೇಯಾ ಸಾ ಚ ವಿಷ್ಣೋರ್ಮಹಾತ್ಮನಃ ।
ಹರ್ಷಪ್ರಸಾದೌ ವಿಜ್ಞೇಯೌ ಕುಮುದೌ ಚಂದ್ರಹಸ್ತಯೋಃ ॥ ೧೨ ॥

ಶೋಭಾ ಕಾಂತೀ ವಿನಿರ್ದಿಷ್ಟೇ ಸ್ವರೂಪಂ ಭೃಗುನಂದನ ।
ಅಪಾಂ ಸಾರಮಯತ್ವಾದ್ಧಿ ಶುಕ್ಲವರ್ಣಸ್ತು ಚಂದ್ರಮಾಃ ॥ ೧೩ ॥

---

ಯಾವಯಾವ ದೇವತೆಯು ರೂಪವನ್ನು ಧರಿಸಿದವೋ, ಆ ದೇವತೆಗಳೇ ಆಯಾಯ ನಕ್ಷತ್ರಗಳಿಗೆ ದೇವತೆಯಾಯಿತು ದೇವಾಸುರರ ಯುದ್ಧವೆಲ್ಲವೂ ಮುಗಿದ ಮೇಲೆ ಆ ದೇವತಗಳು ತಮ್ಮ ಇಚ್ಛೆಯಿಂದಲೇ ಸ್ತ್ರೀರೂಪಧಾರಿಗಳಾಗಿ ನಕ್ಷತ್ರ ರೂಪದಿಂದ ನಿಂತರು

೧೨-೧೪ ಎಲ್ಲಾ ಲೋಕಗಳಿಗೂ ಚಂದ್ರನೇ ತಂದೆಯಾಗಿರುವನು ಅವನನ್ನು ನೋಡಿದೊಡನೆಯೇ ಜಗತ್ತೆಲ್ಲವೂ ಸಂತೋಷ ಹೊಂದುತ್ತದೆ ಚಂದ್ರನು ಮಹಾತ್ಮನಾದ ವಿಷ್ಣುವಿನ ಸೌಮ್ಯವಾದ ಅಪರಾವತಾರ, ಅವನ ಕೈಯಲ್ಲಿರುವ ಕುಮುದ ಪುಷ್ಪಗಳು ಹರ್ಷ ಮತ್ತು ಅನುಗ್ರಹಗಳ ಸ್ವರೂಪ, ಅವನ ಪತ್ನಿಯರೇ ಶೋಭಾ ಮತ್ತು ಕಾಂತಿಗಳ ಸ್ವರೂಪ, ಜಲದ ಸಾರಾಂಶವಾದುದರಿಂದ ಚಂದ್ರನು ಶುಕ್ಲವರ್ಣದಲ್ಲಿರುತ್ತಾನೆ ಜಲದ ಸಾರವೇ ಅಮೃತ, ಆ ಅಮೃತದ ವರ್ಣವೇ

ಅಸಾಂ ಹಿ ಧಾವಮಾವೃತಮಾಹುರಾದ್ಯಾ
ವಾಸಸ್ತು ತಚ್ಚಂದ್ರಮಸಃ ಪದಿಷ್ಟಂ ।
ಸಿಹ್ಮಧ್ವಜಂ ಧರ್ಮಮುಶಂತಿ ರಾಜನ್
ದಿಶಸ್ತುರಂಗಾಃ ಶಶಿನಃ ಪ್ರದಿಷ್ಟಾಃ　　॥ ೧೪ ॥

ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಶಶಿರೂಪನಿರೂಪಣೋ ನಾಮ
ಅಷ್ಟಷಷ್ಟಿತ್ತಮೋಽಧ್ಯಾಯಃ

---

ಚಂದ್ರನ ವಸ್ತ್ರ ಸಿಂಹ ಧ್ವಜವೇ ಧರ್ಮದ ಸ್ವರೂಪ, ದಿಕ್ಕುಗಳೇ ಆ ಚಂದ್ರನ ಕುದುರೆಗಳು

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಶಶಿರೂಪನಿರೂಪಣವೆಂಬ ಅರವತ್ತೆಂಟನೆಯ
ಅಧ್ಯಾಯ ಮುಗಿದಿದೆ



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಏಕೋನಸಪ್ತತಿತಮೋಽಧ್ಯಾಯಃ ||

|| ವಜ್ರ ಉವಾಚ ||

**ಗ್ರಹಾಣಾಂ ರೂಪನಿರ್ಮಾಣಂ ಸಮಾಚಕ್ಷ್ವ ಮಹಾಭುಜ ।**
**ಅನೇನೈವ ಪ್ರಸಂಗೇನ ಸರ್ವಜ್ಞಸ್ತ್ವಂ ಮತೋ ಮಮ || ೧ ||**

|| ಮಾರ್ಕಂಡೇಯ ಉವಾಚ ||

**ಭೌಮೋಽಗ್ನಿತಲ್ಪಃ ಕರ್ತವ್ಯಶ್ಚಾಷ್ಟಾಶ್ವೇ ಕಾಂಚನೇ ರಥೇ ।**
**ವಿಷ್ಣುತಲ್ಪೋ ಬುಧಃ ಕಾರ್ಯೋ ಭೌಮತಲ್ಪೇ ತಥಾ ರಥೇ || ೨ ||**

**ತಪ್ತಜಾಂಬೂನದಃ ಕಾರ್ಯೋ ದ್ವಿಭುಜಶ್ಚ ಬೃಹಸ್ಪತಿಃ ।**
**ಪುಸ್ತಕಂ ಚಾಕ್ಷಮಾಲಾಂ ಚ ಕರಯೋಸ್ತಸ್ಯ ಕಾರಯೇತ್ || ೩ ||**

---

### ಅರವತ್ತೊಂಭತ್ತನೆಯ ಅಧ್ಯಾಯ

೧-೪ ವಜ್ರನು ಪ್ರಶ್ನೆಮಾಡುತ್ತಾನೆ — ಎಲೈ ಮಹಾತ್ಮನೇ, ಇದೇ ಸಂದರ್ಭದಲ್ಲಿ ಗ್ರಹಗಳ ರೂಪನಿರ್ಮಾಣವನ್ನು ಹೇಳಬೇಕು ನೀನು ಸರ್ವಜ್ಞನೆಂದು ನಾನು ತಿಳಿದಿದ್ದೇನೆ ಮಾರ್ಕಂಡೇಯರು ಹೇಳುತ್ತಾರೆ — ಅಂಗಾರಕನನ್ನು ಅಗ್ನಿತಲ್ಪದಿಂದ ಕೂಡಿಯೂ, ಎಂಟು ಕುದುರೆಗಳುಳ್ಳ ಚಿನ್ನದ ರಥದಲ್ಲಿರುವಂತೆಯೂ ನಿರ್ಮಿಸಬೇಕು ಬುಧನು ವಿಷ್ಣುತಲ್ಪನಾಗಿರಬೇಕು ಭೌಮತಲ್ಪರಥದಲ್ಲಿ ಅವನನ್ನು ರಚಿಸಬೇಕು ಬೃಹಸ್ಪತಿಯು ಒಳ್ಳೆಯ ಚಿನ್ನದ ಬಣ್ಣದಿಂದ ಕೂಡಿ ಭುಜದ್ವಯ ಉಳ್ಳವನಾಗಿರಬೇಕು ಅವನ ಕೈಗಳಲ್ಲಿ ಪುಸ್ತಕ ಮತ್ತು ಅಕ್ಷಮಾಲಿಕಗಳ

**ಸರ್ವಾಭರಣಯುಕ್ತಶ್ಚ ತಥಾ ಪೀತಾಂಬರೋ ಗುರುಃ ।**
**ಅಷ್ಟಾಶ್ವೇ ಕಾಂಚನೇ ದಿವ್ಯೇ ರಥೇ ದೃಷ್ಟಿಮನೋಹರೇ ॥ ೪ ॥**

**ಶುಕ್ರಃ ಶ್ವೇತವಪುಃ ಕಾರ್ಯಃ ಶ್ವೇತಾಂಬರಧರಸ್ತಥಾ ।**
**ದ್ವೌ ಕರೌ ಕಥಿತೌ ತಸ್ಯ ನಿಧಿಪುಸ್ತಕಸಂಯುತೌ ॥ ೫ ॥**

**ದಶಾಶ್ವೇ ಚ ರಥೇ ಕಾರ್ಯೋ ರಾಜತೇ ಭೃಗುನಂದನ ।**
**ಕೃಷ್ಣವಾಸಾಸ್ತಥಾ ಕೃಷ್ಣಃ ಶನಿಃ ಕಾರ್ಯಸ್ಸಿರಾತತಃ ॥ ೬ ॥**

**ದಂಡಾಕ್ಷಮಾಲಾಸಂಯುಕ್ತಃ ಕರದ್ವಿತಯಭೂಷಿತಃ ।**
**ಕಾರ್ಷಾಯಸೇ ರಥೇ ಕಾರ್ಯಸ್ತಥೈವಾಷ್ಟಭುಜಂಗಮೇ ॥ ೭ ॥**

**ರೌಪ್ಯೇ ರಥೇ ತಥಾಷ್ಟಾಶ್ವೇ ರಾಹುಃ ಕಾರ್ಯೋ ವಿಚಕ್ಷಣಃ ।**
**ಕೇವಲಂ ಮಸ್ತಕಂ ಕಾರ್ಯಂ ಭುಜೇನೈಕೇನ ಸಂಯುತಂ ॥ ೮ ॥**

ಬೇಕು ಸರ್ವಾಭರಣಧಾರಿಯಾಗಿಯೂ, ಪೀತಾಂಬರವನ್ನು ಧರಿಸಿಯೂ ಇರಬೇಕು ಎಂಟು ಕುದುರೆಗಳುಳ್ಳ ರಮ್ಯವಾದ ಚಿನ್ನದ ರಥದಲ್ಲಿ ಕುಳಿತಿರಬೇಕು

೫-೧೦ ಶುಕ್ರನನ್ನು ಬಿಳುಪಾಗಿಯೂ, ಬಿಳಿಯ ವಸ್ತ್ರದಿಂದ ಕೂಡಿಯೂ ನಿರ್ಮಿಸಬೇಕು ಅವನಿಗೆ ನಿಧಿ ಮತ್ತು ಪುಸ್ತಕಗಳಿಂದ ಕೂಡಿದ ಎರಡು ಕೈಗಳಿರಬೇಕು. ಹತ್ತು ಕುದುರೆಗಳುಳ್ಳ ಬೆಳ್ಳಿಯ ರಥದಲ್ಲಿ ಕುಳಿತಿರಬೇಕು ಶನಿಯನ್ನು ಕಪ್ಪಾಗಿಯೂ, ಕಪ್ಪಾದ ವಸ್ತ್ರದಿಂದ ಕೂಡಿ ನರಗಳು ಕಾಣುತ್ತಿರುವಂತೆಯೂ ಚಿತ್ರಿಸಬೇಕು ದಂಡ ಮತ್ತು ಅಕ್ಷಮಾಲೆಗಳುಳ್ಳ ಎರಡು ಕೈಗಳಿರಬೇಕು ಎಂಟು ಸರ್ಪಗಳಿಂದ ಕೂಡಿದ ಕಬ್ಬಿಣದ ರಥದಲ್ಲಿ ಕುಳಿತಿರಬೇಕು ರಾಹುವನ್ನು ಎಂಟು ಕುದುರೆಗಳುಳ್ಳ ಬೆಳ್ಳಿಯ ರಥದಲ್ಲಿ ನಿರ್ಮಿಸಬೇಕು ರಾಹುವಿನ ಸ್ವರೂಪವು ಒಂದೇ ಕೈಯ್ಯಿಂದ ಕೂಡಿದ ತಲೆ ಮಾತ್ರವಿರಬೇಕು ಶೂನ್ಯವಾದ ಬಲಗೈಯ್ಯನ್ನು ಮಾತ್ರ

**ಕರಮೇಕಂ ತು ಕರ್ತವ್ಯಂ ತಸ್ಯ ಶೂನ್ಯಂ ತು ದಕ್ಷಿಣಂ ।**
**ಭೌಮಸ್ಯ ಚ ತಥಾ ಕಾರ್ಯಂ ಕೇತೋರೂಪಂ ವಿಜಾನತಾ ॥ ೯ ॥**

**ಕೇವಲಂ ಚಾಸ್ಯ ಕರ್ತವ್ಯಾ ದಶರಾಜಂಸ್ತುರಂಗಮಾಃ ॥ ೧೦ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ**
**ವಜ್ರಸಂವಾದೇ ಭೌಮಾದಿಗ್ರಹನಿರ್ಮಾಣೋ ನಾಮ**
**ಏಕೋನಸಪ್ತತಿತಮೋಽಧ್ಯಾಯಃ**

---

ಹಾಗೆಯೇ ತೋರಿಸಿರಬೇಕು ಕೇತುವಿನ ರೂಪವನ್ನು ಅಂಗಾರಕನ ರೂಪದಂತೆಯೇ ನಿರ್ಮಿಸಬೇಕು, ಕೇವಲ ಹತ್ತು ಕುದುರೆಗಳನ್ನು ಮಾತ್ರ ಬರೆಯಬೇಕು

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯ ಖಂಡದಲ್ಲಿ ಮಾರ್ಕಂಡೇಯ
ವಜ್ರ ಸಂವಾದದಲ್ಲಿ ಭೌಮಾದಿಗ್ರಹಗಳ ನಿರ್ಮಾಣವೆಂಬ
ಅರವತ್ತೊಂಭತ್ತನೆಯ ಅಧ್ಯಾಯ ಮುಗಿದಿದೆ

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಸಪ್ತತಿತಮೋಽಧ್ಯಾಯಃ ||

|| ವಜ್ರ ಉವಾಚ ||

**ಮನುದ್ವಯಸ್ಯ ಮೇ ರೂಪಂ ಕಥಯಸ್ವಾಮಿತದ್ಯುತೇ ।**
**ದೇವೇಂದ್ರಸ್ಯ ಚ ಧರ್ಮಜ್ಞ ಯಮಸ್ಯಾಭಿಹಿತಂ ತ್ವಯಾ || ೧ ||**

|| ಮಾರ್ಕಂಡೇಯ ಉವಾಚ ||

**ವರ್ತಮಾನೋ ಮನುಃ ಕಾರ್ಯಃ ರಾಜಲಕ್ಷಣಸಂಯುತಃ ।**
**ಭವಿಷ್ಯಸ್ತು ತಥಾ ಕಾರ್ಯಃ ಸರ್ವಾಭರಣವರ್ಜಿತಃ || ೨ ||**

**ಜಟಾಧರೋಽಕ್ಷಮಾಲೀ ಚ ಕಮಂಡಲುಧರಸ್ತಥಾ ।**
**ಕೃಶೋಽಪಿ ತೇಜಸಾ ಯುಕ್ತಃ ತಪಸ್ಯಭಿರತಸ್ತಥಾ || ೩ ||**

---

### ಎಪ್ಪತ್ತನೆಯ ಅಧ್ಯಾಯ

೧-೩ ವಜ್ರನು ಪ್ರಶ್ನೆಮಾಡುತ್ತಾನೆ —ಎಲೈ ತೇಜೋನಿಧಿಯೇ, ಇಬ್ಬರು ಮನುಗಳ ರೂಪವನ್ನೂ ನನಗೆ ಹೇಳಬೇಕು ದೇವೇಂದ್ರನ ಮತ್ತು ಯಮನ ರೂಪವನ್ನು ಹಿಂದೆಯೇ ಹೇಳಿರುತ್ತೀರಿ ಇದಕ್ಕೆ ಉತ್ತರವಾಗಿ ಮಾರ್ಕಂಡೇಯರು ಹೇಳುತ್ತಾರೆ ವರ್ತಮಾನ ಮನುವಿನ ರೂಪವನ್ನು ರಾಜಲಕ್ಷಣಗಳಿಂದ ಕೂಡಿರುವಂತೆ ನಿರ್ಮಿಸಬೇಕು ಭವಿಷ್ಯ ಮನುವಿನ ರೂಪವನ್ನು ಯಾವ ಆಭರಣವೂ ಇಲ್ಲದಿರುವಂತೆ ನಿರ್ಮಿಸಬೇಕು. ಜಟಾಧರನಾಗಿಯೂ ಅಕ್ಷಮಾಲೆ, ಕಮಂಡಲು ಇವನ್ನು ಧರಿಸಿಯೂ ಇರಬೇಕು ಕೃಶನಾಗಿದ್ದರೂ ತೇಜಸ್ಸಿನಿಂದ ಕೂಡಿ ತಪೋನಿರತನಾಗಿರುವಂತಿರಬೇಕು ಇತರ ಭವಿಷ್ಯ ಮನುಗಳನ್ನು ಯೋಗದಲ್ಲಿ ನಿರತ

ಕಾರ್ಯಾ ಯೋಗೇನ ಚಾನ್ಯೇಪಿ ಭವಿಷ್ಯಾ ಮನವಶ್ಚ ಯೇ ।
ಸಾವರ್ಣಮನುತುಲ್ಯೇನ ಕಾರ್ಯಾ ರೂಪೇಣ ಯಾದವ ॥ ೪ ॥

ಅತೀತಾ ಮನವಃ ಕಾರ್ಯಾ ರಾಜಲಕ್ಷಣಲಕ್ಷಿತಾಃ ।
ಪೃಷ್ಠೇಶ್ವೇ ಸೂರ್ಯವತ್ಕಾರ್ಯೋ ರೇವನ್ತಶ್ಚ ತಥಾ ಪ್ರಭುಃ ॥ ೫ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಮನುರೂಪನಿರೂಪಣೋ ನಾಮ
ಸಪ್ತತಿತಮೋಽಧ್ಯಾಯಃ

---

ರಾಗಿರುವಂತೆ ಚಿತ್ರಿಸಬೇಕು ರೂಪದ ವಿಷಯದಲ್ಲಿ ತನ್ನಂತಿರುವ ಇತರ ಮನುಗಳಂತೆಯೇ ಇರಬೇಕು ಅತೀತರಾದ ಮನುಗಳನ್ನು ರಾಜಲಕ್ಷಣಗಳಿಂದ ಕೂಡಿರುವಂತೆಯೇ ಚಿತ್ರಿಸಬೇಕು ಸೂರ್ಯನಿಗಿರುವಂತೆ ಹಿಂಭಾಗದಲ್ಲಿ ಅಶ್ವಿನೀ ದೇವತೆಗಳನ್ನೂ ರೇವಂತನನ್ನೂ ಚಿತ್ರಿಸಿರಬೇಕು

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯ ಖಂಡದಲ್ಲಿ ಮಾರ್ಕಂಡೇಯ ವಜ್ರ
ಸಂವಾದದಲ್ಲಿ ಮನುರೂಪನಿರ್ಮಾಣವೆಂಬ ಎಪ್ಪತ್ತನೆಯ
ಅಧ್ಯಾಯ ಮುಗಿದಿದೆ

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಏಕಸಪ್ತತಿತಮೋಽಧ್ಯಾಯಃ ||

|| ವಜ್ರ ಉವಾಚ ||

**ಗ್ರಹಾಣಾಂ ದೇವತಾ ಪ್ರೋಕ್ತಾ ಯಾಸ್ತ್ವಯಾ ಪೂರ್ವಮೇವ ತು ।**
**ತಾಸಾಂ ಸ್ವರೂಪನಿರ್ಮಾಣಂ ಕಥಯಸ್ವಾಮಿತದ್ಯುತೇ || ೧ ||**

|| ಮಾರ್ಕಂಡೇಯ ಉವಾಚ ||

**ಪೂರ್ವಮೇವ ಮಯಾ ಪ್ರೋಕ್ತಂ ರೂಪಂ ವಹ್ನ್ಯಂಬುನಾಥಯೋಃ ।**
**ತಥಾ ಚ ಕಥಿತಂ ತುಭ್ಯಂ ವಿಷ್ಣುದೇವೇಂದ್ರಯೋಃ ಪುರಾ || ೨ ||**

**ಚತುರ್ಮೂರ್ತೇಃ ಕುಮಾರಸ್ಯ ರೂಪಂ ತೇ ವಚ್ಮಿ ಯಾದವ ।**
**ಕುಮಾರಶ್ಚ ತಥಾ ಸ್ಕಂದೋ ವಿಶಾಖಶ್ಚ ಗುರುಸ್ತಥಾ || ೩ ||**

---

### ಎಪ್ಪತ್ತೊಂದನೆಯ ಅಧ್ಯಾಯ

೧-೩ ವಜ್ರನು ಪ್ರಶ್ನೆಮಾಡುತ್ತಾನೆ —ಎಲೈ ಮಹಾತ್ಮನೇ ಗ್ರಹಗಳಿಗೆ ಆಯಾಯ ದೇವತೆಗಳನ್ನು ಮೊದಲೇ ನೀವು ಹೇಳಿರುತ್ತೀರಿ ಈಗ ಅವರುಗಳ ರೂಪನಿರ್ಮಾಣವನ್ನು ಹೇಳಬೇಕು ಮಾರ್ಕಂಡೇಯರು ಹೇಳುತ್ತಾರೆ —ಅಗ್ನಿ, ವರುಣ ಇವರ ರೂಪವನ್ನು ಮೊದಲೇ ಹೇಳಿರುತ್ತೇನೆ ಆ ಸಂದರ್ಭದಲ್ಲಿಯೇ ವಿಷ್ಣು, ದೇವೇಂದ್ರ ಇವರ ರೂಪಗಳನ್ನೂ ಹೇಳಲಾಗಿದೆ ಈಗ ನಾಲ್ಕು ಮೂರ್ತಿಯ ರೂಪದಿಂದಿರುವ ಕುಮಾರಸ್ವಾಮಿಯ ರೂಪವನ್ನು ಹೇಳುತ್ತೇನೆ ಕುಮಾರ, ಸ್ಕಂದ, ವಿಶಾಖ, ಗುರು ಎಂದು ಷಣ್ಮುಖನು ನಾಲ್ಕು ರೂಪದಿಂದಿರುತ್ತಾನೆ.

**ಕುಮಾರಃ ಷಣ್ಮುಖಃ ಕಾರ್ಯಃ ಶಿಖಂಡಕವಿಭೂಷಣಃ ।**
**ರಕ್ತಾಂಬರಧರಃ ಕಾರ್ಯೋ ಮಯೂರವರವಾಹನಃ ॥ ೪ ॥**

**ಕುಕ್ಕುಟಶ್ಚ ತಥಾ ಘಂಟಾ ತಸ್ಯ ದಕ್ಷಿಣಹಸ್ತಯೋಃ ।**
**ಪತಾಕಾ ವೈಜಯನ್ತೀ ಚ ಶಕ್ತಿಃ ಕಾರ್ಯಾ ಚ ವಾಮಯೋಃ ॥ ೫ ॥**

**ಸ್ಕಂದೋ ವಿಶಾಖಶ್ಚ ಗುರುಃ ಕರ್ತವ್ಯಶ್ಚ ಕುಮಾರವತ್ ।**
**ಷಣ್ಮುಖಾಸ್ತೇ ನ ಕರ್ತವ್ಯಾ ನ ಮಯೂರಗತಾಸ್ತಥಾ ॥ ೬ ॥**

**ಚತುರಾತ್ಮಾ ಹಿ ಭಗವಾನ್ವಾಸುದೇವಃ ಸನಾತನಃ ।**
**ಪ್ರಾದುರ್ಭೂತಃ ಕುಮಾರಸ್ತು ದೇವಸೇನಾನಿನೀಷಯಾ ॥ ೭ ॥**

**ಅಷ್ಟಾದಶ ಭುಜಾ ಕಾರ್ಯಾ ಭದ್ರಕಾಲೀ ಮನೋಹರಾ ।**
**ಆಲೀಢಸ್ಥಾನಸಂಸ್ಥಾನಾ ಚತುಃಸಿಂಹೇ ರಥೇ ಸ್ಥಿತಾ ॥ ೮ ॥**

---

೪–೭ ಕುಮಾರಸ್ವಾಮಿಯನ್ನು ಆರು ಮುಖಗಳಿಂದ ಕೂಡಿ ಶಿರೋಭೂಷಣದಿಂದ ಕೂಡಿರುವಂತೆ ರಚಿಸಬೇಕು ಅವನು ರಕ್ತವಸ್ತ್ರಧಾರಿಯಾಗಿ ಮಯೂರ ವಾಹನನಾಗಿರಬೇಕು. ಅವನ ಬಲಭಾಗದ ಎರಡು ಕೈಗಳಲ್ಲಿ ಕೋಳಿ ಮತ್ತು ಘಂಟಗಳಿರಬೇಕು. ಎಡಭಾಗದ ಎರಡು ಕೈಗಳಲ್ಲಿ ವೈಜಯಂತಿ ಎಂಬ ಬಾವುಟವೂ, ಶಕ್ತ್ಯಾಯುಧವೂ ಇರಬೇಕು ಸ್ಕಂದ, ವಿಶಾಖ, ಗುರು ಇವರ ಮೂರ್ತಿಯನ್ನೂ ಕುಮಾರನಂತೆಯೇ ಚಿತ್ರಿಸಬೇಕು ಆದರೆ ಅವರು ಷಣ್ಮುಖರಾಗಿಯೂ, ಮಯೂರ ವಾಹನರಾಗಿಯೂ ಇರಕೂಡದು ಸನಾತನನಾದ ವಾಸುದೇವನು ದೇವತೆಗಳ ಸೈನ್ಯಗಳನ್ನು ನಡೆಸುವ ಕಾರ್ಯಕ್ಕಾಗಿ ನಾಲ್ಕು ರೂಪವುಳ್ಳ ಕುಮಾರಸ್ವಾಮಿಯಾಗಿ ಅವತರಿಸಿದನು.

೮–೧೦ ಭದ್ರಕಾಲಿಯನ್ನು ಹದಿನೆಂಟು ಭುಜಗಳಿಂದ ಕೂಡಿ ರಮ್ಯವಾದ ರೂಪದಿಂದ ನಿರ್ಮಿಸಬೇಕು ನಾಲ್ಕು ಸಿಂಹಗಳುಳ್ಳ ರಥದಲ್ಲಿ ಆಲೀಢವೆಂಬ

**ಅಕ್ಷಮಾಲಾ ತ್ರಿಶೂಲಂ ಚ ಖಡ್ಗಂ ಚರ್ಮ ಚ ಯಾದವ ।**
**ಬಾಣಚಾಪೇ ಚ ಕರ್ತವ್ಯೇ ಶಂಖಪದ್ಮೌ ತಥೈವ ಚ　　॥ ೯ ॥**

**ಸುಕ್ಸ್ರುಚೌ ಚ ತಥಾ ಕಾರ್ಯೌ ತಥಾ ವೇದೀಕಮಂಡಲೂ ।**
**ದಂಡಶಕ್ತೀ ಚ ಕರ್ತವ್ಯೇ ಕೃಷ್ಣಾಜಿನಹುತಾಶನೌ　　॥ ೧೦ ॥**

**ಹಸ್ತಾನಾಂ ಭದ್ರಕಾಲ್ಯಾಸ್ತು ಭವೇಚ್ಛಾಂತಿಕರಃ ಕರಃ ।**
**ಏಕಶ್ಚೈವ ಮಹಾಭಾಗ ರತ್ನಪಾತ್ರಧರೋ ಭವೇತ್　　॥ ೧೧ ॥**

**ಹಂಸಯಾನೇನ ಕರ್ತವ್ಯೋ ನ ಚ ಕಾರ್ಯಶ್ಚತುರ್ಮುಖಃ ।**
**ಬ್ರಹ್ಮೋಕ್ತಮಪರಂ ರೂಪಂ ಸರ್ವಂ ಕಾರ್ಯಂ ಪ್ರಜಾಪತೇಃ　　॥ ೧೨ ॥**

**ವಿನಾಯಕಸ್ತು ಕರ್ತವ್ಯೋ ಗಜವಕ್ತ್ರಶ್ಚತುರ್ಭುಜಃ ।**
**ಶೂಲಕಂ ಚಾಕ್ಷಮಾಲಾಂ ಚ ತಸ್ಯ ದಕ್ಷಿಣ ಹಸ್ತಯೋಃ　　॥ ೧೩ ॥**

**ಪಾತ್ರಂ ಮೋದಕಪೂರ್ಣಂ ತು ಪರಶುಶ್ಚೈವ ವಾಮತಃ ।**
**ದಂತಶ್ಚಾಸ್ಯ ನ ಕರ್ತವ್ಯೋ ವಾಮೋ ರಿಪುನಿಷೂದನ　　॥ ೧೪ ॥**

---

ಧಾನುಷ್ಕರಸ್ಥಾನವನ್ನಾಶ್ರಯಿಸಿ ಕುಳಿತಿರಬೇಕು ಅಕ್ಷಮಾಲೆ, ತ್ರಿಶೂಲ, ಖಡ್ಗ, ಗುರಾಣಿ, ಬಾಣ ಧನಸ್ಸು ಶಂಖ, ಪದ್ಮ, ಸ್ರುಕ್, ಸ್ರುಚಗಳು, ವೇದಿ, ಕಮಂಡಲು, ದಂಡ, ಶಕ್ತಿ, ಕೃಷ್ಣಾಜಿನ, ಅಗ್ನಿ ಇವನ್ನು ಕೈಗಳಲ್ಲಿ ಧರಿಸಿರಬೇಕು

೧೧–೧೪ ಭದ್ರಕಾಳಿಯ ಹಸ್ತಗಳೊಳಗೆ ಶಾಂತಿಕರವೆಂಬ ಸಂಸ್ಥಾನದಿಂದ ಕೂಡಿದ ಒಂದು ಕೈ ಮಾತ್ರ ರತ್ನಪಾತ್ರಧಾರಿಯಾಗಿರಬೇಕು ಪ್ರಜಾಪತಿಯನ್ನು ಹಂಸವಾಹನನಾಗಿರುವಂತೆ ನಿರ್ಮಿಸಬೇಕು ನಾಲ್ಕು ಮುಖಗಳಿರಬಾರದು, ಉಳಿದ ರೂಪವೆಲ್ಲವೂ ಬ್ರಹ್ಮನ ರೂಪದಂತೆ ಇರತಕ್ಕದ್ದು ವಿನಾಯಕನನ್ನು ಆನೆಯ ಸೊಂಡಲಿನಂತಹ ಮುಖದಿಂದ ಕೂಡಿಯೂ, ನಾಲ್ಕು ಭುಜಗಳಿಂದ ಕೂಡಿಯೂ ಇರುವಂತೆ ಚಿತ್ರಿಸಬೇಕು ಅವನ ಬಲಭಾಗದ ಎರಡು ಕೈಗಳಲ್ಲಿ ಕಡುಬಿನಿಂದ ತುಂಬಿದ ಪಾತ್ರೆ ಮತ್ತು ಕೊಡಲಿಗಳಿರಬೇಕು ಈ ವಿನಾಯಕನಿಗೆ ಎಡಭಾಗದಲ್ಲಿ ದಂತವನ್ನು ನಿರ್ಮಿಸಬಾರದು

ಪಾದಪೀಠೀಕೃತಃ ಪಾದಃ ಏಕ ಆಸನಗೋ ಭವೇತ್ ।
ಪೂರ್ಣಮೋದಪಾತ್ರಂ ತು ಕರಾಗ್ರೇ ತಸ್ಯ ಕಾರಯೇತ್ ॥ ೧೫ ॥

ಲಂಬೋದರಸ್ತಥಾಕಾರ್ಯಃ ಸ್ತಬ್ಧಕರ್ಣಶ್ಚ ಯಾದವ ।
ವ್ಯಾಘ್ರಚರ್ಮಾಂಬರಧರಃ ಸರ್ಪಯಜ್ಞೋಪವೀತಿಮಾನ್ ॥ ೧೬ ॥

ವಿಶ್ವಕರ್ಮಾ ತು ಕರ್ತವ್ಯಃ ಸೂರ್ಯರೂಪಧರಃ ಪ್ರಭುಃ ।
ಸದಶಪಾಣಿರ್ದ್ವಿಭುಜಸ್ತೇಜೋಮೂರ್ತಿಧರೋ ಭವೇತ್ ॥ ೧೭ ॥

ವಿಶ್ವಂ ಕರೋತಿ ವೈ ಯಸ್ಮಾದ್ವಿಶ್ವಕರ್ಮಾ ತತಃ ಸ್ಮೃತಃ ।
ವಿಶ್ವಕೃದ್ಭಗವಾನ್ವಿಷ್ಣುರ್ವಿಶ್ವಕರ್ಮಾ ಸ ಉಚ್ಯತೇ ॥ ೧೮ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರ ಸಂವಾದೇ ಕುಮಾರಭದ್ರಕಾಲೀ ಚತುರ್ವಕ್ತ್ರಗಜವಕ್ತ್ರ
ವಿಶ್ವಕರ್ಮರೂಪನಿರೂಪಣೋ ನಾಮೈಕ
ಸಪ್ತತಿತಮೋಽಧ್ಯಾಯಃ

---

೧೫-೧೮ ಒಂದು ಪಾದವು ಪಾದಪೀಠದ ಮೇಲೆಯೂ ಮತ್ತೊಂದು ಆಸನದ ಮೇಲೆಯೂ ಇರಬೇಕು ಕಡುಬಿನಿಂದ ಪೂರ್ಣವಾದ ಪಾತ್ರೆಯನ್ನು ಸೊಂಡಲಿನ ಅಗ್ರಭಾಗದಲ್ಲಿಯೂ ರಚಿಸಬೇಕು ಉದರವು ಜೋಲುವಂತಿದ್ದು ಕಿವಿಗಳೂ ಕೆದರಿ ಕೊಂಡು ಸ್ತಬ್ಧವಾಗಿರಬೇಕು ಹುಲಿಯ ಚರ್ಮವನ್ನು ಧರಿಸಿ ಸರ್ಪಗಳಿಂದ ಯಜ್ಞೋಪವೀತಿಯಾಗಿರಬೇಕು ವಿಶ್ವಕರ್ಮನನ್ನು ಸೂರ್ಯನ ರೂಪದಂತಹ ರೂಪದಿಂದ ಕೂಡಿರುವಂತೆ ಚಿತ್ರಿಸಬೇಕು ಅವನಿಗೆ ಎರಡೇ ಭುಜಗಳಿದ್ದು ಕೈಗಳು ಹತ್ತಿರಬೇಕು ತೇಜಸ್ವಿಯಾದ ದೇಹವನ್ನು ಧರಿಸಿರಬೇಕು ವಿಶ್ವವನ್ನು ನಿರ್ಮಿಸು ವುದರಿಂದಲೇ ಅವನಿಗೆ ವಿಶ್ವಕರ್ಮನೆಂದು ಹೆಸರು ವಿಶ್ವನಿರ್ಮಾಪಕನು ಪೂಜ್ಯ ನಾದ ವಿಷ್ಣು ಅವನೇ ವಿಶ್ವಕರ್ಮರೂಪ ಹೊಂದಿರುತ್ತಾನೆ

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯ ಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಕುಮಾರ ಭದ್ರಕಾಳೀ ಚತುವಕ್ತ್ರ ಗಜವಕ್ತ್ರ
ವಿಶ್ವಕರ್ಮರೂಪನಿರ್ಮಾಣವೆಂಬ ಎಪ್ಪತ್ತೊಂದನೆಯ
ಅಧ್ಯಾಯ ಮುಗಿದಿದೆ

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ದ್ವಿಸಪ್ತತಿತಮೋಽಧ್ಯಾಯಃ ||

**|| ವಜ್ರ ಉವಾಚ ||**

**ವಸೂನಾಂ ದೇವ ಮೇ ರೂಪಂ ತಥೈವಾಂಗಿರಸಂ ಶುಭಂ |**
**ವಿಶ್ವೇಷಾಂ ಚೈವ ದೇವಾನಾಂ ರುದ್ರಾಣಾಮಪಿ ದೇವತಾಃ || ೧ ||**

**ಭೃಗೂಣಾಮಥ ಸಾಧ್ಯಾನಾಂ ಚಾದಿತ್ಯಾನಾಂ ತಥೈವ ಚ |**
**ಮರುತಾಂ ಚ ತಥಾರೂಪಮಾಚಕ್ಷ್ವ ಸುರಪೂಜಿತ || ೨ ||**

**|| ಮಾರ್ಕಂಡೇಯ ಉವಾಚ ||**

**ಪ್ರಾಜಾಪತ್ಯೇನ ರೂಪೇಣ ಧರೋ ನಾಮ ವಸುರ್ಭವೇತ್ |**
**ವೈಷ್ಣವೇನ ಚ ರೂಪೇಣ ಧ್ರುವೋ ನಾಮ ಪ್ರಕೀರ್ತಿತಃ || ೩ ||**

**ಸೋಮಶ್ಚಾಂದ್ರೇಣ ರೂಪೇಣ ವಾಯವ್ಯೇನ ತಥಾಽನಿಲಃ |**
**ಆಗ್ನೇಯೇನಾನಲಃ ಕಾರ್ಯಃ ಪ್ರಭಾಸೋ ವರುಣೇನ ಚ || ೪ ||**

---

### ಎಪ್ಪತ್ತೆರಡನೆಯ ಅಧ್ಯಾಯ.

೧-೪ ವಜ್ರನು ಪ್ರಶ್ನೆಮಾಡುತ್ತಾನೆ —ಮಹಾತ್ಮನೇ, ವಸುಗಳ ಮತ್ತು ಅಂಗಿರಸ್ಸಿನ ರೂಪಗಳನ್ನೂ ಮತ್ತು ಎಲ್ಲಾ ದೇವತೆಗಳ ಹಾಗೂ ರುದ್ರರ, ಭೃಗು ಮತ್ತು ಸಾಧ್ಯರು ಆದಿತ್ಯರು, ಮರುತ್ತುಗಳು ಇವರುಗಳ ರೂಪವನ್ನೂ ಸಹ ನನಗೆ ಹೇಳಬೇಕು ಮಾರ್ಕಂಡೇಯರು ಹೇಳುತ್ತಾರೆ·—ಧರವೆಂಬ ವಸುವಿನ ರೂಪ ವನ್ನು ಪ್ರಜಾಪತಿಯ ರೂಪಕ್ಕೆ ಸದೃಶವಾಗಿಯೂ, ಧ್ರುವನೆಂಬ ವಸುವಿನ ರೂಪ ವನ್ನು ವೈಷ್ಣವರೂಪದಂತೆಯೂ, ಸೋಮನನ್ನು ಚಂದ್ರನ ರೂಪಕ್ಕೆ ಸಮನಾಗಿಯೂ, ಅನಿಲನನ್ನು ವಾಯುವಿನ ರೂಪಕ್ಕೆ ಸದೃಶವಾಗಿಯೂ, ಅನಲನನ್ನು ಅಗ್ನಿಯ

**ವಿಶ್ವೇದೇವಾಸ್ತಥಾ ಕಾರ್ಯಾಃ ಶಕ್ರರೂಪಧರಾಃ ಸುರಾಃ ।**
**ತಿರ್ಯಗ್ಲಲಾಟೇ ನಾಕ್ಷ್ಣಾ ಚ ನಾಗರಾಜೋ ವಿವರ್ಜಿತಃ ॥ ೫ ॥**

**ಜೀವರೂಪೇಣ ಕರ್ತವ್ಯಾ ದೇವಾಶ್ಚಾಂಗಿರಸಸ್ತಥಾ ।**
**ಮಾಹೇಶ್ವರೇಣ ರುದ್ರಾಶ್ಚ ಸಾಧ್ಯಾಶ್ಚ ವೈಷ್ಣವೇನ ತು ॥ ೬ ॥**

**ಆದಿತ್ಯಾಃ ಸೂರ್ಯರೂಪೇಣ ಚೇತಿ ದ್ವಾದಶ ಯಾದವ ।**
**ಪೃಥಕ್ಕ್ರಿಯಾಯಾಂ ತೇಷಾಂ ತು ನವಾರ್ಕಸದೃಶಾಃ ಸ್ಮೃತಾಃ ॥ ೭ ॥**

**ವಿಷ್ಣ್ವಿಂದ್ರವರುಣಾಃ ಕಾರ್ಯಾಃ ಯಥಾಪೂರ್ವಂ ಮಯೇರಿತಾಃ ।**
**ಕರ್ತವ್ಯಾಃ ಶುಕ್ರರೂಪೇಣ ಮರುತೋ ನಾಮ ದೇವತಾಃ ॥ ೮ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯವಜ್ರಸಂವಾದೇ ವಸುರೂಪನಿರೂಪಣೋ ನಾಮ ದ್ವಿಸಪ್ತತಿತಮೋಽಧ್ಯಾಯಃ**

ರೂಪಕ್ಕೆ ಹೋಲುವಂತೆಯೂ, ಪ್ರಭಾಸನನ್ನು ವರುಣನ ರೂಪಕ್ಕೆ ಸದೃಶವಾಗಿಯೂ ಚಿತ್ರಿಸಬೇಕು

೫-೮ ವಿಶ್ವೇದೇವತೆಗಳನ್ನು ಇಂದ್ರನ ರೂಪದಿಂದ ಕೂಡಿರುವಂತೆಯೂ, ನಾಗರಾಜನನ್ನು ಅಡ್ಡಲಾದ ಹಣೆ ಮತ್ತು ಅಡ್ಡಲಾದ ಕಣ್ಣಿನಿಂದ ಕೂಡಿಯೂ, ಆಂಗೀರಸರೆಂಬ ದೇವತೆಗಳನ್ನು ಮನುಷ್ಯರೂಪದಿಂದಲೂ ರುದ್ರರನ್ನು ಮಹೇಶ್ವರನ ರೂಪದಂತಹ ರೂಪದಿಂದಲೂ ಸಾಧ್ಯರನ್ನು ವೈಷ್ಣವರೂಪದಿಂದಲೂ ಹನ್ನೆರಡು ಆದಿತ್ಯರನ್ನು ಸೂರ್ಯನ ರೂಪದಂತಹ ರೂಪದಿಂದಲೂ ಚಿತ್ರಿಸಬೇಕು ದ್ವಾದಶಾದಿತ್ಯರನ್ನು ಬೇರೆಬೇರೆಯಾಗಿ ನಿರ್ಮಿಸುವ ಸಂಭವವಿದ್ದಲ್ಲಿ ಆಗ ತಾನೇ ಉದಯಿಸಿದ ಸೂರ್ಯನಂತೆ ನಿರ್ಮಿಸಬೇಕು ವಿಷ್ಣು, ಇಂದ್ರ, ವರಣ ಇವರನ್ನು ಹಿಂದ ನಾನು ಹೇಳಿರುವಂತೆ ನಿರ್ಮಿಸಬೇಕು ಮರುತ್ತುಗಳೆಂಬ ದೇವತೆಗಳನ್ನು ಶುಕ್ರನ ರೂಪಕ್ಕೆ ಸಮಾನವಾದ ರೂಪದಿಂದ ನಿರ್ಮಿಸಬೇಕು

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯ ಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದದಲ್ಲಿ ವಸುರೂಪನಿರೂಪಣವೆಂಬ ಎಪ್ಪತ್ತೆರಡನೆಯ ಅಧ್ಯಾಯವು ಮುಗಿದಿದೆ

॥ ಓಂ ॥

॥ ಶ್ರೀ ಹಯಗ್ರೀವಾಯ ನಮಃ ॥

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### ॥ ತ್ರಿಸಪ್ತತಿತಮೋಽಧ್ಯಾಯಃ ॥

॥ ವಜ್ರ ಉವಾಚ ॥

**ಅನ್ಯೇಷಾಮಪಿ ದೇವಾನಾಂ ರೂಪನಿರ್ಮಾಣಮೇವ ಚ ।**
**ಕಥಯಸ್ವ ಮಹಾಭಾಗ ತ್ವಂ ಹಿ ಸರ್ವವಿದುಚ್ಯಸೇ ॥ ೧ ॥**

॥ ಮಾರ್ಕಂಡೇಯ ಉವಾಚ ॥

**ಪ್ರಾಜಾಪತ್ಯೇನ ರೂಪೇಣ ಕರ್ತವ್ಯಃ ಕಶ್ಯಪಃ ಪ್ರಭುಃ ।**
**ಅದಿತಿರ್ದಿತಿರ್ದನುಃ ಕಾಷ್ಠಾ ದನಾಯುಃ ಸಿಂಹಿಕಾ ಮುನಿಃ ॥ ೨ ॥**

**ಕದ್ರೂಃ ಕ್ರೋಧಾ ದರಾ ಪ್ರಾಧಾ ವಿನತಾ ಸುರಭಿಃ ಖಶಾ ।**
**ಸರ್ವಾಃ ಸುರೂಪಾಃ ಕರ್ತವ್ಯಾಃ ದ್ವಿಭುಜಾಃ ಪೂರ್ವಮಾತರಃ ॥ ೩ ॥**

---

### ಎಪ್ಪತ್ತಮೂರನೆಯ ಅಧ್ಯಾಯ.

೧-೪ ವಜ್ರನು ಪ್ರಶ್ನೆಮಾಡುತ್ತಾನೆ —ಇತರ ದೇವತೆಗಳ ರೂಪ ನಿರ್ಮಾಣವನ್ನೂ ದಯವಿಟ್ಟು ಹೇಳಬೇಕು ಓ ಮಹಾತ್ಮನೇ, ನೀನೇ ಸರ್ವಜ್ಞನೆಂದು ಹೇಳಲ್ಪಡತಕ್ಕವನು ಮಾರ್ಕಂಡೇಯರು ಹೇಳುತ್ತಾರೆ - ಕಶ್ಯಪ ಬ್ರಹ್ಮನನ್ನು ಪ್ರಜಾಪತಿಯ ರೂಪದಂತೆ ನಿರ್ಮಿಸಬೇಕು ಅದಿತಿ ದಿತಿ, ದನು, ಕಾಷ್ಠಾ, ದನಾಯು ಸಿಂಹಿಕಾ, ಮುನಿ, ಕದ್ರು, ಕ್ರೋಧಾ, ದರಾ, ಪ್ರಾಧಾ, ವಿನತಾ, ಸುರಭಿ, ಖಶಾ ಇವರೆಲ್ಲರೂ ಹಿಂದೆ ದೇವತೆಗಳಿಗೆ ತಾಯಂದಿರಾಗಿದ್ದವರು ಇವರನ್ನು ಒಳ್ಳೆಯ ರೂಪದಿಂದ ಕೂಡಿಯೂ, ಭುಜದ್ವಯದಿಂದ ಕೂಡಿಯೂ ಇರು

ಅದಿತಿಶ್ಚ ದಿತಿಶ್ಚೈವ ವಿನತಾ ಸುರಭಿಸ್ತಥಾ ।
ದೃಷ್ಟಿರಾಸಾಂ ತು ಕರ್ತವ್ಯಾ ಸೌಮ್ಯಾ ಯಾದವನಂದನ ॥ ೪ ॥

ಅನೇನೈವ ತು ರೂಪೇಣ ಸರ್ವಾ ವೈ ದೇವಮಾತರಃ ।
ಕರ್ತವ್ಯಾ ಯಾದವಶ್ರೇಷ್ಠ ರೂಪನಿರ್ಮಾಣಕರ್ಮಣಾ ॥ ೫ ॥

ಕಶ್ಯಪಸ್ಯಾಪರಾಃ ಪತ್ನ್ಯಃ ಕಾರ್ಯಾ ವ್ಯಾಕುಲಲೋಚನಾಃ ।
ವಿಷ್ಣುರೂಪಧರಃ ಕಾರ್ಯೋ ಧ್ರುವಃ ಗ್ರಹಗಣೇಶ್ವರಃ ॥ ೬ ॥

ಚಕ್ರರಶ್ಮಿಕರಃ ಶ್ರೀಮಾನ್ದ್ವಿಭುಜಃ ಸೌಮ್ಯದರ್ಶನಃ ।
ಭವಿಷ್ಯಮನುರೂಪೇಣ ಕಾರ್ಯೋಽಗಸ್ತ್ಯೋ ಮಹಾಮುನಿಃ ॥ ೭ ॥

ರೂಪಂ ತದೇವ ಕಥಿತಂ ಭೃಗ್ವಾದೀನಾಂ ಮಹಾತ್ಮನಾಂ ।
ಶುಕ್ರಪುತ್ರೌ ಜಯಂತಶ್ಚ ಕರ್ತವ್ಯೋ ರೂಪಸಂಯುತಃ ॥ ೮ ॥

ಚಾಪಬಾಣಕರಃ ಶ್ರೀಮಾನ್ ದ್ವಿಭುಜಃ ಸೌಮ್ಯದರ್ಶನಃ ।
ಬಲೋ ಯಮಸುತಃ ಕಾರ್ಯಶ್ಚರ್ಮಶೂಲಧರಃ ಪ್ರಭುಃ ॥ ೯ ॥

---

ವಂತೆ ನಿರ್ಮಿಸಬೇಕು ಅದಿತಿ, ದಿತಿ, ವಿನತಾ, ಸುರಭಿ ಇವರ ದೃಷ್ಟಿಗಳನ್ನು ಬಹು ಸೌಮ್ಯವಾಗಿರುವಂತೆ ಚಿತ್ರಿಸಬೇಕು

೫-೭ ಇದೇ ರೂಪದಿಂದ ದೇವತೆಗಳ ತಾಯಂದಿರಲ್ಲರನ್ನೂ ನಿರ್ಮಿಸಬೇಕು ಕಶ್ಯಪರ ಇತರ ಪತ್ನಿಗಳನ್ನೆಲ್ಲಾ ವ್ಯಾಕುಲವಾದ ಕಣ್ಣಿನಿಂದ ಕೂಡಿರುವಂತೆಯೂ, ನಿರ್ಮಿಸಬೇಕು ಗ್ರಹಗಣಾಧಿಪತಿಯಾದ ಧ್ರುವನನ್ನು ವಿಷ್ಣುವಿನ ರೂಪದಿಂದ ಕೂಡಿರುವಂತೆ ನಿರ್ಮಿಸಬೇಕು ಕೈಯ್ಯಲ್ಲಿ ಚಕ್ರರಶ್ಮಿ ಇರುವಂತಯೂ, ಭುಜದ್ವಯದಿಂದ ಕೂಡಿಯೂ ಸೌಮ್ಯಮೂರ್ತಿಯಾಗಿರುವಂತಯೂ ನಿರ್ಮಿಸಬೇಕು ಅಗಸ್ತ್ಯಮಹಾಮುನಿಯನ್ನು ಅವನ ರೂಪವು ಭವಿಷ್ಯಮನುವಿನ ರೂಪದಂತಿರುವಂತೆ ನಿರ್ಮಿಸಬೇಕು

೮-೧೨ ಭೃಗುವೇ ಮೊದಲಾದ ಮಹಾತ್ಮರ ನಿರ್ಮಾಣವನ್ನೂ ಅದೇ ರೂಪದಿಂದಲೇ ರಚಿಸಬೇಕು, ಶುಕ್ರನ ಪುತ್ರರು ಮತ್ತು ಜಯಂತ ಇವರನ್ನು ಸುರೂಪದಿಂದಿರುವಂತೆ ನಿರ್ಮಿಸಬೇಕು ಧನುರ್ಬಾಣಗಳನ್ನು ಕೈಯಲ್ಲಿಧರಿಸಿರುವಂತೆಯೂ, ಭುಜದ್ವಯದಿಂದ ಕೂಡಿ ಸೌಮ್ಯಾಕಾರದಿಂದಲೂ ಚಿತ್ರಿಸಬೇಕು

ಪುಷ್ಕರಶ್ಚ ತಥಾ ಕಾರ್ಯಃ ಪದ್ಮಪತ್ರಸಮಪ್ರಭಃ ।
ಖಡ್ಗಂ ಚ ಪುಸ್ತಕಂ ಚೋಭೇ ಕರಯೋಸ್ತಸ್ಯ ಕಾರಯೇತ್ ॥ ೧೦ ॥

ಚಂದ್ರಪುತ್ರೀ ತಥಾ ಜ್ಯೋತ್ಸ್ನಾ ರೂಪೇಣಾಪ್ರತಿಮಾ ಭುವಿ ।
ವಾಮಪಾರ್ಶ್ವೇತು ಕರ್ತವ್ಯಾ ಸರ್ವಾಭರಣಭೂಷಣಾ ॥ ೧೧ ॥

ಸುರೂಪರೂಪಃ ಕರ್ತವ್ಯೋ ರತ್ನಪಾತ್ರಕರೋ ವಿಭುಃ ।
ದ್ವಿದಂಷ್ಟ್ರಾಯುಕ್ತವದನೋ ಧನಾದಿರ್ನಲಕೂಬರಃ ॥ ೧೨ ॥

ಧನದಸ್ಯ ತು ರೂಪೇಣ ಮಣಿಭದ್ರಂ ವಿದುರ್ಬುಧಾಃ ।
ನ ಕಾರ್ಯಾ ಶಿಬಿಕಾ ತಸ್ಯ ಸಭಾರ್ಯೋ ನರವಾಹನಃ ॥ ೧೩ ॥

ವಾಯುಪುತ್ರಸ್ತು ಕರ್ತವ್ಯೋ ವಾಯುರೂಪಃ ಪುರೋ ಜವಃ ।
ಅತೀವ ರೂಪವಾನ್ಕಾರ್ಯೋ ವರ್ಚಾಃ ಸೋಮಸುತಃ ಪ್ರಭುಃ ॥ ೧೪ ॥

---

ಯಮುನ ಪುತ್ರನಾದ ಬಲನು ಗುರಾಣಿ ಮತ್ತು ಶೂಲಾಯುಧವನ್ನೂ ಧರಿಸಿರಬೇಕು ಪುಷ್ಕರನೂ ಸಹ ಹಾಗಯೇ ಪದ್ಮಪತ್ರದ ಕಾಂತಿಯಂತೆ ಸುಂದರನಾಗಿರಬೇಕು ಅವನ ಎರಡು ಕೈಗಳಲ್ಲಿಯೂ ಖಡ್ಗ ಮತ್ತು ಪುಸ್ತಕಗಳಿರಬೇಕು ಚಂದ್ರನ ಪುತ್ರಿಯಾದ ಜ್ಯೋತ್ಸ್ನಾ ಎಂಬುವಳು ಭೂಮಿಯಲ್ಲೆಲ್ಲಾ ಅಸದೃಶವಾದ ಕಾಂತಿಶಾಲಿನಿ ಸರ್ವಾಭರಣಗಳಿಂದ ಅಲಂಕರಿಸಲ್ಪಟ್ಟ ಅವಳನ್ನು ಎಡಭಾಗದಲ್ಲಿ ಚಿತ್ರಿಸಬೇಕು ಧನಾಢ್ಯನಾದ ನಲಕೂಬರನನ್ನು ಸುಂದರವಾದ ರೂಪದಿಂದ ಕೂಡಿರುವಂತೆಯೂ, ರತ್ನಪಾತ್ರೆಯನ್ನು ಧರಿಸಿರುವಂತೆಯೂ, ನಿರ್ಮಿಸಬೇಕು, ಎರಡು ಕೋರೆದಾಡೆಗಳಿಂದ ಕೂಡಿದ ಮುಖವನ್ನು ಅವನಿಗೆ ರಚಿಸಬೇಕು

೧೩-೧೪ ಮಣಿಭದ್ರನ ರೂಪವು ಕುಬೇರನ ರೂಪದಂತಿರಬೇಕೆಂದು ಪ್ರಾಜ್ಞರು ಹೇಳುತ್ತಾರೆ ಅವನಿಗೆ ಪಲ್ಲಕ್ಕಿಯನ್ನು ಮಾತ್ರ ನಿರ್ಮಿಸಬಾರದು ಪತ್ನಿಯೊಡಗೂಡಿ ನರವಾಹನನಾಗಿರಬೇಕು. ವಾಯುಪುತ್ರನನ್ನು ವಾಯುವಿನಂತೆಯೇ ವೇಗಶಾಲಿಯಾಗಿರುವಂತೆ ನಿರ್ಮಿಸಬೇಕು ಸೋಮಪುತ್ರನಾದ ವರ್ಚಾ ಎಂಬುವನನ್ನು ಬಹಳ ಸುಂದರವಾದ ರೂಪದಿಂದ ನಿರ್ಮಿಸಬೇಕು ಅವನ

ಲೀಲಾಕಮಲಪಾಣಿಸ್ತು ವರ್ಚಸ್ವೀ ಯೇನ ಜಾಯತೇ ।
ನಂದೀ ಕಾರ್ಯಸ್ತ್ರಿನೇತ್ರಸ್ತು ಚತುರ್ಬಾಹುರ್ಮಹಾಭುಜಃ ॥ ೧೫ ॥

ಸಿಂದೂರಾರುಣಸಂಕಾಶೋ ವ್ಯಾಘ್ರಚರ್ಮಾಂಬರಚ್ಛದಃ ।
ತ್ರಿಶೂಲ ಭಿಂದಿವಾಲೌ ಚ ಕರಯೋಸ್ತಸ್ಯ ಕಾರಯೇತ್ ॥ ೧೬ ॥

ಶಿರೋಗತಂ ತೃತೀಯಂ ತು ತರ್ಜಯನ್ತಂ ತಥಾಪರಂ ।
ಆಲೋಕಯಮಾನಃ ಕರ್ತವ್ಯಃ ದೂರಾದಾಗಮಿಕಂ ಜನಂ ॥ ೧೭ ॥

ಅನೇನೈವ ಚ ರೂಪೇಣ ವೀರಭದ್ರಂ ವಿದುರ್ಬುಧಾಃ ।
ಉಪರಿಷ್ಟಾತ್ಪ್ರವಕ್ಷ್ಯಾಮಿ ಧರ್ಮರೂಪಮಹಂ ತವ ॥ ೧೮ ॥

ಅರ್ಥಃ ಕಾರ್ಯಸ್ತು ರೂಪೇಣ ಧನದಸ್ಯ ಮಹಾತ್ಮನಃ ।
ಕಾಮದೇವಸ್ತು ಕರ್ತವ್ಯೋ ರೂಪೇಣಾಪ್ರತಿಮೋ ಭುವಿ ॥ ೧೯ ॥

ಅಷ್ಟಬಾಹುಃ ಸ ಕರ್ತವ್ಯಃ ಶಂಖಪದ್ಮವಿಭೂಷಣಃ ।
ಚಾಪಬಾಣಕರಶ್ಚೈವ ಮದಾದಂಚಿತಲೋಚನಃ ॥ ೨೦ ॥

---

ತೇಜಸ್ಸಿನ ಅಭಿವೃದ್ಧಿಗಾಗಿ ಅವನ ಕೈಯಲ್ಲಿ ಲೀಲಾರ್ಥವಾದ ಕಮಲವಿರಬೇಕು ನಂದಿಯನ್ನು ನಾಲ್ಕು ಕೈಗಳಿಂದ ಕೂಡಿ ಮೂರು ನೇತ್ರಗಳುಳ್ಳುವಂತೆ ನಿರ್ಮಿಸಬೇಕು

೧೬-೨೦ ನಂದಿಯು ಸಿಂಧೂರದಂತೆ ಕೆಂಪಾದ ಕಾಂತಿಯಿಂದ ಕೂಡಿಯೂ ವ್ಯಾಘ್ರಚರ್ಮದ ವಸ್ತ್ರ ಮತ್ತು ಹೊದಿಕೆಯಿಂದ ಕೂಡಿಯೂ ಇರಬೇಕು ತ್ರಿಶೂಲ, ಬಿಂದಿವಾಲಗಳು ಅವನ ಕೈಗಳಲ್ಲಿರಬೇಕು, ಮೂರನೆಯ ಕೈಯು ತಲೆಯ ಮೇಲಿರುವಂತೆಯೂ ಮತ್ತೊಂದು ಮುಂಭಾಗದ ಕೈಯಿಂದ ಹೆದರಿಸುತ್ತಲೂ ಇರಬೇಕು ಬರುವ ಜನರನ್ನು ದೂರದಿಂದಲೇ ನೋಡುತ್ತಿರುವಂತೆ ಚಿತ್ರಿಸಬೇಕು ಇದೇ ರೂಪದಿಂದಲೇ ವೀರಭದ್ರನನ್ನೂ ನಿರ್ಮಿಸಬೇಕೆಂದು ಪ್ರಾಜ್ಞರು ಹೇಳುತ್ತಾರೆ ಧರ್ಮನ ರೂಪವನ್ನು ನಿನಗೆ ಮುಂದೆ ಹೇಳುತ್ತೇನೆ ಕುಬೇರನ ರೂಪದಂತೆ ಅರ್ಥದ ರೂಪವನ್ನು ನಿರ್ಮಿಸಬೇಕು ಮನ್ಮಥನನ್ನು ಅಸದೃಶವಾದ ರೂಪದಿಂದ ಕೂಡಿರುವಂತೆ ನಿರ್ಮಿಸಬೇಕು, ಅವನಿಗೆ ಎಂಟು ಬಾಹುಗಳಿರಬೇಕು ಶಂಖ ಮತ್ತು ಪದ್ಮ ಇವುಗಳ ಅಲಂಕಾರದಿಂದ ಕೂಡಿರಬೇಕು ಧನುರ್ಬಾಣಗಳನ್ನು ಕೈಯಲ್ಲಿ ಹಿಡಿದು ಮದದಿಂದ ತಿರುಗುತ್ತಿರುವ ಕಣ್ಣುಗಳಿಂದ ಕೂಡಿರಬೇಕು

ರತಿಃ ಪ್ರೀತಿಸ್ತಥಾ ಶಕ್ತಿರ್ಮದಶಕ್ತಿ ಸ್ತಥೋಜ್ಜ್ವಲಾ ।
ಚತಸ್ರಸ್ತಸ್ಯ ಕರ್ತವ್ಯಾಃ ಪತ್ನ್ಯೋ ರೂಪಮನೋಹರಾಃ ॥ ೨೧ ॥

ಚತ್ವಾರಶ್ಚ ಕರಾಸ್ತಸ್ಯ ಕಾರ್ಯಾ ಭಾರ್ಯಾಸ್ತನೋಪಗಾಃ ।
ಕೇತುಶ್ಚ ಮಕರಃ ಕಾರ್ಯಃ ಪಂಚಬಾಣಮುಖೋ ಮಹಾನ್ ॥ ೨೨ ॥

ಕರೇಣ ಕಟಿಗೇನಾಥ ನಿದ್ರಾಂ ವಾಮೇನ ಕಾರಯೇತ್ ।
ದಕ್ಷಿಣೇ ತು ತಥಾ ಪಾರ್ಶ್ವೇ ತಸ್ಯಾಃ ಸಂಕರ್ಷಣೋ ಭವೇತ್ ॥ ೨೩ ॥

ವಾಸುದೇವಸ್ತಥಾ ವಾಮೇ ವ್ಯೈಕಾ ನೇಶಾ ತಥಾ ಸುತಃ ।
ರೂಪಂ ಲಕ್ಷ್ಮ್ಯಾಃ ಪ್ರವಕ್ಷ್ಯಾಮಿ ಉಪರಿಷ್ಟಾತ್ತವಾನಘ ॥ ೨೪ ॥

ಚತುರ್ಭುಜಾ ಚ ಕರ್ತವ್ಯಾ ತಥಾ ದೇವೀ ಸರಸ್ವತೀ ।
ಅಕ್ಷಮಾಲಾ ತ್ರಿಶೂಲಂ ಚ ಪುಸ್ತಕಂ ಚ ಕಮಂಡಲುಃ । ೨೫ ॥

ತಸ್ಯಾಃ ಕರೇಷು ಕಾರ್ಯಾಣಿ ಯಥಾವದ್ಯದುನಂದನ ।
ಕಾರ್ಯಾ ಸಕಲಶಾ ದೇವೀ ವಾರುಣೀ ಚಾತಿಸುಂದರೀ ॥ ೨೬ ॥

೨೧–೨೪ ರತಿ, ಪ್ರೀತಿ ಶಕ್ತಿ ಉಜ್ಜ್ವಲವಾದ ಮದಶಕ್ತಿ ಈ ನಾಲ್ಕು ಪತ್ನಿಯರನ್ನು [illegible] ರೂಪದಿಂದಿರುವಂತೆ ಚಿತ್ರಿಸಬೇಕು ಅವನ ನಾಲ್ಕು ಕೈಗಳೂ ಪತ್ನಿಯರ ಸ್ತನಗಳ ಮೇಲಿರುವಂತಿರಬೇಕು ಮೇಲ್ಭಾಗವಲ್ಲ ಪಂಚಬಾಣಗಳುಳ್ಳ ಮಕರಚಿಹ್ನಿತವಾದ ಧ್ವಜವೂ ಇರಬೇಕು ನಿದ್ರಾದೇವಿಯನ್ನು ಎಡಗೈಯನ್ನು ಸೊಂಟದ ಮೇಲಿಟ್ಟಿರುವಂತೆ ಚಿತ್ರಿಸಬೇಕು ಅವಳ ಬಲಭಾಗದಲ್ಲಿ ಸಂಕರ್ಷಣನಿರಬೇಕು, ಎಡಭಾಗದಲ್ಲಿ ವಾಸುದೇವನಿರಬೇಕು ಮತ್ತು ವೈಕಾನೇಶನೆಂಬ ಮಗನಿರಬೇಕು ಲಕ್ಷ್ಮಿಯ ರೂಪವನ್ನು ನಿನಗೆ ಮುಂದೆ ಹೇಳುತ್ತೇನೆ

೨೫ ೨೬ ಸರಸ್ವತಿದೇವಿಯನ್ನು ನಾಲ್ಕು ಭುಜಗಳಿಂದ ಕೂಡಿರುವಂತೆಯೂ ಅಕ್ಷಮಾಲಾ, ತ್ರಿಶೂಲ, ಪುಸ್ತಕ, ಕಮಂಡಲುಗಳು ಕೈಗಳಲ್ಲಿರುವಂತೆಯೂ ಚಿತ್ರಿಸಬೇಕು ವಾರುಣೀದೇವಿಯನ್ನು ಸುಂದರವಾದ ರೂಪದಿಂದ ಕೂಡಿ ಕಲಶವನ್ನು ಧರಿಸಿರುವಂತೆ ರಚಿಸಬೇಕು ಲಂಬೋದರಿಯನ್ನು ಕೆಂಪಾದ ವಸ್ತ್ರದಿಂದ ಕೂಡಿದ

ಇಲ್ಲಿ ಪಾಠವು ತಪ್ಪಾಗಿರಬೇಕೆಂದು ತೋರುತ್ತದೆ

ಲಂಬೋದರೀ ತು ಕರ್ತವ್ಯಾ ರಕ್ತಾಂಬರಪಯೋಧರಾ ।
ಶೂಲಹಸ್ತಾ ಮಹಾಭಾಗಾ ಭುಜಪ್ರಹರಣಾ ತಥಾ ॥ ೨೭ ॥

ಬೃಹದ್ರಥಾ ಚ ಕರ್ತವ್ಯಾ ಬಹುಬಾಹುಸ್ತಥೈವ ಸಾ ।
ಚಾಮುಂಡಾ ಕಥಿತಾ ಸೈವ ಸರ್ವಸತ್ವವಶಂಕರೀ ॥ ೨೮ ॥

ತಥೈವ ತ್ರಿಮುಖೀ ಶುಷ್ಕಾ ಶುಷ್ಕಾ ಕಾರ್ಯಾ ವಿಶೇಷತಃ ।
ಬಹುಬಾಹುಯುತಾ ದೇವೀ ಭುಜಗೈಃ ಪರಿವೇಷ್ಟಿತಾ ॥ ೨೯ ॥

ಕಪಾಲಮಾಲಿನೀ ಭೀಮಾ ತಥಾ ಖಟ್ವಾಂಗಧಾರಿಣೀ ।
ಶಿವಾ ದೂತೀ ತು ಕರ್ತವ್ಯಾ ಶೃಗಾಲವದನಾ ಶುಭಾ ॥ ೩೦ ॥

ಆಲೀಢಸ್ಥಾನಸಂಸ್ಥಾನಾ ತಥಾ ರಾಜಂಶ್ಚತುರ್ಭುಜಾ ।
ಅಸೃಕ್ಪಾತ್ರಧರಾ ದೇವೀ ಖಡ್ಗಶೂಲಧರಾ ತಥಾ ॥ ೩೧ ॥

ಸ್ತನಪ್ರದೇಶವಿರುವಂತೆ ರಚಿಸಬೇಕು ಹಸ್ತದಲ್ಲಿ ಶೂಲಾಯುಧವನ್ನು ಧರಿಸಿ ಭುಜಗಳೇ ಆಯುಧಗಳಾಗಿರುವಂತೆ ಚಿತ್ರಿಸಬೇಕು ಬೃಹದ್ರಥಾದೇವಿಯನ್ನು ಅನೇಕ ಬಾಹುಗಳಿಂದ ಕೂಡಿರುವಂತೆ ಚಿತ್ರಿಸಬೇಕು ಇವಳಿಗೆ ಸರ್ವಪ್ರಾಣಿಗಳನ್ನೂ ವಶಪಡಿಕೊಳ್ಳುವ ಚಾಮುಂಡಾ ಎಂದೂ ಹೆಸರು

೨೯–೩೧ ಹಾಗೆಯೇ ತ್ರಿಮುಖಿಯನ್ನೂ ಅನೇಕ ಬಾಹುಗಳಿಂದ ಕೂಡಿರುವಂತೆಯೂ, ಬಹುಮಟ್ಟಿಗೂ ಒಣಗಿಹೋಗಿರುವಂತೆಯೂ, ಸರ್ಪಗಳಿಂದ ಸುತ್ತುವರಿಯಲ್ಪಟ್ಟಿರುವಂತೆಯೂ, ಚಿತ್ರಿಸಬೇಕು ಅವಳು ಕಪಾಲಮಾಲೆಯನ್ನೂ ಖಟ್ವಾಂಗವೆಂಬ ಯೋಗದಂಡವನ್ನೂ ಧರಿಸಿ ಭಯಂಕರಳಾಗಿರಬೇಕು ಪಾರ್ವತಿಯು ದೂತಿಯನ್ನು ನರಿಯ ಮುಖದಿಂದ ಕೂಡಿಯೂ, ಚತುರ್ಭುಜಗಳನ್ನು ಹೊಂದಿ ಆಲೀಢವೆಂಬ ಧಾನುಷ್ಕಸ್ಥಿತಿಯಲ್ಲಿರುವಂತೆಯೂ ಚಿತ್ರಿಸಬೇಕು ಅವಳ ಕೈಯಲ್ಲಿ ರಕ್ತದ ಪಾತ್ರೆಯೂ, ಖಡ್ಗ ಮತ್ತು ಶೂಲಗಳೂ ಇರಬೇಕು ಅವಳ ನಾಲ್ಕನೆಯ ಕೈಯ್ಯಿನಲ್ಲಿ ಮಾಂಸವಿರುವಂತೆಯೂ ಬರೆಯಬೇಕು

ಚತುರ್ಥಂ ತು ಕರಂ ತಸ್ಯಾಸ್ತಥಾ ಕಾರ್ಯಂ ತು ಸಾಮಿಷಂ ।
ದೇವತುಲ್ಯೇನ ಚಿಹ್ನೇನ ಯಥಾ ರೂಪೇಣ ಮಾತರಃ　　॥ ೩೨ ॥

ಕರ್ತವ್ಯಾ ದೇವನಾಮಾಙ್ಕಾ ಯಾ ಮಯಾ ತೇ ಪುರೋದಿತಾ ।
ಅಸೃಕ್ಪಾತ್ರಕರಾಃ ಕಾರ್ಯಾಃ ಸಾಮಿಷೈಶ್ಚ ತಥಾ ಕರೈಃ　　॥ ೩೩ ॥

ನೃತ್ಯಮಾನಾ ಮಹಾಭಾಗಾ ಯಾಸಾಂ ರೂಪಂ ತು ನೋದಿತಂ ।
ಪೂರ್ವಾ ಗಜಗತಾ ಬಾಲಾ ರಕ್ತವರ್ಣಾ ತು ದಿಗ್ಭವೇತ್　　॥ ೩೪ ॥

ಕರೇಣುಗಾ ಬೃಹತ್ಕನ್ಯಾ ಪದ್ಮಾಭಾ ಪೂರ್ವದಕ್ಷಿಣಾ ।
ರಥಸ್ಥಾ ದಕ್ಷಿಣಾ ಪೀತಾ ತಥಾಸ್ಯಾತ್ಪ್ರಾಪ್ತಯೌವನಾ　　॥ ೩೫ ॥

ಉಷ್ಟ್ರಗಾ ಕೃಷ್ಣಪೀತಾ ಚ ವರುಣಾ ಯಾಮ್ಯಪಶ್ಚಿಮಾ ।
ಯೌವನಾದ್ವಿಚ್ಯುತಾ ಕೃಷ್ಣಾ ಪಶ್ಚಿಮಾ ತುರಗಸ್ಥಿತಾ　　॥ ೩೬ ॥

೩೨-೩೮　ಯಾವ ಯಾವ ದೇವಮಾತೃಗಳನ್ನು ನಾನು ಹಿಂದ ಹೇಳಿರುವೆನೋ ಅವರನ್ನು ಆಯಾಯ ದೇವತೆಗಳ ಚಿಹ್ನೆಗಳಿಗೆ ಸಮಾನವಾದ ಚಿಹ್ನಗಳಿಂದ ಕೂಡಿಯೂ ಮತ್ತು ಅವರವರ ರೂಪ ಮತ್ತು ನಾಮಗಳಿಂದ ಕೂಡಿಯೂ ಇರುವಂತ ಚಿತ್ರಿಸಬೇಕು　ಯಾವ ಮಾತೃಗಳಿಗೆ ರೂಪವನ್ನು ನಾನು ಹೇಳಿಲ್ಲವೋ ಅವರನ್ನು ರಕ್ತದ ಪಾತ್ರೆಯನ್ನು ಧರಿಸಿಯೂ, ಮಾಂಸದಿಂದ ಕೂಡಿದ ಕೈಗಳನ್ನು ಧರಿಸಿಯೂ ಇರುವಂತೆ ರಚಿಸಬೇಕು　ಅವರು ಮಾಹಾತ್ಮ್ಯಶಾಲಿನಿಗಳಾಗಿಯೂ, ನರ್ತನ ಮಾಡುತ್ತಿರುವಂತೆಯೂ ಇರಬೇಕು　ಪೂರ್ವದಿಗ್ವನಿತೆಯು ಆನೆಯ ಮೇಲೆ ಕುಳಿತು ರಕ್ತವರ್ಣ ಹೊಂದಿರಬೇಕು　ಮತ್ತು ಬಾಲ್ಯಾವಸ್ಥೆಯಲ್ಲಿರಬೇಕು ಅಗ್ನಿದಿಗ್ದೇವತೆಯು ಹೆಣ್ಣಾನೆಯ ಮೇಲೆ ಕುಳಿತು ಪದ್ಮದ ಬಣ್ಣವನ್ನು ಹೊಂದಿರಬೇಕು　ಪ್ರೌಢಕನ್ಯಕೆಯಂತಿರಬೇಕು　ದಕ್ಷಿಣದಿಗ್ವನಿತೆಯು ರಥದ ಮೇಲೆ ಕುಳಿತು ಹೊಂಬಣ್ಣ ಹೊಂದಿರಬೇಕು　ಯೌವನಾವಸ್ಥೆಯನ್ನು ಹೊಂದಿರಬೇಕು　ನೈಋತ್ಯ ದಿಗ್ವನಿತೆಯು, ವರುಣ ಎಂಬ ನಾಮಾಂಕಿತಳಾಗಿ ಒಂಟೆಯ ಮೇಲೆ ಕುಳಿತು ಹೊಂಬಣ್ಣದಿಂದ ಕೂಡಿದ ಕಪ್ಪುಬಣ್ಣವನ್ನು ಹೊಂದಿರಬೇಕು　ಪಶ್ಚಿಮದಿಗ್ವನಿತೆಯು

**ಆಸನ್ನಪಲಿತಾ ನೀಲಾ ವಡವಾ ಯದುನಂದನ ।**
**ಶ್ವೇತಾ ನರಭೃತಾ ವೃದ್ಧಾ ತಥಾ ಭವತಿ ಚೋತ್ತರಾ ॥ ೩೭ ॥**

**ಅತಿವೃದ್ಧಾ ವೃಷಸ್ಥಾ ಚ ಶುಕ್ಲಾ ಪೂರ್ವೋತ್ತರಾ ಭವೇತ್ ।**
**ಅಧಸ್ತಾತ್ಪೃಥಿವೀತುಲ್ಯಾ ಚೋರ್ಧ್ವಾ ಗಗನಸಂಸ್ಥಿತಾ ॥ ೩೮ ॥**

**ಕಾಲಃ ಕರಾಲವದನೋ ನಿತ್ಯಗಶ್ಚ ವಿಭೀಷಣಃ ।**
**ಪಾಶಹಸ್ತಶ್ಚ ಕರ್ತವ್ಯಃ ಸರ್ಪವೃಶ್ಚಿಕರೋಮವಾನ್ ॥ ೩೯ ॥**

**ಜ್ವರಸ್ತ್ರಿಪಾದಃ ಕರ್ತವ್ಯಸ್ತ್ರಿನೇತ್ರೈರ್ವದನೈಸ್ತ್ರಿಭಿಃ ।**
**ಭಸ್ಮಪ್ರಹರಣೋ ರೌದ್ರಃ ತ್ರಿಬಾಹುರ್ವ್ಯಾಕುಲೇಕ್ಷಣಃ ॥ ೪೦ ॥**

**ಧನ್ವಂತರಿಶ್ಚ ಕರ್ತವ್ಯಃ ಸುರೂಪಃ ಪ್ರಿಯದರ್ಶನಃ ।**
**ಕರದ್ವಯಗತಂ ಚಾಸ್ಯ ಸಾಮೃತಂ ಕಲಶಂ ಭವೇತ್ ॥ ೪೧ ॥**

---

ಕುದುರೆಯ ಮೇಲೆ ಕುಳಿತು ಕಪ್ಪುಬಣ್ಣವನ್ನು ಹೊಂದಿರಬೇಕು ಯೌವ್ವನವು ಕಳೆದುಹೋದ ವಯಸ್ಸಿನಲ್ಲಿರಬೇಕು ವಡವಾ ಎಂಬ ವಾಯುವ್ಯದಿಗ್ವನಿತೆಯು ಕಪ್ಪುಬಣ್ಣದಿಂದ ಕೂಡಿ ನೆರೆಬರುವ ವಯಸ್ಸಿನಲ್ಲಿರಬೇಕು ಉತ್ತರದಿಗ್ವನಿತೆಯು ನರವಾಹನೆಯಾಗಿಯೂ ಬಿಳಿಯ ಬಣ್ಣದಿಂದ ಕೂಡಿ ವೃದ್ಧೆಯಾಗಿಯೂ ಇರಬೇಕು ಈಶಾನ್ಯದಿಗ್ವನಿತೆಯು ವೃಷವಾಹನೆಯಾಗಿಯೂ, ಬಿಳಿಯ ಬಣ್ಣದಿಂದ ಕೂಡಿ ಬಹಳ ವೃದ್ಧಯಾಗಿರಬೇಕು ಇವರೆಲ್ಲರೂ ಕೆಳಭಾಗದಲ್ಲಿ ಭೂಮಿಯಂತೆಯೂ, ಮೇಲ್ಭಾಗದಲ್ಲಿ ಆಕಾಶಸ್ಥಿತಿಯುಳ್ಳವರಾಗಿಯೂ ಇರಬೇಕು

೩೯-೪೨ ಕಾಲನನ್ನು ಭಯಂಕರವಾದ ಮುಖದಿಂದ ಕೂಡಿಯೂ, ಯಾವಾಗಲೂ ಸಂಚಾರಶೀಲನಾಗಿರುವಂತೆಯೂ, ಭಯಂಕರನಾಗಿರುವಂತೆಯೂ ಚಿತ್ರಿಸಬೇಕು ಅವನ ಕೈಯಲ್ಲಿ ಪಾಶವಿರಬೇಕು ಸರ್ಪಗಳೂ, ಚೇಳುಗಳೂ ಅವನ ರೋಮಗಳಾಗಿರಬೇಕು ಜ್ವರವನ್ನು ಮೂರು ಪಾದಗಳಿಂದ ಕೂಡಿರುವಂತೆಯೂ, ಮೂರು ಕಣ್ಣುಗಳುಳ್ಳ ಮೂರು ಮುಖಗಳಿಂದ ಕೂಡಿಯೂ ಇರುವಂತೆ ರಚಿಸಬೇಕು ಭಸ್ಮವೇ ಅವನ ಆಯುಧ, ರೌದ್ರಾಕಾರದಿಂದ ಕೂಡಿ ಮೂರು ಕಣ್ಣುಗಳಿಂದಲೂ, ವ್ಯಾಕುಲವಾದ ನೋಟದಿಂದಲೂ ಕೂಡಿರಬೇಕು ಧನ್ವಂತರಿಯನ್ನು ಸುಂದರವಾದ ರೂಪದಿಂದ ಕೂಡಿ ನೋಟದಿಂದ ಪ್ರೀತಿಯುಂಟಾಗುವಂತೆ ಚಿತ್ರಿಸಬೇಕು ಅವನ

ಸಾಮವೇದಸ್ತು ಕರ್ತವ್ಯಃ ಕಿಂ ತು ಶ್ವವದನಃ ಪ್ರಭುಃ ।
ಅಥವಾ ದೇವರೂಪೇಣ ವೇದಾಃ ಕಾರ್ಯಾ ವಿಚಕ್ಷಣೈ ॥ ೪೨ ॥

ಋಗ್ವೇದಸ್ತು ಸ್ಮೃತೋ ಬ್ರಹ್ಮಾ ಯಜುರ್ವೇದಸ್ತು ವಾಸವಃ ।
ಸಾಮವೇದಸ್ತಥಾ ವಿಷ್ಣುಃ ಶಂಭುಶ್ಚಾಥರ್ವಣೋ ಭವೇತ್ ॥ ೪೩ ॥

ಶಿಕ್ಷಾ ಪ್ರಜಾಪತಿರ್ಜ್ಞೇಯೋ ಕಲ್ಪೋ ಬ್ರಹ್ಮಾ ಪ್ರಕೀರ್ತಿತಃ ।
ಸರಸ್ವತೀ ವ್ಯಾಕರಣಂ ನಿರುಕ್ತಂ ವರುಣಃ ಪ್ರಭುಃ ॥ ೪೪ ॥

ಛಂದೋಕ್ಷಿತಿಸ್ತಥೈವಾಗ್ನಿರ್ಜ್ಯೋತಿಷಂ ಭಗವಾನ್ ರವಿಃ ।
ಮೀಮಾಂಸಾ ಭಗವಾನ್ ಸೋಮೋ ನ್ಯಾಯಮಾರ್ಗಃ ಸಮೀರಣಃ ॥ ೪೫ ॥

ಧರ್ಮಶ್ಚ ಧರ್ಮಶಾಸ್ತ್ರಾಣಿ ಪುರಾಣಂ ಚ ತಥಾ ಮನುಃ ।
ಇತಿಹಾಸಂ ಪ್ರಜಾಧ್ಯಕ್ಷೋ ಧನುರ್ವೇದಂ ಶತಕ್ರತುಃ ॥ ೪೬ ॥

ಆಯುರ್ವೇದಸ್ತಥಾ ಸಾಕ್ಷಾದ್ದೇವೋ ಧನ್ವಂತರಿಃ ಪ್ರಭುಃ ।
ಫಲವೇದೋ ಮಹೀ ದೇವೀ ನೃತ್ಯಶಾಸ್ತ್ರಂ ಮಹೇಶ್ವರಃ ॥ ೪೭ ॥

ಅಂಜಲಿಯಲ್ಲಿ ಅಮೃತದಿಂದ ತುಂಬಿದ ಕಲಶವಿರಬೇಕು ಸಾಮವೇದವನ್ನು ನಾಯಿಯ ಮುಖದಂತಹ ಮುಖದಿಂದ ಕೂಡಿರುವಂತೆ ಚಿತ್ರಿಸಬೇಕು ಅಥವಾ ವೇದಗಳನ್ನೆಲ್ಲಾ ದೇವಪುರುಷರಂತೆಯೇ ಪ್ರಾಜ್ಞರು ನಿರ್ಮಿಸಬಹುದು

೪೩-೪೬ ಋಗ್ವೇದಕ್ಕೆ ಬ್ರಹ್ಮನೇ ದೇವತೆ ಯಜುರ್ವೇದಕ್ಕೆ ಇಂದ್ರನು ಸಾಮವೇದಕ್ಕೆ ವಿಷ್ಣು ಅಥರ್ವವೇದಕ್ಕೆ ಶಂಭು ಶಿಕ್ಷೆಗೆ ಪ್ರಜಾಪತಿ ಕಲ್ಪಕ್ಕೆ ಬ್ರಹ್ಮ ವ್ಯಾಕರಣಕ್ಕೆ ಸರಸ್ವತೀ ನಿರುಕ್ತಕ್ಕೆ ವರುಣ ಛಂದಸ್ಸಿಗೆ ಭೂಮಿ ಮತ್ತು ಅಗ್ನಿ ಜ್ಯೋತಿಷಕ್ಕೆ ಪೂಜ್ಯನಾದ ಸೂರ್ಯ ಮೀಮಾಂಸೆಗೆ ಚಂದ್ರ ನ್ಯಾಯ ಶಾಸ್ತ್ರಕ್ಕೆ ವಾಯು ಧರ್ಮಶಾಸ್ತ್ರಗಳಿಗೆ ಧರ್ಮ ಪುರಾಣಕ್ಕೆ ಮನು ಇತಿಹಾಸಕ್ಕೆ ಪ್ರಜಾಪತಿ ಧನುರ್ವೇದಕ್ಕೆ ಇಂದ್ರ ಇವರು ಆಯಾಯ ಶಾಸ್ತ್ರಕ್ಕೆ ದೇವತೆಗಳಾಗಿ ಆಯಾಯ ರೂಪದಿಂದಲೇ ಇರುತ್ತಾರೆ

೪೭-೫೧ ಆಯುರ್ವೇದಕ್ಕೆ ಸಾಕ್ಷಾದ್ಧನ್ವಂತರಿಯೇ ದೇವತೆ ಫಲ ವೇದಕ್ಕೆ ಭೂದೇವಿ ನೃತ್ಯಶಾಸ್ತ್ರಕ್ಕೆ ಮಹೇಶ್ವರ ಪಾಂಚರಾತ್ರಕ್ಕೆ ಸಂಕರ್ಷಣ

ಸಂಕರ್ಷಣಃ ಪಾಂಚರಾತ್ರಂ ರುದ್ರಃ ಪಾಶುಪತಂ ತಥಾ ।
ಪಾತಂಜಲಮನನ್ತಶ್ಚ ಸಾಂಖ್ಯಂ ಚ ಕಪಿಲೋ ಮುನಿಃ ॥ ೪೮ ॥

ಅರ್ಥಶಾಸ್ತ್ರಾಣಿ ಸರ್ವಾಣಿ ಧನಾಧ್ಯಕ್ಷಃ ಪ್ರಕೀರ್ತಿತಃ ।
ಕಲಾಶಾಸ್ತ್ರಾಣಿ ಸರ್ವಾಣಿ ಕಾಮದೇವೋ ಜಗದ್ಗುರುಃ ॥ ೪೯ ॥

ಅನ್ಯಾನಿ ಯಾನಿ ಶಾಸ್ತ್ರಾಣಿ ಯತ್ಕರ್ತೃಣಿ ಪ್ರಚಕ್ಷತೇ ।
ಸ ಚೈವ ದೇವತಾ ತಸ್ಯ ಶಾಸ್ತ್ರಕಾವ್ಯಸ್ಯ ದೇಹವತ್ ॥ ೫೦ ॥

ರೂಪಂ ತು ಕಾಲಾವಯವಸ್ಯ ಕಾರ್ಯಂ
ಸ್ವದೇವತಾ ರೂಪಸಮಂ ರಿಪುಘ್ನ ।
ಏತತ್ತ್ವವೋಕ್ತಂ ಸುರಸತ್ತಮಾನಾಂ
ರೂಪಂ ಮಯಾ ತೇ ಯದುವಂಶಚಂದ್ರಂ ॥ ೫೧ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ದೇವತಾರೂಪನಿರ್ಮಾಣೋ ನಾಮ
ತ್ರಿಸಪ್ತತಿತಮೋಽಧ್ಯಾಯಃ

---

ಪಾಶುಪತಕ್ಕೆ ರುದ್ರನೇ ದೇವತೆ ಯೋಗಶಾಸ್ತ್ರಕ್ಕೆ ಅನಂತ ಸಾಂಖ್ಯಕ್ಕೆ ಕಪಿಲಮುನಿ ಅರ್ಥಶಾಸ್ತ್ರಗಳಿಗೆಲ್ಲಾ ಧನಾಧ್ಯಕ್ಷನಾದ ಕುಬೇರ ಎಲ್ಲಾವಿಧವಾದ ಕಲಾಶಾಸ್ತ್ರಗಳಿಗೂ ಕಾಮದೇವ ಇತರ ಆಯಾಯ ಶಾಸ್ತ್ರಗಳಿಗೆ, ಯಾರು ಯಾರು ಪ್ರವರ್ತಕರಾಗುತ್ತಾರೋ ಅವರವರೇ ಆಯಾಯ ಶಾಸ್ತ್ರಕ್ಕೆ ದೇವತೆಯಾಗುತ್ತಾರೆ ದೇಹಕ್ಕೆ ಆಯಾಯ ಆತ್ಮವೇ ದೇವತೆಯಾಗುವಂತೆ, ಕಾಲಕ್ಕೆ ಸಂಬಂಧಿಸಿರುವ ಎಲ್ಲಾ ವಸ್ತುಗಳಿಗೂ ಆಯಾ ೦ ೨ ದೇವತೆಗಳ ರೂಪಕ್ಕೆ ಸಮಾನವಾದ ರೂಪವಿರುತ್ತದೆ ಎಲೈ ಯಾದವಮುಖ್ಯನೇ, ದೇವತೆಗಳ ರೂಪಗಳೆಲ್ಲವನ್ನೂ ನಿನಗೆ ಈ ರೀತಿ ಹೇಳಿರುತ್ತೇನೆ

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯ ಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ದೇವತಾರೂಪನಿರ್ಮಾಣವೆಂಬ
ಎಪ್ಪತ್ತಮೂರನೆಯ ಅಧ್ಯಾಯ ಮುಗಿದಿದೆ



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಚತುಸ್ಸಪ್ತತಿತಮೋಧ್ಯಾಯಃ ||

**|| ವಜ್ರ ಉವಾಚ ||**

**ಲಿಂಗಸ್ಯ ರೂಪನಿರ್ಮಾಣಂ ಕಥಯಸ್ವ ಮಮಾನಘ || ೧ ||**

**|| ಮಾರ್ಕಂಡೇಯ ಉವಾಚ ||**

**ಲಿಂಗೇ ತು ಪೂಜಿತೇ ಪೂಜಾ ಕೃತಾ ತು ಜಗತೋ ಭವೇತ್ ।**
**ಭೋಗೋಸ್ಯ ವೃತ್ತಃ ಕರ್ತವ್ಯೋ ಭಾಗಮಷ್ಟಾಸ್ರಮೇವ ತು || ೨ ||**

**ಚತುರಸ್ರಂ ತಥಾ ಭಾಗಂ ಕರ್ತವ್ಯಂ ಭೂರಿದಕ್ಷಿಣಂ ।**
**ವೃತ್ತಂ ದೃಶ್ಯಂ ತು ಕರ್ತವ್ಯಂ ಅಷ್ಟಾಸ್ರಂ ಪಿಂಡಿಕಾಗತಂ || ೩ ||**

---

### ಎಪ್ಪತ್ತನಾಲ್ಕನೆಯ ಅಧ್ಯಾಯ.

೧-೫ ವಜ್ರನು ಪ್ರಶ್ನೆಮಾಡುತ್ತಾನೆ —ಎಲೈ ಪುಣ್ಯಶಾಲಿಯೇ, ಲಿಂಗದ ನಿರ್ಮಾಣವನ್ನು ನನಗೆ ಹೇಳಬೇಕು ಮಾರ್ಕಂಡೇಯರು ಹೇಳುತ್ತಾರೆ — ಲಿಂಗವನ್ನು ಪೂಜಿಸಿದ್ದೇ ಆದರೆ ಜಗತ್ತನ್ನೇ ಪೂಜಿಸಿದಂತಾಗುತ್ತದ ಲಿಂಗದ ಶರೀರವು ದುಂಡಾಗಿರಬೇಕು ಅದರ ಕೆಳಗಿನ ಭಾಗವು ಎಂಟು ಪಟ್ಟಿಗಳಿಂದ ಕೂಡಿರಬೇಕು ಅದಕ್ಕೆ ಆಶ್ರಯವಾದ ಭೂರಿದಕ್ಷಿಣವೆಂಬ ಭಾಗವು ನಾಲ್ಕು ಮೂಲೆಯುಳ್ಳದ್ದಾಗಿರಬೇಕು ದುಂಡಾದ ಮೇಲು ಭಾಗವೂ ಆಶ್ರಯದ ಮೇಲು ಭಾಗದಲ್ಲಿರುವ ಎಂಟು ಪಟ್ಟಿಯ ಭಾಗವೂ ಪ್ರತ್ಯಕ್ಷ ಗೋಚರವಾಗುವಂತಿರಬೇಕು ಭದ್ರಪೀಠದ ಕೆಳಭಾಗವನ್ನು ಬ್ರಹ್ಮಪೀಠವೆಂದು ಪ್ರಾಜ್ಞರು ಹೇಳುತ್ತಾರೆ ಆ ಬ್ರಹ್ಮಪೀಠವನ್ನು ಹೊಂದಿರುವ ಭಾಗವು ನಾಲ್ಕು ಮೂಲೆಯುಳ್ಳದ್ದಾಗಿರಬೇಕು

ಚತುರಸ್ರಂ ತು ಕರ್ತವ್ಯಂ ಬ್ರಹ್ಮಪೀಠಗತಂ ತಥಾ ।
ಅಧಸ್ತಾದ್ಭದ್ರಪೀಠಸ್ಯ ಬ್ರಹ್ಮಪೀಠಂ ವಿದುರ್ಬುಧಾಃ ॥ ೪ ॥

ಲಿಂಗೋಪರಿಷ್ಟಾತ್ತು ಗತಾ ಪುರಸ್ತಾ-
ಲ್ಲೇಖಾನುವೃತ್ತಾ ತು ತಥೈವ ಕಾರ್ಯಾ ।
ಊರ್ಧ್ವಾಯತಾ ಬುದ್ಧಿಗುಣಾ ತಥಾನ್ಯಾ
ಯಾ ಬ್ರಹ್ಮಸೂತ್ರೇ ವಿಬುಧೈಃ ಪ್ರದಿಷ್ಟಾ ॥ ೫ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಮಾರ್ಕಂಡೇಯ ವಜ್ರ ಸಂವಾದೇ
ಲಿಂಗರೂಪನಿರ್ಮಾಣೋ ನಾಮ ಚತುಸ್ಸಪ್ತತಿತಮೋಽಧ್ಯಾಯಃ

---

ಲಿಂಗದ ಮೇಲು ಭಾಗದಲ್ಲಿ, ಮುಂಭಾದಲ್ಲಿ ದುಂಡಾದ ರೇಖೆಗಳನ್ನು ರಚಿಸಬೇಕು ಬುದ್ಧಿಗುಣಕ್ಕೆ ಸೂಚಕವಾದ ಮೇಲ್ಮುಖವಾಗಿ ಪ್ರಸರಿಸುವ ಮತ್ತೊಂದು ರೇಖೆಯೂ ಬ್ರಹ್ಮಸೂತ್ರದಲ್ಲಿ ಪಂಡಿತರು ಹೇಳಿರುವಂತೆ ತೋರುತ್ತಿರಬೇಕು

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರ ಸಂವಾದದಲ್ಲಿ ಲಿಂಗನಿರ್ಮಾಣವೆಂಬ ಎಪ್ಪತ್ತನಾಲ್ಕನೆಯ
ಅಧ್ಯಾಯ ಮುಗಿದಿದೆ

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಪಂಚಸಪ್ತತಿತಮೋಽಧ್ಯಾಯಃ ||

|| ವಜ್ರ ಉವಾಚ ||

**ವ್ಯೋಮರೂಪಂ ಸಮಾಚಕ್ಷ್ವ ಸರ್ವಧರ್ಮಭೃತಾಂ ವರ ।**
**ವ್ಯೋಮ್ನಿ ತು ಪೂಜಿತೇ ಪೂಜಾ ಕೃತಾಸ್ಯಾಜ್ಜಗತೋ ಭವೇತ್ || ೧ ||**

|| ಮಾರ್ಕಂಡೇಯ ಉವಾಚ ||

**ಚತುರಸ್ರಂ ಭವೇನ್ಮೂಲೇ ತತೋ ವೃತ್ತಂ ಮಹಾಭುಜ ।**
**ತತೋಽಲ್ಪಚತುರಸ್ರಂ ಚ ಚತುರಸ್ರಂ ತತೋ ಭವೇತ್ || ೨ ||**

**ತತೋಽಲ್ಪಚತುರಸ್ರಂ ಚ ಮೇರುವತ್ಸಂಸ್ಥಿತಂ ತತಃ ।**
**ಭದ್ರಪೀಠಮಿದಂ ಪ್ರೋಕ್ತಂ ವ್ಯೋಮಭಾಗಂ ತೃತೀಯಕಂ || ೩ ||**

---

### ಎಪ್ಪತ್ತೈದನೆಯ ಅಧ್ಯಾಯ

೧-೪ ವಜ್ರನು ಪ್ರಶ್ನೆಮಾಡುತ್ತಾನೆ —ಎಲೈ ಧಾರ್ಮಿಕಾಗ್ರೇಸರನೇ, ಗಗನದ ಸ್ವರೂಪವನ್ನು ಹೇಳಬೇಕು ಅಂತಹ ವ್ಯೋಮಮೂರ್ತಿಯನ್ನು ಪೂಜಿಸಿದ್ದೇ ಆದರೆ ಜಗತ್ತನ್ನೇ ಪೂಜಿಸಿದಂತಾಗುತ್ತದೆ ಮಾರ್ಕಂಡೇಯರು ಹೇಳುತ್ತಾರೆ,— ಕೆಳಭಾಗದಲ್ಲಿ ನಾಲ್ಕು ಮೂಲೆಯಿಂದ ಕೂಡಿಯೂ, ಅದಕ್ಕೆ ಮೇಲುಭಾಗದಲ್ಲಿ ದುಂಡಾಗಿಯೂ, ಅದಕ್ಕೆ ಮೇಲೆ ಸ್ವಲ್ಪಮಟ್ಟಿಗೆ ನಾಲ್ಕು ಮೂಲೆ ತೋರುವಂತೆಯೂ, ಅನಂತರ ಸ್ಪಷ್ಟವಾದ ನಾಲ್ಕು ಮೂಲೆಗಳು ತೋರುವಂತೆಯೂ ಇರಬೇಕು ಅದಕ್ಕಿಂತಲೂ ಮೇಲೆ ಅಸ್ಪಷ್ಟವಾದ ನಾಲ್ಕು ಮೂಲೆಗಳಿದ್ದು ಅನಂತರ ಮೇರುವಿ

ಸರ್ವೇಷಾಂ ಭದ್ರಪೀಠಾನಾಮೇತಲ್ಲಕ್ಷಣಮುಚ್ಯತೇ ।
ಸಂಭವಶ್ಚತುರಸ್ರಸ್ತು ಮಧ್ಯಭಾಗಃ ಪ್ರಕೀರ್ತಿತಃ ॥ ೪ ॥

ಭದ್ರಪೀಠಂ ತತೋ ಭಾಗಂ ತತ್ರ ಪದ್ಮಂ ನಿವೇಶಯೇತ್ ।
ಶುಭಾಷ್ಟಪತ್ರಂ ತನ್ಮಧ್ಯೇ ಕರ್ಣಿಕಾಯಾಂ ದಿವಾಕರಂ ॥ ೫ ॥

ಪತ್ರೇಷು ಕಲ್ಪಯೇತ್ತತ್ರ ದಿಕ್ಪಾಲಾಂಶ್ಚ ಯಥಾದಿಶಂ ।
ಭದ್ರಪೀಠಮಧಸ್ತಾತ್ತು ಪೃಥಿವೀಂ ಪರಿಕಲ್ಪಯೇತ್ ॥ ೬ ॥

ಅಂತರಿಕ್ಷಂ ತಥಾ ಸ್ತಂಭಮೂರ್ಧ್ವಭಾಗಂ ತತೋ ವಿದುಃ ।
ತತ್ರ ಸನ್ನಿಹಿತಾಃ ಸರ್ವೇ ಭವಂತಿ ತ್ರಿದಶೋತ್ತಮಾಃ ॥ ೭ ॥

ಸರ್ವವೇದಮಯಂ ವ್ಯೋಮ ಕಥಿತಂ ತೇ ಮಹಾಭುಜ ।
ತಸ್ಯ ಸಂಪೂಜನಂ ಕೃತ್ವಾ ಸರ್ವಾನ್ ಕಾಮಾನವಾಪ್ನುಯಾತ್ ॥ ೮ ॥

ವ್ಯೋಮ್ನಃ ಸ್ವರೂಪಂ ಕಥಿತಂ ಮಯೈತ-
ದ್ವ್ಯೋಮ್ನಸ್ತು ಪೂಜಾ ಕರಣಾತ್ಸಮಗ್ರಂ ।

---

ನಂತಿರಬೇಕು ಇದು ಭದ್ರಪೀಠವೆಂಬ ಮೂರನೆಯ ವ್ಯೋಮಮೂರ್ತಿಯ ಭಾಗ ಎಲ್ಲಾ ಭದ್ರಪೀಠಕ್ಕೂ ಇದೇ ಲಕ್ಷಣವಾಗುತ್ತದೆ ಮಧ್ಯಭಾಗವು ನಾಲ್ಕು ಮೂಲೆಯದಾಗಿದ್ದಲ್ಲಿ ಸಂಭವವೆಂಬ ಭದ್ರಪೀಠವಾಗುತ್ತದೆ

೫–೯ ಅದರ ಮೇಲುಭಾಗದಲ್ಲಿ ಮಂಗಳಕರವಾದ ಅಷ್ಟದಳಗಳುಳ್ಳ ಪದ್ಮವನ್ನು ಇಡಬೇಕು ಆ ಪದ್ಮದ ಮಧ್ಯಭಾಗದ ಕರ್ಣಿಕೆಯಲ್ಲಿ ಸೂರ್ಯನನ್ನು ನಿರ್ಮಿಸಬೇಕು ಅದರ ಎಂಟು ದಳಗಳಲ್ಲಿಯೂ ಎಂಟು ದಿಕ್ಪಾಲಕರನ್ನು ಕ್ರಮವಾಗಿ ನಿರ್ಮಿಸಬೇಕು ಆ ಭದ್ರಪೀಠದ ಕೆಳಭಾಗದಲ್ಲಿ ಭೂಮಿಯನ್ನು ರಚಿಸಬೇಕು ಆ ಸ್ತಂಭದ ಮೇಲುಭಾಗದಲ್ಲಿ ಅಂತರಿಕ್ಷವನ್ನೂ ನಿರ್ಮಿಸಬೇಕು ಅಲ್ಲಿ ಎಲ್ಲಾ ದೇವತೆಗಳೂ ಸನ್ನಿಹಿತರಾಗಿರುತ್ತಾರೆ ಸರ್ವವೇದಮಯವಾದ ವ್ಯೋಮಮೂರ್ತಿ

ಸಂಪೂಜಿತಂ ಸ್ಯಾಜ್ಜಗದೇಕವೀರ
ಚರಾಚರಂ ಯಾದವವಂಶಮುಖ್ಯ　　|| ೯ ||

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ವ್ಯೋಮರೂಪನಿರ್ಮಾಣೋ ನಾಮ
ಪಂಚಸಪ್ತತಿತಮೋಽಧ್ಯಾಯಃ

---

ಯನ್ನು ನಿನಗೆ ಹೇಳಿದ್ದಾಯಿತು ಇಂತಹ ವ್ಯೋಮಮೂರ್ತಿಯ ಪೂಜೆಯಿಂದ ಎಲ್ಲಾ ಇಷ್ಟಾರ್ಥಗಳನ್ನೂ ಹೊಂದುತ್ತಾನೆ ವ್ಯೋಮಮೂರ್ತಿಯ ಸ್ವರೂಪವನ್ನು ಈ ರೀತಿ ನಿನಗೆ ಹೇಳಿದ್ದೇನೆ ಈ ಮೂರ್ತಿಯ ಪೂಜೆಯಿಂದ ಎಲ್ಲಾ ಜಗತ್ತನ್ನೂ ಪೂಜಿಸಿದಂತಾಗುತ್ತದೆ

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ವ್ಯೋಮರೂಪನಿರ್ಮಾಣವೆಂಬ ಎಪ್ಪತ್ತೈದನೆಯ
ಅಧ್ಯಾಯ ಮುಗಿದಿದೆ



॥ ಓಂ ॥

॥ ಶ್ರೀ ಹಯಗ್ರೀವಾಯ ನಮಃ ॥

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### ॥ ಷಟ್‌ಸಪ್ತತಿತಮೋಽಧ್ಯಾಯಃ ॥

**॥ ವಜ್ರ ಉವಾಚ ॥**

**ನರನಾರಾಯಣೌ ಕಾರ್ಯೌ ಕೇನ ರೂಪೇಣ ಸಂಯುತೌ ।**
**ಹರಿಃ ಕೃಷ್ಣಶ್ಚ ಕರ್ತವ್ಯಃ ಕಥಂ ವಾ ಭೃಗುನಂದನ ॥ ೧ ॥**

**॥ ಮಾರ್ಕಂಡೇಯ ಉವಾಚ ॥**

**ದೂರ್ವಾಶ್ಯಾಮೋ ನರಃ ಕಾರ್ಯೋ ದ್ವಿಭುಜಶ್ಚ ಮಹಾಭುಜ ।**
**ನಾರಾಯಣಶ್ಚತುರ್ಬಾಹುರ್ನೀಲೋತ್ಪಲದಲಚ್ಛವಿಃ ॥ ೨ ॥**

**ತಯೋರ್ಮಧ್ಯೇ ಚ ಬದರೀ ಕಾರ್ಯಾ ಫಲವಿಭೂಷಣಾ ।**
**ಬದರ್ಯಾಮನು ತೌ ಕಾರ್ಯಾವಕ್ಷಮಾಲಾಧರಾವುಭೌ ॥ ೩ ॥**

---

### ಎಪ್ಪತ್ತಾರನೆಯ ಅಧ್ಯಾಯ.

೧-೪ ವಜ್ರನು ಪ್ರಶ್ನೆಮಾಡುತ್ತಾನೆ — ನರನಾರಾಯಣರನ್ನು ಎಂತಹ ರೂಪದಿಂದ ನಿರ್ಮಿಸಬೇಕು ಹರಿ, ಕೃಷ್ಣ ಇವರ ನಿರ್ಮಾಣ ಕ್ರಮವೂ ಎಂತಹುದು ಮಾರ್ಕಂಡೇಯರು ಹೇಳುತ್ತಾರೆ —ನರನನ್ನು ಗರಿಕೆಯಂತಹ ಶ್ಯಾಮಲ ವರ್ಣದಿಂದ ನಿರ್ಮಿಸಬೇಕು. ನಾರಾಯಣನನ್ನು ನೀಲಕಮಲದ ಬಣ್ಣದಿಂದ ಕೂಡಿ ನಾಲ್ಕು ಭುಜಗಳೊಡನೆ ನಿರ್ಮಿಸಬೇಕು ಅವರುಗಳ ಮಧ್ಯದಲ್ಲಿ ಫಲಗಳಿಂದ ಶೋಭಿಸುವ ಬದರೀ (ಎಲಚಿ) ವೃಕ್ಷವನ್ನು ನಿರ್ಮಿಸಬೇಕು ಆ ಬದರಿಯ ಸಮೀಪದಲ್ಲಿ ಅಕ್ಷಮಾಲಾಧಾರಿಗಳಾದ ನರನಾರಾಯಣರಿಬ್ಬರನ್ನೂ ಚಿತ್ರಿಸಬೇಕು ಎಂಟು ಚಕ್ರಗಳುಳ್ಳ ವೈಭವಯುತವಾದ ರಮ್ಯ ರಥದಲ್ಲಿ ಕುಳಿತಿರಬೇಕು ಅಸಹು

**ಅಷ್ಟಚಕ್ರೇ ಸ್ಥಿತೌ ಯಾನೇ ಭೂತಿಯುಕ್ತೇ ಮನೋಹರೇ ।**
**ಕೃಷ್ಣಾಜಿನಧರೌ ದಾನ್ತೌ ಜಟಾಮಂಡಲಧಾರಿಣೌ　　|| ೪ ||**

**ಪಾದೇನ ಚೈಕೇನ ರಥಸ್ಥಿತೇನ**
**ಪಾದೇನ ಚೈಕೇನ ಚ ಜಾನುಗೇನ ।**
**ಕಾರ್ಯೋ ಹರಿಶ್ಚಾತ್ರ ನರೇಣ ತುಲ್ಯಃ**
**ಕೃಷ್ಣೋಽಪಿ ನಾರಾಯಣತುಲ್ಯಮೂರ್ತಿಃ　　|| ೫ ||**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ ವಜ್ರಸಂವಾದೇ ನರನಾರಾಯಣರೂಪನಿರ್ಮಾಣೋ ನಾಮ ಷಟ್‌ಸಪ್ತತಿತಮೋಽಧ್ಯಾಯಃ**

---

ಕೃಷ್ಣಾಜಿನಧಾರಿಗಳಾಗಿಯೂ, ಜಿತೇಂದ್ರಿಯರಾಗಿಯೂ, ಜಟಾಧಾರಿಗಳಾಗಿಯೂ ಇರಬೇಕು

೫　ಒಂದು ಪಾದವು ರಥದ ಮೇಲಿರುವಂತೆಯೂ, ಮತ್ತೊಂದು ಪಾದವು ಮಂಡಿಯ ಮೇಲಿರುವಂತೆಯೂ ಹರಿಯನ್ನು ಚಿತ್ರಿಸಬೇಕು ನರನೂ ಅವನಂತೆಯೇ ಇರಬೇಕು　ಕೃಷ್ಣನನ್ನು ನಾರಾಯಣಮೂರ್ತಿಯಂತೆಯೇ ನಿರ್ಮಿಸಬೇಕು

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ ವಜ್ರ ಸಂವಾದದಲ್ಲಿ ನಾರಾಯಣ ರೂಪನಿರ್ಮಾಣವೆಂಬ ಎಪ್ಪತ್ತಾರನೆಯ ಅಧ್ಯಾಯ ಮುಗಿದಿದೆ



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಸಪ್ತಸಪ್ತತಿತಮೋಽಧ್ಯಾಯಃ ||

**|| ವಜ್ರ ಉವಾಚ ||**

**ಧರ್ಮಸ್ಯ ರೂಪನಿರ್ಮಾಣಂ ಜ್ಞಾನಸ್ಯ ಚ ಪರಂತಪ |**
**ವೈರಾಗ್ಯಸ್ಯ ಚ ಧರ್ಮಜ್ಞ ತಥೈಶ್ವರ್ಯಸ್ಯ ಮೇ ವದ || ೧ ||**

**|| ಮಾರ್ಕಂಡೇಯ ಉವಾಚ ||**

**ಚತುರ್ವಕ್ತ್ರಶ್ಚತುಷ್ಪಾದಶ್ಚತುರ್ಬಾಹುಸ್ಸಿತಾಂಬರಃ |**
**ಸರ್ವಾಭರಣವಾನ್ ಶ್ವೇತೋ ಧರ್ಮಃ ಕಾರ್ಯೋ ವಿಜಾನತಾ || ೨ ||**

**ದಕ್ಷಿಣೇ ಚಾಕ್ಷಮಾಲಾಂ ಚ ತಸ್ಯ ವಾಮೇ ತು ಪುಸ್ತಕಂ |**
**ಮೂರ್ತಿಮಾನ್ವ್ಯವಸಾಯಸ್ತು ಕಾರ್ಯೋ ದಕ್ಷಿಣಭಾಗಗಃ || ೩ ||**

---

### ಎಪ್ಪತ್ತೇಳನೆಯ ಅಧ್ಯಾಯ.

೧-೩ ವಜ್ರನು ಪ್ರಶ್ನೆಮಾಡುತ್ತಾನೆ —ಧರ್ಮದ ರೂಪನಿರ್ಮಾಣವನ್ನೂ ಹಾಗೆಯೇ ಜ್ಞಾನ, ವೈರಾಗ್ಯ, ಐಶ್ವರ್ಯ ಇವುಗಳ ರೂಪನಿರ್ಮಾಣವನ್ನೂ ಸಹ ಹೇಳಬೇಕು ಮಾರ್ಕಂಡೇಯರು ಹೇಳುತ್ತಾರೆ —ಧರ್ಮದ ರೂಪವನ್ನು ನಿರ್ಮಾಣಮಾಡುವ ಪ್ರಾಜ್ಞನು ಆ ಧರ್ಮಕ್ಕೆ ನಾಲ್ಕು ಮುಖಗಳೂ, ನಾಲ್ಕು ಪಾದಗಳೂ, ನಾಲ್ಕು ಭುಜಗಳೂ ಇರುವಂತೆಯೂ, ಬಿಳಿಯ ವಸ್ತ್ರವನ್ನು ಧರಿಸಿ ಬಿಳುಪಾದ ವರ್ಣದಿಂದ ಕೂಡಿ ಸರ್ವಾಭರಣಗಳಿಂದ ಶೋಭಿಸುತ್ತಿರುವಂತೆಯೂ ನಿರ್ಮಿಸಬೇಕು ಆ ಮೂರ್ತಿಯ ಬಲಗೈಯಲ್ಲಿ ಅಕ್ಷಮಾಲಿಕೆಯೂ, ಎಡಗೈಯಲ್ಲಿ ಪುಸ್ತಕವೂ ಇರಬೇಕು ಬಲಭಾಗದಲ್ಲಿ ಸಶರೀರವಾದ ವ್ಯವಸಾಯಮೂರ್ತಿಯನ್ನು ನಿರ್ಮಿಸಬೇಕು

**ವಾಮಭಾಗಗತಂ ಕಾರ್ಯಂ ಸುಖಂ ಪರಮರೂಪವತ್ ।**
**ಕಾರ್ಯೌ ಧರ್ಮಕರೌ ಮೂರ್ಧ್ನಿ ವಿನ್ಯಸ್ತೌ ಚ ತಥಾ ತಯೋಃ ॥ ೪ ॥**

**ಅಕ್ಷಮಾಲಾ ಸ್ಮೃತಃ ಕಾಲಃ ಪುಸ್ತಕಂ ಚಾಗಮಂ ಸ್ಮೃತಂ ।**
**ಯಜ್ಞಃ ಸತ್ಯಂ ತಪೋ ದಾನಂ ತಸ್ಯ ವಕ್ತ್ರಚತುಷ್ಟಯಂ ॥ ೫ ॥**

**ದೇಶಕಾಲೌ ತಥಾ ಶೌಚಂ ಶುದ್ಧಿಶ್ಚಾಸ್ಯ ಭುಜಾಃ ಸ್ಮೃತಾಃ ।**
**ಶ್ರುತಿಃ ಸ್ಮೃತಿಃ ಸದಾಚಾರಃ ಸ್ವಸ್ಯ ಚ ಪ್ರಿಯಮಾತ್ಮನಃ ॥ ೬ ॥**

**ತಸ್ಯ ದೇವಸ್ಯ ಧರ್ಮಜ್ಞ ಜ್ಞೇಯಂ ಪಾದಚತುಷ್ಟಯಂ ।**
**ಸತ್ತ್ವಾಧಿಕತ್ವಾಚ್ಛುಕ್ಲಸ್ತು ಜ್ಞಾನಂ ವಾಸಶ್ಚ ಕೀರ್ತ್ಯತೇ ॥ ೭ ॥**

**ಅಥವಾ ಚಾಸ್ಯ ಕರ್ತವ್ಯಾಃ ಪತ್ನ್ಯಶ್ಚೈವ ಚತುರ್ದಶ ।**
**ಕೀರ್ತಿರ್ಲಕ್ಷ್ಮೀರ್ಧೃತಿರ್ಮೇಧಾ ಪುಷ್ಟಿಃ ಶ್ರದ್ಧಾ ಕ್ರಿಯಾ ಮತಿಃ ॥ ೮ ॥**

---

೪-೬　ಎಡಭಾಗದಲ್ಲಿ ಸುರೂಪದಿಂದ ಕೂಡಿದ ಸುಖವನ್ನು ನಿರ್ಮಿಸಬೇಕು ವ್ಯವಸಾಯ ಮತ್ತು ಸುಖ ಇವರುಗಳ ಧರ್ಮರೂಪವಾದ ಎರಡು ಕೈಗಳೂ ತಲೆಯ ಮೇಲಿರುವಂತೆ ಚಿತ್ರಿಸಬೇಕು　ಧರ್ಮಮೂರ್ತಿಯ ಕೈಯ್ಯಲ್ಲಿರುವ ಅಕ್ಷಮಾಲೆಯು ಕಾಲದ ಸ್ವರೂಪ, ಪುಸ್ತಕವು ಆಗಮಗಳ ಸ್ವರೂಪ, ಅವನ ನಾಲ್ಕು ಮುಖಗಳೂ ಯಜ್ಞ, ಸತ್ಯ, ತಪಸ್ಸು ದಾನ ಇವುಗಳ ಸ್ವರೂಪ, ಅವನ ನಾಲ್ಕು ಭುಜಗಳೂ ದೇಶ, ಕಾಲ, ಶೌಚ, ಶುದ್ಧಿ ಇವುಗಳ ಸ್ವರೂಪ, ಅವನ ನಾಲ್ಕು ಪಾದಗಳು ಶ್ರುತಿ, ಸ್ಮೃತಿ, ಸದಾಚಾರ, ಆತ್ಮತುಷ್ಟಿ ಎಂಬ ಧರ್ಮ ಪ್ರಮಾಣಸ್ವರೂಪಗಳು

೭-೧೦　ಸತ್ತ್ವಗುಣದ ಆಧಿಕ್ಯವಿರುವುದರಿಂದ ಶುಕ್ಲವರ್ಣವುಂಟಾಗಿದೆ ಆ ಸತ್ತ್ವಗುಣದ ಕಾರ್ಯವಾದ ಜ್ಞಾನವೇ ಅದರ ವಸ್ತ್ರವಾಗಿದೆ　ಅಥವಾ ಈ ಧರ್ಮದ ಸ್ವರೂಪವನ್ನು ಚಿತ್ರಿಸುವಾಗ ಹದಿನಾಲ್ಕು ಜನ ಪತ್ನಿಯರನ್ನೂ ಚಿತ್ರಿಸಬೇಕು ಕೀರ್ತಿ, ಲಕ್ಷ್ಮೀ, ಧೃತಿ, ಮೇಧಾ, ಪುಷ್ಟಿ, ಶ್ರದ್ಧ, ಕ್ರಿಯೆ, ಮತಿ, ಬುದ್ಧಿ, ಲಜ್ಜಾ, ವಪುಃ, ಶಾಂತಿ, ಸಿದ್ಧಿ, ತುಷ್ಟಿ ಇವೇ ಆ ಧರ್ಮದ ಪತ್ನಿಯರು, ಇವೆಲ್ಲವೂ ಧರ್ಮದ ಉತ್ಪತ್ತಿಯಲ್ಲಿ ದ್ವಾರಗಳಾಗಿರುವುದರಿಂದ ಇದನ್ನು ಇಲ್ಲಿ ಹೇಳಿರುತ್ತೇನೆ

ಬುದ್ಧಿರ್ಲಜ್ಜಾ ವಪುಃ ಶಾನ್ತಿಃ ಸಿದ್ಧಿಸ್ತುಷ್ಟಿಶ್ಚತುರ್ದಶೀ ।
ದ್ವಾರಾಣ್ಯೇತಾನಿ ಧರ್ಮಸ್ಯ ಸರ್ವಾಣಿ ಕಥಿತಾನಿ ತೇ ॥ ೯ ॥

ಕಾರ್ಯಾಃ ಸರೂಪಾ ದ್ವಿಭುಜಾಶ್ಚ ಸರ್ವಾ-
ಸ್ತೇಜೋನ್ವಿತಾಸ್ತಾಶ್ಚ ಸುಭೂಷಣಾಶ್ಚ ।
ಧರ್ಮಃ ಸ್ಥಿತಃ ಸ್ಯಾದ್ಯದಿ ಚೈಕ ಏವ
ಭಾರ್ಯಾನ್ವಿತಶ್ಚೇದಥ ಚೋಪದಿಷ್ಟಃ ॥ ೧೦ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಧರ್ಮರೂಪನಿರ್ಮಾಣೋ ನಾಮ
ಸಪ್ತಸಪ್ತತಿತಮೋಽಧ್ಯಾಯಃ

---

ಈ ಧರ್ಮದ ಪತ್ನಿಯರೆಲ್ಲರನ್ನೂ ಒಂದೇ ಸಮನಾದ ರೂಪದಿಂದ ಕೂಡಿರುವಂತೆಯೂ, ಎರಡು ಭುಜಗಳಿಂದ ಕೂಡಿ ತೇಜಸ್ವಿಗಳಾಗಿರುವಂತೆಯೂ, ಅಲಂಕಾರಯುತರಾಗಿರುವಂತೆಯೂ ನಿರ್ಮಿಸಬೇಕು ಧರ್ಮದ ಮೂರ್ತಿಯೊಂದೇ ಇದ್ದಲ್ಲಿ ಈ ಪತ್ನಿಯರೊಡಗೂಡಿಯೇ ಇರಬೇಕೆಂದು ಮಹಾತ್ಮರ ಉಪದೇಶ

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಧರ್ಮರೂಪನಿರ್ಮಾಣವೆಂಬ
ಎಪ್ಪತ್ತೇಳನೆಯ ಅಧ್ಯಾಯ ಮುಗಿದಿದೆ



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಅಷ್ಟಸಪ್ತತಿತಮೋऽಧ್ಯಾಯಃ ||

**|| ಮಾರ್ಕಂಡೇಯ ಉವಾಚ ||**

**ಯ ಏವ ಭಗವಾನ್ವಿಷ್ಣುರ್ನರಸಿಂಹವಪುರ್ಧರಃ ।**
**ಧ್ಯಾನವಿದ್ಭಿಃ ಸ ಏವೋಕ್ತೋ ಜ್ಞಾನಃ ಪರಬಲಾರ್ದನಃ ॥ ೧ ॥**

**ಪೀನಸ್ಕಂಧಕಟಿಗ್ರೀವಃ ಕೃಶಮಧ್ಯಃ ಕೃಶೋದರಃ ।**
**ಸಿಂಹಾಸನೇ ನೃದೇಹಸ್ತು ನೀಲವಾಸಾಃ ಪ್ರಭಾನ್ವಿತಃ ॥ ೨ ॥**

**ಆಲೀಢಸ್ಥಾನಸಂಸ್ಥಾನಃ ಸರ್ವಾಭರಣಭೂಷಿತಃ ।**
**ಜ್ವಾಲಾಮಾಲಾಕುಲಮುಖೋ ಜ್ವಾಲಾಕೇಸರಮಂಡಲಃ ॥ ೩ ॥**

---

### ಎಪ್ಪತ್ತೆಂಟನೆಯ ಅಧ್ಯಾಯ

೧-೩ ಮಾರ್ಕಂಡೇಯರು ಹೇಳುತ್ತಾರೆ —ಪೂಜ್ಯನಾದ ಮಹಾವಿಷ್ಣುವಿನ ನರಸಿಂಹರೂಪಧಾರಿಯಾದ ಯಾವ ಅವತಾರ ಉಂಟೋ ಅದೇ ಅವತಾರವೇ ಜ್ಞಾನಾಶ್ರಯವಾಗಿಯೂ, ಸರ್ವಶತ್ರುನಾಶಕವಾಗಿಯೂ ಇರುತ್ತದೆ ಎಂದು ಧ್ಯಾನದಿಂದ ಸಾಕ್ಷಾತ್ಕರಿಸಿರುವ ಮಹನೀಯರು ಹೇಳುತ್ತಾರೆ ಅಂತಹ ನೃಸಿಂಹಾವತಾರವೂ ಸಹ ದಪ್ಪವಾದ ಭುಜ, ಕಟಿ, ಕುತ್ತಿಗೆ ಇವುಗಳಿಂದಲೂ, ಕೃಶವಾದ ನಡು ಮತ್ತು ಉದರ ಇವುಗಳಿಂದಲೂ ಕೂಡಿರಬೇಕು ನೀಲವಾದ ವಸ್ತ್ರವನ್ನು ಧರಿಸಿ ಪ್ರಭೆಯಿಂದ ಕೂಡಿ ಮನುಷ್ಯನ ಶರೀರ ಹೊಂದಿ ಸಿಂಹಾಸನದಲ್ಲಿ ಕುಳಿತಿರಬೇಕು ಸರ್ವಾಭರಣಗಳಿಂದ ಅಲಂಕೃತನಾಗಿ ಆಲೀಢವೆಂಬ ಧಾನುಷ್ಕರ ಸ್ಥಿತಿಯನ್ನು ಹೊಂದಿರಬೇಕು. ಮುಖವು ಜ್ವಾಲಾಮಾಲೆಗಳಿಂದ ಕೂಡಿ ಕೇಸರ ಸಮೂಹವೂ ಹಾಗೆಯೇ ಜ್ವಾಲಾರೂಪದಲ್ಲಿರಬೇಕು

**ಹಿರಣ್ಯಕಶಿಪೋರ್ವಕ್ಷಃ ಪಾಟಯನ್ನಖರೈಃ ಖರೈಃ ।**
**ನೀಲೋತ್ಪಲಾಭಃ ಕರ್ತವ್ಯೋ ದೇವಜಾನುಗತಸ್ತಥಾ ॥ ೪ ॥**

**ಹಿರಣ್ಯಕಶಿಪುರ್ದೈತ್ಯಸ್ತಮಜ್ಞಾನಂ ವಿದುರ್ಬುಧಾಃ ।**
**ಸಂಕರ್ಷಣಾತ್ಮಾ ಭಗವಾನಜ್ಞಾನಸ್ಯ ವಿನಾಶನಃ ॥ ೫ ॥**

**ವಾಙ್ಮನಃಕಾಯಸಂಭೂತಂ ತ್ರಿವಿಧಂ ಜಗತಾಂ ಮಲಂ ।**
**ಏತತ್ಸಂಕರ್ಷಣೋ ದೇವಃ ಸದಾ ಪಾಟಯತಿ ದ್ವಿಜ ॥ ೬ ॥**

**ಹರಿಃ ಸಂಕರ್ಷಣಾಂಶೇನ ನರಸಿಂಹವಪುರ್ಧರಃ ।**
**ತಮಸಸ್ತ್ರಿವಿಧಸ್ಯಾಪಿ ನಾಶನೋ ಜಗತಾಂ ಹರಿಃ ॥ ೭ ॥**

**ಹಾರ್ದಮೂರ್ತಿನಿಭಸ್ತಸ್ಯ ನಾನ್ಯೋ ಜಗತಿ ವಿದ್ಯತೇ ।**
**ನೃಸಿಂಹಮೂರ್ತಿರ್ದೇವಸ್ಯ ಸರ್ವಾಜ್ಞಾನವಿನಾಶಿನೀ ॥ ೮ ॥**

**ಸಿಂಹಾಸನೇ ಸುಖಾಸೀನಃ ಕಾರ್ಯೋ ವಾ ಭಗವಾನ್ ಹರಿಃ ।**
**ಗದಾಮಸ್ತಕವಿನ್ಯಸ್ತಕರದ್ವಿತಯಭೂಷಣಃ ॥ ೯ ॥**

---

೪–೮ ಹರಿತವಾದ ಉಗುರುಗಳಿಂದ ಹಿರಣ್ಯಕಶಿಪುವಿನ ವಕ್ಷಃಸ್ಥಲವನ್ನು ಭೇದಿಸುತ್ತಿರುವಂತೆಯೂ, ನೀಲೋತ್ಪಲದಂತೆ ರಮ್ಯವಾಗಿರುವ ಕಾಂತಿಯಿಂದ ಕೂಡಿಯೂ ಇರುವಂತೆ ರಚಿಸಬೇಕು ಆ ನರಸಿಂಹಮೂರ್ತಿಯ ಮಂಡಿಯ ಮೇಲಿರುವ ದೈತ್ಯನಾದ ಹಿರಣ್ಯಕಶಿಪುವನ್ನು ಅಜ್ಞಾನಸ್ವರೂಪನೆಂದು ಪ್ರಾಜ್ಞರು ಹೇಳುತ್ತಾರೆ ಈ ನರಸಿಂಹನು ಭಗವಂತನ ಸಂಕರ್ಷಣಾಂಶವಾದುದರಿಂದ ಅಜ್ಞಾನಕ್ಕೆ ನಾಶಕನಾಗಿರುತ್ತಾನೆ ಜಗತ್ತಿನಲ್ಲಿರುವ ಜಂತುಗಳಿಗೆ ವಾಕ್ಕು, ಮನಸ್ಸು, ಮತ್ತು ದೇಹ ಇವುಗಳಿಂದ ಉಂಟಾಗುವ ಮೂರು ವಿಧವಾದ ದೋಷಗಳನ್ನೂ ಈ ಸಂಕರ್ಷಣ ಮೂರ್ತಿಯು ಯಾವಾಗಲೂ ನಾಶಮಾಡುತ್ತಿರುತ್ತಾನೆ ಅಜ್ಞಾನಕ್ಕೆ ಕಾರಣವಾದ ಮೂರು ವಿಧವಾದ ತಮೋಗುಣಗಳನ್ನೂ ನಾಶಮಾಡಲು ಹರಿಯೇ ಸಂಕರ್ಷಣಾಂಶದಿಂದ ನರಸಿಂಹದೇಹಧಾರಿಯಾಗಿರುತ್ತಾನ ಧ್ಯಾನದಿಂದ ಹೃದಯ ಗುಹೆಯಲ್ಲಿ ವಾಸಿಸಲು ಇವನಿಗಿಂತ ಬೇರೆಯಾದ ಮೂರ್ತಿಯು ಮತ್ತಾವುದೂ ಇಲ್ಲ ಪರಮಾತ್ಮನ ಈ ನೃಸಿಂಹಮೂರ್ತಿಯು ಎಲ್ಲಾ ವಿಧವಾದ ಅಜ್ಞಾನಕ್ಕೂ ನಾಶಕ ವಾಗುತ್ತದ

೯–೧೨ ಅಥವಾ ನರಸಿಂಹಮೂರ್ತಿಯನ್ನು ಸಿಂಹಾಸನದಲ್ಲಿ ಸುಖವಾಗಿ ಕುಳಿತಿರುವಂತೆ ಚಿತ್ರಿಸಬಹುದು ಅಂತಹ ಮೂರ್ತಿಯು ಜ್ವಾಲಾಮಾಲೆಗಳಿಂದ ಕೂಡಿಯೂ, ಮುಂದಿನ ಎರಡು ಕೈಗಳು ಗದೆಯ ಮೇಲ್ಭಾಗದಲ್ಲಿದ್ದು, ಉಳಿದ ಎರಡು

ಜ್ವಾಲಾಮಾಲಾಕುಲವಪುಃ ಶಂಖಪದ್ಮಧರಃ ಪ್ರಭುಃ ।
ಮೂರ್ತಿಮತ್ಪೃಥಿವೀಹಸ್ತನ್ಯಸ್ತಪಾದೋಽಥವೋತ್ಥಿತಃ || ೧೦ ||

ಶಂಖಚಕ್ರಗದಾಪದ್ಮಲಾಂಛನೈಃ ಶೋಭಿತಃ ಕರೈಃ ।
ಅಗ್ನಿಜ್ವಾಲಾಕುಲಾವರ್ತವಿಭೂಷಿತತನೂರುಹಃ || ೧೧ ||

ನರಸಿಂಹೋಽಥವಾ ಕಾರ್ಯಃ ಪ್ರಭಾಮಂಡಲದುರ್ದೃಶಃ ।
ಸರ್ವಾಭರಣಸಂಪನ್ನಃ ಕಾರ್ಯೋ ಭೂಷಣವರ್ಜಿತಃ || ೧೨ ||

ಜ್ಞಾನಂ ನೃಸಿಂಹೋ ಜಗತಾಮಧೀಶ-
ಸ್ತೇಜೋನಿವಾಸೋಽಂಬರಸನ್ನಿಕಾಶಃ ।
ರೂಪಂ ಮಯೈತತ್ತ್ರಿವಿಧಂ ಪ್ರದಿಷ್ಟಂ
ತಸ್ಯಾಪ್ರಮೇಯಸ್ಯ ಜನಾರ್ದನಸ್ಯ || ೧೩ ||

ಇತಿ ಶ್ರೀವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ನೃಸಿಂಹರೂಪನಿರ್ಮಾಣೋ
ನಾಮಾಷ್ಟಸಪ್ತತಿತಮೋಽಧ್ಯಾಯಃ

---

ಕೈಗಳಲ್ಲಿ ಶಂಖ ಮತ್ತು ಪದ್ಮಗಳನ್ನು ಧರಿಸಿಯೂ ಇರಬೇಕು. ಅಥವಾ ನಿಂತಿರುವಂತೆಯೇ ನರಸಿಂಹಮೂರ್ತಿಯನ್ನು ರಚಿಸಬಹುದು. ಹಾಗೆ ನಿಂತಿರುವ ಮೂರ್ತಿಯು ಶರೀರಧಾರಿಣಿಯಾದ ಭೂದೇವಿಯ ಹಸ್ತಗಳಲ್ಲಿ ಒಂದು ಪಾದವನ್ನಿಟ್ಟಿರಬೇಕು. ಶಂಖ, ಚಕ್ರ, ಗದಾ, ಪದ್ಮಗಳಿಂದ ಕೂಡಿರುವ ನಾಲ್ಕು ಕೈಗಳಿಂದ ಶೋಭಿಸುತ್ತಿರಬೇಕು. ದೇಹದ ಪ್ರತಿಯೊಂದು ರೋಮಕೂಪವೂ ಅಗ್ನಿಜ್ವಾಲೆಗಳಿಂದ ಆಕುಲವಾಗಿರಬೇಕು. ಪ್ರಭಾಮಂಡಲದಿಂದ ಕೂಡಿ ನೋಡಲಶಕ್ಯನಾಗಿರಬೇಕು. ಈ ಮೂರ್ತಿಯು ಆಭರಣಗಳಿಂದ ಕೂಡಿಯಾದರೂ ಆಭರಣವರ್ಜಿತವಾಗಿಯಾದರೂ ಇರಬಹುದು. ಈ ನೃಸಿಂಹಮೂರ್ತಿಯು ಆಕಾಶದಂತೆ ಸರ್ವವ್ಯಾಪಕನಾಗಿಯೂ, ಜಗತ್ಪತಿಯಾಗಿಯೂ, ತೇಜೋನಿಧಿಯಾಗಿಯೂ, ಜ್ಞಾನಸ್ವರೂಪನಾಗಿಯೂ ಇರುತ್ತಾನೆ. ಅನದೃಶನಾದ ಆ ಜನಾರ್ದನನ ಈ ವಿಧವಾದ ಮೂರು ರೂಪಗಳನ್ನೂ ನಿನಗೆ ಹೇಳಿರುತ್ತೇನೆ.

ಇಲ್ಲಿಗೆ ಶ್ರೀವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ನೃಸಿಂಹರೂಪನಿರ್ಮಾಣವೆಂಬ
ಎಪ್ಪತ್ತೆಂಟನೆಯ ಅಧ್ಯಾಯ ಮುಗಿದಿದ

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಏಕೋನಾಶೀತಿತಮೋಽಧ್ಯಾಯಃ ||

|| ಮಾರ್ಕಂಡೇಯ ಉವಾಚ ||

ಐಶ್ವರ್ಯಮನಿರುದ್ಧಸ್ತು ವರಾಹೋ ಭಗವಾನ್ ಹರಿಃ ।
ಐಶ್ವರ್ಯಶಕ್ತ್ಯಾ ದಂಷ್ಟ್ರಾಗ್ರಸಮುದ್ಧೃತವಸುಂಧರಃ || ೧ ||

ನೃವರಾಹೋಽಥವಾ ಕಾರ್ಯಃ ಶೇಷೋಪರಿಗತಃ ಪ್ರಭುಃ ।
ಶೇಷಶ್ಚತುರ್ಭುಜಃ ಕಾರ್ಯಶ್ಚಾರುರತ್ನಫಣಾನ್ವಿತಃ || ೨ ||

ಆಶ್ಚರ್ಯೋತ್ಫುಲ್ಲನಯನೋ ದೇವೀವೀಕ್ಷಣತತ್ಪರಃ ।
ಕರ್ತವ್ಯೌ ಸೀರಮುಸಲೌ ಕರಯೋಸ್ತಸ್ಯ ಯಾದವ || ೩ ||

---

### ಎಪ್ಪತ್ತೊಂಭತ್ತನೆಯ ಅಧ್ಯಾಯ.

೧-೪ ಮಾರ್ಕಂಡೇಯರು ಹೇಳುತ್ತಾರೆ —ವರಾಹರೂಪಿಯಾದ ಮಹಾವಿಷ್ಣುವು ಅನಿರುದ್ಧನ ಸ್ವರೂಪ ಅವನು ಐಶ್ವರ್ಯಪ್ರದನಾದುದರಿಂದ ತನ್ನ ಐಶ್ವರ್ಯಶಕ್ತಿಯಿಂದ ಭೂಮಿಯನ್ನು ಕೋರೆದಾಡೆಗಳಿಂದ ಎತ್ತಿದನು ಆದುದರಿಂದ ಶೇಷವಾಹನನಾದ ನರವರಾಹಮೂರ್ತಿಯನ್ನೂ ರಚಿಸಬೇಕು ಶೇಷನು ಚತುರ್ಭುಜಗಳಿಂದ ಕೂಡಿ ಒಳ್ಳೆಯ ರತ್ನಗಳಿಂದ ಕೂಡಿರುವ ಹೆಡೆಯುಳ್ಳವನಾಗಿರಬೇಕು ಆಶ್ಚರ್ಯದಿಂದ ನೇತ್ರವಿಕಾಸ ಹೊಂದಿಯೂ, ದೇವಿಯ ದರ್ಶನದಲ್ಲಿ ಆಸಕ್ತನಾಗಿಯೂ ಇರಬೇಕು ಅವನ ಎರಡು ಕೈಗಳಲ್ಲಿ ನೇಗಿಲು ಮತ್ತು ಮುಸಲಾಯುಧಗಳಿರಬೇಕು ಸರ್ಪಭೂಷಣನಾಗಿದ್ದು ಮುಂದಿನ ಎರಡು ಕೈಗಳೂ

**ಸರ್ಪಭೂಷಶ್ಚ ಕರ್ತವ್ಯಸ್ತಥೈವ ರಚಿತಾಂಜಲಿಃ ।**
**ಆಲೀಢಸ್ಥಾನಸಂಸ್ಥಾನಸ್ತತ್ಪೃಷ್ಠೇ ಭಗವಾನ್ ಭವೇತ್ ॥ ೪ ॥**

**ಸವ್ಯೇಽರತ್ನಿಗತಾ ತಸ್ಯ ಯೋಷಿದ್ರೂಪಾ ವಸುಂಧರಾ ।**
**ನಮಸ್ಕಾರಪರಾ ತಸ್ಯ ಕರ್ತವ್ಯಾ ದ್ವಿಭುಜಾ ಶುಭಾ ॥ ೫ ॥**

**ಯಸ್ಮಿನ್ ಭುಜೇ ಧರಾ ದೇವೀ ತತ್ರ ಶಂಖಃ ಕರೇ ಭವೇತ್ ।**
**ಅನ್ಯೇ ತಸ್ಯ ಕರಾಃ ಕಾರ್ಯಾಃ ಪದ್ಮಚಕ್ರಗದಾಧರಾಃ ॥ ೬ ॥**

**ಹಿರಣ್ಯಾಕ್ಷಶಿರಶ್ಛೇದಶ್ಚಕ್ರೋದ್ಯತಕರೋಽಥವಾ ।**
**ಶೂಲೋದ್ಯತಹಿರಣ್ಯಾಕ್ಷಸಮ್ಮುಖೋ ಭಗವಾನ್ ಭವೇತ್ ॥ ೭ ॥**

**ಮೂರ್ತಿಮಂತಮನ್ಯೈಶ್ವರ್ಯಂ ಹಿರಣ್ಯಾಕ್ಷಂ ವಿದುರ್ಬುಧಾಃ ।**
**ಐಶ್ವರ್ಯೇಣ ವರಾಹೇಣ ಸ ನಿರಸ್ತೋಽರಿಮರ್ದನಃ ॥ ೮ ॥**

---

ಅಂಜಲಿಬಂಧದಿಂದ ಕೂಡಿರಬೇಕು ಅವನ ಬೆನ್ನಿನ ಮೇಲೆ ಆಲೀಢವೆಂಬ ಧಾನುಷ್ಕರ ಸ್ಥಿತಿಯಿಂದ ಭಗವಂತನು ಇರಬೇಕು.

೫-೮ ವರಾಹರೂಪಿಯಾದ ಆ ಹರಿಯು ನೀಡಿದ ಕಿರುಬೆರಳುಳ್ಳ ಎಡಹಸ್ತದಲ್ಲಿ ಸ್ತ್ರೀರೂಪದಿಂದಿರುವ ಭೂದೇವಿ ಇರಬೇಕು ಭುಜದ್ವಯವುಳ್ಳ ಆ ಭೂದೇವಿಯು ನಮಸ್ಕಾರಾಸಕ್ತಳಾಗಿರಬೇಕು. ಯಾವ ಭುಜದಲ್ಲಿ ಭೂದೇವಿ ಇರುವಳೋ ಆ ಕೈಯ್ಯಿನಲ್ಲಿ ಶಂಖವಿರಬೇಕು ಇತರ ಕೈಗಳು ಪದ್ಮ, ಚಕ್ರ ಗದೆ ಇವುಗಳನ್ನು ಧರಿಸಿರಬೇಕು ಆ ಹರಿಯು ಎದುರಿಗೆ ಹಿರಣ್ಯಾಕ್ಷನ ಶಿರಚ್ಛೇದವನ್ನಾಗಲೀ ಅಥವಾ ಹಿರಣ್ಯಾಕ್ಷನ ಎದುರಿಗೆ ಚಕ್ರವನ್ನು ಧರಿಸಿ ಕೈಯೆತ್ತಿ ನಿಂತಿರುವ ಹರಿಯನ್ನಾಗಲೀ ಅಥವಾ ಶೂಲವನ್ನು ಧರಿಸಿ ಹರಿಯು ಎದುರಿಗೆ ನಿಂತಿರುವ ಹಿರಣ್ಯಾಕ್ಷನನ್ನಾಗಲೀ ಚಿತ್ರಿಸಬೇಕು ಹಿರಣ್ಯಾಕ್ಷನು ಅನ್ಯೈಶ್ವರ್ಯದ ಸ್ವರೂಪವೆಂದು ಪ್ರಾಜ್ಞರು ಹೇಳುತ್ತಾರೆ ಐಶ್ವರ್ಯಸ್ವರೂಪನಾದ ವರಾಹಮೂರ್ತಿಯು ಬಲಶಾಲಿಯಾದ ಅವನನ್ನು ನಾಶಪಡಿಸಿದನು

ನೃವರಾಹೋಽಥವಾ ಕಾರ್ಯೋ ಧ್ಯಾನೇ ಕಪಿಲವತ್ ಸ್ಥಿತಃ ।
ದ್ವಿಭುಜಸ್ತ್ವಥವಾ ಕಾರ್ಯಃ ಪಿಂಡನಿರ್ವಹಣೋದ್ಯತಃ ॥ ೯ ॥

ಸಮಗ್ರಕ್ರೋಡರೂಪೋ ವಾ ಬಹುದಾನವಮಧ್ಯಗಃ ।
ನೃವರಾಹೋ ವರಾಹೋ ವಾ ಕರ್ತವ್ಯಃ ಕ್ಷ್ಮಾವಿಧಾರಣೇ ॥ ೧೦ ॥

ಐಶ್ವರ್ಯಯೋಗೋದ್ಧೃತ ಸರ್ವಲೋಕಃ
ಕಾರ್ಯೋಽನಿರುದ್ಧೋ ಭಗವಾನ್ ವರಾಹಃ ।
ರುದ್ಧಾ ನ ಯಸ್ಯ ಕ್ವಚಿದೇವಶಕ್ತಿಃ
ಸಮಸ್ತ ಪಾಪಾಪಹರಸ್ಯ ರಾಜನ್ ॥ ೧೧ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ವರಾಹರೂಪನಿರ್ಮಾಣೋ
ನಾಮೈಕೋನಾಶೀತಿತಮೋಽಧ್ಯಾಯಃ

೯–೧೧ ಅಥವಾ ನೃವರಾಹನನ್ನು ಕಪಿಲಋಷಿಯಂತೆ ಧ್ಯಾನಾಸಕ್ತನಾಗಿರುವಂತೆ ರಚಿಸಬಹುದು ಅಥವಾ ಭುಜದ್ವಯದಿಂದ ಕೂಡಿ ಪಿತೃಪಿಂಡಗಳನ್ನು ಸಾರ್ಥಕಗೊಳಿಸುವ ರೂಪದಿಂದ ನಿರ್ಮಿಸಬಹುದು ಅನೇಕ ದಾನವರ ಮಧ್ಯದಲ್ಲಿರುವ ಕೇವಲ ವರಾಹರೂಪದಿಂದಲಾದರೂ ರಚಿಸಬಹುದು ಭೂಮಿಯನ್ನು ಧರಿಸಿರುವ ಮೂರ್ತಿಯು ನರವರಾಹರೂಪದಿಂದಲಾಗಲೀ, ವರಾಹರೂಪದಿಂದಲಾಗಲೀ ಇರಬಹುದು ಐಶ್ವರ್ಯಯೋಗದಿಂದ ಸರ್ವಲೋಕಗಳನ್ನೂ ಉದ್ಧರಿಸಿದ ಅನಿರುದ್ಧಸ್ವರೂಪನಾದ ವರಾಹಮೂರ್ತಿಯನ್ನು ಈ ರೀತಿ ನಿರ್ಮಿಸಬೇಕು ಸರ್ವಪಾಪನಾಶಕನಾದ ಆ ವರಾಹಮೂರ್ತಿಯ ಶಕ್ತಿಯು ಯಾವ ವಿಷಯದಲ್ಲೂ ಕುಂಠಿತವಾಗುವ ಸಂಭವವೇ ಇರುವುದಿಲ್ಲ

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರ ಸಂವಾದದಲ್ಲಿ ವರಾಹರೂಪನಿರ್ಮಾಣವೆಂಬ
ಎಪ್ಪತ್ತೊಂಭತ್ತನೆಯ ಅಧ್ಯಾಯ ಮುಗಿದಿದೆ



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಅಶೀತಿತಮೋಽಧ್ಯಾಯಃ ||

**|| ವಜ್ರ ಉವಾಚ ||**

**ಅಥಾಶ್ವಶಿರಸೋ ರೂಪಂ ವಿಷ್ಣೋರಮಿತ ತೇಜಸಃ |**
**ಶ್ರೋತುಮಿಚ್ಛಾಮ್ಯನೇನೈವ ಪ್ರಸಂಗೇನ ಮಹಾಭುಜ || ೧ ||**

**|| ಮಾರ್ಕಂಡೇಯ ಉವಾಚ ||**

**ಮೂರ್ತಿಮತ್ಪೃಥಿವೀಪಾಲ ಹಸ್ತಪಾದಸ್ಮಿತಚ್ಛವಿಃ |**
**ನೀಲಾಂಬರಧರಃ ಕಾರ್ಯೋ ದೇವೋ ಹಯಶಿರೋಧರಃ || ೨ ||**

**ವಿದ್ಧಿ ಸಂಕರ್ಷಣಾಂಗಂ ವೈ ದೇವಂ ಹಯಶಿರೋಧರಂ |**
**ಕರ್ತವ್ಯೋಽಷ್ಟಭುಜೋ ದೇವಸ್ತತ್ಕರೇಷು ಚತುರ್ಷ್ವಥ || ೩ ||**

---

### ಎಂಭತ್ತನೆಯ ಅಧ್ಯಾಯ

೧-೫ ವಜ್ರನು ಪ್ರಶ್ನೆಮಾಡುತ್ತಾನೆ — ಮಹಾತ್ಮನಾದ ವಿಷ್ಣುವಿನ ಹಯಗ್ರೀವಾವತಾರದ ಸ್ವರೂಪವನ್ನು ಈ ಪ್ರಸಂಗದಲ್ಲಿಯೇ ತಮ್ಮಿಂದ ತಿಳಿಯಲು ಆಶಿಸುತ್ತೇನೆ ಮಾರ್ಕಂಡೇಯರು ಹೇಳುತ್ತಾರೆ —ಸುಕುಮಾರವಾದ ಹಸ್ತ, ಪಾದ, ಮಂದಹಾಸ ಇವುಗಳಿಂದ ಕೂಡಿ, ನೀಲವಸ್ತ್ರವನ್ನು ಧರಿಸಿರುವಂತೆ ಹಯಗ್ರೀವಮೂರ್ತಿಯನ್ನು ರಚಿಸಬೇಕು ಈ ಹಯಗ್ರೀವಮೂರ್ತಿಯು ಸಂಕರ್ಷಣನೆಂಬ ವಾಸುದೇವನ ರೂಪಾಂತರ ಹಯಗ್ರೀವನನ್ನು ಎಂಟು ಭುಜಗಳಿಂದ ಕೂಡಿರುವಂತೆ ರಚಿಸಬೇಕು ಅವನ ನಾಲ್ಕು ಕೈಗಳಲ್ಲಿ ಶಂಖಚಕ್ರಗಧಾಪದ್ಮಗಳು ಅವುಗಳ ಆಕಾರಕ್ಕೆ ತಕ್ಕಂತೆ ರಚಿಸಿರಬೇಕು ಉಳಿದ ನಾಲ್ಕು ಕೈಗಳೂ ನಾಲ್ಕು ವೇದಗಳನ್ನು ತಲೆಯ ಮೇಲೆ ಧರಿಸಿರುವಂತಿರಬೇಕು ಆ ಮೂರ್ತಿಯು

ಶಂಖಚಕ್ರಗದಾಪದ್ಮಾನ್ಸಾಕಾರಾನ್ಕಾರಯೇದ್ಬುಧಃ ।
ಚತ್ವಾರಶ್ಚ ಕರಾಃ ಕಾರ್ಯಾ ವೇದಾನಾಂ ದೇಹಧಾರಿಣಾಂ ॥ ೪ ॥

ದೇವೇನ ಮೂರ್ಧ್ನಿ ವಿನ್ಯಸ್ತಾ ಸರ್ವಾಭರಣಧಾರಿಣಾ ।
ಅಶ್ವಗ್ರೀವೇನ ದೇವೇನ ಪುರಾ ವೇದಾಃ ಸಮುದ್ಧೃತಾಃ ॥ ೫ ॥

ವೇದಾ ಹೃತಾ ದಾನವಪುಂಗವಾಭ್ಯಾಂ
ರಸಾತಲಾದ್ದೇವವರೇಣ ತೇನ ।
ಸಮುದ್ಧೃತಾ ಯಾದವವಂಶಮುಖ್ಯ
ತುರಂಗಮೂರ್ಧ್ನಾ ಪುರುಷೋತ್ತಮೇನ ॥ ೬ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಹಯಗ್ರೀವರೂಪನಿರ್ಮಾಣೋ ನಾಮ
ಅಶೀತಿತಮೋಽಧ್ಯಾಯಃ

---

ಎಲ್ಲಾ ಆಭರಣಗಳನ್ನೂ ಧರಿಸಿರಬೇಕು. ಹಯಗ್ರೀವರೂಪಿಯಾದ ದೇವನಿಂದ ಪೂರ್ವದಲ್ಲಿ ವೇದಗಳು ಉದ್ಧರಿಸಲ್ಪಟ್ಟವು (ಮಧುಕೈಟಭರೆಂಬ) ದಾನವರಿಂದ ಪೂರ್ವದಲ್ಲಿ ವೇದಗಳು ಅಪಹರಿಸಲ್ಪಟ್ಟವು ಅಂತಹ ವೇದಗಳನ್ನು ಪಾತಾಲ ಲೋಕದಿಂದ ಪುರುಷೋತ್ತಮನಾದ ಈ ಹಯಗ್ರೀವನೇ ಉದ್ಧರಿಸಿದನು

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯ ಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಹಯಗ್ರೀವರೂಪನಿರ್ಮಾಣವೆಂಬ
ಎಂಭತ್ತನೆಯ ಅಧ್ಯಾಯ ಮುಗಿದಿದೆ



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಏಕಾಶೀತಿತಮೋಽಧ್ಯಾಯಃ ||

**|| ವಜ್ರ ಉವಾಚ ||**

**ಪದ್ಮನಾಭಸ್ಯ ಮೇ ರೂಪಂ ಪ್ರಬ್ರೂಹಿ ಜಗತಾಂ ಪತೇಃ |**
**ಯತ್ರಾಸ್ಯಪದ್ಮಸಂಭೂತೋ ದೇವದೇವಃ ಪಿತಾಮಹಃ || ೧ ||**

**|| ಮಾರ್ಕಂಡೇಯ ಉವಾಚ ||**

**ಜಲಮಧ್ಯಗತಃ ಕಾರ್ಯಃ ಶೇಷಃ ಪನ್ನಗದರ್ಶನಃ |**
**ಫಣಪುಂಜಮಹಾರತ್ನದುರ್ನಿರೀಕ್ಷ್ಯ ಶಿರೋಧರಃ || ೨ ||**

**ದೇವದೇವಸ್ತು ಕರ್ತವ್ಯಸ್ತತ್ರ ಸುಪ್ತಶ್ಚತುರ್ಭುಜಃ |**
**ಏಕಃ ಪಾದೋಽಸ್ಯ ಕರ್ತವ್ಯೋ ಲಕ್ಷ್ಮ್ಯುತ್ಸಂಗತಃ ಪ್ರಭೋಃ || ೩ ||**

---

### ಎಂಭತ್ತೊಂದನೆಯ ಅಧ್ಯಾಯ.

೧-೪ ವಜ್ರನು ಪ್ರಶ್ನೆಮಾಡುತ್ತಾನೆ —ಯಾವ ಪದ್ಮನಾಭಮೂರ್ತಿಯ ನಾಭಿಪದ್ಮದಿಂದ ದೇವಶ್ರೇಷ್ಠನಾದ ಬ್ರಹ್ಮನು ಉದ್ಭವಿಸಿದನೋ ಅಂತಹ ಜಗತ್ಪತಿಯಾದ ಪದ್ಮನಾಭಮೂರ್ತಿಯ ಸ್ವರೂಪವನ್ನು ನನಗೆ ಹೇಳಬೇಕು ಮಾರ್ಕಂಡೇಯರು ಹೇಳುತ್ತಾರೆ -ಜಲದ ಮಧ್ಯದಲ್ಲಿ ಸರ್ಪದಂತೆ ತೋರುವ ಶೇಷನನ್ನು ಮೊದಲು ನಿರ್ಮಿಸಬೇಕು ಆ ಶೇಷನು ಅನೇಕ ಹೆಡೆಗಳಲ್ಲಿರುವ ಮಹಾ ರತ್ನಗಳಿಂದ ಜ್ವಾಜಲ್ಯಮಾನವಾದ ಶಿರಸ್ಸುಳ್ಳವನಾಗಿರಬೇಕು ಆ ಶೇಷನಲ್ಲಿ ಚತುರ್ಭುಜನಾದ ಪದ್ಮನಾಭಮೂರ್ತಿಯು ಮಲಗಿರುವಂತೆ ನಿರ್ಮಿಸಬೇಕು ಅವನ ಒಂದು ಪಾದವು ಲಕ್ಷ್ಮೀದೇವಿಯ ತೊಡೆಯ ಮೇಲಿರಬೇಕು ಮತ್ತೊಂದು ಪಾದವು

ತಥಾಪರಶ್ಚ ಕರ್ತವ್ಯಃ ಶೇಷಭೋಗಾಂಕಸಂಸ್ಥಿತಃ ।
ಏಕೋ ಭುಜೋಽಸ್ಯ ಕರ್ತವ್ಯಸ್ತತ್ರ ಜಾನೌ ಪ್ರಸಾರಿತಃ ॥ ೪ ॥

ಕರ್ತವ್ಯೋ ನಾಭಿದೇಶಸ್ಥಸ್ತಥಾ ತಸ್ಯಾಪರಃ ಪರಃ ।
ತಥಾ ಚಾನ್ಯಃ ಕರಃ ಕಾರ್ಯೋ ದೇವಸ್ಯ ತು ಶಿರೋಧರೇ ॥ ೫ ॥

ಸಂತಾನಮಂಜರೀಧಾರೀ ತಥೈವಾಸ್ಯಾಪರೋ ಭವೇತ್ ।
ನಾಭೀಸರಸಿ ಸಂಭೂತೇ ಕಮಲೇ ತಸ್ಯ ಯಾದವ ॥ ೬ ॥

ಸರ್ವಪೃಥ್ವೀಮಯೇ ದೇವ್ಯಾಃ ಪ್ರಾಗ್ವತ್ಕಾರ್ಯಃ ಪಿತಾಮಹಃ ।
ನಾಲಲಗ್ನೌ ಚ ಕರ್ತವ್ಯೌ ಪದ್ಮಸ್ಯ ಮಧುಕೈಟಭೌ ॥ ೭ ॥

ನೃರೂಪಧಾರೀಣಿ ಭುಜಂಗಮಸ್ಯ
ಕಾರ್ಯಾಣ್ಯಥಾ ಸ್ತ್ರಾಣಿ ತಥಾ ಸಮೀಪೇ ।
ಏತತ್ತವೋಕ್ತಂ ಯದುಪುಂಗವಾಗ್ರ್ಯ
ದೇವಸ್ಯ ರೂಪಂ ಪರಮಸ್ಯ ತಸ್ಯ ॥ ೮ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಪದ್ಮನಾಭರೂಪನಿರ್ಮಾಣೋ ನಾಮ
ಏಕಾಶೀತಿತಮೋಽಧ್ಯಾಯಃ

---

ಶೇಷನ ದೇಹದ ಮೇಲಿರಬೇಕು ಒಂದು ಕೈಯ್ಯು ಮಂಡಿಯವರಿಗೂ ಪ್ರಸರಿಸು ವಂತಿರಬೇಕು

೫-೭ ಅವನ ಮತ್ತೊಂದು ಹಸ್ತವು ನಾಭಿದೇಶದಲ್ಲಿರುವಂತೆಯೂ, ಇನ್ನೊಂದು ಹಸ್ತವು ಕುತ್ತಿಗೆಯ ಮೇಲುಭಾಗದಲ್ಲಿರುವಂತೆಯೂ ನಿರ್ಮಿಸಬೇಕು ಮತ್ತೊಂದು ಕೈಯ್ಯಲ್ಲಿ ಸಂತಾನಮಂಜರಿಯೂ ಇರಬೇಕು ಅವನ ನಾಭಿಸರೋವರ ದಲ್ಲಿ ಸಕಲ ಪೃಥಿವೀಸ್ವರೂಪವೇ ಆದ ಪದ್ಮವು ಇದ್ದು, ಆ ಪದ್ಮದಲ್ಲಿ ಚತುರ್ಮುಖನು ಇರಬೇಕು ಆ ಪದ್ಮನಾಳದಲ್ಲಿ ಮಧುಕೈಟಭರು ಅಂಟಿಕೊಂಡಿರಬೇಕು ಅವರ ಸಮೀಪದಲ್ಲಿ ಸರ್ಪದ ಸ್ವರೂಪದಲ್ಲಿರುವ ಅನೇಕ ಅಸ್ತ್ರಗಳನ್ನು ರಚಿಸಬೇಕು ಪರಮ ಪುರುಷನಾದ ಅನಂತಪದ್ಮನಾಭನ ಸ್ವರೂಪವನ್ನು ಈ ರೀತಿ ನಿನಗೆ ಹೇಳಿರುತ್ತೇನೆ

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಪದ್ಮನಾಭರೂಪನಿರ್ಮಾಣವೆಂಬ
ಎಂಭತ್ತೊಂದನೆಯ ಅಧ್ಯಾಯವು ಮುಗಿದಿದೆ

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ದ್ವ್ಯಶೀತಿತಮೋಽಧ್ಯಾಯಃ ||

**|| ವಜ್ರ ಉವಾಚ ||**

**ಆಚಕ್ಷ್ವ ರೂಪಂ ಲಕ್ಷ್ಮ್ಯಾ ಮೇ ಭೃಗುವಂಶವಿವರ್ಧನ |**
**ಯಾ ಮಾತಾ ಸರ್ವಲೋಕಸ್ಯ ಪತ್ನೀ ವಿಷ್ಣೋರ್ಮಹಾತ್ಮನಃ || ೧ ||**

**|| ಮಾರ್ಕಂಡೇಯ ಉವಾಚ ||**

**ಹರೇಃ ಸಮೀಪೇ ಕರ್ತವ್ಯಾ ಲಕ್ಷ್ಮೀಸ್ತು ದ್ವಿಭುಜಾ ನೃಪ |**
**ದಿವ್ಯರೂಪಾಂಬುಜಕರಾ ಸರ್ವಾಭರಣಭೂಷಿತಾ || ೨ ||**

**ಗೌರೀ ಶುಕ್ಲಾಂಬರಾ ದೇವೀ ರೂಪೇಣಾಪ್ರತಿಮಾ ಭುವಿ |**
**ಪೃಥಕ್ಚತುರ್ಭುಜಾ ಕಾರ್ಯಾ ದೇವೀ ಸಿಂಹಾಸನೇ ಶುಭೇ || ೩ ||**

---

### ಎಂಭತ್ತೆರಡನೆಯ ಅಧ್ಯಾಯ

೧–೪ ವಜ್ರನು ಪ್ರಶ್ನೆಮಾಡುತ್ತಾನೆ —ಎಲೈ ಭಾರ್ಗವಶ್ರೇಷ್ಠನೇ, ಸರ್ವಲೋಕಗಳಿಗೆ ತಾಯಿಯಾಗಿಯೂ, ಮಹಾವಿಷ್ಣುವಿಗೆ ಪತ್ನಿಯಾಗಿಯೂ ಇರುವ ಲಕ್ಷ್ಮಿಯ ರೂಪವನ್ನು ಹೇಳಬೇಕು ಮಾರ್ಕಂಡೇಯರು ಹೇಳುತ್ತಾರೆ — ಲಕ್ಷ್ಮಿಯನ್ನು ವಿಷ್ಣುವಿನ ಸಮೀಪದಲ್ಲಿ ನಿರ್ಮಿಸುವಾಗ ಎರಡು ಕೈಗಳಿಂದ ಕೂಡಿರುವಂತೆ ನಿರ್ಮಿಸಬೇಕು ಅವಳು ದಿವ್ಯರೂಪಧಾರಿಣಿಯಾಗಿಯೂ, ಪದ್ಮಕರಳಾಗಿಯೂ, ಸರ್ವಾಭರಣಶೋಭಿತಳಾಗಿಯೂ ಇರಬೇಕು ಅಸದೃಶರೂಪದಿಂದ ಕೂಡಿ ಗೌರವರ್ಣದಿಂದ ಕೂಡಿ ಧವಳವಸ್ತ್ರವುಳ್ಳವಳಾಗಿರಬೇಕು ಈ ಲಕ್ಷ್ಮಿಯನ್ನು ವಿಷ್ಣುವಿನ ಸಮೀಪವಲ್ಲದ ಬೇರೆಕಡೆಯಲ್ಲಿ ನಿರ್ಮಿಸುವಾಗ ಚತುರ್ಭುಜದಿಂದ ಕೂಡಿ ಸಿಂಹಾಸನದಲ್ಲಿ ಕುಳಿತಿರುವಂತೆ ನಿರ್ಮಿಸಬೇಕು. ಸಿಂಹಾಸನದ ಮೇಲೆ ರಮ್ಯವಾದ

**ಸಿಂಹಾಸನೇऽಸ್ಯಾ ಕರ್ತವ್ಯಂ ಕಮಲಂ ಚಾರುಕರ್ಣಿಕಂ ।**
**ಅಷ್ಟಪತ್ರಂ ಮಹಾಭಾಗ ಕರ್ಣಿಕಾಯಾಂ ತು ಸಂಸ್ಥಿತಾ ॥ ೪ ॥**

**ವಿನಾಯಕವದಾಸೀನಾ ದೇವೀ ಕಾರ್ಯಾ ಮಹಾಭುಜ ।**
**ಬೃಹನ್ನಾಲಂ ಕರೇ ಕಾರ್ಯಂ ತಸ್ಯಾಶ್ಚ ಕಮಲಂ ಶುಭಂ ॥ ೫ ॥**

**ದಕ್ಷಿಣೇ ಯಾದವಶ್ರೇಷ್ಠ ಕೇಯೂರಪ್ರಾಂತಸಂಸ್ಥಿತಂ ।**
**ವಾಮೇऽಮೃತಘಟಃ ಕಾರ್ಯಃ ತಥಾ ರಾಜನ್ ಮನೋಹರಃ ॥ ೬ ॥**

**ತಧ್ಯೈವಾನ್ಯಾ ಕರೌ ಕಾರ್ಯೌ ಬಿಲ್ವಶಂಖಧರೌ ನೃಪ ।**
**ಆವರ್ಜಿತಘಟಂ ಕಾರ್ಯಂ ತತ್ಪೃಷ್ಠೇ ಕುಂಜರದ್ವಯಂ । ೭ ॥**

**ದೇವ್ಯಾಶ್ಚ ಮಸ್ತಕೇ ಪದ್ಮಂ ತಥಾ ಕಾರ್ಯಂ ಮನೋಹರಂ ।**
**ಸೌಭಾಗ್ಯಂ ತದ್ವಿಜಾನೀಹಿ ಶಂಖವೃದ್ಧಿಂ ತಥಾ ಪರಂ ॥ ೮ ॥**

**ಬಿಲ್ವಂ ಚ ಸಕಲಂ ಲೋಕಮಪಾಂಸಾರಾಮೃತಂ ತಥಾ ।**
**ಪದ್ಮಂ ಲಕ್ಷ್ಮೀಕರೇ ವಿದ್ಧಿ ವಿಭವಂ ದ್ವಿಜಪುಂಗವ ॥ ೯ ॥**

---

ಕರ್ಣಿಕೆಯಿಂದ ಕೂಡಿದ ಅಷ್ಟದಳ ಪದ್ಮವಿರಬೇಕು ಆ ಕಮಲದ ಕರ್ಣಿಕೆಯಲ್ಲಿ ವಿನಾಯಕನಂತೆ ಕುಳಿತಿರುವ ದೇವಿಯನ್ನು ನಿರ್ಮಿಸಬೇಕು

೫-೯ ಅವಳ ಕೈಯ್ಯಿನಲ್ಲಿ ಉದ್ದವಾದ ದಂಟಿನಿಂದ ಕೂಡಿದ ಕಮಲವಿರಬೇಕು ಅದೂ ಸಹ ಬಲಗೈಯ್ಯಿನಲ್ಲಿ ತೋಳು ಬಳೆಯವರಿಗೂ ವ್ಯಾಪಿಸಿರಬೇಕು ಎಡಗೈಯ್ಯಿನಲ್ಲಿ ರಮ್ಯವಾದ ಅಮೃತಕಲಶವನ್ನು ನಿರ್ಮಿಸಬೇಕು ಉಳಿದ ಎರಡು ಕೈಗಳಲ್ಲಿಯೂ ಬಿಲ್ವ ಮತ್ತು ಶಂಖಗಳಿರಬೇಕು ಆ ಲಕ್ಷ್ಮಿಯ ಹಿಂಭಾಗದಲ್ಲಿ ಅಧೋಮುಖವಾದ ಅಭಿಷೇಕ ಘಟದಿಂದ ಕೂಡಿರುವ ಎರಡು ಆನೆಗಳನ್ನು ನಿರ್ಮಿಸಬೇಕು ದೇವಿಯ ತಲೆಯ ಮೇಲೆ ಮನೋಹರವಾದ ಪದ್ಮವಿರಬೇಕು ಆ ಪದ್ಮವೇ ಸೌಭಾಗ್ಯದ ಸ್ವರೂಪವೆಂದು ತಿಳಿ ಶಂಖವೇ ಸಮೃದ್ಧಿರೂಪ, ಬಿಲ್ವವೇ ಸಕಲ ಲೋಕಸ್ವರೂಪ, ಅಮೃತವೇ ಜಲರಾಶಿಯ ಸಾರಸ್ವರೂಪ, ಆ ಲಕ್ಷ್ಮಿಯ ಕೈಯಲ್ಲಿ ಬುವ ಪದ್ಮವೇ ವಿಭವ ಸ್ವರೂಪ.

ಹಸ್ತಿದ್ವಯಂ ವಿಜಾನೀಹಿ ಶಂಖಪದ್ಮಾವುಭೌ ನಿಧೀ ।
ಸಮುತ್ಥಿತಾ ವಾ ಕರ್ತವ್ಯಾ ಶಂಖಾಂಬುಜಕರಾ ತಥಾ ॥ ೧೦ ॥

ಸಮುತ್ಥಿತಾ ಮಹಾಭಾಗಾ ಪದ್ಮೇ ಪದ್ಮಾಂತರಪ್ರಭಾ ।
ದ್ವಿಭುಜಾ ಚಾರುಸರ್ವಾಂಗೀ ಸರ್ವಾಭರಣಭೂಷಣಾ ॥ ೧೧ ॥

ದ್ವೌ ಚ ಮೌಲಿಚರೌ ಮೂರ್ಧ್ನಿ ಕಾರ್ಯೌ ವಿದ್ಯಾಧರೌ ಶುಭೌ ॥ ೧೨ ॥

ಕರಾಭ್ಯಾಂ ಮೌಲಿಲಗ್ನಾಭ್ಯಾಂ ದಕ್ಷಿಣಾಭ್ಯಾಂ ವಿರಾಜಿತೌ ।
ಕರಾಭ್ಯಾಂ ಖಡ್ಗಧಾರಿಭ್ಯಾಂ ದೇವೀವೀಕ್ಷಣತತ್ಪರೌ ॥ ೧೩ ॥

ರಾಜಶ್ರೀಃ ಸ್ವರ್ಗಲಕ್ಷ್ಮೀಶ್ಚ ಬ್ರಾಹ್ಮೀ ಲಕ್ಷ್ಮೀಸ್ತಥೈವ ಚ ।
ಜಯಲಕ್ಷ್ಮೀಶ್ಚ ಕರ್ತವ್ಯಾ ತಸ್ಯಾ ದೇವ್ಯಾಃ ಸಮೀಪಗಾಃ ॥ ೧೪ ॥

ಸರ್ವಾಃ ಸುರೂಪಾಃ ಕರ್ತವ್ಯಾಸ್ತಥಾ ಚ ಸುವಿಭೂಷಣಾಃ ॥ ೧೫ ॥

---

೧೦-೧೪ ಆನಗಳೆರಡೂ ಶಂಖಪದ್ಮರೂಪವಾದ ಎರಡು ನಿಧಿಗಳು ಅಥವಾ ನಿಂತಿರುವಂತೆಯೂ ನಿರ್ಮಿಸಬಹುದು ಹಸ್ತದ್ವಯದಿಂದ ಕೂಡಿ ಕಮಲದ ಕಾಂತಿಗೆ ಸಮಾನಳಾಗಿರಬೇಕು ಶಂಖ ಮತ್ತು ಕಮಲಗಳನ್ನು ಕೈಗಳಲ್ಲಿ ಧರಿಸಿ ಪದ್ಮದ ಮೇಲೆಯೇ ನಿಂತಿರಬೇಕು ಭುಜದ್ವಯದಿಂದ ಕೂಡಿ ಸರ್ವಾಭರಣ ಭೂಷಿತಳಾಗಿರಬೇಕು ತಲೆಯ ಮೇಲೆ ಸಂಚರಿಸುತ್ತಿರುವ ಇಬ್ಬರು ವಿದ್ಯಾಧರರನ್ನು ಮೇಲುಭಾಗದಲ್ಲಿ ಬರೆಯಬೇಕು ಆ ವಿದ್ಯಾಧರರೂ ತಲೆಯ ಮೇಲೆ ಬಲಗೈಯನ್ನು ಇಟ್ಟಿರುವಂತೆ ಶೋಭಿಸುತ್ತಿರಬೇಕು ಉಳಿದ ಎರಡು ಕೈಗಳಿಂದ ಖಡ್ಗವನ್ನು ಧರಿಸಿ ದೇವಿಯನ್ನು ವೀಕ್ಷಿಸುತ್ತಿರುವಂತಿರಬೇಕು ಆ ದೇವಿಯ ಸಮೀಪದಲ್ಲಿ ರಾಜಶ್ರೀ, ಸ್ವರ್ಗಶ್ರೀ, ಬ್ರಾಹ್ಮೀಲಕ್ಷ್ಮಿ, ಜಯಲಕ್ಷ್ಮಿ ಇವರನ್ನೂ ನಿರ್ಮಿಸಬೇಕು

೧೫-೧೬ ಆ ಲಕ್ಷ್ಮಿಗಳೆಲ್ಲರೂ ಸಮರೂಪದಿಂದ ಕೂಡಿ ಒಳ್ಳೆಯ ಆಭರಣಗಳನ್ನೂ ಧರಿಸಿರಬೇಕು. ಯಾವ ಕಮಲದಲ್ಲಿ ಲಕ್ಷ್ಮಿಯು ನಿಂತಿರುವಳೋ

ಲಕ್ಷ್ಮೀಃ ಸ್ಥಿತಾ ಸಾ ಕಮಲೇ ತು ಯಸ್ಮಿಂ-
ಸ್ತತ್ ಕೇಶವಂ ವಿದ್ಧಿ ಮಹಾನುಭಾವ ।
ವಿನಾಕೃತಾ ಸಾ ಮಧುಸೂದನೇನ
ಕ್ಷಣಂ ನ ಸಂತಿಷ್ಠತಿ ಲೋಕಮಾತಾ ॥ ೧೬ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಲಕ್ಷ್ಮೀರೂಪನಿರ್ಮಾಣೋ ನಾಮ
ದ್ವ್ಯಶೀತಿತಮೋಽಧ್ಯಾಯಃ

---

ಆ ಕಮಲದಲ್ಲಿಯೇ ಕೇಶವನಿರುವನೆಂದು ತಿಳಿ ಲೋಕಮಾತೆಯಾದ ಆ ಮಹಾ ಲಕ್ಷ್ಮಿಯು ಮಧುಸೂದನನನ್ನು ಬಿಟ್ಟು ಕ್ಷಣಕಾಲವೂ ಇರುವುದಿಲ್ಲ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಲಕ್ಷ್ಮೀರೂಪನಿರ್ಮಾಣವೆಂಬ
ಎಂಭತ್ತೆರಡನೆಯ ಅಧ್ಯಾಯ ಮುಗಿದಿದೆ

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ತ್ರ್ಯಶೀತಿತಮೋಽಧ್ಯಾಯಃ ||

**|| ವಜ್ರ ಉವಾಚ ||**

**ರೂಪೇಣ ಕೇನ ಕರ್ತವ್ಯೋ ವಿಶ್ವರೂಪಧರೋ ಹರಿಃ ।**
**ಏತಂ ಮೇ ಸಂಶಯಂ ಛಿನ್ಧಿ ತ್ವಂ ಹಿ ಸರ್ವವಿದುಚ್ಯಸೇ || ೧ ||**

**|| ಮಾರ್ಕಂಡೇಯ ಉವಾಚ ||**

**ಆದೌ ದೇವಸ್ಯ ಕರ್ತವ್ಯಾಶ್ಚತ್ವಾರೋ ವೈ ಸ್ತವೋನ್ಮುಖಾಃ ।**
**ತೇಷಾಮುಪರಿಕರ್ತವ್ಯಾಸ್ತಥಾ ಮಾಹೇಶ್ವರಾಃ ಪುನಃ || ೨ ||**

**ಈಶಾನಂ ವಕ್ತ್ರಹೀನಾಸ್ತೇ ಯಥಾ ಪ್ರೋಕ್ತಾ ಮಯಾ ಪುರಾ ।**
**ತೇಷಾಮುಪರಿ ಕರ್ತವ್ಯಾ ಮುಖ್ಯಾ ಬ್ರಾಹ್ಮೀ ಯಥೇರಿತಾ || ೩ ||**

---

### ಎಂಭತ್ತಮೂರನೆಯ ಅಧ್ಯಾಯ.

೧-೩ ವಜ್ರನು ಪ್ರಶ್ನೆಮಾಡುತ್ತಾನೆ.—ವಿಶ್ವರೂಪಧಾರಿಯಾದ ಹರಿಯನ್ನು ಎಂತಹ ರೂಪದಿಂದ ನಿರ್ಮಿಸಬೇಕು ಸರ್ವಜ್ಞನಾದ ನೀನು ನನ್ನ ಸಂಶಯವನ್ನು ಹೋಗಲಾಡಿಸಬೇಕು ಮಾರ್ಕಂಡೇಯರು ಹೇಳುತ್ತಾರೆ —ಮೊದಲು ಸ್ತುತಿಯಲ್ಲಿ ಆಸಕ್ತರಾದ ನಾಲ್ಕು ಜನರನ್ನು ನಿರ್ಮಿಸಬೇಕು ಅವರ ಮೇಲು ಭಾಗದಲ್ಲಿ ಮಾಹೇಶ್ವರರನ್ನು ನಿರ್ಮಿಸಬೇಕು. ಈಶಾನನನ್ನೂ ನಾನು ಹಿಂದೆ ಹೇಳಿರುವಂತೆ ಮುಖವಿಲ್ಲದೆ ಆ ಮಾಹೇಶ್ವರರನ್ನೂ ಬರೆಯಬೇಕು ಅದರ ಮೇಲು ಭಾಗದಲ್ಲಿ ನಾನು ಹೇಳಿರುವ ಬ್ರಾಹ್ಮೀ ಎಂಬ ಮಾತೃವನ್ನು ಬರೆಯಬೇಕು

ತತಶ್ಚಾನ್ಯಮುಖಾಃ ಕಾರ್ಯಾಃ ತಿರ್ಯಗೂರ್ಧ್ವೇ ತಥೈವ ಚ ।
ಸರ್ವೇಷಾಮಪಿ ದೇವಾನಾಂ ತಥಾನ್ಯಾನಪಿ ಕಾರಯೇತ್ ॥ ೪ ॥

ಯೇ ಮುಖಾಃ ಸತ್ತ್ವಜಾತಾನಾಂ ನಾನಾರೂಪಾ ವಿಭಾಗಶಃ ।
ಯಾವನ್ತೋ ದೃಷ್ಟಯಃ ಪ್ರೋಕ್ತಾಶ್ಚಿತ್ರಸೂತ್ರೇ ಮಹಾತ್ಮಭಿಃ ॥ ೫ ॥

ದರ್ಶನೀಯಾಸ್ತು ತಾಃ ಸರ್ವಾಸ್ತಸ್ಯ ಮೂರ್ಧಸು ಭಾಗಶಃ
ನಾನಾವಿಧಾನಿ ಸತ್ತ್ವಾನಿ ಮುಖೈರನ್ಯೈಸ್ತಥೈವ ಚ ॥ ೬ ॥

ಗ್ರಸಮಾನಃ ಸಕರ್ತವ್ಯಃ ಸರ್ವೈಃ ಸತ್ತ್ವಭಯಂಕರೈಃ ।
ಕಾರ್ಯಾಣ್ಯುದ್ಘಾಯಮಾನಾನಿ ಮುಖಾಃ ಕೇಚನ ತೇ ಶುಭಾಃ ॥ ೭ ॥

ಯಥಾಶಕ್ತ್ಯಾ ಚ ಕರ್ತವ್ಯಾಸ್ತಸ್ಯ ದೇವಸ್ಯ ಬಾಹವಃ ।
ಹಸ್ತಾನಿ ಯಾನಿ ದೃಷ್ಟಾನಿ ನೃತ್ತಶಾಸ್ತ್ರೇ ಮಹಾತ್ಮಭಿಃ ॥ ೮ ॥

ತಾನಿ ಸರ್ವಾಣಿ ಕಾರ್ಯಾಣಿ ತಸ್ಯ ದೇವಸ್ಯ ಬಾಹುಷು ।
ಹಸ್ತಾಃ ಕಾರ್ಯಾಸ್ತಥೈವಾನ್ಯೇ ಸರ್ವಾಯುಧವಿಭೂಷಣಾಃ ॥ ೯ ॥

ಯಜ್ಞದಂಡಧರಾಶ್ಚಾನ್ಯೇ ಶಿಲ್ಪಭಾಂಡಧರಾಸ್ತಥಾ ।
ಕಾಲಭಾಂಡಧರಾತ್ಚಾನ್ಯೇ ವಾದ್ಯಭಾಂಡಧರಾಃ ಪರೇ ॥ ೧೦ ॥

---

೪–೬ ಪಕ್ಕದಲ್ಲಿಯೂ, ಮೇಲುಭಾಗದಲ್ಲಿಯೂ ಅನೇಕ ಮುಖಗಳಿಂದ ಕೂಡಿದ ದೇವತೆಗಳನ್ನೂ, ಇತರರನ್ನೂ ಬರೆಯಬೇಕು ಪ್ರಪಂಚದಲ್ಲಿ ಪ್ರಾಣಿಗಳಿಗೆ ಎಷ್ಟೆಷ್ಟು ವಿಧವಾದ ಮುಖಗಳಿರುತ್ತವೆಯೋ ಮತ್ತು ಚಿತ್ರಸೂತ್ರದಲ್ಲಿ ಎಷ್ಟೆಷ್ಟು ದೃಷ್ಟಿಗಳನ್ನು ಹೇಳಲಾಗಿದೆಯೋ ಅವೆಲ್ಲವನ್ನೂ ತಲೆಯ ಮೇಲುಭಾಗದಲ್ಲಿ ತೋರಿಸಬೇಕು ನಾನಾವಿಧವಾದ ಪ್ರಾಣಿಗಳನ್ನು ಭಯಂಕರವಾಗಿಯೂ, ನಾನಾ ಮುಖಗಳಾಗಿಯೂ ಇರುವ ಪ್ರಾಣಿಗಳಿಂದ ಭಕ್ಷಿಸಲ್ಪಡುತ್ತಿರುವಂತೆ ಬರೆಯಬೇಕು

೭–೧೦ ಆ ಮುಖಗಳಲ್ಲಿ ಕೆಲವು ಚಲಿಸುತ್ತಿರುವಂತೆ ರಚಿಸಬೇಕು ಆ ವಿಶ್ವರೂಪಿಗೆ ಅನೇಕ ಬಾಹುಗಳನ್ನೂ ಯಥಾಶಕ್ತಿ ರಚಿಸಬೇಕು ಆ ಬಾಹುಗಳಲ್ಲಿ ನೃತ್ತಶಾಸ್ತ್ರದಲ್ಲಿ ಹೇಳಿರುವ ಹಸ್ತವಿನ್ಯಾಸಗಳನ್ನೆಲ್ಲಾ ಸಾಂಗವಾಗಿ ರಚಿಸಬೇಕು ಇತರ ಎಲ್ಲಾ ಹಸ್ತಗಳೂ ನಾನಾವಿಧ ಆಯುಧಗಳಿಂದ ಶೋಭಿಸುತ್ತಿರಬೇಕು ಕೆಲವು ಯಜ್ಞದಂಡವನ್ನು ಧರಿಸಿಯೂ, ಕೆಲವು ಶಿಲ್ಪಭಾಂಡವನ್ನು ಧರಿಸಿಯೂ, ಕೆಲವು ಕಾಲಭಾಂಡವನ್ನು ಧರಿಸಿಯೂ, ಕೆಲವು ವಾದ್ಯ ಭಾಂಡವನ್ನು ಧರಿಸಿಯೂ ಇರಬೇಕು

ರೂಪಮನ್ಯತ್ಪ್ರಕರ್ತವ್ಯಂ ವೈಕುಂಠವದತೋಽಚ್ಯುತೇ ।
ತತ್ರಾಪಿ ಗಾತ್ರಗಾಸ್ತಸ್ಯ ದರ್ಶಯೇಚ್ಚಿತ್ರಕರ್ಮಣಾ ॥ ೧೧ ॥

ತ್ರೈಲೋಕ್ಯಂ ಸಕಲಂ ರಾಜನ್ಯಥಾ ಶಾಸ್ತ್ರಾನುಸಾರತಃ ।
ದರ್ಶನೀಯಾನಿ ವರ್ಣಾನಿ ಸರ್ವಾಣ್ಯೇವ ಮಹಾತ್ಮನಃ ॥ ೧೨ ॥

ಬಹುರೂಪಸ್ಯ ದೇವಸ್ಯ ಬಹುಮಸ್ತಕಗಾನಿ ತು ॥ ೩ ॥

ಏವಂ ಹಿ ಶಕ್ತ್ಯಾ ಜಗತಾಂ ಪ್ರಧಾನಃ
ಸಮಗ್ರರೂಪೋ ಭಗವಾನ್ ಹಿ ಕಾರ್ಯಃ ।
ಕಾರ್ತ್ಸ್ನ್ಯೇನ ರೂಪಂ ಪುರುಷೋತ್ತಮಸ್ಯ
ವಕ್ತುಂ ನ ಶಕ್ಯಂ ಕುತ ಏವ ಕರ್ತುಂ ॥ ೧೪ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ವಿಶ್ವರೂಪನಿರ್ಮಾಣೋ ನಾಮ
ತ್ರ್ಯಶೀತಿತಮೋಽಧ್ಯಾಯಃ

---

೧೧–೧೪ ವೈಕುಂಠದಲ್ಲಿರುವ ಅಚ್ಯುತನ ರೂಪದಂತೆ ಬೇರೆಯಾದ ಮತ್ತೊಂದು ರೂಪವನ್ನೂ ಬರೆಯಬೇಕು ಅವನ ಗಾತ್ರಗಳ ವರ್ಣವಿಶೇಷವನ್ನೂ ಚಿತ್ರಕರ್ಮದಿಂದ ತೋರಿಸಬೇಕು ಆ ಮಹಾತ್ಮನ ಅವಯವಕ್ಕೆ ಸೇರಿರುವ ಮೂರು ಲೋಕದ ಎಲ್ಲಾ ವಸ್ತುಗಳನ್ನೂ ಶಾಸ್ತ್ರದಲ್ಲಿ ಹೇಳಿರುವಂತೆ ಆಯಾಯ ವರ್ಣಗಳಿಂದ ತೋರಿಸಬೇಕು ಆ ದೇವನ ಬಹು ರೂಪಗಳಂತೆ ಬಹು ವಸ್ತುಗಳೂ ಆಯಾಯ ವರ್ಣಗಳಿಂದ ಕೂಡಿರಬೇಕು ಈ ರೀತಿ ಜಗತ್ಪ್ರಧಾನನಾದ ಹರಿಯನ್ನು ಸರ್ವ ಶಕ್ತಿಗಳಿಂದ ಕೂಡಿಯೂ, ಸಮಗ್ರ ರೂಪದಿಂದ ಕೂಡಿಯೂ ಇರುವಂತೆ ರಚಿಸಬೇಕು ಅವನ ಸಮಗ್ರ ರೂಪವನ್ನು ಹೇಳುವುದಕ್ಕೇ ಸಾಧ್ಯವಾಗದಿರುವಾಗ ಅವನ್ನು ನಿರ್ಮಿಸಲು ಹೇಗೆ ತಾನೇ ಸಾಧ್ಯವಾದೀತು

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ವಿಶ್ವರೂಪನಿರ್ಮಾಣವೆಂಬ ಎಂಭತ್ತಮೂರನೆಯ
ಅಧ್ಯಾಯ ಮುಗಿದಿದೆ

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಚತುರಶೀತಿತಮೋಽಧ್ಯಾಯಃ ||

|| ಮಾರ್ಕಂಡೇಯ ಉವಾಚ ||

**ಏಡೂಕರೂಪನಿರ್ಮಾಣಂ ಶೃಣುಷ್ವ ಗದತೋ ಮಮ |**
**ಏಡೂಕಪೂಜನಾತ್ಪೂಜಾ ಕೃತಾಸ್ಯ ಜಗತೋ ಭವೇತ್ || ೧ ||**

**ಭದ್ರಪೀಠಂ ಬುಧಃ ಕುರ್ಯಾತ್ಸೋಪಾನೈಃ ಶೋಭನೈರ್ಯುತಂ |**
**ಚತುರ್ಭಿರ್ಯಾದವಶ್ರೇಷ್ಠ ಯಥಾದಿಶಮರಿಂದಮ || ೨ ||**

**ತಸ್ಯೋಪರಿಷ್ಟಾದಪರಂ ಭದ್ರಪೀಠಂ ತು ಕಾರಯೇತ್ |**
**ತಸ್ಯೋಪರಿಷ್ಟಾದಪರಂ ತಾದೃಗ್ವಿಧಮರಿಂದಮ || ೩ ||**

---

### ಎಂಭತ್ತನಾಲ್ಕನೆಯ ಅಧ್ಯಾಯ

೧-೩ ಮಾರ್ಕಂಡೇಯರು ಹೇಳುತ್ತಾರೆ --ಏಡೂಕವೆಂಬ ದೇವತಾವಿಶೇಷದ ರೂಪನಿರ್ಮಾಣವನ್ನು ಹೇಳುತ್ತೇನೆ ಅದನ್ನು ನನ್ನಿಂದ ಕೇಳಿ ತಿಳಿದುಕೋ, ಈ ದೇವತೆಯ ಪೂಜೆಯಿಂದ ಜಗತ್ತನ್ನೇ ಪೂಜಿಸಿದಂತಾಗುತ್ತದೆ ಮೊದಲು ರಮ್ಯವಾದ ಸೋಪಾನಗಳಿಂದ ಕೂಡಿದ ಭದ್ರ ಪೀಠವನ್ನು ರಚಿಸಬೇಕು ಆ ನಾಲ್ಕು ಸೋಪಾನಗಳು ನಾಲ್ಕು ದಿಕ್ಕುಗಳಿಗೂ ಅಭಿಮುಖವಾಗಿರಬೇಕು ಅದರ ಮೇಲೆ ಮತ್ತೊಂದು ಭದ್ರಪೀಠವನ್ನೂ ಅದರ ಮೇಲೆ ಅದೇ ರೀತಿಯಾದ ಇನ್ನೊಂದು ಭದ್ರಪೀಠವನ್ನು ರಚಿಸಬೇಕು

**ತಸ್ಯೋಪರಿಷ್ಟಾತ್ಕರ್ತವ್ಯಂ ಲಿಂಗರೂಪಂ ವಿಜಾನತಾ ।**
**ತತ್ತು ತತ್ರಾಪಿ ಕರ್ತವ್ಯಂ ಲಿಂಗರೇಖಾವಿರಾಜಿತಂ ॥ ೪ ॥**

**ತಸ್ಯ ಮಧ್ಯೇ ಧ್ರುವಾಂ ಯಷ್ಟಿಂ ಚತುರಸ್ರಾಂ ತು ಕಾರಯೇತ್ ।**
**ತಸ್ಯೋಪರಿಷ್ಟಾತ್ಕರ್ತವ್ಯಾ ಭೂಮಿಕಾಸ್ತು ತ್ರಯೋದಶ ॥ ೫ ॥**

**ತಸ್ಯೋಪರಿಷ್ಟಾತ್ಕರ್ತವ್ಯಂ ತಥೈವಾಮಲತಾರಕಂ ।**
**ತಸ್ಯೋಪರಿ ಪುನರ್ಯಷ್ಟಿಃ ಕಾರ್ಯಾ ರಾಜನ್ ಸುವರ್ತುಲಾ ॥ ೬ ॥**

**ಸಮಾರ್ಧಚಂದ್ರಮಧ್ಯಸ್ಥ ಚಂದ್ರಕೇಣ ವಿರಾಜಿತಾ ।**
**ಭೂಮಿಕಾ ಯಾ ಮಯಾ ಪ್ರೋಕ್ತಾ ತಥೈವಾಮಲತಾರಕಂ ॥ ೭ ॥**

**ಭುವನಾಸ್ತೇ ತ್ವಯಾ ಜ್ಞೇಯಾಸ್ತಥಾ ರಾಜಂಶ್ಚತುರ್ದಶ ।**
**ಲಿಂಗೇ ಮಹೇಶ್ವರೋ ದೇವೋ ವೃತ್ತಾ ಯಷ್ಟಿಃ ಪಿತಾಮಹಃ ॥ ೮ ॥**

---

೪–೬. ಅದರ ಮೇಲೆ ಲಿಂಗದ ರೂಪವನ್ನು ಚಿತ್ರಿಸಬೇಕು ಆ ಲಿಂಗವೂ ಸಹ ಲಿಂಗರೇಖೆಯೊಡನೆ ಕೂಡಿರಬೇಕು ಅದರ ಮಧ್ಯದಲ್ಲಿ ಧ್ರುವವೆಂಬ ಚಚ್ಚೌಕವಾದ ದಂಡವನ್ನು ರಚಿಸಬೇಕು ಅದರ ಮೇಲೆ ಹದಿಮೂರು ಅಂತಸ್ತುಗಳನ್ನು ರಚಿಸಬೇಕು ಅದರ ಮೇಲು ಭಾಗದಲ್ಲಿ ಸ್ವಚ್ಛವಾದ ನಕ್ಷತ್ರಗಳಿರಬೇಕು ಅದರ ಮೇಲೆ ಪುನಃ ದುಂಡಾದ ಮತ್ತೊಂದು ದಂಡವನ್ನು ರಚಿಸಬೇಕು ಆ ದಂಡದ ಮೇಲು ಭಾಗದಲ್ಲಿ ಎರಡು ಕಡೆಯಲ್ಲಿಯೂ ಸಮಭಾಗದಲ್ಲಿಯೂ, ಸಮಭಾಗವುಳ್ಳ ಅರ್ಧಚಂದ್ರನಿಂದ ಕೂಡಿದ ಚಂದ್ರನನ್ನು ರಚಿಸಬೇಕು.

೭–೧೨ ನಾನು ಹೇಳಿರುವ ಅಂತಸ್ತುಗಳೂ, ಪ್ರಕಾಶ ಹೊಂದಿರುವ ನಕ್ಷತ್ರಗಳೂ ಸಹ ಹದಿನಾಲ್ಕು ಲೋಕಗಳೆಂದು ತಿಳಿಯಬೇಕು. ಲಿಂಗವೇ ಮಹೇಶ್ವರ ಸ್ವರೂಪ, ದುಂಡಾದ ಆ ದಂಡವೇ ಚತುರ್ಮುಖಸ್ವರೂಪ, ನಾಲ್ಕು ಮೂಲೆಯುಳ್ಳ ಮತ್ತೊಂದು ದಂಡವು ಜನಾರ್ದನ ಸ್ವರೂಪ, ಮೂರು ಭದ್ರಪೀಠಗಳೂ ಸತ್ವರಜ

ಚತುರಸ್ರಾ ತು ಯಾ ಯಷ್ಟಿಃ ಸ ಚ ದೇವೋ ಜನಾರ್ದನಃ ।
ಗುಣರೂಪೇಣ ವಿಜ್ಞೇಯಂ ಭದ್ರಪೀಠತ್ರಯಂ ತಥಾ ॥ ೯ ॥

ಗುಣಾಧಾನಮಿತಿ ಪ್ರೋಕ್ತಂ ತ್ರೈಲೋಕ್ಯಂ ಸಚರಾಚರಂ ।
ಅಧಸ್ತಾದ್ಭುವನಾನಾಂ ತು ಲಿಂಗೋಪರಿ ತಥಾ ನೃಪ ॥ ೧೦ ॥

ಲೋಕಪಾಲಾಶ್ಚ ಕರ್ತವ್ಯಾಃ ಶೂಲಹಸ್ತಾಶ್ಚತುರ್ದಿಶಂ ।
ವಿರೂಢೋ ಧೃತರಾಷ್ಟ್ರಶ್ಚ ವಿರೂಪಾಕ್ಷಶ್ಚ ಯಾದವ ॥ ೧೧ ॥

ಕುಬೇರಶ್ಚ ಮಹಾತೇಜಾಃ ಸೂರ್ಯವೇಶಧರಾಃ ಶುಭಾಃ ।
ಸರ್ವೇ ಕವಚಿನಃ ಕಾರ್ಯಾಃ ಶುಭಾಭರಣಭೂಷಿತಾಃ ॥ ೧೨ ॥

ವಿರೂಢಂ ಚ ವಿಜಾನೀಹಿ ಶಕ್ರದೇವಗಣೇಶ್ವರಂ ।
ಧೃತರಾಷ್ಟ್ರಂ ವಿಜಾನೀಹಿ ಯಮಂ ಭುವನನಾಯಕಂ ॥ ೧೩ ॥

ವಿರೂಪಾಕ್ಷಂ ವಿಜಾನೀಹಿ ವರುಣಂ ಯಾದಸಾಂಪತಿಂ ।
ರಾಜರಾಜಂ ವಿಜಾನೀಹಿ ಕುಬೇರಂ ಧನದಂ ಪ್ರಭುಂ ॥ ೧೪ ॥

---

ಸ್ತಮೋರೂಪವಾದ ಗುಣತ್ರಯಸ್ವರೂಪ, ಚರಾಚರಗಳಿಂದ ಕೂಡಿದ ಮೂರು ಲೋಕಗಳೂ ಆಗುಣ ಸಂಬಂಧವುಳ್ಳವುಗಳು, ಅಂತಹ ಲೋಕಗಳ ಕೆಳಭಾಗದಲ್ಲಿಯೂ, ಲಿಂಗದ ಮೇಲುಭಾಗದಲ್ಲಿಯೂ, ಶೂಲಪಾಣಿಗಳಾದ ಲೋಕಪಾಲರನ್ನೂ ನಾಲ್ಕು ದಿಕ್ಕುಗಳಲ್ಲಿಯೂ ರಚಿಸಬೇಕು ವಿರೂಢ, ಧೃತರಾಷ್ಟ್ರ, ವಿರೂಪಾಕ್ಷ, ಕುಬೇರ ಇವರನ್ನು ಸೂರ್ಯವೇಷದಿಂದ ಕೂಡಿರುವಂತೆ ರಚಿಸಬೇಕು ಎಲ್ಲರೂ ಕವಚಧಾರಿಗಳಾಗಿಯೂ, ಆಭರಣ ಭೂಷಿತರಾಗಿಯೂ ಇರಬೇಕು.

೧೩-೧೪ ವಿರೂಪಾಕ್ಷನು ಇಂದ್ರದೇವನ ಗಣಾಧಿಪನ ಸ್ವರೂಪನು, ಧೃತರಾಷ್ಟ್ರನೇ ಲೋಕನಾಯಕನಾದ ಯಮನ ಸ್ವರೂಪನು ವಿರೂಪಾಕ್ಷನೇ ಜಲಾಧಿಪನಾದ ವರುಣನ ಸ್ವರೂಪ, ಕುಬೇರನೇ ಧನಾಧಿಪನಾದ ರಾಜರಾಜನ

ಏಡೂಕರೂಪಂ ಕಥಿತಂ ಮಯೈತ-
ತ್ಪ್ರಜಾಹಿತಾಖ್ಯಂ ಯದುವಂಶಮುಖ್ಯ ॥ ೧೫ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಏಡೂಕರೂಪನಿರ್ಮಾಣೋ ನಾಮ
ಚತುರಶೀತಿತಮೋಽಧ್ಯಾಯಃ

---

ಸ್ವರೂಪ  ಎಲೈ ಯದುವಂಶ ಶ್ರೇಷ್ಠನೇ, ಇಂತಹ ಏಡೂಕರೂಪವನ್ನು ಪ್ರಜೆಗಳ ಹಿತಕ್ಕಾಗಿ ನಿನಗೆ ತಿಳಿಸಿದ್ದೇನೆ

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರ ಸಂವಾದದಲ್ಲಿ ಏಡೂಕರೂಪನಿರ್ಮಾಣವೆಂಬ
ಎಂಭತ್ತನಾಲ್ಕನೆಯ ಅಧ್ಯಾಯ ಮುಗಿದಿದೆ



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಪಂಚಾಶೀತಿತಮೋಽಧ್ಯಾಯಃ ||

**|| ವಜ್ರ ಉವಾಚ ||**

**ವಾಸುದೇವಸ್ಯ ದೇವಸ್ಯ ಬಹುರೂಪಸ್ಯ ಭಾರ್ಗವ ।**
**ಬ್ರೂಹಿ ಮೇ ರೂಪನಿರ್ಮಾಣಂ ಶಾಶ್ವತಸ್ಯ ಮಹಾತ್ಮನಃ || ೧ ||**

**|| ಮಾರ್ಕಂಡೇಯ ಉವಾಚ ||**

**ಏಕವಕ್ತ್ರಶ್ಚತುರ್ಬಾಹುಃ ಸೌಮ್ಯರೂಪಃ ಸುದರ್ಶನಃ ।**
**ಸಲಿಲಾಧ್ಮಾತಮೇಘಾಭಸ್ಸರ್ವಾಭರಣಭೂಷಿತಃ || ೨ ||**

**ಕಂಠೇನ ಶುಭರೇಖೇಣ ಕಂಬುತುಲ್ಯೇನ ರಾಜತಾ ।**
**ವರಾಭರಣಯುಕ್ತೇನ ಕುಂಡಲೋತ್ತಮ ಭೂಷಿಣಾ || ೩ ||**

---

### ಎಂಭತ್ತೈದನೆಯ ಅಧ್ಯಾಯ.

೧-೪ ವಜ್ರನು ಪ್ರಶ್ನೆಮಾಡುತ್ತಾನೆ —ಬಹು ರೂಪನಾಗಿಯೂ, ಶಾಶ್ವತ ಮಹಾಪುರುಷನಾಗಿಯೂ ಇರುವ ವಾಸುದೇವನ ರೂಪನಿರ್ಮಾಣವನ್ನು ನನಗೆ ಹೇಳಬೇಕು ಮಾರ್ಕಂಡೇಯರು ಹೇಳುತ್ತಾರೆ —ವಾಸುದೇವನು ಒಂದೇ ಮುಖದಿಂದ ಕೂಡಿ ನಾಲ್ಕು ಬಾಹುಗಳನ್ನು ಹೊಂದಿ ಸೌಮ್ಯರೂಪದಿಂದ ರಮ್ಯನಾಗಿರಬೇಕು ನೀರಿನಿಂದ ತುಂಬಿರುವ ಮೇಘದಂತೆ ಇದ್ದು ಎಲ್ಲಾ ಆಭರಣಗಳಿಂದಲೂ ಅಲಂಕೃತನಾಗಿರಬೇಕು ರೇಖೆಗಳಿಂದ ಕೂಡಿಯೂ, ಶಂಖದಂತೆ ರಮ್ಯವಾಗಿಯೂ ಇರುವ ಕಂಠವಿರಬೇಕು ಅನೇಕ ಉತ್ತಮಾಭರಣಗಳಿಂದಲೂ, ಕರ್ಣಾಭರಣಗಳಿಂದಲೂ ಶೋಭಿಸುತ್ತಿರಬೇಕು ವನಮಾಲೆಯಿಂದ ಕೂಡಿ

ಅಂಗದೀ ಬದ್ಧಕೇಯೂರೋ ವನಮಾಲಾವಿಭೂಷಣಃ ।
ಉರಸಾ ಕೌಸ್ತುಭಂ ಬಿಭ್ರತ್ಕಿರೀಟಂ ಶಿರಸಾ ತಥಾ ॥ ೪ ॥

ಶಿರಃಪದ್ಮಸ್ತಥೈವಾಸ್ಯ ಕರ್ತವ್ಯಶ್ಚಾರುಕರ್ಣಿಕಃ ।
ಮುಷ್ಟಿಶ್ಲಿಷ್ಟಾಯತಭುಜಸ್ತನುತಾಮ್ರನಖಾಂಗುಲಿಃ ॥ ೫ ॥

ಮಧ್ಯೇನ ತ್ರಿವಲೀಭಂಗಶೋಭಿತೇನ ಸುಧಾರುಣಾ ।
ಸ್ತ್ರೀರೂಪಧಾರಿಣೀ ಕ್ಷೋಣೀ ಕಾರ್ಯಾ ತತ್ಪಾದಮಧ್ಯಗಾ ॥ ೬ ॥

ತತ್ಕರಸ್ಥಾಂಘ್ರಿಯುಗಲೋ ದೇವಃ ಕಾರ್ಯೋ ಜನಾರ್ದನಃ ।
ತಾಲಾಂತರಪದನ್ಯಾಸಃ ಕಿಂಚಿನ್ನಿಷ್ಕ್ರಾಂತದಕ್ಷಿಣಃ ॥ ೭ ॥

ಅಂತರ್ದೃಶಾ ಮಹೀ ಕಾರ್ಯಾ ದೇವದರ್ಶನವಿಸ್ಮಿತಾ ।
ದೇವಶ್ಚ ಕಟಿವಾಸೇನ ಕಾರ್ಯೋ ಜಾನ್ವವಲಂಬಿನಾ ॥ ೮ ॥

---

ತೋಳುಬಲ, ಕಟಕ ಮುಂತಾದ ಆಭರಣಗಳನ್ನೂ ಹೊಂದಿರಬೇಕು. ಹೃದಯದಲ್ಲಿ ಕೌಸ್ತುಭವೂ, ತಲೆಯ ಮೇಲೆ ಕಿರೀಟವೂ ಇರಬೇಕು

೫-೮ ಶಿರಸ್ಸಿನಲ್ಲಿ ರಮ್ಯವಾದ ಕರ್ಣಿಕೆಯಿಂದ ಕೂಡಿದ ಪದ್ಮವನ್ನು ರಚಿಸಬೇಕು. ಬಿಗಿಯಾದ ಮುಷ್ಟಿಯಿಂದ ಕೂಡಿದ ದೀರ್ಘವಾದ ಬಾಹುಗಳೂ ಸಣ್ಣನಾಗಿಯೂ, ಕೆಂಪಾಗಿಯೂ ಇರುವ ಉಗುರುಗಳಿಂದ ಕೂಡಿದ ಬೆರಳುಗಳೂ ಇರಬೇಕು. ಅವನ ಪಾದಗಳ ಮಧ್ಯದಲ್ಲಿ ಸ್ತ್ರೀರೂಪಧಾರಿಣಿಯಾದ ಭೂದೇವಿಯನ್ನು ನಿರ್ಮಿಸಬೇಕು ಆ ಭೂದೇವಿಯು ತ್ರಿವಳಿಗಳಿಂದ ಶೋಭಿತವಾದ ಮಧ್ಯಭಾಗದಿಂದಲೂ, ಬಹಳ ಬಿಳುಪಾಗಿಯೂ ಶೋಭಿಸುತ್ತಿರಬೇಕು ಆ ಭೂದೇವಿಯ ಕೈಗಳಲ್ಲಿ ಪಾದಗಳನ್ನಿಟ್ಟಿರುವಂತೆ ಜನಾರ್ದನ ದೇವನನ್ನು ರಚಿಸಿರಬೇಕು ಆ ಪಾದಗಳೂ ತಾಲಪ್ರಮಾಣದಷ್ಟು ಅಂತರವಿದ್ದು ಬಲಭಾಗದ ಪಾದವು ಸ್ವಲ್ಪ ಮುಂದೆ ಚಾಚಿದಂತಿರಬೇಕು. ಭೂದೇವಿಯೂ ಸಹ ಅಂತರ್ದೃಷ್ಟಿಯಿಂದ ಕೂಡಿ ಪ್ರಭುವಿನ ದರ್ಶನದಿಂದ ಆಶ್ಚರ್ಯಚಕಿತೆಯಂತೆ ತೋರುತ್ತಿರಬೇಕು ಆ ವಾಸುದೇವ ಮೂರ್ತಿಯೂ ಸಹ ಮಂಡಿಯವರಿಗೂ ವ್ಯಾಪಿಸಿರುವ ಅಧೋವಸ್ತ್ರದಿಂದ ಕೂಡಿರಬೇಕು

**ವನಮಾಲಾ ಚ ಕರ್ತವ್ಯಾ ದೇವಜಾನ್ವವಲಂಬಿನೀ ।**
**ಯಜ್ಞೋಪವೀತಃ ಕರ್ತವ್ಯೋ ನಾಭಿದೇಶಮುಪಾಗತಃ ॥ ೯ ॥**

**ಉತ್ಫುಲ್ಲಕಮಲಂ ಪಾಣೌ ಕುರ್ಯಾದ್ದೇವಸ್ಯ ದಕ್ಷಿಣೇ ।**
**ವಾಮಪಾಣಿಗತಂ ಶಂಖಂ ಶಂಖಾಕಾರಂ ತು ಕಾರಯೇತ್ ॥ ೧೦ ॥**

**ದಕ್ಷಿಣೇ ತು ಗದಾ ದೇವೀ ತನುಮಧ್ಯಾ ಸುಲೋಚನಾ ।**
**ಸ್ತ್ರೀರೂಪಧಾರಿಣೀ ಮುಗ್ಧಾ ಸರ್ವಾಭರಣಭೂಷಣಾ ॥ ೧೧ ॥**

**ಪಶ್ಯನ್ತೀ ದೇವದೇವೇಶಂ ಕಾರ್ಯಾ ಚಾಮರಧಾರಿಣೀ ।**
**ಕಾರ್ಯಂ ತನ್ಮೂರ್ಧ್ನಿ ವಿನ್ಯಸ್ತಂ ದೇವಹಸ್ತಂ ತು ದಕ್ಷಿಣಂ ॥ ೧೨ ॥**

**ವಾಮಭಾಗಗತಶ್ಚಕ್ರಃ ಕಾರ್ಯೋ ಲಂಬೋದರಸ್ತಥಾ ।**
**ಸರ್ವಾಭರಣಸಂಯುಕ್ತೋ ನೃತ್ತವಿಸ್ಫಾರಿತೇಕ್ಷಣಃ ॥ ೧೩ ॥**

**ಕರ್ತವ್ಯಶ್ಚಾಮರಕರೋ ದೇವವೀಕ್ಷಣತತ್ಪರಃ ।**
**ಕಾರ್ಯೋ ದೇವಕರೋ ವಾಮಃ ವಿನ್ಯಸ್ತಸ್ತಸ್ಯ ಮೂರ್ಧ್ನಿ ॥ ೧೪ ॥**

---

೯-೧೨ ಆ ವಾಸುದೇವನಿಗೆ ಮಂಡಿಯವರಿಗೂ ಜೋಲಾಡುವ ವನಮಾಲೆಯನ್ನು ನಿರ್ಮಿಸಬೇಕು ನಾಭಿಪರ್ಯಂತವಾಗಿರುವ ಯಜ್ಞೋಪವೀತವನ್ನೂ ನಿರ್ಮಿಸಬೇಕು ಬಲಗೈಯ್ಯಿನಲ್ಲಿ ಅರಳಿದ ಕಮಲವಿರಬೇಕು ಬಲಭಾಗದ ಮತ್ತೊಂದು ಕೈಯ್ಯಿನಲ್ಲಿ ಸೂಕ್ಷ್ಮಮಧ್ಯೆಯಾಗಿಯೂ, ಸುಲೋಚನಳಾಗಿಯೂ, ಸರ್ವಭೂಷಣಭೂಷಿತಳಾಗಿಯೂ ಇರುವ ಮುಗ್ಧಾವಸ್ಥೆಯುಳ್ಳ ಸ್ತ್ರೀರೂಪವನ್ನು ಹೊಂದಿರುವ ಗದೆ ಇರಬೇಕು ಅವಳೂ ಸಹ ಚಾಮರವನ್ನು ಹಿಡಿದು ಪ್ರಭುವನ್ನು ನೋಡುತ್ತಿರುವಂತೆ ಇರಬೇಕು ಸ್ವಾಮಿಯ ಆ ಬಲಹಸ್ತವು ಅವಳ ತಲೆಯಮೇಲೆ ಇಡಲ್ಪಟ್ಟಿರಬೇಕು

೧೩-೧೪ ಎಡಭಾಗದಲ್ಲಿ ದೊಡ್ಡ ಉದರದಿಂದ ಕೂಡಿದ ಚಕ್ರವನ್ನು ರಚಿಸಬೇಕು ಅವನು ಎಲ್ಲಾ ಆಭರಣಗಳನ್ನೂ ಧರಿಸಿ ನರ್ತನದಿಂದ ಕಣ್ಣುಗಳನ್ನು ಕುಣಿಸುತ್ತಾ ಚಾಮರವನ್ನು ಹಿಡಿದು ಸ್ವಾಮಿದರ್ಶನದಲ್ಲಿ ಆಸಕ್ತನಾಗಿರಬೇಕು.

|| ವಜ್ರ ಉವಾಚ ||

ಕಿಂ ಭಯಂ ತಸ್ಯ ದೇವಸ್ಯ ನಿತ್ಯಂ ಸರ್ವಾಯುಧೋದ್ಯತಃ ।
ಯತಸ್ತಿಷ್ಠತಿ ಸರ್ವಾತ್ಮಾ ಭಯಹಾ ತ್ರಿದಿವೌಕಸಾಂ || ೧೫ ||

|| ಮಾರ್ಕಂಡೇಯ ಉವಾಚ ||

ನೈತಾನ್ಯಾಯುಧಜಾತಾನಿ ಪರಮಾರ್ಥೇನ ಯಾದವ ।
ಮಹಾಭೂತಾನ್ಯಥೈತಾನಿ ಹರಿರ್ಧಾರಯತೇ ಪ್ರಭುಃ || ೧೬ ||

ಖಂ ವಿಜಾನೀಹಿ ದೇವಸ್ಯ ಕರೇ ಶಂಖೋ ಮಹಾಭುಜಃ ।
ಚಕ್ರಂ ಜಾನೀಹಿ ಪವನಂ ಗದಾ ತೇಜಸ್ತಥಾ ವಿಭೋಃ || ೧೭ ||

ಆಪಃ ಪದ್ಮಂ ವಿಜಾನೀಹಿ [1]ಪಾದಮಧ್ಯೇ ವ್ಯವಸ್ಥಿತಂ ।
ಮಹಾಭೂತಾನ್ಯಥೈತಾನಿ ತ್ಯಕ್ತಾನಿ ಹರಿಣಾ ನೃಪ || ೧೮ ||

---

ಸ್ವಾಮಿಯ ಎಡಹಸ್ತವು ಅವನ ತಲೆಯ ಮೇಲೆ ಇಡಲ್ಪಟ್ಟಿರಬೇಕು ವಜ್ರನು ಪ್ರಶ್ನೆಮಾಡುತ್ತಾನೆ —ದೇವತೆಗಳ ಭಯವನ್ನು ಹೋಗಲಾಡಿಸುವ ಸರ್ವಾಂತರ್ಯಾಮಿಯಾದ ಆ ಸ್ವಾಮಿಗೆ ಭಯವೆಲ್ಲಿಂದ ಬಂದಿತು, ಯಾವಾಗಲೂ ಎಲ್ಲಾ ಆಯುಧಗಳನ್ನೂ ಹೊಂದಿರಲು ಕಾರಣವೇನು ? ಇದಕ್ಕೆ ಮಾರ್ಕಂಡೇಯರು ಹೇಳುತ್ತಾರೆ

೧೬–೨೦ ಎಲೈ ಯದುಶ್ರೇಷ್ಠನೇ ಇವೆಲ್ಲವೂ ಆಯುಧಗಳಂತೆ ತೋರುತ್ತವೆಯೇ ಹೊರತು ನಿಜವಾಗಿಯೂ ಆಯುಧಗಳಲ್ಲ ಇವೆಲ್ಲವೂ ಮಹಾಭೂತಗಳು ಇವುಗಳ ರೂಪದಿಂದ ಮಹಾಭೂತಗಳನ್ನೇ ಹರಿಯು ಧರಿಸಿರುತ್ತಾನೆ ಸ್ವಾಮಿಯ ಕೈಯಲ್ಲಿರುವ ಮಹಾಭುಜವುಳ್ಳ ಶಂಖವು ಆಕಾಶವೆಂದು ತಿಳಿ ಚಕ್ರವು ವಾಯುವಿನ ಸ್ವರೂಪ ಹಾಗೆಯೇ ಗದೆಯು ತೇಜಸ್ಸಿನ ಸ್ವರೂಪ, ಪಾದ ಮಧ್ಯದಲ್ಲಿರುವ ಪದ್ಮವು ಜಲದ ಸ್ವರೂಪ, ಈ ಮಹಾಭೂತಗಳನ್ನು ಹರಿಯು ಧರಿಸದಿದ್ದಲ್ಲಿ ಅವನಿಂದ ಪರಿತ್ಯಕ್ತವಾದ ಈ ಭೂತಗಳು ಜಾಗ್ರತೆಯಾಗಿ ನಶಿಸಿ ಹೋಗುತ್ತವೆ ಆದುದರಿಂದಲೇ ಇವನ್ನು ಹರಿಯು ಯಾವಾಗಲೂ ಧರಿಸಿಯೇ ಇರುತ್ತಾನೆ ವಿಷ್ಣುವೇ ಜಗತ್ತಿಗೆ

---

1 ಹಿಂದೆ ರೂಪವನ್ನು ವಿವರಿಸುವಾಗ ಬಲಗೈಯ್ಯಿನಲ್ಲಿ ಪದ್ಮವನ್ನು ಹೇಳಿದ್ದಾರೆ ಇಲ್ಲಿ ಪಾದಮಧ್ಯದಲ್ಲಿ ಎಂದು ಹೇಳುತ್ತಾರೆ

ಕ್ಷಿಪ್ರಮೇವ ವಿಶೀರ್ಯಂತೇ ತೇನ ಧಾರಯತೇ ಹರಿಃ ।
ವಿಷ್ಣುರ್ಜೀವಃ ಸಮಾಖ್ಯಾತಸ್ತೇನ ತ್ಯಕ್ತಾಃ ಶರೀರಗಾಃ ॥ ೧೯ ॥

ಭೂತಾನಿ ಪಶ್ಯ ಪ್ರತ್ಯಕ್ಷಂ ಶೀರ್ಯಮಾಣಾನಿ ಸರ್ವಶಃ ।
ಭೂತೈರ್ದೇವಧೃತೈರ್ಲೋಕೋ ಧಾರ್ಯತೇ ಯದುನಂದನ ।
ತೇಷಾಂ ಧಾರಣಶಕ್ತಿರ್ಯಾ ಸಾ ಜ್ಞೇಯಾ ವಿಷ್ಣುಕಾರಿತಾ ॥ ೨೦ ॥

ವಾಸುದೇವಸ್ಯರೂಪೇಣ ಕಾರ್ಯಃ ಸಂಕರ್ಷಣಃ ಪ್ರಭುಃ ।
ಸ ತು ಶುಕ್ಲವಪುಃ ಕಾರ್ಯೋ ನೀಲವಾಸಾ ಯದೂತ್ತಮ ॥ ೨೧ ॥

ಗದಾಸ್ಥಾನೇ ಚ ಮುಸಲಂ ಚಕ್ರಸ್ಥಾನೇ ಚ ಲಾಂಗಲಂ ।
ಕರ್ತವ್ಯೌ ತನುಮಧ್ಯೌ ತೌ ಸ್ವರೂಪೌ ರೂಪಸಂಯುತೌ ॥ ೨೨ ॥

ವಾಸುದೇವಸ್ಯ ರೂಪೇಣ ಪ್ರದ್ಯುಮ್ನಶ್ಚ ತಥಾ ಭವೇತ್ ।
ಸ ತು ದೂರ್ವಾಂಕುರಶ್ಯಾಮಃ ಸ್ಸಿತವಾಸಾ ವಿಧೀಯತೇ ॥ ೨೩ ॥

---

ಪ್ರಧಾನಜೀವಸ್ವರೂಪ ಅವನ ಶರೀರವನ್ನು ಹೊಂದಿರುವ ಈ ಭೂತಗಳು ಅವನಿಂದ ಬೇರೆಯಾದಲ್ಲಿ ಎಲ್ಲವೂ ಎದುರಿಗೇ ನಶಿಸಿ ಹೋದಾವು ಆದುದರಿಂದ ವಾಸುದೇವನಿಂದ ಈ ಆಯುಧರೂಪದಲ್ಲಿ ಭೂತಗಳೆಲ್ಲವೂ ಧರಿಸಲ್ಪಟ್ಟಿರುವುದರಿಂದಲೇ ಈ ಲೋಕವಲ್ಲವೂ ಅವನಲ್ಲಿ ನಿಂತಿದೆ ಇವುಗಳ ಧಾರಣಶಕ್ತಿಯೆಲ್ಲವೂ ಆ ಮಹಾವಿಷ್ಣುವಿನ ಸಂಕಲ್ಪದಿಂದ ಉಂಟಾದದ್ದು

೨೧-೨೬ ವಾಸುದೇವನ ರೂಪದಂತೆ ಸಂಕರ್ಷಣನನ್ನು ನಿರ್ಮಿಸಬೇಕು ಅವನ ದೇಹವು ಬಿಳುಪಾಗಿಯೂ, ಕಪ್ಪಾದ ವಸ್ತ್ರದಿಂದ ಕೂಡಿಯೂ ಇರಬೇಕು ಗದೆಯ ಸ್ಥಾನದಲ್ಲಿ ಮುಸಲಾಯುಧವನ್ನೂ, ಚಕ್ರದ ಸ್ಥಾನದಲ್ಲಿ ನೇಗಿಲನ್ನೂ ರಚಿಸಬೇಕು ಅವೆರಡೂ ಮನುಷ್ಯರೂಪದಂತಿದ್ದು ಸುರೂಪಿಗಳಾಗಿಯೂ, ಸೂಕ್ಷ್ಮವಾದ ಮಧ್ಯಪ್ರದೇಶದಿಂದ ಕೂಡಿಯೂ ಇರಬೇಕು ವಾಸುದೇವನ ರೂಪಕ್ಕೆ ಸಮಾನವಾಗಿಯೇ ಪ್ರದ್ಯುಮ್ನನ ರೂಪವೂ ಇರುತ್ತದೆ ಆದರೆ ಅವನು ಗರಿಕೆಯಂತೆ ಶ್ಯಾಮವರ್ಣದಿಂದ ಕೂಡಿಯೂ, ಧವಳವಸ್ತ್ರದಿಂದ ಕೂಡಿಯೂ ಇರಬೇಕು ಚಕ್ರದ ಸ್ಥಾನದಲ್ಲಿ ಧನುಸ್ಸೂ, ಗದೆಯ ಸ್ಥಾನದಲ್ಲಿ ಬಾಣವೂ ಇರಬೇಕು ಮುಸಲ ಮತ್ತು

**ಚಕ್ರಸ್ಥಾನೇ ಭವೇಚ್ಚಾಪಂ ಗದಾಸ್ಥಾನೇ ತಥಾ ಶರಂ ।**
**ತಥಾ ವಿಧೌ ತು ಕರ್ತವ್ಯೌ ತಥಾ ಮುಸಲಲಾಂಗಲೌ　　॥ ೨೪ ॥**

**ಏತದೇವ ತಥಾರೂಪಮನಿರುದ್ಧಸ್ಯ ಕಾರಯೇತ್ ।**
**ಪದ್ಮಪತ್ರಾಭವಪುಷೋ ರಕ್ತಾಂಬರಧರಸ್ಯ ತು　　॥ ೨೫ ॥**

**ಚಕ್ರಸ್ಥಾನೇ ಭವೇಚ್ಚರ್ಮ ಗದಾಸ್ಥಾನೇಽಸಿಮೇವ ಚ ।**
**ಚರ್ಮಸ್ಯಾಚ್ಚಕ್ರರೂಪೇಣ ಪ್ರಾಂಶುಃ ಖಡ್ಗೋ ವಿಧೀಯತೇ　　॥ ೨೬ ॥**

**ಚಕ್ರಾದೀನಾಂ ಸ್ವರೂಪಾಣಿ ಕಿಂಚಿನ್ಮೂರ್ಧಸು ದರ್ಶಯೇತ್ ।**
**ರಮ್ಯಾಣ್ಯಾಯುಧರೂಪಾಣಿ ಚಕ್ರಾದೀನ್ಯೇವ ಯಾದವ　　॥ ೨೭ ॥**

**ವಾಮಪಾರ್ಶ್ವಗತಾಃ ಕಾರ್ಯಾ ದೇವಾನಾಂ ಪ್ರವರಾ ಧ್ವಜಾಃ ।**
**ಸ್ವಪತಾಕಾಯುತಾ ರಾಜನ್ಯಷ್ಟಿಸ್ಥಾಸ್ತೇ ಯಥೇರಿತಾಃ　　॥ ೨೮ ॥**

**ಪೀತವರ್ಣಂ ಪ್ರತೀಹಾರಂ ವಾಸುದೇವಸ್ಯ ಕಾರಯೇತ್ ।**
**ಸುಭದ್ರವಸುಭದ್ರಾಖ್ಯೌ ವೀರೌ ಪ್ರಾಸಕರಾವುಭೌ　　॥ ೨೯ ॥**

---

ನೇಗಿಲು ಇವುಗಳನ್ನು ಮೊದಲು ಹೇಳಿರುವಂತೆಯೇ ನಿರ್ಮಿಸಬೇಕು ಅನಿರುದ್ಧ ನಿಗೂ ಸಹ ಇದೇ ವಿಧವಾದ ರೂಪವಿರಬೇಕು ಆದರೆ ಅವನ ಶರೀರವು ಪದ್ಮ ಪತ್ರದ ವರ್ಣದಂತೆಯೂ, ರಕ್ತಾಂಬರ ಧಾರಿಯಾಗಿಯೂ ಇರಬೇಕು ಚಕ್ರಸ್ಥಾನ ದಲ್ಲಿ ಗುರಾಣಿ, ಗದೆಯ ಸ್ಥಾನದಲ್ಲಿ ಕತ್ತಿ ಇವುಗಳಿರಬೇಕು ಗುರಾಣಿಯೂ ಚಕ್ರ ವಂತೆಯೇ ತೋರುತ್ತಿರಬೇಕು, ಖಡ್ಗವೂ ದೀರ್ಘವಾಗಿರಬೇಕು

೨೭–೩೨ ಆಯುಧರೂಪವಾದ ಚಕ್ರಾದಿಗಳೇ ರಮ್ಯವಾಗಿರುತ್ತವೆಯಾದ್ದ ರಿಂದ ಅಂತಹ ಚಕ್ರಾದಿಗಳ ಸ್ವರೂಪವನ್ನು ಸ್ವಲ್ಪ ಮಟ್ಟಿಗೆ ಮೇಲುಭಾಗದಲ್ಲಿ ತೋರಿಸಬೇಕು ದೇವತೆಗಳಿಗೆ ಉತ್ಕೃಷ್ಟವಾದ ಧ್ವಜಗಳನ್ನು ಎಡಭಾಗದಲ್ಲಿ ತೋರಿಸಬೇಕು ಆ ಧ್ವಜಗಳೆಲ್ಲವೂ ತನ್ನತನ್ನ ಪತಾಕೆಗಳು ದಂಡದ ಮೇಲಿರು ವಂತೆ ತೋರುತ್ತಿರಬೇಕು. ವಾಸುದೇವನ ದ್ವಾರಪಾಲಕರು ಹೊಂಬಣ್ಣದಂತಿರ ಬೇಕು ಸುಭದ್ರವಸುಭದ್ರರೆಂಬ ಆ ಇಬ್ಬರೂ ವೀರರಾಗಿ ಪ್ರಾಸಾಯುಧಧಾರಿ ಗಳಾಗಿರಬೇಕು ಸಂಕರ್ಷಣನಿಗೆ ಅಷಾಢಯಜ್ಞತಾತ ಎಂಬ ದ್ವಾರಪಾಲಕರು ಅವರೂ ನೀಲವರ್ಣದಿಂದ ಕೂಡಿ ಮುದ್ಗರಾಯುಧವನ್ನು ಧರಿಸಿರಬೇಕು ಪ್ರದ್ಯು

ಆಷಾಢೋ ಯಜ್ಞತಾತಶ್ಚ ಕಾರ್ಯೌ ಸಂಕರ್ಷಣಸ್ಯ ತು ।
ನೀಲವರ್ಣೌ ಮಹಾಭಾಗೌ ತಥಾ ಮುದ್ಗರಧಾರಿಣೌ ॥ ೩೦ ॥

ಪ್ರದ್ಯುಮ್ನಸ್ಯ ಪ್ರತೀಹಾರೌ ಜಯೋ ವಿಜಯ ಏವ ಚ ।
ಶ್ವೇತವರ್ಣೌ ಮಹಾಭಾಗೌ ತಥಾ ಖಡ್ಗಧರಾವುಭೌ ॥ ೩೦ ॥

ಅಮೋದಶ್ಚ ಪ್ರಮೋದಶ್ಚ ಮಹಾಬಲಪರಾಕ್ರಮೌ ।
ಅನಿರುದ್ಧಸ್ಯ ವಿಜ್ಞೇಯೌ ಪ್ರತೀಹಾರೌ ಸುರೇಶ್ವರೌ ॥ ೩೨ ॥

ರಕ್ತವರ್ಣೌ ಮಹಾಭಾಗ ತಥೋಭೌ ಶಕ್ತಿಧಾರಿಣೌ ।
ಸರ್ವೇ ಸುರೂಪಾಃ ಕರ್ತವ್ಯಾಃ ಸರ್ವಾಭರಣಭೂಷಿತಾಃ ॥ ೩೩ ॥

ದ್ವಿಬಾಹವಸ್ತು ಕರ್ತವ್ಯಾಸ್ತರ್ಜನ್ಯುಚ್ಛ್ರಿತಪಾಣಯಃ ।
ದೃಷ್ಟಿಸ್ತೇಷಾಂ ತು ಕರ್ತವ್ಯಾ ದ್ವಾರನ್ಯಸ್ತಾ ಮಹಾಭುಜ ॥ ೩೪ ॥

ಶಕ್ರಂ ಸುಭದ್ರಂ ಜಾನೀಹಿ ವಸುಭದ್ರಂ ಹುತಾಶನಂ ।
ಆಷಾಢಂ ದೇವದೇವೇಶಂ ಯಮಂ ಜಾನೀಹಿ ಯಾದವ ॥ ೩೫ ॥

---

ಮ್ನನಿಗೆ ಜಯವಿಜಯರು ದ್ವಾರಪಾಲಕರು ಅವರೂ ಧವಳವರ್ಣದಿಂದ ಕೂಡಿ ಖಡ್ಗಧಾರಿಗಳಾಗಿರಬೇಕು ಅನಿರುದ್ಧನಿಗೆ ಆಮೋದ ಪ್ರಮೋದ ಇವರು ದ್ವಾರಪಾಲಕರು, ಇವರು ಬಹಳ ಪರಾಕ್ರಮಶಾಲಿಗಳಾಗಿಯೂ, ದೇವಶ್ರೇಷ್ಠರಾಗಿಯೂ ಇರುತ್ತಾರೆ

೩೩-೩೭ ಈ ಅನಿರುದ್ಧನ ದ್ವಾರಪಾಲಕರಿಬ್ಬರೂ ರಕ್ತವರ್ಣದಿಂದ ಕೂಡಿಯೂ ಶಕ್ತ್ಯಾಯುಧಧಾರಿಗಳಾಗಿಯೂ ಇರುವರು ಇವರೆಲ್ಲರನ್ನೂ ಸುರೂಪದಿಂದ ಕೂಡಿಯೂ, ಎಲ್ಲಾ ಆಭರಣಗಳಿಂದ ಕೂಡಿಯೂ ಇರುವಂತೆ ನಿರ್ಮಿಸಬೇಕು ಎರಡು ಭುಜಗಳಿಂದ ಕೂಡಿ ತರ್ಜನಿ ಬೆರಳುಗಳನ್ನು ಮೇಲಕ್ಕೆ ಎತ್ತಿಕೊಂಡಿರುವಂತೆಯೂ ರಚಿಸಬೇಕು ಇವರು ತಮ್ಮ ದೃಷ್ಟಿಗಳಿಂದ ಸ್ವಾಮಿಯ ದ್ವಾರವನ್ನೇ ನೋಡುತ್ತಿರುವಂತಿರಬೇಕು ಸುಭದ್ರನು ಇಂದ್ರನ ಸ್ವರೂಪವೆಂದು ತಿಳಿ ಹಾಗೆಯೇ ವಸುಭದ್ರನು ಅಗ್ನಿಯ ಸ್ವರೂಪನೂ, ಆಷಾಢನು ದೇವದೇವನಾದ ಯಮನ ಸ್ವರೂಪನೂ ಆಗಿರುತ್ತಾನೆ ಯಜ್ಞತಾತನು ವಿರೂಪಾಕ್ಷನೆಂಬ ದೇವ

**ಯಜ್ಞಾತಾತಂ ವಿರೂಪಾಕ್ಷಂ ವಿದ್ಧಿ ದೇವಮನಿಂದಿತಂ ।**
**ಜಯಂ ಜಾನೀಹಿ ವರುಣಂ ಯಾದೋಗಣಮಹೇಶ್ವರಂ || ೩೭ ||**

**ಪವನಂ ಚ ವಿಜಾನೀಹಿ ವಿಜಯಂ ಯದುನಂದನ ।**
**ಆಮೋದಂ ಧನದಂ ವಿದ್ಧಿ ಪ್ರಮೋದಂ ಶಿವಮೇವ ಚ || ೩೭ ||**

**ಏತೇ ಕಾರ್ಯಾಶ್ಚ ವಾ ಸರ್ವೇ ದಿಙ್ನಗೋಕ್ತವಪುರ್ಧರಾಃ ।**
**ಏತ ಏವ ತಥಾ ಪ್ರೋಕ್ತಾ ಭೂಯ ಏವ ಮಹಾತ್ಮಭಿಃ || ೩೮ ||**

**ಅಷ್ಟೌ ದೇವಗಣಾ ರಾಜಂಸ್ತನ್ಮೇ ನಿಗದತಃ ಶೃಣು ।**
**ವಾಸುದೇವಪ್ರತೀಹಾರಾವಣಿಮಾ ಲಘಿಮಾ ಸ್ಮೃತಾ || ೩೯ ||**

**ಸಂಕರ್ಷಣಪ್ರತೀಹಾರೌ ಮಹಿಮಾಪ್ರಾಪ್ತಿಸಂಜ್ಞಿತಾ ।**
**ಪ್ರಾಕಾಮ್ಯಂ ಚ ತಥೈಶಿತ್ವಂ ಪ್ರದ್ಯುಮ್ನೇ ಕಥಿತಾವುಭೌ || ೪೦ ||**

**ವಶಿತ್ವಂ ವಿದ್ಧಿ ಚಾಮೋದಂ ಯತ್ರ ಕಾಮಾವಸಾಯಿತಾ ।**
**ಪ್ರಮೋದಮಥ ಜಾನೀಹಿ ಸರ್ವಲೋಕನಮಸ್ಕೃತಂ || ೪೧ ||**

ತೆಯ ಸ್ವರೂಪ, ಜಯನು ಜಲಾಧಿಪತಿಯಾದ ವರುಣನ ಸ್ವರೂಪ, ವಿಜಯನು ವಾಯುದೇವನ ಸ್ವರೂಪ, ಆಮೋದನು ಕುಬೇರನ ಸ್ವರೂಪ, ಪ್ರಮೋದನು ಶಿವನ ಸ್ವರೂಪವೆಂದೂ ತಿಳಿಯಬೇಕು

೩೮–೪೧ ಅಥವಾ ಇವರ ಸ್ವರೂಪವನ್ನು ಆಯಾಯ ದಿಕ್ಪರ್ವತಗಳಲ್ಲಿರುವ ಇವರ ರೂಪದಂತೆ ನಿರ್ಮಿಸಬಹುದು ಈ ಎಂಟು ದೇವತೆಗಳೇ ಅಷ್ಟಸಿದ್ಧಿರೂಪಗಳೆಂದೂ ಮಹಾತ್ಮರು ಬಹುಮಟ್ಟಿಗೂ ಒತ್ತಿಹೇಳಿದ್ದಾರೆ ಅದನ್ನೂ ನಾನು ಹೇಳುತ್ತೇನೆ,--ಕೇಳು, ವಾಸುದೇವನ ದ್ವಾರಪಾಲಕರು ಅಣಿಮಾ ಲಘಿಮಾ ಎಂಬ ಸಿದ್ಧಿಸ್ವರೂಪರು ಹಾಗೆಯೇ ಸಂಕರ್ಷಣನ ದ್ವಾರಪಾಲಕರು ಮಹಿಮಾ ಮತ್ತು ಪ್ರಾಪ್ತಿಸ್ವರೂಪರು, ಪ್ರದ್ಯುಮ್ನನಿಗೆ ಪ್ರಾಕಾಮ್ಯ ಐಶಿತ್ವ, ಸರ್ವ ಕಾಮಗಳನ್ನೂ ಉಂಟುಮಾಡುವ ವಶಿತ್ವ ಸ್ವರೂಪನೇ ಆಮೋದನು, ಪ್ರಮೋದನೇ ಸರ್ವಲೋಕ ವಂದ್ಯನಾದ ಗರಿಮಾರೂಪನು, ಚತುರ್ಮೂರ್ತಿಯಾದ ವಾಸುದೇವನ ರೂಪವನ್ನು ಈ ರೀತಿ ನಿನಗೆ ಹೇಳಿದ್ದಾಯಿತು,

ಏತತ್ತೇ ರೂಪನಿರ್ಮಾಣಂ ಚತುರ್ಮೂರ್ತೇರ್ಮಯೇರಿತಂ ।
ಏಕಮೂರ್ತಿಧರಃ ಕಾರ್ಯೋ ವೈಕುಂಠೇತ್ಯಭಿಶಬ್ದಿತಃ ॥ ೪೨ ॥

ಚತುರ್ಮುಖಃ ಸ ಕರ್ತವ್ಯಃ ಪ್ರಾಗುಕ್ತವದನಃ ಪ್ರಭುಃ ।
ಚತುರ್ಮೂರ್ತಿಸ್ಸ ಭವತಿ ಕೃತೇ ಮುಖಚತುಷ್ಟಯೇ ॥ ೪೩ ॥

ಪೂರ್ವಂ ಸೌಮ್ಯಮುಖಂ ಕಾರ್ಯಂ ತತ್ತು ಮುಖ್ಯತಮಂ ವಿದುಃ ।
ಕರ್ತವ್ಯಂ ಸಿಹ್ಮವಕ್ತ್ರಾಭಂ ಜ್ಞಾನವಕ್ತ್ರಂ ತು ದಕ್ಷಿಣಂ ॥ ೪೪ ॥

ಪಶ್ಚಿಮಂ ವದನಂ ರೌದ್ರಂ ಯತ್ತದೈಶ್ವರ್ಯಮುಚ್ಯತೇ ।
ಚತುರ್ವಕ್ತ್ರಸ್ಯ ಕರ್ತವ್ಯಂ ರೂಪಮನ್ಯತ್ತಥೇರಿತಂ ॥ ೪೫ ॥

ಚತುರ್ಭುಜೋ ವಾ ಕರ್ತವ್ಯಸ್ತಾರ್ಕ್ಷ್ಯೋ ಯಾದವನಂದನ ।
ಗರುಡಶ್ಚ ತಥಾ ಕಾರ್ಯೋ ಧರ್ಮಜ್ಞ ರಚಿತಾಂಜಲಿಃ ॥ ೪೬ ॥

---

೪೨–೪೫ ವೈಕುಂಠನೆಂಬ ಅಭಿಧಾನವುಳ್ಳ ವಿಷ್ಣುಮೂರ್ತಿಯನ್ನು ಏಕಮೂರ್ತಿಯನ್ನಾಗಿ ರಚಿಸಬೇಕು ಮೊದಲು ಹೇಳಿರುವಂತೆ ಅವನನ್ನು ನಾಲ್ಕು ಮುಖಗಳಿಂದ ಕೂಡಿರುವಂತೆ ರಚಿಸಬೇಕು ಹಾಗೆ ನಾಲ್ಕು ಮುಖಗಳಿಂದ ನಿರ್ಮಿಸಿದಲ್ಲಿ ಅವನೇ ಚತುರ್ಮೂರ್ತಿಯಾಗುತ್ತಾನೆ ಅವನ ಪೂರ್ವಭಾಗದ ಮುಖವು ಸೌಮ್ಯವಾಗಿರಬೇಕು ಅದೇ ಅವನಿಗೆ ಬಹಳ ಮುಖ್ಯವೆಂದು ಹೇಳುತ್ತಾರೆ ಮತ್ತೊಂದು ಸಿಂಹ ಮುಖದಂತೆಯೂ ದಕ್ಷಿಣಭಾಗದ ಮುಖವು ಜ್ಞಾನ ಮುಖವಾಗಿಯೂ ಪಶ್ಚಿಮಭಾಗದ ಮುಖವು ರೌದ್ರವಾಗಿಯೂ ಇರಬೇಕು. ಇದೇ ಐಶ್ವರ್ಯರೂಪವೆಂದು ಹೇಳಲ್ಪಡುತ್ತದೆ ನಾಲ್ಕು ಮುಖದಿಂದ ಕೂಡಿದ ಈ ಮೂರ್ತಿಯನ್ನು ವಿಹಿತವಾದ ಬೇರೆ ರೂಪದಿಂದಲೂ ನಿರ್ಮಿಸಬಹುದು

೪೬–೫೦ ತಾರ್ಕ್ಷ್ಯನೆಂಬ ವಾಸುದೇವಮೂರ್ತಿಯನ್ನು ಚತುರ್ಭುಜದಿಂದ ಕೂಡಿರುವಂತೆಯೂ ರಚಿಸಬಹುದು ವಾಹನಭೂತನಾದ ಗರುಡನನ್ನು ಅಂಜಲಿಬಂಧದಿಂದ ಕೂಡಿರುವಂತೆ ನಿರ್ಮಿಸಬೇಕು ಹರಿಯು ಆ ಗರುಡನ ಬೆನ್ನಿನಮೇಲೆ ಸುಖವಾಗಿ ಕುಳಿತಿರಬೇಕು ಆ ಹರಿಯ ಕೈಯ್ಯಿನಲ್ಲಿ ಪದ್ಮವಿರಬೇಕು ಗದಾಚಕ್ರ ಇವೆರಡೂ ಆ ಗರುಡನ ರೆಕ್ಕೆಗಳಮೇಲೆ ಕುಳಿತಂತೆ ರಚಿಸಬೇಕು ಲಕ್ಷ್ಮಿ

ಸುಖೋಪವಿಷ್ಟಸ್ತತ್ಪೃಷ್ಠೇ ತತ್ಕರಸ್ಥೋ ಹಿ ಪಂಕಜಃ ।
ಉಪವಿಷ್ಟೌ ಗದಾಚಕ್ರೌ ಕರ್ತವ್ಯೌ ತಾರ್ಕ್ಷ್ಯಪಕ್ಷಯೋಃ ॥ ೪೭ ॥

ತಾರ್ಕ್ಷ್ಯಾಸನಸ್ಥಾ ಶ್ರೀಃ ಕಾರ್ಯಾ ವಾಮೋತ್ಸಂಗಗತಾಪಿ ವಾ ।
ಶೇಷಭೋಗೋಪವಿಷ್ಟೋ ವಾ ಕಾರ್ಯೋ ದೇವೋ ಮನೋಹರಃ ॥ ೪೮ ॥

ತತ್ಫಣೈರೇವ ರಚಿತಂ ದುರ್ನಿರೀಕ್ಷ್ಯಂ ಪ್ರಭೋರ್ಮುಖಂ ।
ಶೇಷಭೋಗೋಪವಿಷ್ಟಸ್ಯ ಶೂನ್ಯಂ ಕರಚತುಷ್ಟಯಂ ॥ ೪೯ ॥

ಕಾರ್ಯಂ ಚಕ್ರಂ ಗದಾ ಕಾರ್ಯಾ ಸದೇಹಾ ತತ್ಸಮೀಪಗಾ ।
ಲಕ್ಷ್ಮೀಃ ಕಾರ್ಯಾ ತಥಾ ತಸ್ಯ ಶೇಷಭೋಗಗತಾಪಿ ವಾ ॥ ೫೦ ॥

ಶೇಷಪರ್ಯಂಕಶಯನೇ ಕಾರ್ಯೋ ವಾ ಭಗವಾನ್ ಹರಿಃ ।
ಐರಾವತಃ ಸಮುದ್ಭೂತಃ ಯಥಾರೂಪೋ ಮಯೇರಿತಃ ॥ ೫೧ ॥

ನೃಸಿಂಹರೂಪಂ ಕಥಿತಂ ವಾರಾಹಂ ಕಾಪಿಲಂ ತಥಾ ।
ವಿಶ್ವರೂಪಂ ಹಯಗ್ರೀವಂ ಪದ್ಮನಾಭಂ ತಥೈವ ಚ ॥ ೫೨ ॥

---

ಯನ್ನು ಗರುಡನಮೇಲೆ ಕುಳಿತಿರುವಂತಾಗಲೀ ಅಥವಾ ಹರಿಯ ಎಡಭಾಗದ ತೊಡೆಯಮೇಲೆ ಕುಳಿತಿರುವಂತಾಗಲೀ ರಚಿಸಬೇಕು ಅಥವಾ ಶೇಷನ ದೇಹದಮೇಲೆ ರಮ್ಯರೂಪದಿಂದ ಕುಳಿತಿರುವಂತೆಯಾದರೂ ಹರಿಯನ್ನು ನಿರ್ಮಿಸಬಹುದು ಆ ಶೇಷನ ಹೆಡೆಗಳ ಮಧ್ಯದಲ್ಲಿ ನೋಡಲಶಕ್ಯವಾದ ತೇಜಸ್ಸಿನಿಂದ ಕೂಡಿರುವಂತೆ ಹರಿಯ ಮುಖವನ್ನು ನಿರ್ಮಿಸಬೇಕು ಹಾಗೆ ಶೇಷನಮೇಲೆ ಕುಳಿತಿರುವ ಹರಿಯ ನಾಲ್ಕು ಕೈಗಳೂ ಶೂನ್ಯವಾಗಿರಬೇಕು ಚಕ್ರವನ್ನೂ, ವೇಗದಿಂದ ಕೂಡಿದ ಗದೆಯನ್ನೂ ಅವನ ಸಮೀಪದಲ್ಲಿ ಚಿತ್ರಿಸಬೇಕು ಲಕ್ಷ್ಮಿಯನ್ನು ಅವನ ತೊಡೆಯ ಮೇಲಾಗಲೀ, ಶೇಷನ ದೇಹದಮೇಲಾಗಲೀ ರಚಿಸಬಹುದು ಅಥವಾ ಶೇಷನೆಂಬ ಶಯನದಲ್ಲಿ ಪವಡಿಸಿರುವಂತೆ ಪೂಜ್ಯನಾದ ಆ ಹರಿಯನ್ನು ರಚಿಸಬಹುದು

೫೧–೫೪ ಸಮುದ್ರದಲ್ಲಿ ಉದ್ಭವಿಸಿದ ಐರಾವತವನ್ನೂ ನಾನು ಹೇಳಿರುವ ರೂಪದೊಡನೆ ಚಿತ್ರಿಸಬೇಕು ನೃಸಿಂಹ, ವಾರಾಹ, ಕಾಪಿಲ, ವಿಶ್ವರೂಪ, ಹಯಗ್ರೀವ, ಪದ್ಮನಾಭ, ಬ್ರಹ್ಮಸಂಬಂಧಿಯಾದ ಹಾಗೂ ರುದ್ರಸಂಬಂಧಿಯಾದ ಮತ್ತು ರಾಮಸಂಬಂಧಿಯಾದ ಈ ರೂಪಗಳೆಲ್ಲವನ್ನೂ ಮಹಾತ್ಮನಾದ ಪುಷ್ಕರನೇ

ಬ್ರಾಹ್ಮಂ ರೌದ್ರಂ ಚ ರಾಮಾಯಂ ಪುಷ್ಕರೇಣ ಮಹಾತ್ಮನಾ ।
ಕರ್ತವ್ಯೋ ವಾಮನೋ ದೇವಃ ಸಂಕಟೈರ್ಗಾತ್ರಪರ್ವಭಿಃ ॥ ೫೩ ॥

ಪೀನಗಾತ್ರಶ್ಚ ಕರ್ತವ್ಯೋ ದಂಡೀ ಚಾಧ್ಯಯನೋದ್ಯತಃ ।
ದೂರ್ವಾಶ್ಯಾಮಶ್ಚ ಕರ್ತವ್ಯಃ ಕೃಷ್ಣಾಜಿನಧರಸ್ತಥಾ ॥ ೫೪ ॥

ಸಜಲಾಂಬುದಸಂಕಾಶಸ್ತಥಾ ಕಾರ್ಯಸ್ತ್ರಿವಿಕ್ರಮಃ ।
ದಂಡಪಾಶಧರಃ ಕಾರ್ಯಃ ಶಂಖಸಂಚುಂಬಿತಾಧರಃ ॥ ೫೫ ॥

ಶಂಖಚಕ್ರಗದಾಪದ್ಮಾಃ ಕಾರ್ಯಾಸ್ತಸ್ಯ ಸ್ವರೂಪಿಣಃ ।
ನೃದೇಹಾಸ್ತೇ ನ ಕರ್ತವ್ಯಾಃ ಶೇಷಂ ಕಾರ್ಯಂ ತು ಪೂರ್ವವತ್ ॥ ೫೬ ॥

ಏಕೋರ್ಧ್ವವದನಃ ಕಾರ್ಯೋ ದೇವೋ ವಿಸ್ಫಾರಿತೇಕ್ಷಣಃ ।
ರೂಪಂ ನರಸ್ಯ ಕಥಿತಂ ತಥಾ ನಾರಾಯಣಸ್ಯ ತೇ ॥ ೫೭ ॥

ಕೃಷ್ಣಸ್ಯ ಹರಿಣಾ ಸಾರ್ಧಂ ಪೂರ್ವಂ ವರುಣಸೂನುನಾ ।
ಹಂಸೋ ಮತ್ಸ್ಯಸ್ತಥಾ ಕೂರ್ಮಃ ಕಾರ್ಯಾಸ್ತದ್ರೂಪಧಾರಿಣಃ ॥ ೫೮ ॥

---

ಹೇಳಿರುವನು ವಾಮನಮೂರ್ತಿಯಾದ ಸ್ವಾಮಿಯನ್ನು ನಿಬಿಡವಾದ ಸಂಧಿಬಂಧಗಳುಳ್ಳ ದೇಹದಿಂದ ಕೂಡಿರುವಂತೆ ರಚಿಸಬೇಕು ದಪ್ಪವಾದ ಶರೀರದಿಂದ ಕೂಡಿಯೂ, ದಂಡಧಾರಿಯಾಗಿ ಅಧ್ಯಯನಕ್ಕೆ ಸಜ್ಜುಗೊಂಡಿರುವಂತೆಯೂ ನಿರ್ಮಿಸಬೇಕು ಗರಿಕೆಯಂತೆ ಶ್ಯಾಮವರ್ಣದಿಂದ ಕೂಡಿ ಕೃಷ್ಣಾಜಿನಧಾರಿಯಾಗಿರಬೇಕು

೫೫ ೫೮ ತ್ರಿವಿಕ್ರಮಮೂರ್ತಿಯನ್ನು ನೀರು ತುಂಬಿರುವ ಕೃಷ್ಣಮೇಘದಂತ ರಚಿಸಬೇಕು ಅವನು ದಂಡ ಮತ್ತು ಪಾಶಾಯುಧಗಳನ್ನು ಹೊಂದಿ ಶಂಖವನ್ನು ತುಟಿಯಮೇಲೆ ಇಟ್ಟುಕೊಂಡಿರಬೇಕು ಶಂಖಚಕ್ರಗದಾಪದ್ಮಗಳನ್ನು ಮನುಷ್ಯ ರೂಪದಿಂದ ರಚಿಸದೆ ಆಯಾಯ ರೂಪದಿಂದಲೇ ರಚಿಸಬೇಕು ಉಳಿದುದೆಲ್ಲವೂ ನಾನು ಮೊದಲು ಹೇಳಿರುವಂತೆ ಇರಬಹುದು ಒಂದೇಮುಖವನ್ನು ಮೇಲ್ಮುಖವಾಗಿ ಮಾಡಿರುವಂತೆಯೂ ಆಶ್ಚರ್ಯದಿಂದ ಸ್ಫುರಿತವಾದ ನೇತ್ರಗಳಿಂದ ಕೂಡಿಯೂ ಇರಬೇಕು. ನರ ಮತ್ತು ನಾರಾಯಣ ಇವರ ರೂಪವನ್ನೂ, ಕೃಷ್ಣ, ಹರಿ ಇವರ ರೂಪವನ್ನೂ ಸಹ ವರುಣಪುತ್ರನೇ ಹಿಂದೆ ಹೇಳಿರುವನು ಹಂಸ, ಮತ್ಸ್ಯ, ಕೂರ್ಮ ಇವುಗಳನ್ನು ಆಯಾಯ ರೂಪಗಳಿಂದ ಕೂಡಿಯೇ ರಚಿಸಬೇಕು

ಶೃಂಗಮತ್ಸ್ಯಸ್ತು ಕರ್ತವ್ಯೋ ದೇವದೇವೋ ಜನಾರ್ದನಃ ।
ಸ್ತ್ರೀರೂಪಶ್ಚ ತಥಾ ಕಾರ್ಯಃ ಸರ್ವಾಭರಣಭೂಷಿತಃ ॥ ೫೯ ॥

ಕರೇಽಮೃತಘಟಶ್ಚಾಸ್ಯ ಕರ್ತವ್ಯೋ ಭೂರಿದಕ್ಷಿಣಃ ।
ಪೃಥುಃ ಕಾರ್ಯಸ್ತಥಾ ರಾಜಾ ಚಕ್ರವರ್ತ್ಯನ್ತಲಕ್ಷಣಃ ॥ ೬೦ ॥

ಕಾರ್ಯಸ್ತು ಭಾರ್ಗವೋ ರಾಮಃ ಜಟಾಮಂಡಲದುರ್ದೃಶಃ ।
ಹಸ್ತೇಽಸ್ಯ ಪರಶುಃ ಕಾರ್ಯಃ ಕೃಷ್ಣಾಜಿನಧರಸ್ಯ ತು ॥ ೬೧ ॥

ರಾಮೋ ದಾಶರಥಿಃ ಕಾರ್ಯೋ ರಾಜಲಕ್ಷಣಲಕ್ಷಿತಃ ।
ಭರತೋ ಲಕ್ಷ್ಮಣಶ್ಚೈವ ಶತ್ರುಘ್ನಶ್ಚ ಮಹಾಯಶಾಃ ॥ ೬೨ ॥

ತಥೈವ ಸರ್ವೇ ಕರ್ತವ್ಯಾಃ ಕಿಂತು ಮೌಲಿವಿವರ್ಜಿತಾಃ ।
ಗೌರಸ್ತು ಕಾರ್ಯೋ ವಾಲ್ಮೀಕಿರ್ಜಟಾಮಂಡಲದುರ್ದೃಶಃ ॥ ೬೩ ॥

ತಪಸ್ಯಭಿರತಃ ಶಾನ್ತೋ ನ ಕೃಶೋ ನ ಚ ಪೀವರಃ ।
ವಾಲ್ಮೀಕಿರೂಪಂ ಸಕಲಂ ದತ್ತಾತ್ರೇಯಸ್ಯ ಕಾರಯೇತ್ ॥ ೬೪ ॥

೫೯-೬೧ ಮತ್ಸ್ಯಾವತಾರನಾದ, ದೇವಾಧಿಪತಿಯಾದ ಜನಾರ್ದನನನ್ನು ಎಲ್ಲಾ ಆಭರಣಗಳಿಂದ ಕೂಡಿಯೂ, ಕೈಯ್ಯಿನಲ್ಲಿ ದಕ್ಷಿಣೆಯೊಡಗೂಡಿದ ಅಮೃತಘಟ ಹಿಡಿದಿರುವಂತೆಯೂ ರಚಿಸಬೇಕು ಪೃಥುಚಕ್ರವರ್ತಿಯನ್ನು ಎಲ್ಲಾ ಚಕ್ರವರ್ತಿ ಲಕ್ಷಣಗಳಿಂದ ಕೂಡಿ ರಚಿಸಬೇಕು ಭಾರ್ಗವರಾಮನನ್ನು ಜಟಾಮಂಡಲದಿಂದ ನೋಡಲಶಕ್ಯನಾಗಿರುವಂತೆಯೂ, ಕೃಷ್ಣಾಜಿನಧಾರಿಯಾಗಿ ಕೈಯ್ಯಿನಲ್ಲಿ ಕೊಡಲಿಯನ್ನು ಹಿಡಿದಿರುವಂತೆಯೂ ರಚಿಸಬೇಕು

೬೨-೬೪ ದಾಶರಥಿರಾಮನನ್ನು ರಾಜಲಕ್ಷಣದಿಂದ ಕೂಡಿರುವಂತ ರಚಿಸಬೇಕು ಭರತ, ಲಕ್ಷ್ಮಣ, ಶತ್ರುಘ್ನರೆಂಬ ಕೀರ್ತಿಶಾಲಿಗಳಾದ ತಮ್ಮಂದಿರನ್ನೂ ಬರೆಯಬೇಕು ಆದರೆ ಅವರಿಗೆ ಶಿರೋಭೂಷಣಗಳಿರಬಾರದು ವಾಲ್ಮೀಕಿಯನ್ನು ಗೌರವರ್ಣದಿಂದ ಕೂಡಿಯೂ, ಜಟಾಮಂಡಲದಿಂದ ದುರ್ನಿರೀಕ್ಷನಾಗಿಯೂ ಇರುವಂತೆ ರಚಿಸಬೇಕು ಶಾಂತನಾಗಿಯೂ ತಪೋನಿರತನಾಗಿಯೂ ಇರಬೇಕು ಇವನ ದೇಹವು ಬಹಳ ಕೃಶವಾಗಿಯೂ, ಬಹಳ ದಪ್ಪವಾಗಿಯೂ ಸಹ ಇರಬಾರದು ದತ್ತಾತ್ರೇಯನನ್ನು ಎಲ್ಲಾ ಭಾಗದಲ್ಲಿಯೂ, ವಾಲ್ಮೀಕಿಯಂತೆಯೇ ರಚಿಸಬೇಕು ವ್ಯಾಸರನ್ನು ಕಪ್ಪಾಗಿಯೂ, ಶಾಂತಮೂರ್ತಿಯಾಗಿಯೂ, ಚಿಕ್ಕಿನ ಕಣ್ಣಿನಂತೆ

ಕೃಷ್ಣಶಾನ್ತತನುರ್ವ್ಯಾಸಃ ಪಿಂಗಲೋತಿಜಟಾಧರಃ ।
ಸುಮಂತುರ್ಜೈಮಿನಿಃ ಪೈಲೋ ವೈಶಂಪಾಯನ ಏವ ಚ ॥ ೬೫ ॥

ತಸ್ಯ ಶಿಷ್ಯಾಸ್ತು ಕರ್ತವ್ಯಾಶ್ಚತ್ವಾರಃ ಪರಿಪಾರ್ಶ್ವಯೋಃ ।
ಯುಧಿಷ್ಠಿರೋಽಥ ಕರ್ತವ್ಯೋ ರಾಜಲಕ್ಷಣಲಕ್ಷಿತಃ ॥ ೬೬ ॥

ಶ್ಮಶ್ರುಹೀನೋಽತಿಪೀನಾಂಗಃ ಕ್ಷಾಮಮಧ್ಯೋ ವೃಕೋದರಃ ।
ತಿರ್ಯಕ್‌ಪ್ರೇಕ್ಷೀ ಸಂಹತಭ್ರುಃ ಕರ್ತವ್ಯಶ್ಚ ತಥಾ ಗದೀ ॥ ೬೭ ॥

ದೂರ್ವಾಶ್ಯಾಮೋಽರ್ಜುನಃ ಕಾರ್ಯಃ ಕಿರೀಟೀ ಲೋಹಿತಾಂಗದಃ ।
ಬಾಣಚಾಪಧರಃ ಶ್ರೀಮಾನ್ ಸರ್ವಾಭರಣಭೂಷಿತಃ ॥ ೬೮ ॥

ನಕುಲಃ ಸಹದೇವಶ್ಚ ಕಾರ್ಯಾವಶ್ವಿಸಮಾವುಭೌ ।
ಖಡ್ಗಚರ್ಮಧರೌ ಕಾರ್ಯೌ ನತ್ವೇವೌಷಧಿಪಾಣಿನೌ ॥ ೬೯ ॥

---

ಪಿಂಗಳವರ್ಣದ ಕಣ್ಣಿನಿಂದ ಕೂಡಿಯೂ, ಬಹಳ ಹೆಚ್ಚಾದ ಜಟಾಭಾರಧಾರಿಯಾಗಿಯೂ ಇರುವಂತೆ ರಚಿಸಬೇಕು ಪಕ್ಕದಲ್ಲಿ ಸುಮಂತು, ಜೈಮಿನಿ, ಪೈಲ, ವೈಶಂಪಾಯನರೆಂಬ ಅವನ ನಾಲ್ಕು ಶಿಷ್ಯರನ್ನೂ ರಚಿಸಬೇಕು

೬೬-೬೯ ಧರ್ಮರಾಜನನ್ನು ರಾಜಲಕ್ಷಣಗಳಿಂದ ಕೂಡಿರುವಂತೆ ರಚಿಸಬೇಕು ಭೀಮನು ಗಡ್ಡಮೀಸೆಗಳಿಲ್ಲದೆಯೂ, ಬಹಳ ಸ್ಥೂಲದೇಹದಿಂದ ಕೂಡಿ ಸೂಕ್ಷ್ಮಮಧ್ಯನಾಗಿಯೂ ಇರಬೇಕು. ಕೂಡಿದ ಹುಬ್ಬುಗಳಿಂದ ಕೂಡಿ ಅಡ್ಡಡ್ಡಲಾಗಿ ನೋಡುತ್ತಾ ಗದಾಪಾಣಿಯಾಗಿರಬೇಕು ಅರ್ಜುನನನ್ನು ಗರಿಕೆಯಂತೆ ಶ್ಯಾಮಲ ವರ್ಣದಿಂದ ಕೂಡಿ ಕಿರೀಟಧಾರಿಯಾಗಿ, ಕೆಂಪಾದ ತೋಳುಬಳೆಗಳನ್ನು ಧರಿಸಿ, ಇತರ ಆಭರಣಗಳೊಡನೆ ಧನುರ್ಬಾಣಗಳನ್ನೂ ಧರಿಸಿರುವಂತೆ ರಚಿಸಬೇಕು ನಕುಲ ಸಹದೇವರನ್ನು ಅಶ್ವಿನೀದೇವತೆಗಳಂತೆ ನಿರ್ಮಿಸಬೇಕು ಆದರೆ ಕೈಗಳಲ್ಲಿ ಓಷಧಿಗಳನ್ನು ಧರಿಸಿರಕೂಡದು ಕತ್ತಿ ಮತ್ತು ಗುರಾಣಿಗಳನ್ನು ಧರಿಸಿರಬೇಕು

ನೀಲನೀರಜಪತ್ರಾಭಾ ಕೃಷ್ಣಾ ಕಾರ್ಯಾತಿರೂಪಿಣೀ ।
ಪದ್ಮಪತ್ರಾಗ್ರಗೌರಾ ತು ಕರ್ತವ್ಯಾ ದೇವಕೀ ತಥಾ ॥ ೭೦ ॥

ಮಧೂಕಪುಷ್ಪಸಚ್ಛಾಯಾ ಯಶೋದಾಪಿ ತಥಾ ಭವೇತ್ ।
ಏಕಾನಂಶಾಪಿ ಕರ್ತವ್ಯಾ ದೇವೀ ಪದ್ಮಕರಾ ತಥಾ ॥ ೭೧ ॥

ಕಟಿಸ್ಥ ವಾಮಹಸ್ತಾ ಸಾ ಮಧ್ಯಸ್ಥಾ ರಾಮಕೃಷ್ಣಯೋಃ ।
ಸೀರಪಾಣಿರ್ಬಲಃ ಕಾರ್ಯೋ ಮುಸಲೀ ಚೈವ ಕುಂಡಲೀ ॥ ೭೨ ॥

ಶ್ವೇತೋಽತಿನೀಲವಸನೋ ಮದಾದಂಚಿತಲೋಚನಃ ।
ಕೃಷ್ಣಶ್ಚಕ್ರಧರಃ ಕಾರ್ಯೋ ನೀಲೋತ್ಪಲದಲಚ್ಛವಿಃ ॥ ೭೩ ॥

ಇಂದೀವರಕರಾ ಕಾರ್ಯಾ ತಥಾ ಶ್ಯಾಮಾ ಹಿ ರುಕ್ಮಿಣೀ ।
ತಾರ್ಕ್ಷ್ಯಸ್ಥಾ ಸಾಚ ಕರ್ತವ್ಯಾ ಸತ್ಯಭಾಮಾ ಸುರೂಪಿಣೀ ॥ ೭೪ ॥

---

೭೦–೭೩  ದ್ರೌಪದಿಯನ್ನು ಕಪ್ಪುಕಮಲದ ಪತ್ರದಂತೆ ರಮ್ಯರೂಪದಿಂದ ಕೂಡಿ ನಿರ್ಮಿಸಬೇಕು ದೇವಕಿಯನ್ನು ಕಮಲ ಪತ್ರದಂತೆ ಗೌರವರ್ಣದಿಂದ ಕೂಡಿರುವಂತೆ ರಚಿಸಬೇಕು ಯಶೋದಾದೇವಿಯನ್ನು ಹಿಪ್ಪೆಯ ಹೂವಿನ ಬಣ್ಣದಂತೆ ಶುಭ್ರ ವರ್ಣದಿಂದ ರಚಿಸಬೇಕು ಏಕಾನಂಶಾ ಎಂಬ ದೇವತೆಯನ್ನು ಅವಳು ಕೈಯ್ಯಲ್ಲಿ ಪದ್ಮವನ್ನು ಹಿಡಿದು ಎಡಗೈಯ್ಯನ್ನು ಎಡಭಾಗದ ಸೊಂಟದ ಮೇಲಿಟ್ಟು ರಾಮಕೃಷ್ಣ ಇವರ ಮಧ್ಯದಲ್ಲಿರುವಂತೆ ನಿರ್ಮಿಸಬೇಕು ಬಲರಾಮನು ನೇಗಿಲು ಮತ್ತು ಮುಸಲಾಯುಧಗಳನ್ನು ಧರಿಸಿ, ಕುಂಡಲಗಳನ್ನೂ ಧರಿಸಿರಬೇಕು. ಬಿಳುಪಾಗಿಯೂ, ಕಪ್ಪಾದ ವಸ್ತ್ರದಿಂದ ಕೂಡಿಯೂ, ಮದ್ಯ ಮದದಿಂದ ಕಣ್ಣುಗಳನ್ನು ತಿರುಗಿಸುತ್ತಲೂ ಇರಬೇಕು ಕೃಷ್ಣನನ್ನು ಚಕ್ರಾಯುಧವನ್ನು ಧರಿಸಿ ಕಪ್ಪುಕಮಲದ ವರ್ಣದಿಂದ ಕೂಡಿರುವಂತೆ ರಚಿಸಬೇಕು

೭೪–೭೭  ರುಕ್ಮಿಣಿಯನ್ನು ಶ್ಯಾಮವರ್ಣದಿಂದ ಕೂಡಿಯೂ ಕೈಯಲ್ಲಿ ಇಂದೀವರ ಕುಸುಮವನ್ನು ಧರಿಸಿರುವಂತೆಯೂ ರಚಿಸಬೇಕು ಸುರೂಪಿಣಿಯಾದ ಸತ್ಯಭಾಮೆಯನ್ನು ಗರುಡನ ಮೇಲಿರುವಂತೆಯೂ ರಚಿಸಬೇಕು ಇತರ ದೇವಿ

ಅನ್ಯೈಶ್ಚ ದೇವ್ಯಃ ಕರ್ತವ್ಯಾಃ ಸುರೂಪಾಃ ಸುಮನೋಹರಾಃ ।
ಚಾಪಬಾಣಧರಃ ಕಾರ್ಯಃ ಪ್ರದ್ಯುಮ್ನಶ್ಚ ಸುದರ್ಶನಃ ॥ ೨೫ ॥

ರಾಜನ್ ದೂರ್ವಾದಲಶ್ಯಾಮಃ ಶ್ವೇತವಾಸಾ ಮದೋತ್ಕಟಃ ।
ಕರ್ತವ್ಯಶ್ಚಾನಿರುದ್ಧೋಽಪಿ ಖಡ್ಗಚರ್ಮಧರಃ ಪ್ರಭುಃ ॥ ೨೬ ॥

ಸಾಂಬಃ ಕಾರ್ಯೋ ಗದಾಹಸ್ತಃ ಸುರೂಪಶ್ಚ ವಿಶೇಷತಃ ।
ಸಾಂಬಾನಿರುದ್ಧೌ ಕರ್ತವ್ಯೌ ಪದ್ಮಾಭೌ ರಕ್ತವಾಸಸೌ ।
ಖಡ್ಗಹಸ್ತೌ ಚ ಕರ್ತವ್ಯೌ ಸ್ತ್ರೀಯೋ ವೇಷೌ ತು ಪಾರ್ಶ್ವಯೋಃ ॥ ೨೭ ॥

ಯುಯುಧಾನಸ್ತಥಾ ಪ್ರಾಂಶುಬಾಣಚಾಪಧರೋ ಭವೇತ್ ।
ವರ್ಣೇನೋತ್ಪಲಗರ್ಭಾಭೋ ದೀರ್ಘಬಾಹುಃ ಸುಲೋಚನಃ ॥ ३೮ ॥

---

ಯರನ್ನೂ ಸಹ ರಮ್ಯವಾದ ರೂಪದಿಂದ ಕೂಡಿ ಅಂದವಾಗಿರುವಂತೆ ರಚಿಸಬೇಕು ಪ್ರದ್ಯುಮ್ನನನ್ನು ಸುಲಕ್ಷಣದಿಂದ ಕೂಡಿಯೂ, ಚಾಪಬಾಣಧಾರಿಯಾಗಿಯೂ ಇರುವಂತೆ ನಿರ್ಮಿಸಬೇಕು ಗರಿಕೆಯಂತೆ ಶಾಮವರ್ಣದಿಂದ ಕೂಡಿ ಬಿಳಿಯ ವಸ್ತ್ರವನ್ನುಟ್ಟು ಮದದಿಂದ ಕೊಬ್ಬಿರಬೇಕು ಅನಿರುದ್ಧನನ್ನು ಖಡ್ಗ ಮತ್ತು ಗುರಾಣಿಗಳಿಂದ ಕೂಡಿರುವಂತೆ ರಚಿಸಬೇಕು ಸಾಂಬನನ್ನು ಗದಾಧಾರಿಯಾಗಿಯೂ ಬಹಳ ಸುರೂಪಿಯಾಗಿಯೂ ಇರುವಂತೆ ನಿರ್ಮಿಸಬೇಕು ಸಾಂಬ ಅನಿರುದ್ಧ ಇವರಿಬ್ಬರನ್ನೂ ಪದ್ಮದ ವರ್ಣದಿಂದ ಕೂಡಿ ರಕ್ತವಸ್ತ್ರಧಾರಿಗಳಾಗಿರುವಂತೆ ರಚಿಸಬೇಕು ಅವರ ಪಾರ್ಶ್ವದಲ್ಲಿ ಖಡ್ಗಹಸ್ತರಾದ ಎರಡು ಸ್ತ್ರೀವೇಷಧಾರಿಗಳಿರಬೇಕು

೨೮-೨೯ ಯುಯುಧಾನನನ್ನು ಉನ್ನತದೇಹದಿಂದ ಕೂಡಿಯೂ, ಚಾಪಬಾಣಧಾರಿಯಾಗಿರುವಂತೆಯೂ ರಚಿಸಬೇಕು ನೈದಲೆಯ ಬಣ್ಣದಂತಿದ್ದು ಉದ್ದವಾದ ತೋಳುಗಳಿಂದಲೂ ಕೂಡಿರಬೇಕು ದೇವಾಧಿಪತಿಯಾದ ಮಹಾವಿಷ್ಣುವಿನ ಅಂಶದಿಂದ ಉಂಟಾಗುವ ಅನೇಕ ಅವತಾರಗಳನ್ನು ಅಪರಿಮಿತಗಳಾದುದರಿಂದ ಇದಕ್ಕಿಂತಲೂ ವಿಸ್ತಾರವಾಗಿ ಹೇಳಲು ಸಾಧ್ಯವೇ ಇಲ್ಲ ಆಯಾಯ ರೂಪಗಳಿಗೆ

ಪ್ರಾದುರ್ಭಾವಾ ದೇವದೇವಸ್ಯ ವಿಷ್ಣೋಃ
ವಕ್ತುಂ ಶಕ್ಯಾ ವಿಸ್ತರಾನ್ನೈವ ರಾಜನ್ ।
ಬುದ್ಧ್ಯಾ ತೇಷಾಂ ಕರ್ಮಯೋಗಂ ಯಥಾವ-
ಚ್ಛಾಸ್ತ್ರಂ ದೃಷ್ಟ್ವಾ ತೇ ತು ಕಾರ್ಯಾ ಬುಧೇನ ॥ ೭೯ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ದೇವೋದ್ಯಾನರೂಪನಿರ್ಮಾಣೋ ನಾಮ
ಪಂಚಾಶೀತಿತಮೋಽಧ್ಯಾಯಃ

ತಕ್ಕ ಕರ್ಮಗಳನ್ನೂ, ರೂಪಗಳನ್ನೂ ಶಾಸ್ತ್ರದಿಂದ ತಿಳಿದು ಸ್ವಬುದ್ಧಿಯಿಂದಲೂ ವಿಚಾರಮಾಡಿ ಬುದ್ಧಿವಂತನು ನಿರ್ಮಿಸಬೇಕು

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ದೇವೋದ್ಯಾನರೂಪನಿರ್ಮಾಣವೆಂಬ
ಎಂಭತ್ತೈದನೆಯ ಅಧ್ಯಾಯ ಮುಗಿದಿದೆ



॥ ಓಂ ॥

॥ ಶ್ರೀ ಹಯಗ್ರೀವಾಯ ನಮಃ ॥

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### ॥ ಷಡಶೀತಿತಮೋಽಧ್ಯಾಯಃ ॥

॥ ವಜ್ರ ಉವಾಚ ॥

**ಪ್ರೋಕ್ತಂ ತ್ವಯಾ ದ್ವಿಜಶ್ರೇಷ್ಠ ಪ್ರತಿಮಾ ಲಕ್ಷಣಂ ಶುಭಂ ।**
**ಪ್ರಾಸಾದಲಕ್ಷಣಂ ಸಮ್ಯಕ್ಕಥಯಸ್ವಾಮಿತದ್ಯುತೇ ॥ ೧ ॥**

॥ ಮಾರ್ಕಂಡೇಯ ಉವಾಚ ॥

**ಹಸ್ತಪ್ರಮಾಣಂ ತತ್ಪ್ರೋಕ್ತಂ ಪ್ರಾಸಾದಾನಾಂ ತು ಲಕ್ಷಣಂ ।**
**ಸಂಸ್ಥಾನತೋ ವಿನಿರ್ದಿಷ್ಟಂ ಹಸ್ತಮಾನಾನುಕೀರ್ತನಂ ॥ ೨ ॥**

**ತದಹಂ ತೇ ಪ್ರವಕ್ಷ್ಯಾಮಿ ತನ್ಮೇ ನಿಗದತಃ ಶೃಣು ।**
**ಪ್ರಾಸಾದಲಕ್ಷಣಂ ಶ್ರೇಷ್ಠ ವಿಜಯಾರೋಗ್ಯವರ್ಧನಂ ॥ ೩ ॥**

---

### ಎಂಭತ್ತಾರನೆಯ ಅಧ್ಯಾಯ.

೧–೩ ವಜ್ರನು ಪ್ರಶ್ನೆಮಾಡುತ್ತಾನೆ —ಎಲೈ ದ್ವಿಜೋತ್ತಮರೇ, ಇದು ವರಿವಿಗೂ ತಾವು ಶುಭವಾದ ಪ್ರತಿಮಾಲಕ್ಷಣವನ್ನು ಹೇಳಿದಿರಿ ಇನ್ನು ಮುಂದ ಪ್ರಾಸಾದಲಕ್ಷಣವೇನೆಂಬುದನ್ನು ದಯವಿಟ್ಟು ಸ್ಪಷ್ಟವಾಗಿ ಹೇಳಬೇಕು ಇದಕ್ಕೆ ಉತ್ತರವಾಗಿ ಮಾರ್ಕಂಡೇಯರು ಹೇಳುತ್ತಾರೆ ಪ್ರಾಸಾದದ ಲಕ್ಷಣವೆಲ್ಲವೂ ಹಸ್ತ (ಮೊಳ) ಪ್ರಮಾಣದಿಂದ ಹೇಳಲ್ಪಟ್ಟಿದೆ ಈ ಹಸ್ತಮಾನವೂ ಸಹ ಆಯಾಯ ಪ್ರಾಸಾದಗಳ ಸ್ಥಾನಕ್ಕೆ ತಕ್ಕಂತ ಹೇಳಲ್ಪಟ್ಟಿದ ಅದನ್ನು ನಾನು ಹೇಳುತ್ತೇನೆ ಕೇಳು, ಈ ಪ್ರಾಸಾದಲಕ್ಷಣದ ಅನುಸರಣವು ಬಹುಮಟ್ಟಿಗೂ ಶ್ರೇಷ್ಠವಾದುದು ವಿಜಯ ಮತ್ತು ಆರೋಗ್ಯ ಇವುಗಳ ಅಭಿವೃದ್ಧಿಗೆ ಇದು ಕಾರಣವಾಗುತ್ತದೆ

ಭಾಗಂ ತು ಜಗತೀ ಕಾರ್ಯಾ ಪ್ರಸಾದೋ ಭಾಗಮೇವ ಚ ।
ಕರ್ತವ್ಯಾ ಜಗತೀಮಾತ್ರತಲ್ಪೋಚ್ಛ್ರಾಯ ತ್ರಿಭೂಮಿಕಾ ॥ ೪ ॥

ಉಚ್ಛ್ರಾಯಾ ತೇನ ಕರ್ತವ್ಯಾ ಹ್ಯೇಕೈಕಾ ಭೂಮಿಕಾಗತಿಃ ।
ಭದ್ರಪೀಠಾಕೃತಿಃ ಕಾರ್ಯಾ ಭೂಮಿಕಾ ಭೂಮಿಕಾ ಪುನಃ ॥ ೫ ॥

ಪ್ರಾಸಾದಾರ್ಥಂ ಕಟಿಃ ಕಾರ್ಯಾ ಕೂಟನ್ಯೇವ ತಥೈವ ಚ ।
ಕಟಿಮೂಲಾಷ್ಟಭಾಗೇನ ಭವೇತ್ಸೋಪಾನವಿಸ್ತರಃ ॥ ೬ ॥

ಸಮಸಂಖ್ಯಂ ತು ಕರ್ತವ್ಯಂ ಸೋಪಾನಂ ಭೂಮಿಕಾಂ ಪ್ರತಿ ।
ಕೂಟಃ ಕಾರ್ಯಸ್ತ್ರಿಧೋಚ್ಛೇದಃ ಶುಭಾಮಲಕಸಾರಕಃ ॥ ೭ ॥

ಚತುರಸ್ರಸ್ತಥಾ ರಾಜನ್ ಕ್ರಮೋಪ ಚಯಸಂಯುತಃ ।
ವಿಚ್ಛೇದಾಶ್ಚಾತ್ರ ಕರ್ತವ್ಯಾಃ ಸಿಹ್ಮಮಾಲಾ ವಿಭೂಷಿತಾಃ ॥ ೮ ॥

ದ್ವಾರೋಚ್ಛ್ರಾಯಾಶ್ಚ ಕರ್ತವ್ಯಾ ದೇವಾಶ್ಚಾಷ್ಟಾಂಶಸಂಯುತಾಃ ।
ವಿಸ್ತಾರಂ ದ್ವಿಗುಣಂ ಚಾತ್ರ ದ್ವಾರೋಚ್ಛ್ರಾಯಂ ತು ಕಾರಯೇತ್ ॥ ೯ ॥

---

೪–೯ ಪ್ರಾಸಾದವನ್ನು ನಿರ್ಮಾಣಮಾಡುವ ಭೂಮಿಯಲ್ಲಿ ಮಧ್ಯದಲ್ಲಿ ಪ್ರಾಸಾದನಿರ್ಮಾಣ ಭೂಮಿಯನ್ನೂ ಸುತ್ತಲೂ ಬುಡಗಟ್ಟನ್ನು ವಿಭಾಗಮಾಡಿಕೊಳ್ಳಬೇಕು ಪ್ರಾಸಾದಕ್ಕೆ ಆಶ್ರಯವಾದ ಭೂಮಿಕೆಯ ಬುಡದಿಂದ ಕ್ರಮವಾಗಿ ಅಗಲದ ಪರಿಣಾಮಕ್ಕೆ ತಕ್ಕ ಎತ್ತರ ಹೊಂದಿರುವ ಮೂರು ಪರ್ಯಾಯ (ಮೆಟ್ಟಿಲು) ಗಳನ್ನು ನಿರ್ಮಿಸಬೇಕು ಆ ಭೂಮಿಯೂ ಭದ್ರಪೀಠದಂತಿರಬೇಕು ಅದರ ಮೇಲೆ ಪ್ರಾಸಾದಕ್ಕಾಗಿ ನಡುವಿನಂತಹ ಕಟಿಪ್ರದೇಶವನ್ನೂ ದಿಕ್ಪ್ರದೇಶಕ್ಕೆ ತಕ್ಕಂತೆ ಬುಡಗಟ್ಟನ್ನೂ ನಿರ್ಮಿಸಬೇಕು ಅದಕ್ಕೆ ಕಟಿಪ್ರದೇಶದ ಬುಡದ ಎಂಟನೇ ಒಂದು ಭಾಗದ ವಿಸ್ತಾರವುಳ್ಳ ಮೆಟ್ಟಿಲುಗಳಿರಬೇಕು ಭೂಮಿಕೆಯಿಂದ ಮೇಲಕ್ಕೆ ಮಾಡುವ ಮೆಟ್ಟಿಲುಗಳು ಸಮಸಂಖ್ಯೆಯನ್ನು ಹೊಂದಿರಬೇಕು ಮೇಲುಭಾಗದ ಶಿಖರಗಳನ್ನು ಮೂರು ಪಟ್ಟಿಗಳುಳ್ಳಂತೆಯೂ, ಮೇಲುಭಾಗದ ಪ್ರದೇಶವು ಚಚ್ಚೌಕವಾಗಿ ಕ್ರಮಕ್ರಮವಾಗಿ ವಿಸ್ತಾರವಿರುವಂತೆಯೂ ರಚಿಸಬೇಕು ಮೆಟ್ಟಿಲುಗಳ ಮಧ್ಯಮಧ್ಯದ ಪದರಗಳನ್ನು ಸಿಂಹಗಳ ಮಾಲಿಕೆಯಿಂದ ಅಲಂಕರಿಸಬೇಕು ಹಸ್ತಪಾದಾದಿ ಎಂಟು ಅಂಶಗಳಿಂದ ಕೂಡಿರುವ ದೇವತೆಗಳನ್ನೂ ದ್ವಾರದ ಎತ್ತರಕ್ಕೆ ತಕ್ಕಂತೆಯೇ ರಚಿಸಬೇಕು.

ದ್ವಾರಶೋಭಾವತೀ ಕಾರ್ಯಾ ಚಂದ್ರಶಾಲಾ ಸಮುಚ್ಛ್ರಿತಾ ।
ಕೂಟಪ್ರಥಮವಿಚ್ಛೇದೇ ಶುಭಾಮಲಕಸಾರಕೈಃ ॥ ೧೦ ॥

ದ್ವಾರೈಶ್ಚತುರ್ಭಿರ್ಭಗ್ನೈಸ್ತು ನಭಗ್ನೈರ್ವಾ ಮಹೀಪತೇ ।
ಪ್ರಾಸಾದಮೇತತ್ಕರ್ತವ್ಯಂ ಕುಟಚ್ಛೇದದ್ವಯೇ ತಥಾ ॥ ೧೧ ॥

ವಿಚ್ಛಿನ್ನಚಂದ್ರಶಾಲಾಭಿಶ್ಚತಸೃಭಿರಿವಾವೃತಂ ।
ಹಿಮವಾನ್ನಾಮ ವಿಖ್ಯಾತಃ ಪ್ರಾಸಾದೋಯಂ ಮನೋಹರಃ ॥ ೧೨ ॥

ಕೂಟಚ್ಛೇದದ್ವಯೋಪೇತೋ ಮಾಲ್ಯವಾನಭಿಧೀಯತೇ ।
ಏಕಕೂಟಸ್ತಥೈವಾಯಂ ಶೃಂಗವಾನಿತಿ ಕೀರ್ತಿತಃ ॥ ೧೩ ॥

ಅಗಾರಾಖ್ಯೋ ಭವತ್ಯೇಷ ದ್ವಾರೇಣೈಕೇನ ಶೃಂಗವಾನ್ ।
ಆಗಾರೋ ಭವನಾಖ್ಯಃ ಸ್ಯಾತ್ಪ್ರಾಸಾದಸ್ತು ದ್ವಿಮೇಖಲಃ ॥ ೧೪ ॥

೧೦–೧೨ ಮೊದಲನೆಯ ಅಂತಸ್ತು ಮುಗಿದನಂತರ ಅದರ ಮೇಲ್ಭಾಗದಲ್ಲಿ ರಮ್ಯವಾದ ದ್ವಾರಗಳಿಂದ ಕೂಡಿದ ಶಿರೋಗೃಹಗಳನ್ನು ರಚಿಸಬೇಕು ಇಂತಹ ಬಾಗಿಲುಗಳು ಕುಳ್ಳಾಗಿ ಆಗಲಿ ಎತ್ತರವಾಗಿ ಆಗಲಿ ಇರಬಹುದು ಇಂತಹ ಪ್ರಾಸಾದಗಳು ಎರಡು ಅಂತಸ್ತಿನಿಂದ ಕೂಡಿಯೂ ಇರುತ್ತವೆ ಬೇರೆ ಬೇರೆ ಯಾಗಿರುವ ನಾಲ್ಕು ಶಿರೋಗೃಹಗಳಿಂದ ಕೂಡಿದ್ದಲ್ಲಿ ರಮ್ಯವಾದ ಇಂತಹ ಪ್ರಾಸಾದಕ್ಕೆ ಹಿಮವಾನ್ ಎಂದು ಪ್ರಸಿದ್ಧಿಯುಂಟು

೧೩–೧೬ ಎರಡು ಉಪ್ಪರಿಗೆಗಳಿಂದ ಕೂಡಿದ್ದಲ್ಲಿ ಅದಕ್ಕೆ ಮಾಲ್ಯವಾನ್ ಎಂದು ಹೆಸರು ಅಂತಹುದೇ ಒಂದೇ ಅಂತಸ್ತಿನಲ್ಲಿದ್ದಲ್ಲಿ ಶೃಂಗವಾನ್ ಎಂದು ಹೆಸರು ಶೃಂಗವಾನ್ ಎಂಬ ಪ್ರಾಸಾದವೇ ಒಂದೇ ಬಾಗಿಲಿನಿಂದ ಕೂಡಿದಲ್ಲಿ ಅಗಾರವೆನಿಸಿಕೊಳ್ಳುತ್ತದೆ ಅಗಾರಪ್ರಾಸಾದವು ಎರಡು ವಲಯಗಳಿಂದ ಕೂಡಿದ್ದಲ್ಲಿ ಭಗವಾನ್ ಎನಿಸಿಕೊಳ್ಳುತ್ತದೆ ಇದೇ ಒಂದೇ ವಲಯದಿಂದ ಕೂಡಿದ್ದಲ್ಲಿ ಗೃಹವೆಂದೂ ಹೆಸರು ಶೃಂಗವಾನ್ ಎಂಬ ಪ್ರಾಸಾದವು ಎರಡು ವಲಯಗಳಿಂದ

ಗೃಹಾಖ್ಯಶ್ಚೈಷನಿರ್ದಿಷ್ಟಃ ಪ್ರಾಸಾದಶ್ಚೈಕಮೇಖಲಃ ।
ಶೃಂಗವಾನ್ನಿಷಧಾಖ್ಯಃ ಸ್ಯಾತ್ಪ್ರಾಸಾದಸ್ತು ದ್ವಿಮೇಖಲಃ ॥ ೧೫ ॥

ಸ ಏವ ನೀಲೋ ಭವತಿ ತಥಾಚೈವೈಕಮೇಖಲಃ ।
ಮಾಲ್ಯವಾನ್ ಶ್ವೇತಸಂಜ್ಞಸ್ಯಾತ್ಪ್ರಾಸಾದಸ್ತು ದ್ವಿಮೇಖಲಃ ॥ ೧೬ ॥

ವಿಂಧ್ಯನಾಮಾ ಭವತ್ಯೇಷ ತಥಾಚೈವೈಕಮೇಖಲಃ ।
ಆಗಾರಭೇದರಹಿತಃ ಸರ್ವಃ ಸರ್ವದಿವೌಕಸಾಂ ॥ ೧೭ ॥

ರಾಜನ್ ದೇವಗೃಹಾಃ ಕಾರ್ಯಾ ಯಥೇಷ್ಟಾಶಾಮುಖಾಃ ಶುಭಾಃ ।
ಆಗಾರಭೇದಾಃ ಕರ್ತವ್ಯಾಃ ಪೂರ್ವಪಶ್ಚಿಮದಿಙ್ಮುಖಾಃ ॥ ೧೮ ॥

ತೇಷಾಂ ಲಿಂಗಪತಿಷ್ಠೈಕಾ ಶಸ್ತಾ ಭವತಿ ಪಾರ್ಥಿವ ।
ದ್ವಿಮೇಖಲಾ ಯೇ ಕಥಿತಾಸ್ತಥಾಚೈವೈಕಮೇಖಲಾಃ ॥ ೧೯ ॥

ಭಾಗಸ್ತೇಷಾಂ ತು ಜಗತೀ ಭಾಗಸ್ತೇಷಾಂ ತಥಾ ಕಟಿಃ ।
ಭಾಗಮೇಕಂ ತಥಾ ಕಾರ್ಯಂ ಕೂಟಂ ಪ್ರಾಗ್ವನ್ಮಹೀಪತೇ ॥ ೨೦ ॥

---

ಕೂಡಿದ್ದಲ್ಲಿ ನಿಷಧವೆನಿಸಿಕೊಳ್ಳುತ್ತದೆ. ಅದೇ ಒಂದೇ ವಲಯದಿಂದ ಕೂಡಿದ್ದಲ್ಲಿ ನೀಲವೆನಿಸಿಕೊಳ್ಳುತ್ತದೆ. ಮಾಲ್ಯವಾನ್ ಎಂಬುವ ಪ್ರಾಸಾದವು ಎರಡುವಲಯಗಳಿಂದ ಕೂಡಿದ್ದಲ್ಲಿ ಶ್ವೇತವೆನಿಸಿಕೊಳ್ಳುತ್ತದೆ.

೧೭-೨೦. ಇದೇ ಒಂದೇ ವಲಯದಿಂದ ಕೂಡಿದ್ದಲ್ಲಿ ವಿಂಧ್ಯವೆನಿಸುತ್ತದೆ. ಆಗಾರ ಭೇದಗಳಲ್ಲಿ ಸೇರದಿರುವ ಎಲ್ಲಾ ಪ್ರಾಸಾದಗಳೂ, ಎಲ್ಲಾ ದೇವತೆಗಳಿಗೂ ಆಗುತ್ತವೆ. ದೇವಗೃಹಗಳನ್ನು ತಮಗೆ ಇಷ್ಟಬಂದ ದಿಕ್ಕಿಗೆ ಅಭಿಮುಖವಾಗಿರುವಂತೆ ರಮ್ಯವಾಗಿ ಕಟ್ಟಬಹುದು. ಆಗಾರ ಭೇದಗಳನ್ನು ಮಾತ್ರ ಪೂರ್ವಪಶ್ಚಿಮ ದಿಕ್ಕುಗಳಿಗೆ ಅಭಿಮುಖವಾಗಿ ರಚಿಸಬೇಕು. ಇವುಗಳಲ್ಲಿ ಒಂದು ಲಿಂಗವನ್ನು ಪ್ರತಿಷ್ಠಿಸುವುದು ಪ್ರಶಸ್ತ. ಯಾವ ಪ್ರಾಸಾದಗಳಿಗೆ ಎರಡು ಹೊರವಲಯಗಳುಂಟೋ ಹಾಗೆಯೇ ಒಂದೇ ಹೊರವಲಯವಿರುತ್ತದೆಯೋ ಅವುಗಳಿಗೆಲ್ಲಾ ಜಗತೀ ಎಂಬ ಭಾಗವೂ, ಕಟಿ ಎಂಬ ಭಾಗವೂ ಒಂದೇ ಆಗಿರುತ್ತದೆ. ಕೂಟವೆಂಬ ಅಂತಸ್ತಿನ ಭಾಗವನ್ನು ಮಾತ್ರ ಮೊದಲಿನಂತೆ ಬೇರೆಯಾಗಿ ವಿಭಾಗಿಸಬೇಕು. ನಾಲ್ಕು ದಿಕ್ಕುಗಳಿಗೂ ಅಭಿಮುಖವಾಗಿರುವ ವಲಭೀ ಪ್ರದೇಶಗಳಿಂದ ಕೂಡಿ (ಮೇಲುಛಾವಣಿಯ ಕೆಳಗೆ ಗೋಡೆಗಳಿಂದ ಮುಂದೆ ಚಾಚಲ್ಪಟ್ಟಿರುವ ವಿಶ್ರಾಂತಿಸ್ಥಾನಕ್ಕೆ ವಲಭೀ ಎಂಬ

ವಲಭೀಸಂಸ್ಥಿತಂ ರಮ್ಯಂ ಪ್ರಾಸಾದಂ ತು ಚತುರ್ದಿಶಂ ।
ವಿಸ್ತಾರಾತ್ತ್ರಿಗುಣಾಯಾಮಂ ತಥಾಚೈವೈಕಮೇಖಲಂ ॥ ೧೦ ॥

ಪಾರ್ಶ್ವಯೋರ್ವಲಭೀಪೃಷ್ಠೇ ಚಂದ್ರಶಾಲಾಯುತಂ ಭವೇತ್ ।
ಪ್ರಾಸಾದೇ ತತ್ರ ಕರ್ತವ್ಯಾಸ್ತ್ರಯಶ್ಚಾಮಲಸಾರಕಾಃ ॥ ೧೧ ॥

ಭಾಗಸ್ತು ಮೇಖಲಾ ತತ್ರ ಕಟಿಭಾಗಸ್ತಥಾ ಭವೇತ್ ।
ಭಾಗ ಏಕಸ್ತು ವಲಭೀ ತಥಾ ತತ್ರ ಪ್ರಕೀರ್ತಿತಾ ॥ ೧೨ ॥

ಪ್ರಾಸಾದಸ್ಯಾಷ್ಟಮೋ ಭಾಗಃ ಕರ್ತವ್ಯೋ ಮೇಖಲಾಗತಿಃ ।
ಕಟ್ಯಷ್ಟಭಾಗೌ ದ್ವೌ ಹಿತ್ವಾ ಸೋಪಾನಂ ವಿಸ್ತರಾದ್ಭವೇತ್ ॥ ೧೩ ॥

ಏಕಸ್ಯಾಂ ದಿಶಿ ಚೈವಾತ್ರ ದ್ವಾರಃ ಕಾರ್ಯಃ ಸಮುಚ್ಛ್ರಿತಃ ।
ಸ್ವೇಚ್ಛಾಪ್ರಶಾಭಿಮುಖಃ ಕಾರ್ಯೋ ವಲಭೀಸಂಜ್ಞಿತಸ್ತ್ವಯಂ ॥ ೧೪ ॥

ಪ್ರಾಸಾದೇಽಸ್ಮಿಂಸ್ತು ಕರ್ತವ್ಯಾ ಬ್ರಹ್ಮವಿಷ್ಣುಮಹೇಶ್ವರಾಃ ।
ಏಕಾನಂಶಾಥವಾ ಕಾರ್ಯಾ ಮಧ್ಯಗಾ ರಾಮಕೃಷ್ಣಯೋಃ ॥ ೧೫ ॥

---

ಹೆಸರು ) ರಮ್ಯವಾಗಿರುವ ಪ್ರಾಸಾದವು ಒಂದೇ ಹೊರವಲಯದಿಂದ ಕೂಡಿ ಅಗಲಕ್ಕೆ ಮೂರರಷ್ಟು ಉದ್ದವಾಗಿದ್ದು ಎರಡು ಪಾರ್ಶ್ವಗಳಲ್ಲಿಯೂ ವಲಭಿಯ ಕೆಳ ಭಾಗದಲ್ಲಿ ಚಂದ್ರಶಾಲೆಯಿಂದ ಕೂಡಿರಬೇಕು ಅಂತಹ ಪ್ರಾಸಾದಗಳಲ್ಲಿ ಮೂರು ಶಿಖರಗಳನ್ನು ನಿರ್ಮಿಸಬೇಕು

೧೧-೧೫ ಮೇಖಲಾ ಎಂಬ ಹೊರವಲಯದ ಭಾಗವೂ, ಕಟಿಪ್ರದೇಶವೆಂಬ ಮಧ್ಯಭಾಗವೂ ಮೊದಲಿನಂತೆಯೇ ಇರಬೇಕು ವಲಭೀ ಭಾಗವೂ ಬೇರೆಯಾಗಿರ ಬೇಕು ಮೇಖಲಾ ಎಂಬುದು ಪ್ರಾಸಾದದ ಎಂಟನೇಯ ಭಾಗದಷ್ಟು ಪ್ರಮಾಣ ವಿರಬೇಕು ಕಟಿಯ ಎಂಟನೇ ಭಾಗದಷ್ಟು ಎರಡು ಕಡೆಗಳಲ್ಲಿಯೂ ಬಿಟ್ಟು ವಿಸ್ತಾರ ವಾದ ಸೋಪಾನಗಳಿರಬೇಕು ಒಂದೇ ದಿಕ್ಕಿನಲ್ಲಿ ಎತ್ತರವಾದ ಬಾಗಿಲಿರಬೇಕು ವಲಭೀ ಎಂಬ ಈ ಪ್ರಾಸಾದವನ್ನು ತನ್ನ ಇಚ್ಛೆಗೆ ತಕ್ಕ ದಿಕ್ಕಿಗೆ ಅಭಿಮುಖವಾಗಿ ರಚಿಸಬಹುದು ಈ ಪ್ರಾಸಾದದಲ್ಲಿ ಬ್ರಹ್ಮವಿಷ್ಣು ಮಹೇಶ್ವರರನ್ನು ನಿರ್ಮಿಸಬೇಕು

**ಗಣೇಶಸ್ಕಂದಯೋರ್ಮಧ್ಯೇ ಕರ್ತವ್ಯೋ ವಾ ತ್ರಿಲೋಚನಃ ।**
**ಮಧ್ಯೇಽರ್ಕಚಂದ್ರಯೋಃ ಕಾರ್ಯಸ್ತ್ವಷ್ಟಾ ವಾಽಪಿ ಜನಾರ್ದನಃ ॥ ೨೭ ॥**

**ಏಕೈವ ದುರ್ಗಾ ಕರ್ತವ್ಯಾ ಬಹುಬಾಹುವಿಭೂಷಿತಾ ।**
**ತತ್ರ ಕಾರ್ಯಾಥವಾ ಲಕ್ಷ್ಮೀರ್ಜಗತ್ತ್ರಿತಯಭೂಷಣಾ ॥ ೨೮ ॥**

**ವಿಷ್ಣುಃ ಭೋಗಶಯಃ ಕಾರ್ಯಃ ಪ್ರಾಸಾದೇ ತತ್ರ ವಾ ನೃಪ ।**
**ಚತುರಾತ್ಮಾಥವಾ ಕಾರ್ಯೋ ದೇವದೇವೋ ಜನಾರ್ದನಃ ॥ ೨೯ ॥**

**ಶಕ್ರಕೇನಾಶವರುಣೈಃ ಸಹಿತೋ ವಾ ಧನೇಶ್ವರಃ ।**
**ಅನ್ಯೇ ದೇವಾ ನ ಕರ್ತವ್ಯಾ ಯೇ ಮಯಾ ನಾನುಕೀರ್ತಿತಾಃ ॥ ೩೦ ॥**

**ಏಕಾಶಾಭಿಮುಖೈರ್ದ್ವಾರೈಃ ಚತುರ್ಭಿಃ ಸಂಯುತಸ್ತ್ವಯಂ ।**
**ಬ್ರಹ್ಮಣಾ ವೃದ್ಧಿದೋ ನಾಮ ಪ್ರಾಸಾದಃ ಪರಿಕೀರ್ತಿತಃ ॥ ೩೧ ॥**

---

ಅಥವಾ ರಾಮಕೃಷ್ಣರ ಮಧ್ಯದಲ್ಲಿ ಏಕಾನಂಶಾದೇವಿಯನ್ನು ನಿರ್ಮಿಸಬಹುದು ಅಥವಾ ಗಣೇಶಸ್ಕಂದ ಇವರ ಮಧ್ಯದಲ್ಲಿ ಶಂಕರನನ್ನು ರಚಿಸಬಹುದು ಸೂರ್ಯ ಚಂದ್ರರ ಮಧ್ಯದಲ್ಲಿ ತ್ವಷ್ಟೃವನ್ನಾಗಲೀ, ಜನಾರ್ದನನ್ನಾಗಲೀ ರಚಿಸಬಹುದು

೨೮-೩೧. ಅನೇಕ ಬಾಹುಗಳಿಂದ ಕೂಡಿದ ದುರ್ಗಾದೇವಿಯೊಬ್ಬಳನ್ನೇ ಆದರೂ ರಚಿಸಬೇಕು ಅಥವಾ ಜಗತ್ತ್ರಯಭೂಷಣಳಾದ ಮಹಾಲಕ್ಷ್ಮಿಯನ್ನಾದರೂ ಸರ್ಪಶಾಯಿಯಾದ ವಿಷ್ಣುವನ್ನಾದರೂ ರಚಿಸಬೇಕು ಅಥವಾ ವಾಸುದೇವಾದಿ ನಾಲ್ಕು ರೂಪಗಳಿಂದ ಕೂಡಿದ ದೇವಾಧಿಪನಾದ ಜನಾರ್ದನಮೂರ್ತಿಯನ್ನಾದರೂ ರಚಿಸಬಹುದು ಇಂದ್ರ, ಯಮ, ವರುಣ ಇವರಿಂದ ಕೂಡಿದ ಕುಬೇರನನ್ನಾದರೂ ಪ್ರತಿಷ್ಠಿಸಬಹುದು ಇಲ್ಲಿ ನಾನು ಹೇಳಿರುವ ದೇವತೆಗಳಲ್ಲದೆ ಇತರ ದೇವತೆಗಳಾರನ್ನೂ ನಿರ್ಮಿಸಬಾರದು ಒಂದೇ ದಿಕ್ಕಿಗೆ ಅಭಿಮುಖವಾದ ನಾಲ್ಕು ದ್ವಾರಗಳಿಂದ ಕೂಡಿದ ಪ್ರಾಸಾದವು ಬ್ರಹ್ಮನಿಂದ ವೃದ್ಧಿದ ಪ್ರಾಸಾದವೆಂದು ನಾಮಕರಣ ಮಾಡಲ್ಪಟ್ಟಿದೆ

ಕರ್ತವ್ಯಸ್ತತ್ರ ಲೋಕೇಶಶ್ಚತುರಾತ್ಮಾ ಹರಿಸ್ತಥಾ ।
ವಿಸ್ತಾರತ್ರಿಗುಣೋಚ್ಛ್ರಾಯಾಂ ದ್ವಾರಾಂಸ್ತತ್ರ ನಿವೇಶಯೇತ್ ॥ ೩೨ ॥

ವಿಸ್ತಾರತ್ರಿಗುಣೋಚ್ಛ್ರಾಯೈರ್ದ್ವಾರೈರ್ವಾ ಸಂಯುತಸ್ತ್ರಿಭಿಃ ।
ಪ್ರಾಸಾದೋಽಯಂ ಭವೇದ್ರಾಜಂಸ್ತ್ರಿಗುಣೋ ನಾಮತಃ ಶುಭಃ ॥ ೩೩ ॥

ಏಕಾಶಾಭಿಮುಖದ್ವಾರಗರ್ಭಭಿತ್ತಿಸಮನ್ವಿತಃ ।
ಬ್ರಹ್ಮಾ ವಿಷ್ಣುಶ್ಚ ರುದ್ರಶ್ಚ ಪ್ರಾಸಾದೇತ್ರ ನಿವೇಶ್ಯತಾಂ ॥ ೩೪ ॥

ಆದಿತ್ಯವಿಷ್ಣುಚಂದ್ರಾರ್ಕಾನ್ ಪೃಥಗ್ಭೂಪಾಲಸತ್ತಮ ।
ಗಣೇಶರುದ್ರಸ್ಕಂದಾನ್ವಾ ಪ್ರಾಸಾದೇಸ್ಮಿನ್ನಿವೇಶಯೇತ್ ॥ ೩೫ ॥

ಪಾರ್ಶ್ವಸ್ಥವಲಭೀಹೀನಂ ವೃತ್ತಿದಂ ಕಾಮದಂ ಭವೇತ್ ।
ಪ್ರಾಸಾದಃ ಪಾರ್ಶ್ವಸಂಯುಕ್ತಃ ಶಿಖರೋ ನಾಮತೋ ನೃಪ ॥ ೩೬ ॥

---

೩೨-೩೫ / ಈ ಪ್ರಾಸಾದದಲ್ಲಿ ಲೋಕಾಧಿಪತಿಯಾದ ಹರಿಯ ಚತುರಾತ್ಮ ಮೂರ್ತಿಯನ್ನು ನಿರ್ಮಿಸಬೇಕು ಆ ನಾಲ್ಕು ಬಾಗಿಲುಗಳೂ ಅಗಲಕ್ಕಿಂತ ಮೂರರಷ್ಟು ಎತ್ತರವಿರಬೇಕು ಇಂತಹ ಮೂರು ಬಾಗಿಲುಗಳಿಂದ ಕೂಡಿದ ಪ್ರಾಸಾದವು ತ್ರಿಗುಣವೆಂಬ ಶುಭಕರವಾದ ಪ್ರಾಸಾದವೆನಿಸುವುದು ಒಂದೇ ದಿಕ್ಕಿಗೆ ಅಭಿಮುಖವಾದ ಬಾಗಿಲು ಮತ್ತು ಗರ್ಭಗೃಹಗಳ ಭಿತ್ತಿಯಿಂದ ಕೂಡಿದ ಪ್ರಾಸಾದದಲ್ಲಿ ಬ್ರಹ್ಮ, ವಿಷ್ಣು, ರುದ್ರ ಇವರನ್ನು ಪ್ರತಿಷ್ಠಿಸಬೇಕು ಆದಿತ್ಯನೆಂಬ ಸೂರ್ಯ ಭೇದ ಅಥವಾ ವಿಷ್ಣು, ಚಂದ್ರ, ಸೂರ್ಯ ಇವರನ್ನು ಬೇರೆ ಬೇರೆಯಾಗಿ ಯಾಗಲಿ, ಗಣೇಶ, ಸ್ಕಂದ, ರುದ್ರರನ್ನಾಗಲಿ ಇಲ್ಲಿ ರಚಿಸಬಹುದು

೩೬-೩೮ ಪಾರ್ಶ್ವಗಳಲ್ಲಿ ವಲಭಿ ಇಲ್ಲದಿರುವ ಪ್ರಾಸಾದವು ವಲಭೀ ಎಂಬ ನಾಮವನ್ನು ಹೊಂದುತ್ತದೆ ಎರಡು ಪಾರ್ಶ್ವಗಳಿಂದಲೂ ಕೂಡಿರುವ ಪ್ರಾಸಾದಕ್ಕೆ ಶಿಖರವೆಂದು ಹೆಸರು ಪಾರ್ಶ್ವಗಳಲ್ಲಿ ವಲಭಿ ಇಲ್ಲದಿರುವ ಪ್ರಾಸಾದವು ಜೀವನಪ್ರದ

**ಪಾರ್ಶ್ವಸ್ಥವಲಭೀಹೀನಂ ವೃತ್ತಿದಂ ಕಾಮದಂ ಭವೇತ್ ।**
**ಪಾರ್ಶ್ವಸ್ಥವಲಭೀಹೀನಂ ತ್ರಿಗುಣಂ ನೃಗೃಹಂ ಭವೇತ್ ॥ ೩೭ ॥**

**ಕೃತವಿಸ್ತೃತದಿಗ್ದ್ವಾರಂ ಪ್ರಾಸಾದಂ ವಲಭೀಗತಂ ।**
**ತುರಗಾಖ್ಯಂ ವಿನಿರ್ದಿಷ್ಟಂ ರೇತೋಮಂದಗೃಹಂ ಹಿತ ॥ ೩೮ ॥**

**ವಿನಾಯಕಸ್ಯ ತತ್ಕಾರ್ಯಂ ಭದ್ರಕಾಲ್ಯಾಸ್ತಥೈವ ಚ ।**
**ಸ್ಕಂದಸ್ಯ ಕಾರ್ಯಂ ತದ್ರಾಜನ್ ಲಕ್ಷ್ಮ್ಯಾಃ ಕಾರ್ಯಮಥಾಪಿವಾ ॥ ೩೯ ॥**

**ನಾಗಾನಾಂ ಪ್ರಮಥಾನಾಂ ವಾ ನಾನ್ಯಸ್ಯ ತು ವಿಧೀಯತೇ ।**
**ಕೃತವಿಸ್ತೃತದಿಗ್ದ್ವಾರಂ ತುರಗಂ ಕುಂಜರಂ ಸ್ಮೃತಂ ॥ ೪೦ ॥**

**ತುರಗಾಭಿರತಾನಾಂ ಚ ದೇವಾನಾಂ ತತ್ಪ್ರಶಸ್ಯತೇ ।**
**ಶಕ್ರಸ್ಯ ಚ ಮಹಾಭಾಗ ನಾನ್ಯೇಷಾಂ ತದ್ವಿಧೀಯತೇ ॥ ೪೧ ॥**

**ಯಥೇಷ್ಟಸಂಖ್ಯಾಗರ್ಭಂ ತು ಪ್ರಾಸಾದಂ ವಲಭೀಗತಂ ।**
**ಯಥೇಷ್ಟಂ ನಾಮ ವಿಖ್ಯಾತಂ ಯಥೇಷ್ಟಾಯಾಮಸಂಜ್ಞಿತಂ ॥ ೪೨ ॥**

ಮತ್ತು ಇಷ್ಟಾರ್ಥಪ್ರದ ಪಾರ್ಶ್ವಗಳಲ್ಲಿ ವಲಭಿ ಇಲ್ಲದಿರುವ ಪ್ರಾಸಾದವು ತ್ರಿಗುಣ ವೆಂದು ಕರೆಯಲ್ಪಡುತ್ತದೆ ಅದು ಮನುಷ್ಯ ಗೃಹವಾಗುತ್ತದೆ ದಿಕ್ಕುಗಳಿಗೆ ಅಭಿಮುಖವಾದ, ವಿಸ್ತಾರವಾದ ದ್ವಾರಗಳಿಂದ ಕೂಡಿ ವಲಭಿಯನ್ನೂ ಹೊಂದಿರುವ ಪ್ರಾಸಾದವು ತುರಗವೆಂದು ಹೇಳಲ್ಪಡುತ್ತದೆ ಹಿತಕರವಾದ ಈ ಗೃಹವು ಹೆಚ್ಚಾದ ಸಂತೋಷಕ್ಕೆ ಆಶ್ರಯ ಸ್ಥಾನ

೩೯-೪೨ ತುರಗವೆಂಬ ಈ ಪ್ರಾಸಾದವನ್ನು ವಿನಾಯಕನಿಗೂ, ಭದ್ರ ಕಾಲಿಗೂ ವಿನಿಯೋಗಿಸಬೇಕು ಸ್ಕಂದನಿಗಾಗಲಿ, ಲಕ್ಷ್ಮಿಗಾಗಲಿ ಏರ್ಪಡಿಸ ಬಹುದು ನಾಗಗಳಿಗೆ ಅಥವಾ ಪ್ರಮಥಗಳಿಗೆ ವಿನಿಯೋಗಿಸಬಹುದು ಮತ್ತಾರಿಗೂ ಇದು ಅರ್ಹವಲ್ಲ ತುರಗವೆಂಬ ಈ ಪ್ರಾಸಾದವೇ ವಿಸ್ತಾರವಾದ ದಿಗ್ದ್ವಾರ ಗಳನ್ನು ಹೊಂದಿದ್ದಲ್ಲಿ ಕುಂಜರವೆನಿಸುತ್ತದೆ. ಅಶ್ವಗಳಲ್ಲಿ ಆಸಕ್ತರಾದವರಿಗೂ ದೇವತೆಗಳಿಗೂ ಇದು ಪ್ರಶಸ್ತವಾದ್ದು ದೇವತೆಗಳಿಗೆ ವಿನಿಯೋಗಿಸುವಾಗ ಇಂದ್ರನೇ ಅದಕ್ಕೆ ಅರ್ಹನು ಇತರರಲ್ಲ ಅಭಿಮತವಾದ ಅನೇಕ ಸಂಖ್ಯೆಗಳಾದ ವಲಭಿಯಿಂದ ಕೂಡಿ ಯಥೇಷ್ಟವಾದ ವಿಸ್ತಾರವನ್ನು ಹೊಂದಿರುವ ಪ್ರಾಸಾದವು ಯಥೇಷ್ಟವೆನಿಸುತ್ತದೆ

**ಯಥೇಷ್ಟವಮಾನಂ ದ್ವಾರಂ ತತ್ ದ್ವಾರೇಣೈಕೇನ ಸಂಯುತಂ ।**
**ಏಕಗರ್ಭಂ ತದೇವೋಕ್ತಂ ವಿಶಾಲಂ ನಾಮ ಪಾರ್ಥಿವ ॥ ೪೩ ॥**

**ಯಥೇಷ್ಟೇ ಚ ವಿಶಾಲೇ ಚ ಕರ್ತವ್ಯಾ ಮಾತರೋ ನೃಪ ।**
**ಗ್ರಹಾ ವಾ ರಾಜಶಾರ್ದೂಲ ನಕ್ಷತ್ರಾಣ್ಯಥವಾ ಪುನಃ ॥ ೪೪ ॥**

**ಆದಿತ್ಯಾ ವಸವೋ ರುದ್ರಾ ವಿಶ್ವೇದೇವಾ ಮರುದ್ಗಣಾಃ ।**
**ಭೃಗವೋಽಙ್ಗಿರಸಃ ಸಾಧ್ಯಾ ದೇವೌ ವಾ ಯದಿವಾಶ್ವಿನೌ ॥ ೪೫ ॥**

**ಅಷ್ಟಾವಾಥ ದಿಶಾಂ ಪಾಲಾಃ ಯದಿ ವಾ ಭೂತಪಂಚಕಂ ।**
**ಏವಂ ದೇವಗಣಃ ಕಾರ್ಯೋ ರಾಜನ್ ಪ್ರಾಸಾದಯೋಸ್ತಯೋಃ ॥ ೪೬ ॥**

**ಆಯತಾ ಮಾಲ್ಯವತ್ಪೃಷ್ಠೇ ವಲಭೀ ತು ಯದಾ ಭವೇತ್ ।**
**ಕರ್ತವ್ಯೋ ಭದ್ರಕಾಲ್ಯರ್ಥೇ ಪ್ರಾಸಾದೋ ಭದ್ರಸಂಜ್ಞಿತಃ ॥ ೪೭ ॥**

---

೪೩–೪೬ ಈ ಪ್ರಾಸಾದವು ಒಂದೇ ದ್ವಾರದಿಂದ ಕೂಡಿದ್ದು ಆ ದ್ವಾರವೂ ತನ್ನ ಇಷ್ಟಬಂದ ಪ್ರಮಾಣದಲ್ಲಿರಬಹುದು ಒಂದೇ ಗರ್ಭಗೃಹದಿಂದ ಕೂಡಿದ ಈ ಪ್ರಾಸಾದವೇ ವಿಶಾಲವೆಂಬ ಹೆಸರನ್ನು ಹೊಂದುತ್ತದೆ ಯಥೇಷ್ಟವೆಂಬ ಪ್ರಾಸಾದ ದಲ್ಲಿಯೂ ವಿಶಾಲವೆಂಬ ಈ ಪ್ರಾಸಾದದಲ್ಲಿಯೂ ಸಪ್ತಮಾತೃಕಗಳನ್ನು ಇಡಬೇಕು ಆದಿತ್ಯಾದಿ ಗ್ರಹಗಳನ್ನಾಗಲಿ, ನಕ್ಷತ್ರಗಳನ್ನಾಗಲಿ, ಆದಿತ್ಯರು, ವಸುಗಳು, ರುದ್ರರು, ವಿಶ್ವೇದೇವತಗಳು, ಮರುತ್ತುಗಳು, ಭೃಗುಗಳು, ಆಂಗಿರಸರು, ಸಾಧ್ಯರು ಅಥವಾ ಅಶ್ವಿನೀದೇವತೆಗಳು ಅಥವಾ ಎಂಟು ದಿಕ್ಪಾಲಕರು ಅಥವಾ ಭೂತಪಂಚಕಗಳು ಈ ದೇವಗಣಗಳಲ್ಲಿ ಯಾರನ್ನಾದರೂ ಈ ಎರಡು ಪ್ರಾಸಾದಗಳಲ್ಲಿಯೂ ನಿರ್ಮಿಸ ಬಹುದು

೪೭–೫೧ ಮಾಲ್ಯವಾನೆಂಬ ಪ್ರಾಸಾದಕ್ಕೆ ಹಿಂಭಾಗದಲ್ಲಿ ದೀರ್ಘವಾದ ವಲಭಿ ಇದ್ದಲ್ಲಿ ಭದ್ರ ಸಂಜ್ಞೆಯುಳ್ಳ ಈ ಪ್ರಾಸಾದವನ್ನು ಭದ್ರಕಾಳಿಗಾಗಿಯೇ ವಿನಿಯೋಗಿಸಬೇಕು ಅಂತಹ ವಲಭಿಯು ಅಡ್ಡಡ್ಡವಾಗಿದ್ದಲ್ಲಿ ಅದಕ್ಕೆ ದ್ವಾರಪಾಲ ನೆಂದು ಹೆಸರು, ಈ ಪ್ರಾಸಾದವೂ ದೇವತೆಗಳಿಗೆ ಪ್ರೀತಿಕರವೆಂದು ಹೇಳಲ್ಪಟ್ಟಿದೆ ಭದ್ರಪ್ರಾಸಾದದಂತೆ ನಿರ್ಮಿತವಾದ ಶ್ವೇತಪ್ರಾಸಾದಕ್ಕೆ ಸುಭದ್ರವೆಂದು ಹಸರು

**ತಿರ್ಯಕ್‌ಸ್ಥಾ ಮಾಲವತ್ಸ್ಪೃಷ್ಟೇ ವಲಭೀ ತು ಯದಾ ಭವೇತ್ ।**
**ದ್ವಾರಶಾಲೇತಿ ಸ ಪ್ರೋಕ್ತಃ ಪ್ರಾಸಾದೋ ವಿಬುಧಪ್ರಿಯಃ　　॥ ೪೮ ॥**

**ಸುಭದ್ರಾಖ್ಯಃ ಸನಿರ್ದಿಷ್ಟಃ ಶ್ವೇತಾಖ್ಯೋ ಭದ್ರವತ್ಕೃತಃ ।**
**ಕೃತಸ್ತು ದ್ವಾರಶಾಲಾವತ್ಸೌಮ್ಯಃ ಸ್ಯಾದ್ಗಂಧಮಾದನಃ　　॥ ೪೯ ॥**

**ಸೌಮ್ಯಃ ಸುಭದ್ರಶ್ಚ ತಥಾ ಸರ್ವೇಷಾಮೇವ ಶಸ್ಯತೇ**
**ಅಷ್ಟಾಂಶಕೂಟಂ ತ್ರಿಚ್ಛೇದಂ ಶುಭಾಮಲಕಸಾರಕಂ　　॥ ೫೦ ॥**

**ಅಷ್ಟಾಂಶಜಗತೀಬಂಧಂ ತಥಾ ಚೈವೈಕಮೇಖಲಂ ।**
**ಅಷ್ಟಗರ್ಭಾಷ್ಟದಿಗ್ದ್ವಾರಂ ಕಮಲಂ ಪರಿಕೀರ್ತಿತಂ　　॥ ೫೧ ॥**

**ಅಷ್ಟೌ ತತ್ರ ತು ಕರ್ತವ್ಯಾ ಗ್ರಹಾಃ ಕೇತುವಿವರ್ಜಿತಾಃ ।**
**ಸೂರ್ಯಃ ಶುಕ್ರಃ ಕುಜೋ ರಾಹುಃ ಸೌರಶ್ಚಂದ್ರೋ ಬುಧೋ ಗುರುಃ ॥೫೨॥**

**ಕ್ರಮೇಣಾನೇನ ಕರ್ತವ್ಯಂ ತತ್ರ ರಾಜನ್ ಗೃಹಾಷ್ಟಕಂ ।**
**ಭೂಜಲಾಕಾಶವಹ್ನೀಂದುದೀಕ್ಷಿತಾರ್ಕಮರುತ್ತನುಃ　　॥ ೫೩ ॥**

ದ್ವಾರಶಾಲೆಯಂತೆ ನಿರ್ಮಿತವಾದ ಗಂಧಮಾದನವು ಸೌಮ್ಯವೆನಿಸುತ್ತದ ಈ ಸೌಮ್ಯ ಸುಭದ್ರಗಳೆರಡೂ ಸಹ ಎಲ್ಲಾ ದೇವತೆಗಳಿಗೂ ಪ್ರಶಸ್ತವಾಗುತ್ತವ ಸುತ್ತಳತೆಯ ಎಂಟನೇ ಒಂದು ಭಾಗಕ್ಕ ಸರಿಯಾದ ಶಿಖರಗಳನ್ನು ಹೊಂದಿ ಮೂರು ಅಂತಸ್ತುಳ್ಳ ಮತ್ತು ಎಂಟನೆಯ ಒಂದು ಭಾಗಕ್ಕೆ ತಕ್ಕಂತೆ ಭಿತ್ತಿಬಂಧವುಳ್ಳ ಹೊರವಲಯವೊಂದೇ ಇದ್ದು ಎಂಟು ಗರ್ಭಗೃಹಗಳಿಂದಲೂ, ಎಂಟು ದಿಕ್ಕಿಗೂ ಅಭಿಮುಖವಾದ ದ್ವಾರ ಹೊಂದಿರುವ ಪ್ರಾಸಾದಕ್ಕೆ ಕಮಲಪ್ರಾಸಾದವೆಂದು ಹೆಸರು

೫೨–೫೬　ಆ ಪ್ರಾಸಾದದಲ್ಲಿ ಕೇತುವನ್ನು ಬಿಟ್ಟು ಉಳಿದ ಎಂಟು ಗ್ರಹಗಳನ್ನು ಸ್ಥಾಪಿಸಬೇಕು ಆ ಸ್ಥಾಪನವೂ ಸಹ ಸೂರ್ಯ, ಶುಕ್ರ, ಕುಜ, ರಾಹು, ಶನಿ, ಚಂದ್ರ, ಬುಧ, ಗುರು ಈ ಕ್ರಮವನ್ನನುಸರಿಸಿ ಎಂಟು ಗರ್ಭಗೃಹಗಳನ್ನು ನಿರ್ಮಿಸಿಯೇ ಆಗಬೇಕು ಅಥವಾ ಭೂಮಿ, ಜಲ, ಆಕಾಶ, ಅಗ್ನಿ, ಚಂದ್ರ, ದೀಕ್ಷಿತ, ಸೂರ್ಯ, ವಾಯು ಎಂಬ ಎಂಟು ಮೂರ್ತಿಗಳ ರೂಪನಾದ ಜಗತ್ಪತಿ

**ಮಹಾದೇವೋಽಥವಾ ಕಾರ್ಯಸ್ತತ್ರ ದೇವೋ ಜಗದ್ಗುರುಃ ।**
**ಅಷ್ಟಾತ್ಮಾ ವಾಸುದೇವೋ ವಾ ಪ್ರಭವೇ ಯೋಪನೇನ ಚ ॥ ೫೪ ॥**

**ಪ್ರಾಸಾದೇಽಸ್ಮಿಂಸ್ತು ಕರ್ತವ್ಯೋ ವಿಧಿನಾನೇನ ವಾ ಹರಿಃ ।**
**ಚತುರಾತ್ಮಾ ತು ಕರ್ತವ್ಯೋ ದಿಗ್ದ್ವಾರೇಷ್ವತ್ರ ಕೇಶವಃ ॥ ೫೫ ॥**

**ಅಶ್ವಶೀರ್ಷಂ ವರಾಹಂ ಚ ನರಸಿಂಹಂ ತ್ರಿವಿಕ್ರಮಂ ।**
**ಈಶಾನಾದಿಷು ಕೋಣೇಷು ಕಾರ್ಯಾ ದೇವಾ ನರೋತ್ತಮ ॥ ೫೬ ॥**

**ಉಚ್ಛ್ರಿತಾ ಜಗತೀ ಕಾರ್ಯಾ ಭದ್ರಪೀಠಾಕೃತಿಂ ವಿನಾ ।**
**ಪ್ರಾಗ್ಭಾಗವಲಭೀಹೀನಂ ತುರಗಂ ತತ್ರ ಕಾರಯೇತ್ ॥ ೫೭ ॥**

**ಪ್ರಶಸ್ತಃ ಸರ್ವದೇವಾನಾಂ ಪ್ರಾಸಾದಸ್ತ್ವರುಣೋದಯಃ ।**
**ಪೂರ್ವಾಪರಾಶಾಭಿಮುಖಃ ಕಾರ್ಯೋಽಯಂ ನಾನ್ಯದಿಙ್ಮುಖಃ ॥ ೫೮ ॥**

**ಅಯಮೇವಾತಿದೀರ್ಘಸ್ತು ಪ್ರಾಸಾದೋ ಗುಹಸಂಜ್ಞಿತಃ ।**
**ಪ್ರಾಸಾದೇತ್ವರುಣೇ ಲಗ್ನಾವಲ್ಯಪ್ರಾಸಾದಕಾವುಭೌ ॥ ೫೯ ॥**

---

ಯಾದ ಮಹಾದೇವನನ್ನಾದರೂ ನಿರ್ಮಿಸಬಹುದು ಅಥವಾ ಸೃಷ್ಟಿಯಲ್ಲಿಯೂ ಪ್ರಳಯದಲ್ಲಿಯೂ ಎಂಟು ವಿಧವಾದ ರೂಪವುಳ್ಳ ವಾಸುದೇವನನ್ನಾದರೂ ನಿರ್ಮಿಸಬಹುದು ನಾಲ್ಕು ದಿಕ್ಕುಗಳ ದ್ವಾರಪ್ರದೇಶದಲ್ಲಿಯೂ, ನಾಲ್ಕು ರೂಪಗಳುಳ್ಳ ಕೇಶವನನ್ನು ನಿರ್ಮಿಸಬೇಕು ಆ ನಾಲ್ಕು ರೂಪಗಳಲ್ಲಿ ಹಯಗ್ರೀವ, ಭೂವರಾಹ, ನರಸಿಂಹ ತ್ರಿವಿಕ್ರಮ ಇವುಗಳೇ ಇರಬೇಕು ಈಶಾನ್ಯಾದಿ ವಿದಿಕ್ಕುಗಳಲ್ಲಿ ದೇವತೆಗಳನ್ನು ನಿರ್ಮಿಸಬೇಕು

೫೭-೬೦ ಈ ಪ್ರಾಸಾದಕ್ಕೆ ಭೂಮಿಕಾಬಂಧವು ಎತ್ತರವಾಗಿರಬೇಕು ಭದ್ರಪೀಠದ ಆಕಾರವಿರಕೂಡದು ಇಂತಹ ಪ್ರಾಸಾದವು ಪೂರ್ವಭಾಗದಲ್ಲಿ ವಲಭಿ ಇಲ್ಲದಿದ್ದಲ್ಲಿ ತುರಗವೆಂಬ ಪ್ರಾಸಾದವಾಗುತ್ತದೆ ಅರುಣೋದಯವೆಂಬ ಪ್ರಾಸಾದವು ಎಲ್ಲಾ ದೇವತೆಗಳಿಗೂ ಪ್ರಶಸ್ತವಾದದ್ದು ಇದನ್ನು ಪೂರ್ವ ಪಶ್ಚಿಮ ದಿಕ್ಕುಗಳಿಗೇ ಅಭಿಮುಖವಾಗಿರುವಂತೆ ನಿರ್ಮಿಸಬೇಕು ಇತರ ದಿಕ್ಕುಗಳಿಗೆ ಅಭಿಮುಖವಾಗಿರಬಾರದು ಈ ಪ್ರಾಸಾದವೇ ಬಹಳ ದೀರ್ಘವಾಗಿದ್ದಲ್ಲಿ ಗುಹ ಎಂದೆನಿಸುತ್ತದೆ ಅರುಣವೆಂಬ ಪ್ರಾಸಾದದಲ್ಲಿ ಲಗ್ನ ಆವಲ್ಯವೆಂಬ ಎರಡು ವಿಧವಾದ

ಯಾಮ್ಯೋತ್ತರಾಶಾಭಿಮುಖೌ ತದ್ವಜ್ಜಗತಿಬಂಧನೌ ।
ಸಮ್ಮುಖೌ ತೌ ತು ಜಗತಿ ವಲಭೀಚ್ಛಂದಕಾ ಭವೇತ್ ॥ ೬೦ ॥

ಶುಭಾ ಜಾಲಪ್ರತಿಚ್ಛನ್ನಾ ಸೌಧದ್ವಾರಮುಖಾ ತಥಾ ।
ತತ್ರ ಸ್ಯಾದ್ಗರುಡೋ ನಾಮ ಪ್ರಾಸಾದಃ ಸುಮನೋಹರಃ ॥ ೬೧ ॥

ಆದಿತ್ಯಸ್ಯ ಪ್ರತಿಷ್ಠಾನಂ ಪ್ರಾಸಾದೇ ತತ್ರ ಶಸ್ಯತೇ ।
ದಂಡಪಿಂಗಲಕೌ ಕಾರ್ಯೌ ತತ್ರ ಪ್ರಾಸಾದಯೋರ್ದ್ವಯೋಃ ॥ ೬೨ ॥

ತಯೋರ್ವಾ ನೃಪ ಕರ್ತವ್ಯೌ ರತೌ ಮಂದಯಮಾವುಭೌ ।
ಕರ್ತವ್ಯೌ ವಾ ಮಹಾರಾಜ ತಥಾ ಕೇಶವಶಂಕರೌ ॥ ೬೩ ॥

ಪ್ರಾಸಾದೇ ಗರುಡೋ ವಾಪಿ ಕರ್ತವ್ಯಶ್ಚಂದ್ರಮಾಬುಧೈಃ ।
ಪಾರ್ಶ್ವಪ್ರಾಸಾದಯೋಸ್ತಸ್ಯ ಕರ್ತವ್ಯೌ ಶಿಶಿರಾಂಬುಪೌ ॥ ೬೪ ॥

ಪ್ರಾಸಾದಗಳಾಗುತ್ತವೆ  ಇದು ಉತ್ತರ ಮತ್ತು ದಕ್ಷಿಣ ದಿಕ್ಕಿಗೆ ಅಭಿಮುಖವಾಗಿದ್ದು ಅರುಣದಂತೆ ಭೂಮಿಕಾಬಂಧಾದಿಗಳನ್ನು ಹೊಂದಿರಬೇಕು  ಈ ಲಗ್ನ ಆವಲ್ಯವೆಂಬ ಪ್ರಾಸಾದಗಳು ಎದುರುಬದುರಾಗಿದ್ದಲ್ಲಿ ವಲಭೀಚ್ಛಂದಕವೆಂಬ ಪ್ರಾಸಾದವಾಗುತ್ತದೆ

೬೧–೬೩  ಜಾಲಗಳಿಂದ ಮುಂಭಾಗದಲ್ಲಿ ಹೊದ್ದಿಸಿ ಸೌಭವೆಂಬ ಪ್ರಾಣಿಯಿಂದ ಚಿತ್ರಿಸಿರುವ ದ್ವಾರದ ಮುಂಭಾಗವುಳ್ಳ ಶುಭಕರ ಪ್ರಾಸಾದಗಳಲ್ಲಿ ಗರುಡನೆಂಬ ಸಂಜ್ಞೆಯುಳ್ಳ ಪ್ರಾಸಾದವು ರಮ್ಯವಾದುದು  ಈ ಪ್ರಾಸಾದದಲ್ಲಿ ಆದಿತ್ಯ ಮೂರ್ತಿಯ ಪ್ರತಿಷ್ಠೆಯು ಪ್ರಶಸ್ತವಾದುದು  ಆ ಪ್ರಾಸಾದದ ಉಭಯಪಾರ್ಶ್ವಗಳಲ್ಲಿಯೂ ದಂಡಪಿಂಗಲಕ ಇವರನ್ನು ಸ್ಥಾಪಿಸಬೇಕು ಅಥವಾ ಅವರಿಗೆ ಬದಲಾಗಿ ಸಂತುಷ್ಟರಾದ ಶನಿ, ಯಮ ಇವರನ್ನು ಸ್ಥಾಪಿಸಬೇಕು.  ಅಥವಾ ಕೇಶವ ಮತ್ತು ಶಂಕರರನ್ನು ಸ್ಥಾಪಿಸಬೇಕು  ಅಥವಾ ಗರುಡನನ್ನಾಗಲಿ, ಚಂದ್ರನನ್ನಾಗಲಿ ಸ್ಥಾಪಿಸಬಹುದು

೬೪–೬೮  ಅದರ ಪಾರ್ಶ್ವಪ್ರಾಸಾದಗಳಲ್ಲಿ ಚಂದ್ರ ಮತ್ತು ವರುಣರನ್ನು ನಿರ್ಮಿಸಬೇಕು  ಆ ಗಾರುಡ ಪ್ರಾಸಾದದಲ್ಲಿ ಕಾಮದೇವನನ್ನಾದರೂ ಪ್ರತಿಷ್ಠಿಸಬಹುದು  ಆಗ ಪಾರ್ಶ್ವ ಪ್ರಾಸಾದಗಳಲ್ಲಿ ವನಮಾಲಿಗಳನ್ನು ನಿರ್ಮಿಸಬೇಕು

ಪ್ರಾಸಾದೇ ಗಾರುಡೇ ವಾಪಿ ಕಾಮದೇವಂ ತು ಕಾರಯೇತ್ ।
ಪಾರ್ಶ್ವಪ್ರಾಸಾದಯೋಸ್ತಸ್ಯ ಕರ್ತವ್ಯೌ ವನಮಾಲಿನೌ ॥ ೬೫ ॥

ಪ್ರಾಸಾದೇ ಗಾರುಡೇ ವಾಪೀ ಕರ್ತವ್ಯೋ ದೇವರಾಟ್ ಬುಧೈಃ ।
ಪಾರ್ಶ್ವಪ್ರಾಸಾದಯೋಸ್ತಸ್ಯ ಕರ್ತವ್ಯೌ ವನಮಾಲಿನೌ ॥ ೬೬ ॥

ಪ್ರಾಸಾದೇ ಗಾರ ಡೇ ವಾಪಿ ಕರ್ತವ್ಯಶ್ಚ ತಥಾ ಯಮಃ ।
ಪಾರ್ಶ್ವಪ್ರಾಸಾದಯೋಸ್ತಸ್ಯ ಮೃತ್ಯುಕಾಲೌ ನಿವೇಶಯೇತ್ ॥ ೬೭ ॥

ಪ್ರಾಸಾದೇ ಗಾರುಡೇ ವಾಪಿ ಕರ್ತವ್ಯೋ ವರುಣೋ ಭವೇತ್ ।
ಪಾರ್ಶ್ವಪ್ರಾಸಾದಯೋಃ ಕಾರ್ಯೌ ಗಂಗಾ ಕಾಲಿಂದಿರೇವ ಚ ॥ ೬೮ ॥

ಪ್ರಾಸಾದೇ ಗಾರುಡೇ ವಾಪಿ ಧನಾಧ್ಯಕ್ಷಂ ತು ಕಾರಯೇತ್ ।
ಪಾರ್ಶ್ವಪ್ರಾಸಾದಯೋಸ್ತಸ್ಯ ಶಂಖಪದ್ಮೌ ನಿವೇಶಯೇತ್ ॥ ೬೯ ॥

ಪ್ರಾಸಾದೇ ಗಾರುಡೇ ವಾಪಿ ಬ್ರಹ್ಮಾಣಂ ವಿನಿವೇಶಯೇತ್ ।
ಪಾರ್ಶ್ವಪ್ರಾಸಾದಯೋಸ್ತಸ್ಯ ಕರ್ತವ್ಯೌ ಕೇಶವೇಶ್ವರೌ ॥ ೭೦ ॥

---

ಅಥವಾ ಆ ಗಾರುಡ ಪ್ರಾಸಾದದಲ್ಲಿ ಇಂದ್ರನನ್ನಾದರೂ ಪ್ರತಿಷ್ಠಿಸಬಹುದು ಆಗ್ಗ ಪ್ರಾರ್ಶ್ವ ಪ್ರಾಸಾದಗಳಲ್ಲಿ ವನಮಾಲಿಗಳನ್ನೇ ನಿರ್ಮಿಸಬೇಕು ಆ ಗಾರುಡ ಪ್ರಾಸಾದದಲ್ಲಿ ಯಮನನ್ನಾದರೂ ನಿರ್ಮಿಸಬಹುದು ಆಗ್ಗ ಪಾರ್ಶ್ವ ಪ್ರಾಸಾದ ಗಳಲ್ಲಿ ಮೃತ್ಯು ಮತ್ತು ಕಾಲಪುರುಷರನ್ನು ನಿರ್ಮಿಸಬೇಕು ಅಥವಾ ಆ ಗಾರುಡ ಪ್ರಾಸಾದದಲ್ಲಿ ವರುಣನನ್ನಾದರೂ ಪ್ರತಿಷ್ಠಿಸಬಹುದು ಆಗ್ಗ ಪಾರ್ಶ್ವ ಪ್ರಾಸಾದ ಗಳಲ್ಲಿ ಗಂಗಾ ಮತ್ತು ಕಾಲಿಂದಿ ಇವರನ್ನು ನಿರ್ಮಿಸಬೇಕು

೬೯–೭೩ ಅಂತಹ ಗಾರುಡಪ್ರಾಸಾದದಲ್ಲಿ ಕುಬೇರನನ್ನಾದರೂ ನಿರ್ಮಿಸ ಬಹುದು ಆಗ ಪಾರ್ಶ್ವಪ್ರಾಸಾದಗಳಲ್ಲಿ ಶಂಖಪದ್ಮನಿಧಿಗಳನ್ನು ನಿರ್ಮಿಸಬೇಕು ಅಥವಾ ಆ ಪ್ರಾಸಾದದಲ್ಲಿ ಬ್ರಹ್ಮನನ್ನಾದರೂ ನಿರ್ಮಿಸಬಹುದು ಆಗ ಪಾರ್ಶ್ವಪ್ರಾಸಾದಗಳಲ್ಲಿ ಕೇಶವಶಂಕರರನ್ನು ನಿರ್ಮಿಸಬೇಕು ಅಥವಾ ಆ ಪ್ರಾಸದಲ್ಲಿ ಮಹಾದೇವನನ್ನು ನಿರ್ಮಿಸಬಹುದು ಆಗ ಪಾರ್ಶ್ವಪ್ರಾಸಾದ ಗಳಲ್ಲಿ ವಿಷ್ಣು ಬ್ರಹ್ಮ ಇವರುಗಳನ್ನಾಗಲಿ ವಿನಾಯಕ ಷಣ್ಮುಖರನ್ನಾಗಲಿ

ಪ್ರಾಸಾದೇ ಗಾರುಡೇ ವಾಪಿ ಮಹಾದೇವಂ ನಿವೇಶಯೇತ್ ।
ಪಾರ್ಶ್ವಪ್ರಾಸಾದಯೋಸ್ತಸ್ಯ ಕಾರ್ಯೌ ವಿಷ್ಣುಪಿತಾಮಹೌ　　॥ ೭೧ ॥

ವಿನಾಯಕಃ ಕುಮಾರೋ ವಾ ಕರ್ತವ್ಯೋ ಯದುನಂದನ ।
ವೀರಭದ್ರಶ್ಚ ನಂದೀ ಚ ಕರ್ತವ್ಯೌ ವಾ ಮನೋಹರೌ　　॥ ೭೨ ॥

ಪ್ರಾಸಾದೇ ಗಾರುಡೇವಾಪಿ ಗರುಡಂ ವಿನಿವೇಶಯೇತ್ ।
ಪಾರ್ಶ್ವಪ್ರಾಸಾದಯೋಃ ಕಾರ್ಯಃ ಕಶ್ಯಪೋ ವಿನತಾ ತಥಾ　　॥ ೭೩ ॥

ಪ್ರಾಸಾದೇ ಗಾರುಡೇ ವಾಪಿ ವಾಸುದೇವಂ ನಿವೇಶಯೇತ್ ।
ಪಾರ್ಶ್ವಪ್ರಾಸಾದಯೋಸ್ತಸ್ಯ ಕಾರ್ಯೌ ರುದ್ರಪಿತಾಮಹೌ　　॥ ೭೪ ॥

ಚಂದ್ರಾರ್ಕೌ ವಾ ಮಹಾರಾಜ ಯದಿ ವಾ ವರುಣಾನಿಲೌ ।
ಲಕ್ಷ್ಮೀಂ ಚ ಕಾಲರಾತ್ರಿಂ ಚ ಯದಿ ವಾಪ್ಯನಲಾನಿಲೌ　　॥ ೭೫ ॥

ತಾಕ್ಷ್ಯಾನಂತೌ ಮಹಾರಾಜ ಯದಿ ವಾ ಗರುಡಾರುಣೌ ।
ಪ್ರಾಸಾದೇ ಗಾರುಡೇ ವಾಪಿ ಧರ್ಮಃ ಕಾರ್ಯೋ ಮಹೀಪತೇ　　॥ ೭೬ ॥

ಪಾರ್ಶ್ವಪ್ರಾಸಾದಯೋಸ್ತಸ್ಯ ಕಾರ್ಯೋರ್ಥಃ ಕಾಮ ಏವ ಚ ।
ಲಿಂಗಾಕಾರಂ ತು ಕರ್ತವ್ಯಂ ದೇವವೇಶ್ಮ ತ್ರಿಮೇಖಲಂ　　॥ ೭೭ ॥

---

ವೀರಭದ್ರ ಮತ್ತು ನಂದಿಯನ್ನಾಗಲಿ ನಿರ್ಮಿಸಬೇಕು ಅಂತಹ ಪ್ರಾಸಾದದಲ್ಲಿ ಗರುಡನನ್ನಾದರೂ ನಿರ್ಮಿಸಬಹುದು ಆಗ ಪಾರ್ಶ್ವಪ್ರಾಸಾದಗಳಲ್ಲಿ ಕಶ್ಯಪ ಮತ್ತು ವಿನತೆಯರನ್ನು ನಿರ್ಮಿಸಬೇಕು

೭೪-೭೭ ಈ ಗಾರುಡ ಪ್ರಾಸಾದದಲ್ಲಿ ವಾಸುದೇವನನ್ನಾದರೂ ಪ್ರತಿಷ್ಠಿಸಬಹುದು ಪಾರ್ಶ್ವಪ್ರಾಸಾದಗಳಲ್ಲಿ ರುದ್ರ ಮತ್ತು ಬ್ರಹ್ಮರನ್ನಾಗಲಿ ಸೂರ್ಯಚಂದ್ರರನ್ನಾಗಲಿ ವರುಣವಾಯುಗಳನ್ನಾಗಲಿ ಲಕ್ಷ್ಮಿ ಮತ್ತು ಕಾಲರಾತ್ರಿಗಳನ್ನಾಗಲಿ ನಿರ್ಮಿಸಬೇಕು ಅಥವಾ ಆ ಗಾರುಡಪ್ರಾಸಾದದಲ್ಲಿ ಧರ್ಮಮೂರ್ತಿಯನ್ನು ಪ್ರತಿಷ್ಠಿಸಬಹುದು ಆಗ ಪಾರ್ಶ್ವಪ್ರಾಸಾದಗಳಲ್ಲಿ ಅರ್ಥ ಮತ್ತು ಕಾಮುಗಳನ್ನು ಸ್ಥಾಪಿಸಬೇಕು ದೇವಗೃಹವನ್ನು ಲಿಂಗಾಕಾರವುಳ್ಳದ್ದಾಗಿಯೂ ಮೇಖಲೆ ಎಂಬ ವಲಯಗಳು ಮೂರಿರುವಂತೆಯೂ ನಿರ್ಮಿಸಿದಲ್ಲಿ ಅಂತಹ ದೇವಗೃಹಕ್ಕೆ ಶರ್ವವೆಂದು ಹಸರು

ತಸ್ಯ ನಾಮ ಭವೇಲ್ಲೋಕೇ ಶರ್ವೇತಿ ನರಪುಂಗವ ।
ದ್ವಿಮೇಖಲಸ್ಯ ತಸ್ಯೈವ ತ್ರೈಲೋಕ್ಯಮಿತಿ ನಿರ್ದಿಶೇತ್ ॥ ೭೮ ॥

ಸ ಏವ ಲಿಂಗನಾಮಾ ಸ್ಯಾತ್ಪ್ರಾಸಾದಸ್ತ್ವೇಕಮೇಖಲಃ ।
ಕೂಟವದ್ವಲಭೀಯುಕ್ತಂ ಸರ್ವಕೀಟಂ ಪ್ರಕೀರ್ತಿತಂ ॥ ೭೯ ॥

ಬ್ರಹ್ಮಾಂಡಮಿತಿ ವಿಜ್ಞೇಯಂ ತ್ರೈಲೋಕ್ಯಂ ವಲಭೀಯುತಂ ।
ಲಿಂಗಾಖ್ಯಂ ವಲಭೀಯುಕ್ತಂ ಸಾರಮಿತ್ಯಭಿಧೀಯತೇ ॥ ೮೦ ॥

ಶರ್ವಾದ್ಯಾಃ ಷಡಿಮೇ ಕಾರ್ಯಾಃ ಪೂರ್ವಪಶ್ಚಿಮದಿಙ್ಮುಖಾಃ ।
ಲಿಂಗಸಂಸ್ಥಾಪನಂ ಕಾರ್ಯಂ ನಿತ್ಯಮೇತೇಷು ಪಂಡಿತೈಃ ॥ ೮೧ ॥

ಪ್ರಾಸಾದಂ ವಲಭೀಸಂಜ್ಞಂ ಚತುರಸ್ರಂ ವಿಮೇಖಲಂ ।
ಚತುರಸ್ರಮಿತಿ ಖ್ಯಾತಂ ಕಾರ್ಯಂ ತತ್ಸುಮನೋಹರಂ ॥ ೮೨ ॥

೭೮-೮೧ ಎರಡು ವಲಯಗಳುಳ್ಳ ಅಂತಹ ದೇವಗೃಹಕ್ಕೆ ತ್ರೈಲೋಕ್ಯವೆಂದು ವ್ಯವಹಾರವಿದೆ ಅಂತಹ ಗೃಹವು ಒಂದೇ ವಲಯವುಳ್ಳದ್ದಾಗಿದ್ದಲ್ಲಿ ಅದಕ್ಕೆ ಲಿಂಗವೆಂದು ಹೆಸರು ಶಿಖರಗಳನ್ನೂ, ವಲಭಿಗಳನ್ನೂ ಹೊಂದಿರುವ ಅಂತಹ ಗೃಹಕ್ಕೆ ಸರ್ವಕೀಟವೆಂದು ಪ್ರಸಿದ್ಧಿ ಇದೆ ತ್ರೈಲೋಕ್ಯವೆಂಬ ದೇವಗೃಹವು ವಲಭಿಗಳಿಂದ ಕೂಡಿದ್ದಲ್ಲಿ ಬ್ರಹ್ಮಾಂಡವೆಂದು ಹಸರು ಲಿಂಗವೆಂಬ ಅಂತಹ ಗೃಹವು ವಲಭಿಗಳಿಂದ ಕೂಡಿದ್ದಲ್ಲಿ ಸಾರವೆಂದು ಹೆಸರು ಶರ್ವಮೊದಲು ಈ ಆರುದೇವಗೃಹಗಳೂ ಪೂರ್ವಪಶ್ಚಿಮದಿಕ್ಕುಗಳಿಗೆ ಅಭಿಮುಖವಾಗಿರುವಂತೆ ರಚಿಸಬೇಕು ಇವುಗಳಲ್ಲಿ ಪಂಡಿತರು ಲಿಂಗಸ್ಥಾಪನವನ್ನು ಮಾಡಿಯೇ ಮಾಡಬೇಕು

೮೨-೮೫ ವಲಭೀ ಎಂಬ ಪ್ರಾಸಾದವು ಚಚ್ಚೌಕವಾಗಿ ವಲಯರಹಿತವಾಗಿದ್ದಲ್ಲಿ ಅದಕ್ಕೆ ಚತುರಸ್ರವೆಂದು ಪ್ರಸಿದ್ಧಿಯುಂಟು, ಇದನ್ನು ರಮ್ಯವಾಗಿ ನಿರ್ಮಿಸಬೇಕು ದ್ವಾರಗಳಾವುವೂ ಇಲ್ಲದೆ ಕೇವಲ ಸ್ತಂಭಗಳಿಂದ ಕೂಡಿ ಮುಂಭಾಗದಲ್ಲಿ

ವಿದ್ವಾರಂ ಸ್ತಂಭಸಂಯುಕ್ತಂ ಪುರಸ್ತಾದ್ಭಿತ್ತಿವರ್ಜಿತಂ ।
ಶಕ್ರಂ ದೇವಗಣೈರ್ಯುಕ್ತಂ ಯಮಂ ವಾ ಪಿತೃಸಂಯುತಂ ॥ ೮೩ ॥

ಮಾತೃಯುಕ್ತಂ ಮಹಾಕಾಲಂ ನೃಸಿಹ್ಮಮಥವಾ ಪುನಃ ।
ದುರ್ಗಾಂ ದೇವೀಂ ತಥಾ ರಾಜನ್ನಕ್ಷತ್ರಂ ಶಶಿನಂ ತಥಾ ॥ ೮೪ ॥

ಗ್ರಹೈರ್ದಿವಾಕರಂ ಯುಕ್ತಂ ನಾಗೈರ್ವಾ ನೃಪ ವಾಸುಕಿಂ ।
ಸುಮೇಖಲಂ ತನ್ನಿರ್ದಿಷ್ಟಂ ತಥಾ ನೃಪ ಸಮೇಖಲಂ ॥ ೮೫ ॥

ವಿಮೇಖಲಂ ತತ್ಕಥಿತಂ ರಾಜದ್ದ್ವಾರಂ ದ್ವಿಮೇಖಲಂ ।
ತ್ರಿಮೇಖಲಂ ತತ್ಕಥಿತಂ ಮೇಖಲಾಢ್ಯಂ ಮಹೀಪತೇ ॥ ೮೬ ॥

ಸರ್ವೇಷ್ವೇತೇಷು ಕರ್ತವ್ಯಾ ಸಭಾಸ್ಥಾಃ ಸರ್ವಕೀರ್ತಿತಾಃ ।
ಅನ್ಯೇಷ್ವನುಕ್ತಾಃ ಕರ್ತವ್ಯಾಃ ಸಭಾಸ್ಥಾ ನರಪುಂಗವ ॥ ೮೭ ॥

ಚತುರಸ್ರಾದಯಸ್ತ್ವೇತೇ ದ್ವಾರವನ್ತೋ ಮಹೀಪತೇ ।
ಧಿಷ್ಣ್ಯಶಲ್ಯಬುಧೇಂದ್ವಾಖ್ಯಾ ನಾಮತಃ ಪರಿಕೀರ್ತಿತಾಃ ॥ ೮೮ ॥

---

ಭಿತ್ತಿಯೂ ಇಲ್ಲದೆ ಇದ್ದು ದೇವತೆಗಳಿಂದ ಕೂಡಿದ ಇಂದ್ರನನ್ನಾಗಲಿ, ಪಿತೃದೇವತೆಗಳಿಂದ ಕೂಡಿದ ಯಮನನ್ನಾಗಲಿ, ಮಾತೃಕೆಗಳಿಂದ ಕೂಡಿದ ಮಹಾಕಾಲನನ್ನಾಗಲಿ, ನೃಸಿಂಹನನ್ನಾಗಲಿ, ದುರ್ಗಾದೇವಿಯನ್ನಾಗಲಿ, ನಕ್ಷತ್ರಗಳಿಂದ ಕೂಡಿದ ಚಂದ್ರನನ್ನಾಗಲಿ, ಗ್ರಹಗಳಿಂದ ಕೂಡಿದ ಸೂರ್ಯನನ್ನಾಗಲಿ, ಸರ್ಪಗಳಿಂದ ಕೂಡಿದ ವಾಸುಕಿಯನ್ನಾಗಲಿ ಹೊಂದಿ ವಲಯದಿಂದ ಕೂಡಿದ್ದಲ್ಲಿ ಅಂತಹ ದೇವಗೃಹಕ್ಕೆ ಸುಮೇಖಲವೆಂದು ಹೆಸರು

೮೬-೯೦ ವಲಯವಿಲ್ಲದಿರುವ ಆಗೃಹಕ್ಕೆ ರಾಜದ್ವಾರವೆಂದೂ, ಎರಡು ಮತ್ತು ಮೂರು ವಲಯಗಳುಳ್ಳ ಅಂತಹ ಗೃಹಕ್ಕೆ ಮೇಖಲಾಢ್ಯವೆಂದೂ ಹೆಸರು ಈ ದೇವಗೃಹಗಳಲ್ಲೆಲ್ಲಾ ಮೇಲೆ ಹೇಳಿರುವ ಆಯಾಯ ದೇವತೆಗಳನ್ನು ಆಸ್ಥಾನದಲ್ಲಿ ಸ್ತುತಿಸಲ್ಪಡುತ್ತಿರುವಂತೆ ನಿರ್ಮಿಸಬೇಕು ಇಲ್ಲಿ ಹೇಳದಿರುವ ಇತರ ದೇವತೆಗಳನ್ನೂ ಸಹ ಅದೇ ರೀತಿಯಲ್ಲಿ ನಿರ್ಮಿಸಬೇಕು ಚತುರಸ್ರವೇ ಮೊದಲಾದ ಈ ಗೃಹಗಳು ದ್ವಾರಗಳಿಂದ ಕೂಡಿದ್ದಲ್ಲಿ ಧಿಷ್ಣ್ಯ, ಶಲ್ಯ, ಬುಧ ಇಂದು ಎಂಬ ನಾಮಗಳಿಂದ ವ್ಯವಹರಿಸಲ್ಪಡುತ್ತವೆ ಗೃಹವೆಂಬ ಮಂದಿರವನ್ನು ಚತುಷ್ಕೋಣವಾಗಿ

ಚತುರಸ್ರೋ ಗೃಹಃ ಕಾರ್ಯಃ ಪ್ರಾಸಾದಸ್ತ್ವೇಕಭೂಮಿಕಃ ।
ಗೃಹ ಇತ್ಯೇವ ವಿಖ್ಯಾತೋ ಲಕ್ಷ್ಮೀಂ ತತ್ರ ನಿವೇಶಯೇತ್ ॥ ೮೯ ॥

ಸ ಏವ ಕಾರ್ಯೋ ದೇವಾನಾಂ ಯಥೇಷ್ಟೋ ಬಹುಭೂಮಿಕಃ ।
ಬಹುಭೂಮಿಕಸಂಜ್ಞಸ್ತು ಯಥೇಷ್ಟಂ ನೃಪಪುಂಗವ ॥ ೯೦ ॥

ಭೂಮಿಕಾದ್ವಾದಶೋಪೇತಃ ಷಡಸ್ರೋ ಮೇರುರುಚ್ಯತೇ ।
ಚತುರ್ದ್ವಾರಸ್ತು ಕರ್ತವ್ಯಃ ಸರ್ವೇಷಾಂ ತ್ರಿದಿವೌಕಸಾಂ ॥ ೯೧ ॥

ಶುಕ್ತಿಮಾನ್ನಾಮತಃ ಸರ್ವಃ ಸಚ್ಚೈಕಾದಶಭೂಮಕಃ ।
ಮಂದರೋ ನಾಮತಃ ಪ್ರೋಕ್ತಃ ಸ ತದ್ವಾದ್ದಶಭೂಮಿಕಃ ॥ ೯೨ ॥

ನವಭಿರ್ಭೂಮಿಕಾಭಿಸ್ತು ಪಾರಿಯಾತ್ರಃ ಪ್ರಕೀರ್ತಿತಃ ।
ಅಲಕೋ ನಾಮ ವಿಖ್ಯಾತಃ ತಥಾಚ್ಚೈವಾಷ್ಟಭೂಮಿಕಃ ॥ ೯೩ ॥

ವಿಮಾನಃ ಸಪ್ತಭೌಮಃ ಸ್ಯಾತ್ಷಡ್ಭೌಮೋ ನಂದನಃ ಸ್ಮೃತಃ ।
ಪಂಚಕಃ ಪಂಚಭೌಮಃ ಸ್ಯಾಚ್ಚತುರ್ಭೌಮಶ್ಚತುಷ್ಕಕಃ ॥ ೯೪ ॥

ನಿರ್ಮಿಸಬೇಕು ಹಾಗೆಯೇ ಒಂದೇ ಅಂತಸ್ತಿನ ಪ್ರಾಸಾದಕ್ಕೂ ಗೃಹವೆಂದೂ ಪ್ರಸಿದ್ಧಿಯುಂಟು ಇಂತಹ ಗೃಹದಲ್ಲಿ ಲಕ್ಷ್ಮಿಯನ್ನು ಸ್ಥಾಪಿಸಬೇಕು ಅಂತಹ ಗೃಹವೇ ಇಷ್ಟಾನುಸಾರ ಅನೇಕ ಅಂತಸ್ತಿನಿಂದ ಕೂಡಿರಬಹುದು ಇದು ದೇವತೆಗಳ ಪ್ರತಿಷ್ಠೆಗೆ ಅರ್ಹವಾಗುತ್ತದೆ ಇಂತಹ ಪ್ರಾಸಾದಗಳಿಗೆ ಬಹುಭೂಮಿಕೆಯೆಂದೇ ಹೆಸರು

೯೧ ೯೫ ಹನ್ನೆರಡು ಅಂತಸ್ತುಗಳಿಂದ ಕೂಡಿ ಆರು ಮೂಲೆಗಳುಳ್ಳ ಪ್ರಾಸಾದಕ್ಕೆ ಮೇರುವೆಂದು ಹೆಸರು ಇಂತಹ ಪ್ರಾಸಾದಗಳು ನಾಲ್ಕು ದ್ವಾರಗಳಿಂದ ಕೂಡಿದ್ದಲ್ಲಿ ಎಲ್ಲಾ ದೇವತೆಗಳಿಗೂ ಅರ್ಹವಾಗುತ್ತದೆ ಅದು ಹನ್ನೊಂದು ಅಂತಸ್ತುಗಳಿಂದ ಕೂಡಿದ್ದಲ್ಲಿ ಶಕ್ತಿಮಾನ್ ಎಂದು ಹೆಸರು ಹತ್ತು ಅಂತಸ್ತುಗಳಿಂದ ಕೂಡಿದ್ದಲ್ಲಿ ಪಾರಿಯಾತ್ರವೆಂದೂ ಎಂಟು ಅಂತಸ್ತುಗಳಿಂದ ಕೂಡಿದ್ದಲ್ಲಿ ಅಲಕವೆಂದೂ ಹೆಸರು ಏಳು ಅಂತಸ್ತುಗಳಿದ್ದಲ್ಲಿ ವಿಮಾನವೆಂದೂ, ಆರು ಅಂತಸ್ತುಗಳಿದ್ದಲ್ಲಿ ನಂದನವೆಂದೂ, ಐದು ಅಂತಸ್ತುಗಳಿದ್ದಲ್ಲಿ ಪಂಚಕವೆಂದೂ, ನಾಲ್ಕು ಅಂತಸ್ತು

**ತ್ರಿಭೂಮಿಸ್ತು ತ್ರಿಭೂಮಿಃ ಸ್ಯಾದ್ದ್ವಿಭೂಮ್ಯಾಖ್ಯೋ ದ್ವಿಭೂಮಿಕಃ |**
**ಏಕಭೌಮಸ್ತು ನಿರ್ದಿಷ್ಟಃ ತಥಾಚೈವೈಕಭೂಮಿಕಃ　　|| ೯೫ ||**

**ವೃತ್ತಃ ಪ್ರೋಕ್ತಃ ಸಮುದ್ರಾಖ್ಯಸ್ತಥಾ ವೃತ್ತೈಕಮೇಖಲಃ |**
**ಮೇಖಲಾ ಚತುರಸ್ರಾ ತು ಭದ್ರಪೀಠಾಕೃತಿರ್ಭವೇತ್　　|| ೯೬ ||**

**ಕೃತಸ್ತ್ವಷ್ಟಪರಿಚ್ಛೇದೈಃ ಸರ್ವಸ್ತ್ವಾಮಲಸಾರಕೈಃ |**
**ವೃತ್ತ ಏವ ತಥಾ ನಂದೀ ಪ್ರಾಸಾದಃ ಪರಿಕೀರ್ತಿತಃ　　|| ೯೭ ||**

**ದೀರ್ಘರಾಜಗೃಹಾಕಾರೋ ಗುಹಾರಾಜಃ ಪ್ರಕೀರ್ತಿತಃ |**
**ಭದ್ರಕಾಲ್ಯಾಸ್ತಥಾ ಕಾರ್ಯಃ ವಿಷ್ಣೋಃ ಭೋಗಶಯಸ್ಯ ವಾ　　|| ೯೮ ||**

**ಏಕಶೃಂಗಸ್ತಥಾ ವೃತ್ತೋ ವೃಷಾಖ್ಯಃ ಸ್ಯಾದ್ದ್ವಿಮೇಖಲಂ |**
**ಹಂಸಾಕಾರಸ್ತಥಾ ಹಂಸೋ ಘಟಾಕಾರಸ್ತಥಾ ಘಟಃ　　|| ೯೯ ||**

---

ಗಳಿದ್ದಲ್ಲಿ ಚತುಷ್ಕವೆಂದೂ, ಮೂರು ಎರಡು ಅಂತಸ್ತುಗಳಿದ್ದಲ್ಲಿ ತ್ರಿಭೂಮಿ, ದ್ವಿಭೂಮಿ ಎಂದೂ, ಒಂದೇ ಅಂತಸ್ತಿದ್ದಲ್ಲಿ ಏಕಭೂಮಿಕನೆಂದೂ ಹೆಸರಿರುತ್ತದೆ

೯೬–೯೮ ಮಂಡಲಾಕಾರವಾಗಿಯೂ, ಮಂಡಲಾಕಾರವಾದ ಒಂದೇ ಹೊರವಲಯದಿಂದ ಕೂಡಿಯೂ ಇರುವ ಅಂತಹ ಪ್ರಾಸಾದಕ್ಕೆ ಸಮುದ್ರವೆಂದೂ ಹೆಸರು ಅಂತಹ ಪ್ರಾಸಾದವು ಚಚ್ಚೌಕವಾಗಿ ಭದ್ರಪೀಠದ ಆಕಾರದಲ್ಲಿದ್ದರ ಅದಕ್ಕೆ ಮೇಖಲಾ ಎಂದು ಹೆಸರು (ಅಥವಾ ವಲಯವು ಚತುಷ್ಕೋಣವಾಗಿದ್ದಲ್ಲಿ ಭದ್ರಪೀಠಾಕೃತಿ ಎಂದು ಹೆಸರು) ಎಂಟು ಮೂಲೆಗಳಿಂದ ಕೂಡಿ ಹೆಚ್ಚಾದ ಚಿತ್ರ ವೈಭವಗಳಿಂದ ಮಾಡಲ್ಪಟ್ಟ ಮಂಡಲಾಕಾರವುಳ್ಳ ಅಂತಹ ಪ್ರಾಸಾದವು ನಂದೀ ಎನಿಸುತ್ತದೆ ದೀರ್ಘವಾದ ರಾಜಗೃಹದಂತೆ ಇದ್ದಲ್ಲಿ ಗುಹಾರಾಜನೆಂದು ಹಸರು ಭದ್ರಕಾಳಿಗೂ, ಸರ್ಪಶಯನನಾದ ವಿಷ್ಣುವಿಗೂ ಈ ವಿಧವಾದ ಪ್ರಾಸಾದವನ್ನು ನಿರ್ಮಿಸಬೇಕು

೯೯–೧೦೨ ಮಂಡಲಾಕಾರವಾಗಿದ್ದು ಒಂದೇ ಶಿಖರದಿಂದಲೂ, ಎರಡು ವಲಯದಿಂದಲೂ ಕೂಡಿದ್ದಲ್ಲಿ ಅದಕ್ಕೆ ವೃಷವೆಂದೂ ಹೆಸರು (ಮಂಡಲಾಕಾರ ವಿಲ್ಲದೇ) ಹಂಸಾಕಾರವಾಗಿದ್ದಲ್ಲಿ ಹಂಸವೆಂದೂ, ಘಟಾಕಾರವಾಗಿದ್ದಲ್ಲಿ ಘಟವೆಂದೂ

ಸಿಹ್ಮಾಕಾರಃ ಸ್ಮೃತಃ ಸಿಹ್ಮೋ ಮಂಡಪೋ ಮಂಡಪಾಕೃತಿಃ ।
ದ್ವಾದಶಾಸ್ರಿಃ ಷಡಸ್ರಿಸ್ತು ತಥಾಷ್ಟಾಸ್ರಿರ್ಮಹೀಪತೇ ॥ ೧೦೦ ॥

ಪ್ರಾಸಾದಾಸ್ತು ಮಯಾ ಪ್ರೋಕ್ತಾಃ ತಥಾ ಪ್ರೋಕ್ತಾಶ್ರಯಸ್ಥಿತಿಃ ।
ಪಂಚಭಿಃ ಶಿಖರೈರ್ಜುಷ್ಟಃ ಚತುರ್ಭಿರಪಿ ಮಂಡಪೈಃ ॥ ೧೦೧ ॥

ದ್ವಾರೈಶ್ಚತುರ್ಭಿಃ ಸಂಯುಕ್ತಃ ಕೈಲಾಸಃ ಪರಿಕೀರ್ತಿತಃ ।
ತ್ರಿಮೇಖಲಃ ತ್ರಿಶೃಂಗಶ್ಚ ತ್ರಿಕೂಟೋ ನಾಮ ವಿಶ್ರುತಃ ॥ ೧೦೨ ॥

ಶೃಂಗೇಣೈಕೇನ ಸಂಯುಕ್ತಃ ಚತುರ್ಭಿರಪಿ ಮಂಡಪೈಃ ।
ಚತುರ್ದ್ವಾರಃ ಸ್ಮೃತಃ ಸೌಮ್ಯಃ ಪ್ರಾಸಾದಃ ಸುಮನೋಹರಃ ॥ ೧೦೩ ॥

ಪ್ರಾಕಾರೇ ಜಾನುದಘ್ನಾ ಸ್ಯಾದ್ಯಸ್ಯೈಕಾ ಜಗತೀ ಭವೇತ್ ।
ಪ್ರಾಸಾದತುಲ್ಯಾತ್ರ್ಯಂಶಾ ತು ತ್ರ್ಯಂಶತುಲ್ಯಾ ತಥಾ ಕಟಿಃ ॥ ೧೦೪ ॥

ಶಿಖರಃ ಕುಹರೋಪೇತೋ ನಾನಾರೂಪಕಭೂಷಿತಃ ।
ಏಕಮಂಡಪಸಂಯುಕ್ತಃ ತಾದೃಶೈಸ್ಸುರಮಂದಿರೈಃ ॥ ೧೦೫ ॥

---

ಸಿಂಹಾಕಾರವಾಗಿದ್ದಲ್ಲಿ ಸಿಹ್ಮವೆಂದೂ, ಮಂಡಪಾಕಾರವಾಗಿದ್ದಲ್ಲಿ ಮಂಡಪವೆಂದೂ ಹೆಸರಿರುತ್ತದೆ ಆರು, ಎಂಟು, ಹನ್ನೆರಡು ಕೋಣಗಳುಳ್ಳ ಇಂತಹ ಪ್ರಾಸಾದಗಳನ್ನೂ ಅವುಗಳಿಗೆ ಆಶ್ರಯವಾದ ದೇವತೆಗಳ ಸ್ಥಿತಿಯನ್ನೂ ಈ ರೀತಿ ಹೇಳಿರುತ್ತೇನೆ ಐದು ಶಿಖರಗಳಿಂದಲೂ ನಾಲ್ಕು ಮಂಡಪಗಳಿಂದಲೂ, ನಾಲ್ಕು ದ್ವಾರಗಳಿಂದಲೂ ಕೂಡಿರುವ ಪ್ರಾಸಾದಕ್ಕೆ ಕೈಲಾಸವೆಂದು ಹೆಸರು ಮೂರು ಶಿಖರಗಳಿಂದ ಕೂಡಿ ಮೂರು ವಲಯಗಳನ್ನೂ ಹೊಂದಿದ್ದಲ್ಲಿ ಇದಕ್ಕೆ ತ್ರಿಕೂಟವೆಂದು ಪ್ರಸಿದ್ಧಿ ಇದೆ

೧೦೩-೧೦೬ ಒಂದೇ ಒಂದು ಶಿಖರದಿಂದ ಕೂಡಿ ನಾಲ್ಕು ಮಂಡಪಗಳಿಂದಲೂ, ನಾಲ್ಕು ದ್ವಾರಗಳಿಂದಲೂ ಕೂಡಿ ರಮ್ಯವಾಗಿರುವ ಪ್ರಾಸಾದವು ಸೌಮ್ಯವೆನಿಸುತ್ತದೆ ಯಾವ ಪ್ರಾಸಾದಕ್ಕೆ ಮಂಡಿಯ ಪರಿಮಾಣದಷ್ಟು ಜಗತೀ ಬಂಧವಿರುತ್ತದೆಯೋ, ಪ್ರಾಸಾದಪರಿಮಾಣಕ್ಕೆ ತಕ್ಕಂತೆ ಮೇಲಿನ ಮೂರು ಭಾಗವೂ ಅದಕ್ಕೆ ತಕ್ಕ ಕಟಿಪ್ರದೇಶವೂ ಇದ್ದು ಶಿಖರವು ಪೊಟ್ಟರೆಗಳಂತಹ ಗೂಡುಗಳಿಂದ ಕೂಡಿ ನಾನಾವಿಧವಾದ ಬೊಂಬೆಗಳಿಂದ ಅಲಂಕೃತವಾಗಿರುತ್ತದೆಯೋ, ಒಂದೇ ಮಂಡಲದಿಂದಲೂ, ಅದೇ ರೀತಿಯಾದ ದೇವಗೃಹಗಳಿಂದಲೂ ಕೂಡಿದ್ದು ವಿದಿಕ್ಕು

ಸ್ವಲ್ಪೈರ್ವಿದಿಕ್ಷುಸಂಯುಕ್ತೈಶ್ಚತುರ್ಭಿರ್ಭುವಿ ಮಂಡಪೈಃ ।
ಸೋಪಾನಮೂಲೇ ಸಂಯುಕ್ತೋ ದ್ವಾಭ್ಯಾಮೇವ ನರಾಧಿಪ ॥ ೧೦೬ ॥

ಪ್ರಾಸಾದೋ ರಾಜರಾಜಾಖ್ಯೋ ಮುಖ್ಯೋಯಂ ಪರಿಕೀರ್ತಿತಃ ।
ಪ್ರಾಸಾದೇ ರಾಜರಾಜಾಖ್ಯೇ ಚತ್ವಾರೋ ಯದಿ ಮಂಡಪಾಃ ॥ ೧೦೭ ॥

ಸರ್ವೇ ಶಿಖರಹೀನಾಸ್ಸ್ಯುಸ್ತಥಾ ಸೋಪಾನಮೂಲಗಾಃ ।
ಅಷ್ಟೌ ದೇವಗೃಹಾಣಿಸ್ಯುಃ ಸ ಭವೇದ್ಧರಣೀಧರಃ ॥ ೧೦೮ ॥

ಮಂಡಪೈಃ ಶಿಖರೋಪೇತೈಃ ವಿಮಾನಾಖ್ಯಃ ಸ ವೈ ಭವೇತ್ ।
ವಿದಿಕ್ಷುಯತ್ರ ಪ್ರಾಸಾದಾಃ ಚತ್ವಾರೋ ಮಂಡಪಾನ್ತರೇ ॥ ೧೦೯ ॥

ಮಂಡಪಾಃ ಶಿಖರೋಪೇತಾಃ ಮಧ್ಯಮಾಂ[1]ಜಲಿಸಂಯುತಾಃ ।
ನವಭಿಃ ಶಿಖರೈರೇಷ ಪ್ರಾಸಾದಃ ಸುರರಾಟ್ ಭವೇತ್ ॥ ೧೧೦ ॥

---

ಗಳಲ್ಲಿ ಸ್ವಲ್ಪ ಪರಿಣಾಮದ ನಾಲ್ಕು ಮಂಡಪಗಳಿಂದ ಕೂಡಿರುತ್ತದೆಯೋ, ಮೆಟ್ಟಿಲು ಗಳ ಬುಡದಲ್ಲಿ ಎರಡೇ ಎರಡು ಮಂಡಪಗಳಿಂದ ಕೂಡಿರುತ್ತದೆಯೋ ಇಂತಹ ಪ್ರಾಸಾದವು ರಾಜರಾಜ ಪ್ರಾಸಾದವೆಂದು ಕರಯಲ್ಪಡುತ್ತದೆ ಇದು ಬಹು ಮುಖ್ಯವಾದ ಪ್ರಾಸಾದ

೧೦೭-೧೧೧. ರಾಜರಾಜವೆಂಬ ಪ್ರಾಸಾದದಲ್ಲಿ ಶಿಖರಹೀನಗಳಾದ ನಾಲ್ಕು ಮಂಡಪಗಳೂ ಸೋಪಾನದ ಬುಡದಲ್ಲಿ ಸೇರಿದ್ದು ಎಂಟು ದೇವಗೃಹಗಳಿಂದ ಕೂಡಿದ್ದಲ್ಲಿ ಇದು ಧರಣೀಧರವೆಂಬ ಪ್ರಾಸಾದವಾಗುತ್ತದೆ ಮಂಡಪಗಳು ನಾಲ್ಕೂ ಶಿಖರಗಳಿಂದ ಕೂಡಿದ್ದಲ್ಲಿ ವಿಮಾನವೆಂದು ಕರೆಯಲ್ಪಡುತ್ತದೆ ನಾಲ್ಕು ಮಂಡಪಗಳ ಮಧ್ಯದಲ್ಲಿ ವಿದಿಕ್ಕುಗಳಲ್ಲಿ ನಾಲ್ಕು ಪ್ರಾಸಾದಗಳಿದ್ದು ಮಂಡಪಗಳು ಶಿಖರಗಳಿಂದ ಕೂಡಿ ಮಧ್ಯಭಾಗದಲ್ಲಿ ಮಂಚಗಳನ್ನು ಹೊಂದಿದ್ದಲ್ಲಿ ಒಂಭತ್ತು ಶಿಖರಗಳಿಂದ ಕೂಡಿದ ಈ ಪ್ರಸಾದವು ಸುರರಾಟ್ ಎನಿಸುತ್ತದೆ ಅನೇಕ ಕಿಟಕಿಗಳಿಂದಲೂ ಅನೇಕ ಸಣ್ಣ ಸಣ್ಣ ಕಣ್ಣುಗಳುಳ್ಳ ಗವಾಕ್ಷಗಳಿಂದಲೂ ಕೂಡಿದ್ದು ಚತುಷ್ಕೋಣ

1 ಇಲ್ಲಿ ಮಧ್ಯಮಂಚಾದಿಸಂಯುತಾಃ ಎಂಬ ಪಾಠವನ್ನು ಊಹಿಸಲಾಗಿದೆ

ಬಹುವಾತಾಯನೋಪೇತೋ ಬಹುಜಾಲಗವಾಕ್ಷಕಃ ।
ಚತುರಸ್ರೋಽಥವಾ ವೃತ್ತಃ ತಥೈವೋಚ್ಛ್ರಿತಮೇಖಲಃ ॥ ೧೧೧ ॥

ಆನಂದನಾಮಾ ಭವತಿ ಪ್ರಾಸಾದಃ ಸರ್ವತೋಮುಖಃ ।
ಮೇಖಲಾಪೃಷ್ಠಭೂಭಾಗಾತ್ಕ್ರಮೇಣಾಮಲಸಾರಕೈಃ ॥ ೧೧೨ ॥

ಅವಿಚ್ಛಿನ್ನೈಃ ಕ್ರಮಾದ್ದ್ವಾರೈರ್ಬಹುಭಿರ್ಯೋವಿನಿರ್ಮಿತಃ ।
ನ ಮುಂಡೋ ನ ಚ ಶೂಲಾಗ್ರಃ ಪ್ರಾಸಾದಃ ಸುಸಮಃ ಸ್ಮೃತಃ ॥ ೧೧೩ ॥

ಮುಂಡಮಂಡಲಸಂಯುಕ್ತಃ ಸ ಏವೋಕ್ತಃ ಪ್ರಭಂಜನಃ ।
ಚತುರ್ಭಿರ್ಮಂಡಪೈರ್ಯುಕ್ತೋ ವಿಶ್ವಕರ್ಮೇತಿ ಕೀರ್ತ್ಯತೇ ॥ ೧೧೪ ॥

ಮಂಡಪೈಃ ಸುಸಮಾಕಾರೈಃ ಚತುರ್ಭಿರಪಿ ಸಂಯುತಃ ।
ಮಹಾಸುಮನ ಇತ್ಯೇಷ ಪ್ರಾಸಾದಃ ಪರಿಕೀರ್ತಿತಃ ॥ ೧೧೫ ॥

ಛತ್ರಾಕಾರಃ ಸ್ಮೃತಃ ಛತ್ರೋ ಮೃದಂಗಸ್ತತ್ತದಾಕೃತಿಃ ।
ವಿಪರೀತೋ ಮೃದಂಗಸ್ತು ವಜ್ರ ಇತ್ಯಭಿಧೀಯತೇ ॥ ೧೧೬ ॥

---

ಅಥವಾ ಮಂಡಲಾಕಾರವಾಗಿಯೋ ಇದ್ದು ಮೇಖಲಾಭಾಗವು ಎತ್ತರವಾಗಿದ್ದಲ್ಲಿ ಸರ್ವತೋಮುಖವಾದ ಈ ಪ್ರಾಸಾದವು ಆನಂದವೆಂದು ಹೇಳಲ್ಪಡುತ್ತದೆ

೧೧೨-೧೧೫ ಸುತ್ತುಗಟ್ಟಿನ ಹಿಂಭಾಗದಲ್ಲಿ ಭೂಮಿಯಿಂದಲೂ ಕ್ರಮವಾಗಿ ಚಿತ್ರಗಳಿಂದ ಎಡಬಿಡದೆ ಜೋಡಿಸಲ್ಪಟ್ಟು ಅನೇಕದ್ವಾರಗಳಿಂದಲೂ ಕೂಡಿದ್ದು ಮೇಲ್ಭಾಗದಲ್ಲಿ ಮುಂಡಾಕಾರವಿಲ್ಲದೆಯೂ ಶೂಲಾಗ್ರಗಳಿಲ್ಲದೆಯೂ ಇದ್ದಲ್ಲಿ ಇಂತಹ ಪ್ರಸಾದಕ್ಕೆ ಸುಸುಮವೆಂದು ಹೆಸರು ಮೇಲ್ಭಾಗವು ದುಂಡಾಗಿ ಮುಂಡಾಕಾರ ದಲ್ಲಿದ್ದಲ್ಲಿ ಅದಕ್ಕೇ ಪ್ರಭಂಜನವೆಂದು ಹೆಸರು ಇದೇ ಪ್ರಭಂಜನವು ನಾಲ್ಕು ಮಂಡಪಗಳಿಂದ ಕೂಡಿದ್ದಲ್ಲಿ ವಿಶ್ವಕರ್ಮವೆನಿಸಿಕೊಳ್ಳುತ್ತದೆ ನಾಲ್ಕು ಮಂಡಪ ಗಳೂ ಒಂದೇಸಮನಾದ ಆಕಾರದಲ್ಲಿದ್ದಲ್ಲಿ ಇಂತಹ ಮಂಡಪಗಳಿಂದ ಕೂಡಿದ ಪ್ರಾಸಾದವು ಮಹಾಸುಮನ ಎಂದು ಪ್ರಸಿದ್ಧಿಹೊಂದಿದೆ

೧೧೬-೧೨೧ ಆನಾಲ್ಕು ಮಂಡಪಗಳು ಛತ್ರಾಕಾರದಲ್ಲಿದ್ದಲ್ಲಿ ಇಂತಹ ಪ್ರಾಸಾದಕ್ಕೆ ಛತ್ರವೆಂದೂ, ಮೃದಂಗಾಕಾರದಲ್ಲಿದ್ದಲ್ಲಿ ಮೃದಂಗವೆಂದೂ, ಅಂತಹ ಪ್ರಾಸಾದಗಳಿಗೆ ಹೆಸರು ಬರುತ್ತದೆ ತಲೆಕೆಳಕಾದ ಮೃದಂಗದಂತಿದ್ದಲ್ಲಿ ಆ

ಏಕಾ ಕಟಿರ್ಭವೇದ್ಯಸ್ಯ ತದ್ವೈಕಾ ಜಗತೀ ನೃಪ ।
ಶಿಖರಾಃ ಶ್ರೇಣಿಗಾಃ ಪಂಚ ದ್ವಾರಾಃ ಪಂಚ ತಥಾ ನೃಪ ॥ ೧೧೭ ॥

ಪ್ರಾಸಾದೋ ಲೋಕಪಾಲಾಖ್ಯೋ ಲೋಕಪಾಲೇಷು ಶಸ್ಯತೇ ।
ಶಂಸಂತ್ಯಥಾನ್ಯಂ ಪ್ರಾಸಾದಂ ಮಹಾಭೂತಗಣಸ್ಯ ಚ ॥ ೧೧೮ ॥

ಪ್ರಾಸಾದೋ ವರ್ತುಲಕಟಿಃ ತಥಾ ವರ್ತುಲಮೇಖಲಃ ।
ಅಷ್ಟಾಸ್ರಿಃ ಶಿಖರೋಪೇತೋ ದ್ವಾರಾಷ್ಟಕವಿಭೂಷಿತಃ ॥ ೧೧೯ ॥

ದಿಗ್ಬಂಧ ಇತಿ ವಿಖ್ಯಾತಃ ಪ್ರಾಸಾದಃ ಸರ್ವದೈವತಃ ।
ಪಶ್ಚಾರ್ಧವಿಟಕೋಪೇತೋ ಜಗತೀಮಾನಮಂಡಲಃ ॥ ೧೨೦ ॥

ಪ್ರಾಸಾದಸ್ತ್ವೇಕಶಿಖರಃ ಸಾಮಾನ್ಯಃ ಪರಿಕೀರ್ತಿತಃ ।
ಮಂಡಪೇ ಜಾಲಕೋಪೇತೇ ಪಶ್ಚಾದ್ಭಾಗೇ ಗುಹಾ ಭವೇತ್ ॥ ೧೨೧ ॥

---

ಪ್ರಾಸಾದಕ್ಕೆ ವಜ್ರವೆಂದು ಹೆಸರು ಕೆಳಭಾಗದ ಜಗತೀಬಂಧವು ಒಂದೇ ಆಗಿದ್ದು ಒಂದೇ ಕಟಿಯಿಂದ ಕೂಡಿದ್ದು ಮೇಲ್ಭಾಗದಲ್ಲಿ ನಾಲಾಗಿರುವ ಐದು ಶಿಖರಗಳುಳ್ಳದ್ದು ಐದು ಬಾಗಿಲುಗಳಿಂದ ಕೂಡಿದ್ದಲ್ಲಿ ಇದು ಲೋಕಪಾಲವೆಂಬ ಪ್ರಾಸಾದವಾಗುತ್ತದ ಇದು ಲೋಕಪಾಲಕರಾದ ದೇವತೆಗಳ ಪ್ರತಿಷ್ಠೆಗೆ ಪ್ರಶಸ್ತ ಈ ಪ್ರಾಸಾದವನ್ನು ಮಹಾಭೂತಗಣಗಳಿಗೆ ಪ್ರಶಸ್ತವನ್ನಾಗಿ ಕೆಲವರು ಹೇಳುತ್ತಾರೆ ದುಂಡಾದ ಮೇಖಲಾಭಾಗದಿಂದಲೂ ಹಾಗೆಯೇ ಮಂಡಲಾಕಾರವಾದ ಕಟಿಭಾಗದಿಂದಲೂ ಕೂಡಿ ಎಂಟು ಮೂಲೆಗಳನ್ನು ಹೊಂದಿ ಎಂಟು ದ್ವಾರಗಳಿಂದಲೂ, ಶಿಖರದಿಂದಲೂ ಕೂಡಿದ್ದಲ್ಲಿ ಇಂತಹ ಪ್ರಾಸಾದಕ್ಕೆ ದಿಗ್ಬಂಧವೆಂದು ಹೆಸರು ಇದು ಸರ್ವದೇವತೆಗಳಿಗೂ ಪ್ರಶಸ್ತ

೧೨೦–೧೨೩ ಹಿಂಭಾಗದ ಅರ್ಧದಲ್ಲಿ ಸಣ್ಣಸಣ್ಣ ಗೂಡುಗಳಿಂದ ಕೂಡಿ ಅಳತೆಗೆ ತಕ್ಕ ಮಂಡಲಾಕಾರವಾದ ಜಗತೀಬಂಧದಿಂದ ಕೂಡಿ ಒಂದೇ ಶಿಖರವುಳ್ಳ ಪ್ರಾಸಾದವು ಸಾಮಾನ್ಯ ಪ್ರಾಸಾದವೆನಿಸುತ್ತದೆ ಮಂಡಪಗಳು ಗವಾಕ್ಷಗಳಿಂದ ಕೂಡಿದ್ದು. ಹಿಂಭಾಗದಲ್ಲಿ ಗುಹೆ ಇದ್ದಲ್ಲಿ ಮೇಖಲೆ ಇಲ್ಲಿದಿರುವ ಇಂತಹ ಪ್ರಾಸಾದವು

ವಿಮೋಖಲೋಯಂ ಪ್ರಾಸಾದಃ ಸುಗುಹಃ ಪರಿಕೀರ್ತಿತಃ ।
ಸ ಏವ ತ್ರಿಗುಣೋಪೇತಸ್ತ್ರಿಗುಣಃ ಪರಿಕೀರ್ತಿತಃ ॥ ೧೨೨ ॥

ಹಿಮವಾನ್ ಬಹುಭಿಃ ಸ್ತಂಭೈರ್ಯುತೋ ಭವತಿ ನಂದಕಃ ।
ಸ್ತಂಭವಾನ್ವಲಭೀಯುಕ್ತಃ ಪ್ರಾಸಾದೋ ಭಿತ್ತಿವರ್ಜಿತಃ ॥ ೧೨೩ ॥

ಆಕಾಶಿನೀ ಸಾ ಭವತಿ ತತ್ರಾಕಾಶಂ ಪ್ರಕಲ್ಪಯೇತ್ ।
ಷೋಡಶಸ್ರಿಸ್ತು ಕಥಿತಃ ಪ್ರಾಸಾದಃ ತಾವದಸ್ರಿಕಃ ॥ ೧೨೪ ॥

ಪ್ರಾಸಾದಃ ಶಂಖಸಂಜ್ಞಃ ಸ್ಯಾಚ್ಛಂಕಾಕಾರಸ್ಸುಶೋಭನಃ ।
ಪದ್ಮಾಭಶಿಖರೋಪೇತೋ ವೈಜಯಂತೋ ಮಹೀಪತೇ ॥ ೧೨೫ ॥

ಅನಾಸ್ರಿಃ ಶಿಖರೋಪೇತೋ ಭವೇದಂಬುದಸಂಜ್ಞಿತಃ ।
ಶಿಖರೈಃ ಕುಹರೋಪೇತೈಃ ಭವೇನ್ಮಂಗಲಸಂಜ್ಞಿತಃ ॥ ೧೨೬ ॥

ಪ್ರಾಸಾದಾನಾಂ ಶತಂ ಚೈತತ್ಸಮಾಸಾತ್ಕಥಿತಂ ಮಯಾ ।
ಯಥೇಚ್ಛಾಭಿಮುಖಾಃ ಕಾರ್ಯಾ ಯೇಷಾಂ ದಿಙ್ನಪ್ರಯೋಜಿತಾ ॥

---

ಸುಗುಹ ಎನಿಸುತ್ತದೆ ಇವರ ಮೂರರಷ್ಟು ಪರಿಮಾಣವಿದ್ದಲ್ಲಿ ಆ ಪ್ರಾಸಾದವು ತ್ರಿಗುಣವೆನಿಸುತ್ತದೆ ಅನೇಕ ಸ್ತಂಭಗಳಿಂದ ಕೂಡಿ ರಮ್ಯವಾದ ಪ್ರಾಸಾದವು ಹಿಮವಾನ್ ಎನಿಸುತ್ತದೆ ಅನೇಕ ಸ್ತಂಭಗಳಿಂದಲೂ, ವಲಭೀಪ್ರದೇಶಗಳಿಂದಲೂ ಕೂಡಿದ್ದು ಗೋಡೆಗಳಿಲ್ಲದಯೇ ಇರುವ ಪ್ರಾಸಾದವು ಆಕಾಶಿನೀ ಎನಿಸುತ್ತದೆ ಇದರಲ್ಲಿ ಆಕಾಶವನ್ನು ರಚಿಸಬೇಕು

೧೨೪-೧೨೭ ಹದಿನಾರು ಕೋಣಗಳುಳ್ಳ ಪ್ರಾಸಾದವು ಷೋಡಶಸ್ರಿ ಎನಿಸುತ್ತದೆ. ಶಂಖಾಕಾರದ ರಮ್ಯಪ್ರಾಸಾದವು ಸಹ ಶಂಖವೆಂದೇ ಸಂಜ್ಞೆ ಹೊಂದುತ್ತದೆ ಪದ್ಮದಂತಹ ಶಿಖರಗಳನ್ನು ಹೊಂದಿರುವ ಪ್ರಾಸಾದವು ವೈಜಯಂತವೆನಿಸುತ್ತದೆ ಯಾವ ಕೋಣವೂ ಇಲ್ಲದೆ ಶಿಖರವನ್ನು ಹೊಂದಿರುವ ಪ್ರಾಸಾದವು ಅಂಬುದವೆನಿಸುತ್ತದೆ ಸಣ್ಣಸಣ್ಣ ಗೂಡುಗಳಿಂದ ಕೂಡಿದ ಶಿಖರಗಳುಳ್ಳ ಪ್ರಾಸಾದಕ್ಕೆ ಮಂಗಲವೆಂದು ಹೆಸರು ಈ ರೀತಿ ನೂರು ವಿಧವಾದ ಪ್ರಾಸಾದಗಳನ್ನೂ ನಾನು ಸಂಗ್ರಹವಾಗಿ ಹೇಳಿದ್ದಾಯಿತು ಯಾವ ಪ್ರಾಸಾದಕ್ಕೆ ದಿಙ್ನಿರ್ಣಯವನ್ನು ನಾನು ಹೇಳಿಲ್ಲವೋ ಅಂತಹ ಪ್ರಾಸಾದಗಳನ್ನು ಇಚ್ಛೆ ಬಂದ ದಿಕ್ಕಿಗೆ ಅಭಿಮುಖವಾಗಿ ನಿರ್ಮಿಸಬಹುದು

**ಸರ್ವೇ ದೇವಗಣಾಃ ಕಾರ್ಯಾಃ ಯೇಷಾಂ ದೇವೋ ನ ಕೀರ್ತಿತಃ ।**
**ವಿಷ್ಣೋರ್ದೇವಸ್ಯ ಕರ್ತವ್ಯಃ ಸರ್ವ ಏವ ವಿಶೇಷತಃ ॥ ೧೨೮ ॥**

**ಅನ್ಯಮಿಶ್ರೌ ನ ಕರ್ತವ್ಯೌ ಚಂದ್ರಾರ್ಕಾವೇಕವೇಶ್ಮಗೌ ।**
**ಸೂರ್ಯೇಣ ಸಂಯುತಶ್ಚಂದ್ರಃ ಕ್ಷೀಣಃ ಕೇತುಃ ಕ್ಷಯಾವಹಃ ॥ ೧೨೯ ॥**

**ಪರಸ್ಪರಾಶಾಭಿಮುಖೌ ಕರ್ತವ್ಯೌ ಸೂರ್ಯರಾತ್ರಿಪೌ ।**
**ಪೂರ್ವಾಪರಾಶಾಭಿಮುಖೌ ನ ತು ಯಾಮ್ಯೋತ್ತರಾಮುಖೌ ॥ ೧೩೦ ॥**

**ಪೂರ್ವಾಪರಾಶಾಭಿಮುಖೌ ಯದಾ ಸ್ಯಾತಾಂ ತದಾ ಶಶೀ ।**
**ಪೂಜ್ಯೋ ಭವತಿ ಧರ್ಮಜ್ಞ ಕರ್ತುಃ ಕಲ್ಯಾಣಕಾರಕಃ ॥ ೧೩೧ ॥**

**ನೈವೇಕವೇಶ್ಮಗೌ ಕಾರ್ಯೌ ಗ್ರಹೌ ಸ್ಕಂದವಿನಾಯಕೌ ।**
**ನ ನಾಗಗರುಡೌ ಕಾರ್ಯೌ ನ ಚಾನ್ತಕಮಹೇಶ್ವರೌ ॥ ೧೩೨ ॥**

೧೨೮-೧೩೧　ಯಾವ ಯಾವ ಪ್ರಾಸಾದಗಳಿಗೆ ದೇವತೆಗಳನ್ನು ನಿರ್ದೇಶ ಮಾಡಿಲ್ಲವೋ ಅಂತಹ ಪ್ರಾಸಾದಗಳಲ್ಲಿ ಎಲ್ಲಾ ದೇವತೆಗಳನ್ನೂ ನಿರ್ಮಿಸಬಹುದು ವಿಷ್ಣುವೆಂಬ ದೇವತಾವಿಶೇಷಕ್ಕೆ ಮಾತ್ರ ಎಲ್ಲಾ ಪ್ರಾಸಾದವೂ ವಿಶೇಷ ರೀತಿಯಿಂದ ನಿರ್ಮಿಸಲ್ಪಡಬೇಕು　ಸೂರ್ಯ ಚಂದ್ರರನ್ನು ಒಂದೇ ಪ್ರಾಸಾದದಲ್ಲಿ ಪರಸ್ಪರ ಮಿಶ್ರಣದಿಂದ ನಿರ್ಮಿಸಬಾರದು　ಸೂರ್ಯನಿಂದ ಕೂಡಿದ ಚಂದ್ರನೂ ಕ್ಷೀಣ ನಾಗುತ್ತಾನೆ　ಕೇತುವು ಕ್ಷಯವನ್ನುಂಟುಮಾಡುತ್ತಾನೆ　ಎದುರುಬದುರಾದ ದಿಕ್ಕಿಗೆ ಅಭಿಮುಖರಾಗಿರುವಂತೆ ಸೂರ್ಯ ಚಂದ್ರರನ್ನು ನಿರ್ಮಿಸಬೇಕು　ಅದ ರಲ್ಲಿಯೂ ಪೂರ್ವ ಪಶ್ಚಿಮ ದಿಕ್ಕಿಗೆ ಅಭಿಮುಖರಾಗಿರಬೇಕು, ದಕ್ಷಿಣೋತ್ತರಾಭಿ ಮುಖರಾಗಿರಕೂಡದು　ಪೂರ್ವ ಪಶ್ಚಿಮಾಭಿಮುರಾಗಿದ್ದಲ್ಲಿ ಚಂದ್ರನು ಪೂಜ್ಯನೂ ಕರ್ತೃವಿಗೆ ಮಂಗಳಪ್ರದನೂ ಆಗುತ್ತಾನೆ

೧೩೨-೧೩೩　ಸ್ಕಂದ ಮತ್ತು ವಿನಾಯಕ ಇವರನ್ನು ಒಂದೇ ಗೃಹದಲ್ಲಿ ನಿರ್ಮಿಸಬಾರದು, ಹಾಗೆಯೇ ಸರ್ಪ ಮತ್ತು ಗರುಡರನ್ನೂ, ಮಹೇಶ್ವರ ಮತ್ತು

**ಮಹಾಕಾಲನೃಸಿಹ್ಮೌ ಚ ರಕ್ತಾಂ ಶುಷ್ಕಾಂ ತಥೈವ ಚ ।**
**ಬ್ರಹ್ಮರುದ್ರಕೃತಾನ್ತೈಸ್ತು ಭದ್ರಕಾಲ್ಯಾಥವಾ ಸಹ ॥ ೧೩೩ ॥**

**ಕಾಮದೇವೋ ನ ಕರ್ತವ್ಯಃ ತಥೈವ ವರುಣಾನಲೌ ।**
**ದೇವಸ್ಯೈಕಸ್ಯ ನೋ ಕಾರ್ಯೇ ದ್ವೇ ತಥಾರ್ಚೇ ತಥಾ ನೃಪ ॥ ೧೩೪ ॥**

**ಪ್ರಾದುರ್ಭಾವವತೇ ಕಾರ್ಯೇ ತೇ ಚ ವಿಷ್ಣೋರ್ಮಹಾತ್ಮನಃ ।**
**ಯೇಷಾಮಪಿ ಚ ದೇವಾನಾಂ ದ್ವಂದ್ವಯೋಗೋ ವಿಗರ್ಹಿತಃ ॥ ೧೩೫ ॥**

**ತೇಷಾಮನ್ಯನ್ಯಸಹಿತಃ ಪ್ರಶಸ್ತೋ ನೃಪಸತ್ತಮ ।**
**ಗ್ರಹಸಂಖ್ಯಾಸುಸಹಿತೌ ಕರ್ತವ್ಯೌ ಸೂರ್ಯರಾತ್ರಿಪೌ ॥ ೧೩೬ ॥**

**ಮಹಾದೇವಸಮೀಪಸ್ಥೌ ತಥಾ ಸ್ಕಂದವಿನಾಯಕೌ ।**
**ವಾಸುದೇವಸಮೀಪಸ್ಥೌ ಶೇಷತಾರ್ಕ್ಷ್ಯೌ ತಥೈವ ಚ ॥ ೧೩೭ ॥**

ಯಮನನ್ನೂ, ಮಹಾಕಾಲ ನರಸಿಂಹರನ್ನೂ ರಕ್ತ ಮತ್ತು ಶುಷ್ಕಾ ಎಂಬ ದೇವತೆಗಳನ್ನೂ, ಬ್ರಹ್ಮ, ರುದ್ರ, ಯಮ ಇವರೊಡನೆಯೂ ಅಥವಾ ಭದ್ರಕಾಲಿಯೊಡನೆಯೂ ಮನ್ಮಥನನ್ನೂ ನಿರ್ಮಿಸಬಾರದು ಹಾಗೆಯೇ ವರುಣ ಮತ್ತು ಅಗ್ನಿಗಳನ್ನೂ ಒಂದೇ ಗೃಹದಲ್ಲಿ ನಿರ್ಮಿಸಬಾರದು ಹಾಗೆಯೇ ಒಂದೇ ದೇವತೆಯ ಎರಡು ವಿಗ್ರಹಗಳನ್ನೂ ಒಂದೇ ಗೃಹದಲ್ಲಿ ನಿರ್ಮಿಸಬಾರದು

೧೩೫–೧೩೮ ಮಹಾಪುರುಷನಾದ ವಿಷ್ಣುವಿನ ಅನೇಕಾವತಾರರೂಪಗಳಾದ ಪ್ರಾದುರ್ಭಾವಗಳನ್ನು ಮಾತ್ರ ಅನೇಕ ವಿಗ್ರಹಗಳ ರೂಪದಿಂದ ಒಂದೇ ಆಲಯದಲ್ಲಿ ನಿರ್ಮಿಸಬಹುದು ಹಿಂದೆ ಯಾವಯಾವ ದೇವತೆಗಳಿಗೆ ಒಂದೇ ಗೃಹದಲ್ಲಿ ನಿರ್ಮಿಸಕೂಡದೆಂದು ನಿಷೇಧವಿದೆಯೋ ಅಂತಹ ಪರಸ್ಪರ ವಿರುದ್ಧ ದೇವತೆಗಳನ್ನೂ ಸಹ ಇತರ ಸಂಬಂಧವಿದ್ದಲ್ಲಿ ನಿರ್ಮಿಸಬಹುದು ಅದು ಪ್ರಶಸ್ತಕ್ರಮವೂ ಆಗುತ್ತದೆ ಸೂರ್ಯಚಂದ್ರರ ಪ್ರತಿಷ್ಠೆಯು ನಿಷಿದ್ಧವಾಗಿದ್ದರೂ ಗ್ರಹಗಳಿಂದ ಕೂಡಿರುವ ಅವರ ಪ್ರತಿಷ್ಠೆಯು ಶುಭಕರ, ಸ್ಕಂದವಿನಾಯಕರಿಗೆ ನಿಷೇಧವಿದ್ದರೂ ಮಹಾದೇವನ ಸಮೀಪದಲ್ಲಿರುವಂತೆ ಅವರ ನಿರ್ಮಾಣವೂ ಪ್ರಶಸ್ತವಾಗುತ್ತದೆ ಹಾಗೆಯೇ ಶೇಷ, ಗರುಡ, ಇವರ ನಿರ್ಮಾಣವೂ ವಾಸುದೇವನ ಸಾನ್ನಿಧ್ಯವಿದ್ದಲ್ಲಿ

**ಏವಮನ್ಯಸಮೇತಾನಾಂ ಯಥಾಯೋಗ್ಯೈಃ ಪೃಥಗ್ವಿಧೈಃ ।**
**ಕರ್ತವ್ಯಸ್ತು ವಿರುದ್ಧಾನಾಂ ದೇವಾನಾಂ ಚಾಪಿ ಸಂಗಮಃ ॥ ೧೩೮ ॥**

**ಪ್ರಾಸಾದಲಕ್ಷಣಮಿದಂ ಕಥಿತಂ ಸಮಾಸಾ-**
**ದಾಲೋಕ್ಯ ಪೂರ್ವಚರಿತಂ ಹಿ ಪಿತಾಮಹೋಕ್ತಂ ।**
**ಶಾಸ್ತ್ರಂ ಹಿತಾಯ ನರಸತ್ತಮ ಮಾನುಷಾಣಾಂ**
**ಧಾರ್ಯಂ ತ್ವಯಾ ತದತಿಯತ್ನಪರೇಣ ನಿತ್ಯಂ ॥ ೧೩೯ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ ವಜ್ರಸಂವಾದೇ ಪ್ರಾಸಾದಲಕ್ಷಣೋ ನಾಮ ಷಡಶೀತಿತಮೋಽಧ್ಯಾಯಃ**

---

ಶುಭಕರ, ಹೀಗೆಯೇ ಪರಸ್ಪರ ವಿರುದ್ಧವಾದ ದೇವತೆಗಳಿಗೆ ಇತರ ಸಾನ್ನಿಧ್ಯದೊಡನೆ ನಿರ್ಮಿಸಿದಲ್ಲಿ ಪರಸ್ಪರ ಸಮಾಗಮವು ದೋಷಾವಹವಲ್ಲ. ಈ ರೀತಿ ಚತುರ್ಮುಖ ನಿಂದ ಹಿಂದ ಹೇಳಲ್ಪಟ್ಟಿದ್ದ ಲಕ್ಷಣಗಳನ್ನು ವಿಚಾರಮಾಡಿ ಸಂಗ್ರಹವಾಗಿ ಪ್ರಾಸಾದ ಲಕ್ಷಣಗಳನ್ನು ಹೇಳಿರುತ್ತೇನೆ. ಇಂತಹ ಶಾಸ್ತ್ರವು ಮನುಷ್ಯನಿಗೆ ಬಹುಮಟ್ಟಿಗೂ ಹಿತಸಾಧನೆಗೂ ಉಪಕಾರಿಯಾಗುತ್ತದೆ. ಆದುದರಿಂದ ಮನುಜೋತ್ತಮನಾದ ನೀನೂ ಸಹ ನಿತ್ಯವೂ ಪ್ರಯತ್ನಪೂರ್ವಕವಾಗಿ ಅಭ್ಯಾಸಿಸಿ ಬುದ್ಧಿಶಕ್ತಿಯಿಂದ ಧರಿಸಬೇಕು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯ ಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದದಲ್ಲಿ ಪ್ರಾಸಾದಲಕ್ಷಣವೆಂಬ ಎಂಭತ್ತಾರನೆಯ ಅಧ್ಯಾಯ ಮುಗಿದಿದೆ



॥ ಓಂ ॥

॥ ಶ್ರೀ ಹಯಗ್ರೀವಾಯ ನಮಃ ॥

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### ॥ ಸಪ್ತಾಶೀತಿತಮೋಽಧ್ಯಾಯಃ ॥

**॥ ಮಾರ್ಕಂಡೇಯ ಉವಾಚ ॥**

**ಪ್ರಾಸಾದಮಥ ವಕ್ಷ್ಯಾಮಿ ಸರ್ವತೋಭದ್ರಸಂಜ್ಞಿತಂ ।**
**ಚತುರಾತ್ಮಾ ಹರಿರ್ಯತ್ರ ಕರ್ತವ್ಯೋ ಜಗತೀಪತೇ ॥ ೧ ॥**

**ಏಕತ್ರ ಜಗತೀ ಕಾರ್ಯಾ ಚತುರಸ್ರಾ ಮನೋರಮಾ ।**
**ತಸ್ಯಾಂ ಗರ್ಭಗೃಹಾಃ ಕಾರ್ಯಾ ವಿಂಶತಿಶ್ಚತುರುತ್ತರಾಃ ॥ ೨ ॥**

**ಯೇಷಾಂ ಪೃಷ್ಠೇ ಜಗತ್ಯೂರ್ಧ್ವಂ ಪ್ರಾಕಾರಂ ವಿನಿವೇಶಯೇತ್ ।**
**ಸರ್ವತ್ರ ಮೇಖಲಾಕಾರಂ ತತ್ರಾಪಿ ವಿನಿವೇಶಯೇತ್ ॥ ೩ ॥**

---

### ಎಂಭತ್ತೇಳನೆಯ ಅಧ್ಯಾಯ.

೧-೪ ಮಾರ್ಕಂಡೇಯರು ಹೇಳುತ್ತಾರೆ —ವಾಸುದೇವ ಸಂಕರ್ಷಣಾದಿ ನಾಲ್ಕು ಮೂರ್ತಿಗಳುಳ್ಳ ಹರಿಯನ್ನು ನಿರ್ಮಿಸಲು ಅರ್ಹವಾದ ಸರ್ವತೋಭದ್ರ ವೆಂಬ ಪ್ರಾಸಾದವನ್ನು ಈಗ ಹೇಳುತ್ತೇನೆ ಮೊದಲು ಒಂದು ಕಡೆಯಲ್ಲಿ ನಾಲ್ಕು ಮೂಲೆಗಳಿಂದ ರಮ್ಯವಾಗಿರುವ ಜಗತೀಬಂಧವನ್ನು ಏರ್ಪಡಿಸಬೇಕು ಆ ಜಗತಿ ಯಲ್ಲಿ ಇಪ್ಪತ್ತನಾಲ್ಕು ಗರ್ಭಗೃಹಗಳನ್ನು ನಿರ್ಮಿಸಬೇಕು ಆ ಗರ್ಭಗೃಹಗಳ ಮೇಲುಭಾಗದಲ್ಲಿ ಜಗತೀ ಬಂಧದ ಮೇಲೆ ಎತ್ತರವಾದ ಪ್ರಾಕಾರವನ್ನು ರಚಿಸ ಬೇಕಾಗುತ್ತದೆ ಅಂತಹ ಪ್ರಾಕಾರವನ್ನೂ ವಡ್ಯಾಣದಂತೆ ವರ್ತುಲವಾಗಿ ರಚಿಸ

ಪ್ರಾಸಾದಕಾ ಮಹಾರಾಜ ಚತುರ್ವಿಂಶತಿರೇವ ಚ ।
ಚತುರ್ಷ್ವಪಿ ದಿಕ್ಷು ಸೋಪಾನಂ ಮೇಖಲಾಯಾಂ ನಿವೇಶಯೇತ್ ॥ ೪ ॥

ಸೋಪಾನತ್ರ್ಯಂಶವಿಸ್ತಾರೋ ಮೇಖಲಾಯಾಃ ಪ್ರಕೀರ್ತಿತಃ ।
ಸೋಪಾನೋಭಯತೋ ರಾಜನ್ ಪ್ರಾಸಾದಾಸ್ತೇ ತ್ರಯಸ್ತ್ರಯಃ ॥ ೫ ॥

ಭವಂತಿ ಮೇಖಲಾಪೃಷ್ಠೇ ತದಾದೌ ಗರ್ಭಮಂದಿರಂ ।
ವಿಮೇಖಲಂ ತು ಸಾಮಾನ್ಯಂ ಮಧ್ಯೇ ತೇಷಾಂ ವಿಮಂಡಪಂ ॥ ೬ ॥

ಹಿಮವತ್ಸಂಜ್ಞಿತೌ ಕಾರ್ಯೌ ತಸ್ಯ ಪಾರ್ಶ್ವೇ ವಿಮೇಖಲೌ ।
ಸೋಪಾನಮೂಲೇ ಪ್ರಾಸಾದೇ ದ್ವೇ ದ್ವೇ ಕಾರ್ಯೇ ಮನೋರಮೇ ॥ ೭ ॥

ದಂಷ್ಟ್ರೇ ದೇವಕುಲಾಖ್ಯೇತೇ ಸಾಮಾನ್ಯಾಖ್ಯೇ ವಿಮಂಡಪೇ ।
ತಥೈವ ಜಗತೀಪೃಷ್ಠೇ ಕೋಣೇ ದೇವಕುಲಂ ನ್ಯಸೇತ್ ॥ ೮ ॥

---

ಬೇಕಾಗುತ್ತದೆ ಅವುಗಳ ನಾಲ್ಕು ದಿಕ್ಕುಗಳಲ್ಲಿಯೂ ಸೋಪಾನಗಳನ್ನು ರಚಿಸ ಬೇಕು ಅಂತಹ ಮೇಲುಭಾಗದಲ್ಲಿ ಇಪ್ಪತ್ತನಾಲ್ಕು ಸಣ್ಣಸಣ್ಣ ಪ್ರಾಸಾದಗಳನ್ನು ರಚಿಸಬೇಕು

೫–೮ ಮೇಖಲಾ ಎಂಬ ಜಗತೀಬಂಧದ ಮೇಲುಭಾಗದ ಸುತ್ತುವಳಿಯು ಪರಿಮಾಣದಲ್ಲಿ ಸೋಪಾನದ ಮೂರನೇ ಒಂದು ಭಾಗ ವಿಸ್ತಾರ ಹೊಂದಿರಬೇಕು ಸೋಪಾನದ ಉಭಯ ಭಾಗಗಳಲ್ಲಿಯೂ ಮೇಖಲೆಯ ಮೇಲು ಭಾಗದಲ್ಲಿ ಮೂರು ಮೂರು ಪ್ರಾಸಾದಗಳಿರಬೇಕು ಅವುಗಳಲ್ಲಿ ಮೊದಲನೇಯದೇ ಗರ್ಭಗೃಹ, ಅಂತಹ ಪ್ರಾಸಾದಗಳ ಮಧ್ಯಭಾಗದಲ್ಲಿ ಮೇಖಲಾ ಎಂಬ ವಲಯವಿಲ್ಲದ ಸಾಮಾನ್ಯ ವಾದ ಮಂಡಪಗಳಿಲ್ಲದ ಭಾಗ, ಆ ಗರ್ಭಮಂದಿರದ ಪಾರ್ಶ್ವಗಳಲ್ಲಿ ಮೇಖಲೆಗಳಿಲ್ಲದ ಹಿಮವಂತನೆಂಬ ಎರಡು ಪ್ರಾಸಾದಗಳಿರಬೇಕು ಸೋಪಾನದ ಬುಡಗಲ್ಲಿರುವ ಪ್ರಾಸಾದದಲ್ಲಿ ಎರಡು ಭಾಗಗಳಲ್ಲಿಯೂ ದೇವಕುಲವೆಂಬ ದಂಷ್ಟ್ರಗಳಿರಬೇಕು ಮಂಡಪಗಳಿಲ್ಲದಿದ್ದರೆ ಅವಕ್ಕೆ ಸಾಮಾನ್ಯವೆಂದು ಹೆಸರು ಹಾಗೆಯೇ ಜಗತಿಯು ಮೇಲುಭಾಗದ ಕೊರಡಿಯಲ್ಲಿ ದೇವಗೃಹವನ್ನು ನಿರ್ಮಿಸಬೇಕು

ಪ್ರಾಸಾದೋ ಮಧ್ಯಮಶ್ಚಾತ್ರ ಕರ್ತವ್ಯೋ ಮಂಡಪಾನ್ವಿತಃ ।
ಚತ್ವಾರೋ ಮಂಡಪಾಶ್ಚಾತ್ರ ಕಾರ್ಯಾಃ ಶಿಖರಸಂಜ್ಞಿತಾಃ ॥ ೯ ॥

ಮಧ್ಯಪ್ರಾಸಾದಕೋಣೇಷು ತಥಾ ಮಂಡಪಸಂಧಿಷು ।
ದ್ವಿದ್ವಿಗರ್ಭಗೃಹಾನ್ ರಮ್ಯಾನ್ ಪ್ರಾಸಾದಾನ್ವಿನಿವೇಶಯೇತ್ ॥ ೧೦ ॥

ಏಕೈಕಂ ಮಂಡಪಂ ಚಾತ್ರ ದ್ವಾರತ್ರಿತಯಭೂಷಿತಂ ।
ಚತುರ್ಥೇ ಚ ತಥಾ ದ್ವಾರೇ ದೇವಗರ್ಭಗೃಹಂ ಭವೇತ್ ॥ ೧೧ ॥

ಮಂಡಪಸ್ಯ ಚ ಯೇ ದ್ವಾರಾಃ ಕಾರ್ಯಾಸ್ತೇ ಸ್ತಂಭಭೂಷಿತಾಃ ।
ಪ್ರಾಸಾದಸ್ಯಾಸ್ಯ ಶಿಖರಾ ಭವಂತ್ಯೇವ ನವೈವ ತು ॥ ೧೨ ॥

ಉಚ್ಛ್ರಿತಂ ನವಮಂ ಶೃಂಗಂ ತುಲ್ಯಂ ಸ್ಯಾಚ್ಛಿಖರಾಷ್ಟಕಂ ।
ಮಧ್ಯಮಂ ಶಿಖರಂ ತತ್ರ ಕಾರ್ಯಂ ಶಿಖರವರ್ಜಿತಂ ॥ ೧೩ ॥

ರೂಪಕೈರ್ವಿವಿಧೈರ್ಯುಕ್ತಂ ನ ಮುಂಡಂ ನ ಚ ಶೂಲವತ್ ।
ಅಷ್ಟೌ ತು ಶಿಖರಾಸ್ತತ್ರ ಕರ್ತವ್ಯಾಃ ಕುಹರಾನ್ವಿತಾಃ ॥ ೧೪ ॥

---

೯-೧೧ ಇದರಲ್ಲಿ ಮಂಡಪದಿಂದ ಕೂಡಿದ ಮಧ್ಯಮ ಪ್ರಾಸಾದವನ್ನು ರಚಿಸಬೇಕು ಅಂತಹ ಮಂಡಪಗಳೂ ಸಹ ಶಿಖರಸಂಜ್ಞೆಯುಳ್ಳದ್ದಾಗಿ ನಾಲ್ಕು ಇರಬೇಕು ಮಧ್ಯಪ್ರಾಸಾದದ ಮೂಲೆಗಳಲ್ಲಿಯೂ, ಮಂಡಪಗಳ ಸಂಧಿಭಾಗ ಗಳಲ್ಲಿಯೂ ಸಹ ಎರಡೆರಡು ಗರ್ಭಗೃಹಗಳುಳ್ಳ ಪ್ರಾಸಾದಗಳನ್ನು ರಚಿಸಬೇಕು ಈ ಮಂಡಪಗಳಲ್ಲಿ ಒಂದೊಂದೂ ಮೂರು ಮೂರು ಬಾಗಿಲುಗಳನ್ನು ಹೊಂದಿದ್ದು ನಾಲ್ಕನೆಯ ದ್ವಾರದಲ್ಲಿ ದೇವರ ಗರ್ಭಗೃಹವಿರಬೇಕು

೧೨-೧೬ ಮಂಡಪದ ದ್ವಾರಗಳೆಲ್ಲಾ ಸ್ತಂಭಗಳಿಂದ ಕೂಡಿ ರಮ್ಯವಾಗಿರ ಬೇಕು ಈ ಪ್ರಾಸಾದಕ್ಕೆ ಒಂಭತ್ತು ಶಿಖರಗಳಿರಬೇಕು ಒಂಭತ್ತನೆಯ ಶಿಖರ ಮಾತ್ರ ಎತ್ತರವಾಗಿದ್ದು ಉಳಿದ ಎಂಟೂ ಒಂದೇ ಸಮನಾಗಿರಬೇಕು ಮಧ್ಯದ ಶಿಖರಕ್ಕೆ ಮತ್ತೊಂದು ಉಪಶಿಖರವು ಮೇಲೆ ಇರಕೂಡದು ಮತ್ತು ಅದು ಅನೇಕ ಬೊಂಬೆಗಳಿಂದ ಕೂಡಿದ್ದು ಬೋಳಾಗಿಯೂ ಇರಕೂಡದು ಶೂಲವನ್ನು ಹೊಂದಿಯೂ ಇರಕೂಡದು ಸುತ್ತಲೂ ಇರುವ ಎಂಟು ಶಿಖರಗಳು ಪೊಟರೆಗಳಿಂದ ಕೂಡಿರಬೇಕು ಆ ಪೊಟ್ಟರೆಗಳೂ ಜಾಲರಿಗಳಿಂದಲೂ, ಗವಾಕ್ಷಗಳಿಂದಲೂ ಕೂಡಿರ

ಜಾಲಾಗವಾಕ್ಷಕೋಪೇತೈಃ ಕುಹರೈರ್ನೃಪ ಭೂಷಿತಾಃ ।
ಸರ್ವತ್ರ ಶಿಖರಾಃ ಕಾರ್ಯಾ ಶುಭಾಮಲಕಸಾರಕಾಃ ॥ ೧೫ ॥

ಸಚಕ್ರಾಃ ಸಪತಾಕಾಶ್ಚ ಸಧ್ವಜಾಶ್ಚ ನರಾಧಿಪ ।
ಸೋಽಭಿಷಿಕ್ತ ಇವಾಭಾತಿ ಪ್ರಾಸಾದೋಯಂ ಸಮುಚ್ಛ್ರಿತಃ ॥ ೧೬ ॥

ಕ್ರಮತೋ ದೇವತಾನ್ಯಾಸಂ ಪ್ರಾಸಾದೇಽಸ್ಮಿನ್ನಿಬೋಧ ಮೇ ।
ವಾಸುದೇವೋಽತ್ರ ಕರ್ತವ್ಯಃ ಪೂರ್ವಾಶಾಭಿಮುಖೋ ನೃಪ ॥ ೧೭ ॥

ಪಶ್ಚಿಮಾಶಾಮುಖೋ ವಾಪಿ ನ ಕುರ್ಯಾಚ್ಚಾನ್ಯದಿಙ್ಮುಖಃ ।
ವಾಸುದೇವದಿಶಂ ಚಾತ್ರ ಪೂರ್ವಾಂ ರಾಜನ್ ಪ್ರಕಲ್ಪಯೇತ್ ॥ ೧೮ ॥

ತಸ್ಯಾಶ್ಚೈವಾನುಸಾರೇಣ ದಿಶಃ ಸ್ಯಾತ್ಪರಿಕಲ್ಪನಾ ।
ದಕ್ಷಿಣಾಶಾಮುಖಃ ಕಾರ್ಯೋ ದೇವಃ ಸಂಕರ್ಷಣಃ ಪ್ರಭುಃ ॥ ೧೯ ॥

ಪಶ್ಚಿಮಾಶಾಮುಖಃ ಕಾರ್ಯಃ ಪ್ರದ್ಯುಮ್ನಶ್ಚಾಪ್ಯನಂತರಂ ।
ಉತ್ತರಾಶಾಮುಖೋ ರಾಜನ್ನನಿರುದ್ಧೋ ವಿಧೀಯತೇ ॥ ೨೦ ॥

---

ಬೇಕು ಎಲ್ಲಾ ಶಿಖರಗಳನ್ನೂ ಮಾಡಿರಬೇಕು ಆ ಶಿಖರಗಳೆಲ್ಲವೂ ಚಕ್ರ, ಪತಾಕ ಧ್ವಜ ಇವುಗಳಿಂದ ಕೂಡಿರಬೇಕು ಉನ್ನತವಾದ ಇಂತಹ ಈ ಪ್ರಾಸಾದವು ಅಭಿಷಿಕ್ತನಾದ ದೊರೆಯಂತೆ ಪ್ರಕಾಶಿಸುತ್ತದೆ

೧೭–೨೧ ಈ ಪ್ರಾಸಾದದಲ್ಲಿ ದೇವತೆಗಳ ವಿನ್ಯಾಸವನ್ನು ಕ್ರಮವಾಗಿ ಹೇಳುತ್ತೇನೆ ಕೇಳು ಈ ಪ್ರಾಸಾದದಲ್ಲಿ ವಾಸುದೇವಮೂರ್ತಿಯನ್ನು ಪೂರ್ವ ದಿಕ್ಕಿಗೆ ಅಭಿಮುಖವಾಗಿ ಪ್ರತಿಷ್ಠಿಸಬೇಕು ಪಶ್ಚಿಮದಿಕ್ಕಿಗೆ ಅಭಿಮುಖನಾಗಿರುವಂತೆಯೂ ಪ್ರತಿಷ್ಠಿಸಬಹುದು ಆದರೆ ಇತರ ದಿಕ್ಕಿಗೆ ಅಭಿಮುಖವಾಗಿ ಪ್ರತಿಷ್ಠಿಸ ಕೂಡದು ವಾಸುದೇವನಿಗೆ ಅಭಿಮುಖವಾದ ದಿಕ್ಕನ್ನೇ ಪೂರ್ವದಿಕ್ಕನ್ನಾಗಿ ಕಲ್ಪಿಸಿ ಅದಕ್ಕೆ ತಕ್ಕಂತೆಯೇ ಇತರ ದಿಕ್ಕುಗಳನ್ನೂ ಕಲ್ಪಿಸಬೇಕು ಸಂಕರ್ಷಣಮೂರ್ತಿಯನ್ನು ದಕ್ಷಿಣದಿಕ್ಕಿಗೆ ಅಭಿಮುಖನಾಗಿರುವಂತೆ ಪ್ರತಿಷ್ಠಿಸಬೇಕು ಪ್ರದ್ಯುಮ್ನಮೂರ್ತಿಯನ್ನು ಪಶ್ಚಿಮದಿಕ್ಕಿಗೆ ಅಭಿಮುಖವಾಗಿ ರಚಿಸಬೇಕು ಅನಿರುದ್ಧನು ಉತ್ತರದಿಕ್ಕಿಗೆ ಅಭಿಮುಖನಾಗುವಂತಿರಬೇಕು ದಿಗ್ಗರ್ಭಗಳಲ್ಲಿಯೂ ಮಂಡಪ

ದಿಗ್ಗರ್ಭಾ ಯೇ ಮಯಾ ಪ್ರೋಕ್ತಾ ಗೃಹಾ ಮಂಡಪಸಂಧಿಗಾಃ ।
ಪ್ರಾಙ್ಮಂಡಪಾದ್ದಕ್ಷಿಣತೋ ಲಕ್ಷ್ಮೀಂ ತತ್ರ ತು ಕಾರಯೇತ್ ॥ ೨೧ ॥

ದಕ್ಷಿಣಾದ್ವಾಮತೋ ನಿದ್ರಾಂ ಕಾಲರಾತ್ರಿಂ ತು ದಕ್ಷಿಣೇ ।
ಪಶ್ಚಿಮಾದ್ವಾಮತಃ ಸಿದ್ಧಿಂ ರತಿಂ ತಸ್ಯೈವ ದಕ್ಷಿಣೇ ॥ ೨೨ ॥

ಉತ್ತರಾದ್ವಾಮತಃ ಕೀರ್ತಿಂ ದಕ್ಷಿಣೇನ ಸರಸ್ವತೀಂ ।
ಪೂರ್ವಸ್ಯಾಂ ವಾಮಭಾಗೇ ತು ತಥಾ ಪುಷ್ಟಿಂ ನಿವೇಶಯೇತ್ ॥ ೨೩ ॥

ಐಶಾನ್ಯಾದಿಕ್ರಮಾಃ ಕಾರ್ಯಾ ಕೋಣಪ್ರಾಸಾದಗಾಸ್ತ್ವಮೇ ।
ಅಶ್ವಶೀರ್ಷಂ ವರಾಹಂ ಚ ನರಸಿಹ್ಮಂ ತ್ರಿವಿಕ್ರಮಂ ॥ ೨೪ ॥

ಪ್ರಾಸಾದಕೇಷು ಕರ್ತವ್ಯಾ ಮೇಖಲಾ ಬಂಧಕೇಷು ಚ ।
ಚತುರ್ವಿಂಶತಿರಿತ್ಯೇತೇ ವಿಬುಧಾ ವಿಬುಧೋತ್ತಮ ॥ ೨೫ ॥

ತಾರ್ಕ್ಷ್ಯಂ ಶಂಖಂ ತಥಾ ಪದ್ಮಂ ಚಕ್ರಂ ಲಾಂಗಲಮೇವ ಚ ।
ಮುಸಲಂ ಚಾಪ್ಯನನ್ತಂ ಚ ಗದಾಂ ತಾಲಂ ತಥೈವ ಚ ॥ ೨೬ ॥

---

ಸಂಧಿಗಳಲ್ಲಿಯೂ ರಚಿಸುವ ಗೃಹಗಳನ್ನು ಹಿಂದೆ ಹೇಳಿರುವೆನಷ್ಟೆ ಅಂತಹ ಗೃಹಗಳಲ್ಲಿ ಒಂದಾದ ಪೂರ್ವಮಂಡಪದ ದಕ್ಷಿಣ ಸಂಧಿಯ ಗೃಹದಲ್ಲಿ ಲಕ್ಷ್ಮಿಯನ್ನು ಪ್ರತಿಷ್ಠಿಸಬೇಕು

೨೨–೨೫ ದಕ್ಷಿಣಮಂಟಪದ ಎಡಭಾಗದಲ್ಲಿ ನಿದ್ರಾದೇವಿಯನ್ನೂ, ಬಲಭಾಗದಲ್ಲಿ ಕಾಲರಾತ್ರಿಯನ್ನೂ, ಪಶ್ಚಿಮಮಂಡಪದ ಎಡಭಾಗದಲ್ಲಿ ರತೀದೇವಿಯನ್ನೂ ಮತ್ತು ಉತ್ತರ ಮಂಡಪದ ಎಡಭಾಗದಲ್ಲಿ ಕೀರ್ತಿಯನ್ನೂ, ಬಲಭಾಗದಲ್ಲಿ ಸರಸ್ವತಿಯನ್ನೂ ಪ್ರತಿಷ್ಠಿಸಬೇಕು ಪೂರ್ವಮಂಡಪದ ಎಡಭಾಗದಲ್ಲಿ ಪುಷ್ಟಿಯನ್ನೂ ರಚಿಸಬೇಕು ಈ ಪ್ರಾಸಾದ ಸಂಧಿಗಳನ್ನು ಈಶಾನ್ಯಾದಿ ಕ್ರಮದಿಂದ ರಚಿಸಬೇಕು ಮೇಖಲಾ(ಸುತ್ತುಗಟ್ಟು) ಬಂಧದಲ್ಲಿರುವ ಸಣ್ಣ ಸಣ್ಣ ಪ್ರಾಸಾದಾದಿಗಳಲ್ಲಿ ಹಯಗ್ರೀವ ವರಾಹ, ನರಸಿಂಹ, ತ್ರಿವಿಕ್ರಮ ಇವರನ್ನು ಪ್ರತಿಷ್ಠಿಸಬೇಕು ಹೀಗೆ ಈ ದೇವತೆಗಳೆಲ್ಲರ ಸಂಖ್ಯೆಯು ಇಪ್ಪತ್ತನಾಲ್ಕಾಗುತ್ತದೆ

೨೬–೨೮ ಆವರವರ ಚಿಹ್ನೆಗಳೂ, ಗರುಡ, ಶಂಖ, ಪದ್ಮ, ಚಕ್ರ, ನೇಗಿಲು ಮುಸಲ, ಅನನ್ತ, ಗದಾ, ತಾಲ, ತ್ರಿಶೂಲ, ಚಾಪ, ಬಾಣ, ಮಕರ, ಪರಶು,

ತ್ರಿಶೂಲಂ ಚ ತಥಾ ಶಾರ್ಙ್ಗಂ ಶರಂ ಮಕರಮೇವ ಚ ।
ಪರಶುಂ ಮುದ್ಗರಂ ಚೈವ ಚರ್ಮಪಾಶಂ ಚ ಪಾರ್ಥಿವ ॥ ೨೭ ॥

ಪಟ್ಟಿಶಂ ನಂದಕಂ ಚೈವ ಶಕ್ತಿಮೃಷ್ಟಿಂ ತಥೈವ ಚ ।
ವಜ್ರಂ ಚ ಕೌಸ್ತುಭಂ ಚೈವ ವನಮಾಲಾಂ ಚ ಯಾದವ ॥ ೨೮ ॥

ದಂಷ್ಟ್ರಾಖ್ಯೌ ದೇವಗೃಹಾಣಾಂ ಮೇ ತ್ವಂ ವಿನ್ಯಾಸಮಿದಂ ಶೃಣು ।
ಇಂದ್ರಾಗ್ನೀ ಪೂರ್ವತಃ ಕಾರ್ಯ್ಯೌ ದಕ್ಷಿಣೇನ ತಥಾ ನೃಪ ॥ ೨೯ ॥

ಯಮಶ್ಚ ನಿರ್ಋತಿಶ್ಚೈವ ಪಶ್ಚಿಮೇ ವರುಣಾನಿಲೌ ।
ಉತ್ತರೇಣ ಚ ಕರ್ತವ್ಯೌ ಧನೇಶ್ವರ ಮಹೇಶ್ವರೌ ॥ ೩೦ ॥

ಗ್ರಹಾಷ್ಟಕಂ ವಾ ಕರ್ತವ್ಯಂ ದಂಷ್ಟ್ರಾ ದೇವಗೃಹೇಷು ಚ ।
ಆದಿತ್ಯಶುಕ್ರೌ ಪೂರ್ವೇಣ ಯಾಮ್ಯೇನ ಚ ಕುಜಾಸುರೌ ॥ ೩೧ ॥

ಶನೈಶ್ಚರಶಶಾಂಕೌ ಚ ತಥಾ ಪಶ್ಚಿಮತೋ ನೃಪ ।
ಉತ್ತರೇಣ ಚ ಕರ್ತವ್ಯೌ ಚಂದ್ರಪುತ್ರಬೃಹಸ್ಪತೀ ॥ ೩೨ ॥

ಮುದ್ಗರ, ಚರ್ಮ, ಪಾಶ ಪಟ್ಟಿಶ, ನಂದಕ, ಶಕ್ತಿ, ಋಷ್ಟಿ, ವಜ್ರ, ಕೌಸ್ತುಭ, ವನಮಾಲಾ ಈ ರೂಪದಿಂದಿರುತ್ತದೆ ದೇವಗೃಹಗಳ ಉಭಯ ಪಾರ್ಶ್ವಗಳಲ್ಲಿ ರಚಿಸಬೇಕಾದ ದಂಷ್ಟ್ರಾವಿನ್ಯಾಸವನ್ನು ಹೇಳುತ್ತೇನೆ ಕೇಳು

೨೯–೩೪ ಪೂರ್ವಭಾಗದ ದೇವಗೃಹದಲ್ಲಿ ಇಂದ್ರ, ಅಗ್ನಿ, ಇವರನ್ನು ದಂಷ್ಟ್ರಾಸಂಜ್ಞೆಯುಳ್ಳ ದ್ವಾರಪಾಲಕರನ್ನಾಗಿ ರಚಿಸಬೇಕು ದಕ್ಷಿಣದಿಕ್ಕಿನ ದೇವ ಗೃಹದಲ್ಲಿ ಯಮ, ನಿರ್ಋತಿ ಇವರನ್ನೂ, ಪಶ್ಚಿಮದಿಕ್ಕಿನಲ್ಲಿ ವರುಣ ವಾಯುಗಳನ್ನೂ, ಉತ್ತರದಿಕ್ಕಿನಲ್ಲಿ ಕುಬೇರ, ಮಹೇಶ್ವರರನ್ನೂ ರಚಿಸಬೇಕು ಅಥವಾ ಎಂಟು ಗ್ರಹಗಳನ್ನು ದೇವಗೃಹಗಳ ದಂಷ್ಟ್ರಾಸಂಜ್ಞೆಯುಳ್ಳ ದ್ವಾರಪಾಲಕರನ್ನಾಗಿ ರಚಿಸಬಹುದು ಪೂರ್ವಭಾಗದ ಗೃಹದಲ್ಲಿ ಸೂರ್ಯ, ಶುಕ್ರರನ್ನೂ, ದಕ್ಷಿಣದಲ್ಲಿ ಕುಜ, ರಾಹುಗಳನ್ನೂ, ಪಶ್ಚಿಮಭಾಗದಲ್ಲಿ ಶನಿ, ಚಂದ್ರರನ್ನೂ, ಉತ್ತರಭಾಗದ ಗೃಹದಲ್ಲಿ

ದಂಷ್ಟ್ರಾ ದೇವಗೃಹಾವತ್ರ ವಾಸುದೇವಸ್ಯ ಯಾವುಭೌ ।
ವಾಸುದೇವಪ್ರತಿಹಾರೌ ತಯೋರ್ವಾ ಕಾರಯೇನ್ನೃಪ ॥ ೩೩ ॥

ಸುಭದ್ರವಸುಭದ್ರಾಖ್ಯೌ ತ್ರೈಲೋಕ್ಯಸ್ಯೇಶ್ವರಾವುಭೌ ।
ಆಷಾಢಯಜ್ಞತಾತಾಖ್ಯೌ ಕಾರ್ಯೌ ಸಂಕರ್ಷಣಸ್ಯ ತು ॥ ೩೪ ॥

ಜಯಂ ಚ ವಿಜಯಂ ಚೈವ ಪ್ರದ್ಯುಮ್ನಸ್ಯ ತು ಕಾರಯೇತ್ ।
ಆಮೋದಂ ಚ ಪ್ರಮೋದಂ ಚ ಅನಿರುದ್ಧಸ್ಯ ತು ಕಾರಯೇತ್ ॥ ೩೫ ॥

ಪ್ರಾಗುಕ್ತಂ ದೇವತಾನ್ಯಾಸಾದ್ದಂಷ್ಟ್ರಾ ದೇವಕುಲೇಷ್ವಥ ।
ಪ್ರತೀಹಾರಪ್ರತಿಷ್ಠಾನಂ ಶಸ್ಯತೇ ಬಹುಭಿರ್ಗುಣೈಃ ॥ ೩೬ ॥

ತ ಏವ ಜ್ಞೇಯಾ ದಿಕ್ಪಾಲಾಸ್ತ ಏವ ಚ ತಥಾ ಗ್ರಹಾಃ ।
ಏತತ್ತ್ವಂ ಜಗತೀಬಂಧೇ ಶೃಣು ದೇವಾನ್ಯಥಾಕ್ರಮಂ ॥ ೩೭ ॥

ಗಾಯತ್ರೀಂ ಚತುರೋ ವೇದಾನ್ ವೈಷ್ಣವೀಂ ಚಾಪರಾಜಿತಾಂ ।
ಮೃತ್ಯುಂ ಕಾಲಂ ಯಮಂ ದಂಡಂ ಕವಚಂ ಶರಮೇವ ಚ ॥ ೩೮ ॥

---

ಬುಧ, ಬೃಹಸ್ಪತಿಗಳನ್ನೂ, ರಚಿಸಬಹುದು ಈ ದೇವಗೃಹಗಳಲ್ಲಿ ದಂಷ್ಟ್ರಾ ಸಂಜ್ಞೆಯುಳ್ಳ ಯಾವ ದ್ವಾರಪಾಲಕರುಂಟೋ ಇವರ ಸ್ಥಾನದಲ್ಲಿ ವಾಸುದೇವನ ಪ್ರಸಿದ್ಧ ದ್ವಾರಪಾಲಕರನ್ನಾದರೂ ರಚಿಸಬಹುದು ವಾಸುದೇವ ಗೃಹದಲ್ಲಿ ಲೋಕೇಶ್ವರರಾದ ಸುಭದ್ರ ವಸುಭದ್ರರನ್ನೂ ಸಂಕರ್ಷಣನ ಗೃಹದಲ್ಲಿ ಆಷಾಢ, ಯಜ್ಞತಾತ ಎಂಬುವರನ್ನೂ,

೩೫-೩೭ ಹಾಗೆಯೇ, ಪ್ರದ್ಯುಮ್ನನ ಗೃಹದಲ್ಲಿ ಜಯವಿಜಯರನ್ನೂ, ಅನಿರುದ್ಧನ ಗೃಹದಲ್ಲಿ ಆಮೋದ, ಪ್ರಮೋದರನ್ನೂ ರಚಿಸಬೇಕು ಈ ರೀತಿ ದೇವತಾಗೃಹದಲ್ಲಿ ದ್ವಾರಪಾಲಕರ ರಚನೆಯು ದಂಷ್ಟ್ರಾ ಎನಿಸಿಕೊಳ್ಳುತ್ತದೆ ಇದು ಪ್ರಧಾನದೇವತೆಯ ರಚನೆಗಿಂತಲೂ ಗುಣದಲ್ಲಿ ಬಹುಮಟ್ಟಿಗೂ ಪ್ರಶಸ್ತ ಇವರನ್ನೇ ದಿಕ್ಪಾಲರನ್ನಾಗಿಯೂ, ಗ್ರಹಗಳನ್ನಾಗಿಯೂ ತಿಳಿಯಬೇಕು ಇನ್ನು ಜಗತೀ ಬಂಧದಲ್ಲಿ ಪ್ರತಿಷ್ಠಿಸುವ ದೇವತೆಗಳನ್ನು ಕ್ರಮವಾಗಿ ಹೇಳುತ್ತೇನೆ ಕೇಳು ಗಾಯತ್ರೀದೇವಿ, ನಾಲ್ಕು ವೇದಪುರುಷರು, ವೈಷ್ಣವೀ, ಅಪರಾಜಿತಾ, ಮೃತ್ಯು, ಕಾಲ, ಯಮ, ದಂಡ, ಕವಚ, ಶರ, ಸಾಂಖ್ಯಯೋಗ, ಪಾಂಚರಾತ್ರ, ಜ್ಞಾನ,

ಸಾಂಖ್ಯಂ ಯೋಗಂ ಪಂಚರಾತ್ರಂ ಜ್ಞಾನಂ ಪಾಶುಪತಂ ತಥಾ ।
ವ್ಯಾಸವಾಲ್ಮೀಕಿಮಾರ್ತಂಡಂ ಮಹಾಭೂತಾನನನ್ತರಂ || ೩೯ ||

ಏವಂವಿಧೇಽತ್ರ ಪ್ರಾಸಾದೇ ವಿಸ್ತೀರ್ಣಮಜಿರಂ ಭವೇತ್ ।
ತೋಯೈರಕೃತ್ರಿಮೈರ್ದಿವ್ಯೈಃ ಸಂಬದ್ಧೈರುಪಶೋಭಿತಂ || ೪೦ ||

ದ್ವಾರಪಾಲಾಶ್ಚತಸ್ರಸ್ತು ತತಃ ಕಾರ್ಯಾ ವಿಜಾನತಾ ।
ಪ್ರಾಸಾದೋ ದ್ವಾರಶಾಲಾಖ್ಯಃ ಸಮರೂಪೋ ಮನೋಹರಃ || ೪೧ ||

ಶ್ರೇಣೀಗತಾಶ್ಚ ಪ್ರಾಕಾರಾಃ ಕಾರ್ಯಾ ಗರ್ಭಗುಹಾಃ ಶುಭಾಃ ।
ಪ್ರಾದುರ್ಭಾವಂ ನ್ಯಸೇತ್ತೇಷು ವಿಷ್ಣೋರಮಿತತೇಜಸಃ || ೪೨ ||

ಅಥವಾ ಪಾರ್ಥಿವಶ್ರೇಷ್ಠ ಸರ್ವಾನ್ ದೇವಗಣಾನ್ ಕ್ರಮಾತ್ ।
ಪ್ರಾಸಾದಮೇತಂ ವಿಧಿವದ್ಯಃ ಕರೋತಿ ಮಹೀಪತೇ || ೪೩ ||

ಸರ್ವೇಷಾಂ ದೈವತಾನಾಂ ತು ನಿತ್ಯಂ ವಿಹಿತಪೂಜನಂ ।
ಕಲ್ಪಂ ತ್ರೇತಾಯುಗಸ್ಯಾದೌ ಚಕ್ರವರ್ತ್ಯಭಿಧೀಯತೇ || ೪೪ ||

ಪಾಶುಪತ, ವ್ಯಾಸ, ವಾಲ್ಮೀಕಿ, ಮಾರ್ಕಂಡೇಯ, ಮಹಾಭೂತಗಳು, ಈ ರೀತಿಯಾದ ದೇವತಾನ್ಯಾಸಕ್ಕೆ ಅರ್ಹವಾದ ಪ್ರಾಸಾದವು ದೊಡ್ಡದಾದ ಅಂಗಳವನ್ನು ಹೊಂದಿರಬೇಕು

೪೦ ೪೫ ಮತ್ತು ಸ್ವಾಭಾವಿಕವಾದ ದಿವ್ಯಜಲದಿಂದ ಕೂಡಿರಬೇಕು ಇಂತಹ ಪ್ರಾಸಾದದಲ್ಲಿ ನಾಲ್ಕು ದ್ವಾರಪಾಲಕಿಯರನ್ನೂ ರಚಿಸಬೇಕು ಇದಕ್ಕಾಗಿ ದ್ವಾರಶಾಲೆ ಎಂಬ ಒಂದೇ ಅಳತೆಯುಳ್ಳ ರಮ್ಯವಾದ ಭವನವನ್ನೂ ನಿರ್ಮಿಸಬೇಕು ಪಂಕ್ತಿಪಂಕ್ತಿಯಾದ ಪ್ರಾಕಾರಗಳೂ ಶುಭವಾದ ಗರ್ಭಗುಹಗಳೂ ಅದರಲ್ಲಿರಬೇಕು ಆ ಗುಹಗಳಲ್ಲಿ ಅಪ್ರತಿಮತೇಜಸ್ವಾಲಿಯಾದ ಮಹಾವಿಷ್ಣುವಿನ ಅವತಾರ ಪ್ರತಿಮೆಗಳನ್ನು ರಚಿಸಬೇಕು ಅಥವಾ ಎಲ್ಲಾ ದೇವತೆಗಳನ್ನೂ ಕ್ರಮವಾಗಿ ಆ ಗುಹೆಗಳಲ್ಲಿ ರಚಿಸಬಹುದು ಎಲ್ಲಾ ದೇವತೆಗಳಿಗೂ ನಿತ್ಯವೂ ಪೂಜೆಯನ್ನು ನಲ್ಲಿಸುವ ಇಂತಹ ಪ್ರಾಸಾದವನ್ನು ಯಥಾವಿಧಿಯಾಗಿ ಯಾವನು ರಚಿಸುತ್ತಾನೆಯೋ ಅವನು ಮುಂದಿನ ತ್ರೇತಾಯುಗದ ಆದಿಯಲ್ಲಿಯೇ ಚಕ್ರವರ್ತಿ ಎನಿಸಿಕೊಳ್ಳುತ್ತಾನೆ ಅಂತಹ ಪ್ರಾಸಾದಗಳಿಗೆ ಎಷ್ಟು ಸಹಾಯವನ್ನು ಒದಗಿಸಿ ರೂಪುಗೊಳಿ...

ಪರಿವೇಶಸ್ತಥಾಕಾರ್ಯಃ ಸ್ವರ್ಗೇ ವಸತಿ ಕಾಮತಃ ।
ತತಃ ಸಾಯುಜ್ಯತಾಮೇತಿ ದೇವದೇವಸ್ಯ ಚಕ್ರಿಣಃ ॥ ೪೫ ॥

ಫಲಂ ತ್ರೈಲೋಕ್ಯದಾನಸ್ಯ ಧ್ರುವಮಾಪ್ನೋತಿ ಮಾನವಃ ।
ಪ್ರಾಸಾದೇಽಸ್ಮಿನ್ಸಕೃತ್ ಕೃತ್ವಾ ಸರ್ವೇಷಾಮೇವ ಪೂಜನಂ ॥ ೪೬ ॥

ಗಂಧಮಾಲ್ಯನಮಸ್ಕಾರಧೂಪದೀಪಾನ್ನಸಂಪದಾ ।
ಯಥೇಷ್ಟಂ ಕಾಮನಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ॥ ೪೭ ॥

ಸಚಕ್ರಃ ಸಪತಾಕೋಽಯಂ ಪ್ರಾಸಾದೋಽತಿಮನೋಹರಃ ।
ಯಾವದ್ದರ್ಶನಮಾಯಾತಿ ತಾವನ್ನಶ್ಯಂತ್ಯುಪದ್ರವಾಃ ॥ ೪೮ ॥

ವ್ಯಾಧಿಶ್ಚೈವಾಪಮೃತ್ಯುಶ್ಚ ಈತಯಶ್ಚ ತಥಾ ನೃಪ ।
ನಾಶಮಾಯಾಂತ್ಯಸಂದೇಹಂ ತತ್ಪ್ರವಿಷ್ಟಸ್ಯ ಯಾದವ ॥ ೪೯ ॥

ನಾಕಾಲಮೃತ್ಯವೋ ರಾಜನ್ಯೋಗಿನ್ಯೋ ಯಕ್ಷರಾಕ್ಷಸಾಃ ।
ಪ್ರೇತಾ ವಿನಾಯಕಾ ವಾಪಿ ಪ್ರಭವಂತ್ಯಪಿ ಕಸ್ಯ ಚಿತ್ ॥ ೫೦ ॥

---

ತ್ತಾನೆಯೋ ಅಷ್ಟಷ್ಟು ಹೆಚ್ಚಾಗಿ ಸ್ವರ್ಗಸುಖವನ್ನು ತನ್ನ ಇಚ್ಛೆಯಂತೆ ಅನುಭವಿಸುತ್ತಾನೆ ಅನಂತರ ಚಕ್ರಾಧಾರಿಯೂ ದೇವತೋತ್ತಮನೂ ಆದ ವಾಸುದೇವನ ಸಾಯುಜ್ಯಸುಖವನ್ನೂ ಹೊಂದುತ್ತಾನೆ

೪೬-೫೦ ಮತ್ತು ಮೂರು ಲೋಕಗಳನ್ನೂ ದಾನಮಾಡಿದ ಮಹಾ ಫಲವನ್ನೂ ಹೊಂದುತ್ತಾನೆ ಈ ಪ್ರಾಸಾದದಲ್ಲಿ ಗಂಧಪುಷ್ಪನಮಸ್ಕಾರ ಧೂಪದೀಪ ನೈವೇದ್ಯಾದಿಗಳಿಂದ ಎಲ್ಲಾ ದೇವತೆಗಳನ್ನೂ ಒಂದಾವರ್ತಿ ಪೂಜಿಸಿದ ಮಾತ್ರದಿಂದ ಅವನು ತನಗೆ ಅಭಿಮತವಾದ ಎಲ್ಲಾ ವಿಧವಾದ ಪುರುಷಾರ್ಥಗಳನ್ನೂ ಹೊಂದಿಯೇ ಹೊಂದುತ್ತಾನೆ ಈ ವಿಷಯದಲ್ಲಿ ವಿಚಾರಮಾಡಬೇಕಾದ್ದಿಲ್ಲ ಚಕ್ರಪತಾಕಾದಿಗಳಿಂದ ರಮ್ಯವಾಗಿ ಶೋಭಿಸುವ ಈ ಪ್ರಾಸಾದವನ್ನು ನಿತ್ಯವೂ ದರ್ಶನಮಾಡುತ್ತಿದ್ದಲ್ಲಿ ಎಲ್ಲಾ ವಿಧವಾದ ಉಪದ್ರವಗಳೂ ನಾಶ ಹೊಂದುತ್ತವೆ ಇದರ ಪ್ರವೇಶ ಮಾತ್ರದಿಂದ ವ್ಯಾಧಿ, ಅಪಮೃತ್ಯು, ಈತಿ ಬಾಧೆಗಳು ಎಲ್ಲವೂ ನಾಶ ಹೊಂದುತ್ತವೆ. ಅಕಾಲಮೃತ್ಯುವೇ ಆಗಲಿ, ಯೋಗಿನಿಗಳೆಂಬ ಗ್ರಹವಿಶೇಷಗಳೇ ಆಗಲಿ, ಯಕ್ಷ ರಾಕ್ಷಸರೇ ಆಗಲಿ ಪಿಶಾಚಿಗಳೇ ಆಗಲಿ ಗೃಹದೇವತೆಗಳೇ ಆಗಲಿ ಬಾಧಿಸಲು ಸಮರ್ಥವಾಗುವುದಿಲ್ಲ

ಅತ್ರ ಸಾತ್ತ್ವತಮುಖ್ಯಾ ಯೇ ಸಾಯುಜ್ಯಂ ಯಾಂತಿ ತೇ ಧ್ರುವಂ ।
ಯೇ ದೇವಗೃಹಗಾಶ್ಚಾತ್ರ ದಾಸೀದಾಸಗಣಾಶ್ಚ ಯೇ　　॥ ೫೧ ॥

ಸರ್ವೇ ತೇ ಸ್ವರ್ಗಮಾಯಾಂತಿ ಯಾವದಿಂದ್ರಾಶ್ಚತುರ್ದಶ ।
ಯಸ್ಯ ರಾಜ್ಞಸ್ತು ವಿಷಯೇ ಪ್ರಾಸಾದೋಽಯಂ ಭವತ್ಯಪಿ　　॥ ೫೨ ॥

ಸ ಚಾಪಿ ಶಕ್ರಲೋಕಸ್ಥಃ ಚಿರಂ ಮೋದತಿ ಪಾರ್ಥಿವಃ ।
ತಸ್ಮಿನ್ ಪತಾಕಾಂ ಯೋ ದದ್ಯಾತ್ತ್ಯಯಾ ಪಾಪಂ ವಿಧೂಯತೇ　　॥ ೫೩ ॥

ಈತಯಶ್ಚ ಶಮಂ ಯಾಂತಿ ಪುಣ್ಯಮಾಪ್ನೋತ್ಯನುತ್ತಮಂ ।
ಕೃತ್ವಾ ಸಿತಂ ತಂ ಪ್ರಾಸಾದಂ ಚಕ್ರವರ್ತ್ಯಭಿಧೀಯತೇ　　॥ ೫೪ ॥

ಏವಂ ವಿಧಾನವಿಹಿತೇ ಮಯಾ ದೇವಾ ಯಥೋದಿತಾಃ ।
ಸರ್ವೇ ಸನ್ನಿಹಿತಾಸ್ತತ್ರ ಭವಂತಿ ವಸುಧಾಧಿಪ　　॥ ೫೫ ॥

೫೧–೫೫　ಇಂತಹ ಪ್ರಾಸಾದದಲ್ಲಿ ಭಗವಂತನನ್ನು ಸೇವಿಸುವ ಭಕ್ತಾಗ್ರೇಸರರು ಭಗವಂತನ ಸಾಯುಜ್ಯವನ್ನು ಹೊಂದಿಯೇ ಹೊಂದುತ್ತಾರೆ. ಈ ದೇವಗೃಹವನ್ನು ಸೇವಿಸುವ ಎಲ್ಲಾ ಸ್ತ್ರೀಪುರುಷರೂ, ಚತುರ್ದಶ ದೇವೇಂದ್ರರಿರುವವರೆಗೂ ಸ್ವರ್ಗಸುಖಕ್ಕೆ ಭಾಗಿಗಳಾಗುತ್ತಾರೆ. ಯಾವ ಧೊರೆಯ ದೇಶದಲ್ಲಿ ಇಂತಹ ಪ್ರಾಸಾದವು ನಿರ್ಮಿಸಲ್ಪಡುತ್ತದೆಯೋ ಅಂತಹ ಧೊರೆಯೂ ಇಂದ್ರಲೋಕವಾಸಿಯಾಗಿ ಬಹು ಕಾಲ ಸುಖಪಡುತ್ತಾನೆ. ಇಂತಹ ಪ್ರಾಸಾದಗಳಲ್ಲಿ ಯಾವನು ಪತಾಕೆಗಳನ್ನು ರಚಿಸುತ್ತಾನೆಯೋ ಅವನಿಗೆ ಸರ್ವ ಪಾಪಮೋಕ್ಷವೂ ಉಂಟಾಗುತ್ತದೆ. ಎಲ್ಲಾ ಈತಿ ಬಾಧೆಗಳೂ ನಾಶ ಹೊಂದುತ್ತದೆ. ಉತ್ತಮವಾದ ಪುಣ್ಯವೂ ಲಭಿಸುತ್ತದೆ. ಇಂತಹ ಪ್ರಾಸಾದಗಳನ್ನು ಸುಧಾಲೇಪನದಿಂದ ಶುಭ್ರವನ್ನಾಗಿ ಮಾಡಿದವನು ಚಕ್ರವರ್ತಿ ಎನಿಸಿಕೊಳ್ಳುತ್ತಾನೆ. ಇಂತಹ ವಿಧಾನದಿಂದ ರಚಿಸಲ್ಪಟ್ಟ ಈ ಪ್ರಾಸಾದದಲ್ಲಿ ನಾನು ಹೇಳಿರುವ ಎಲ್ಲಾ ದೇವತೆಗಳೂ ಸನ್ನಿಹಿತರಾಗಿಯೇ ಇರುತ್ತಾರೆ.

ತತ್ರ ಯತ್ಸಲಿಲಂ ತಿಷ್ಠೇತ್ತತ್ತೀರ್ಥಂ ಸತತಂ ಭವೇತ್ ।
ತತ್ರ ಯಾತ್ರಾವಿಧಾನೇ ತು ಸರ್ವೇ ದೇವಾಃ ಸವಾಸವಾಃ ॥ ೫೬ ॥

ಋಷಯಶ್ಚ ಮಹಾಭಾಗಾಸ್ತ್ರೈಕಾಲ್ಯಾಮಲದರ್ಶಿನಃ ।
ರಾಜರ್ಷಯಃ ಪುರಾಣಾಶ್ಚ ಸರ್ವೈಃ ಸಮುದಿತಾ ಗುಣೈಃ ॥ ೫೭ ॥

ದಿವಿಷ್ಠಾ ಸುಮಹಾತ್ಮಾನಃ ಶಕ್ರತುಲ್ಯಪರಾಕ್ರಮಾಃ ।
ಗಂಧರ್ವಾಪ್ಸರಸಶ್ಚೈವ ಶುಭಾ ಭೂತಗಣಾಶ್ಚ·ಯೇ ॥ ೫೮ ॥

ಸಶರೀರಾಃ ಸಮಾಯಾಂತಿ ಇಷ್ಟಂ ದೇವಮಹೋತ್ಸವಂ ।
ತತ್ರೋತ್ಸವಂ ನರಃ ಪಶ್ಯನ್ ಧ್ರುವಂ ಕಲ್ಯಾಣಭಾಗ್ಭವೇತ್ ॥ ೫೯ ॥

ತತ್ರ ಹಿಂಸಾ ನ ಕರ್ತವ್ಯಾ ದೇವದ್ರವ್ಯಸ್ಯ ಕರ್ಹಿಚಿತ್ ।
ರಾಜಾ ವಾ ತನ್ನಿಯುಕ್ತೋ ವಾ ತತ್ರಾಸ್ಯಾಧಿಕೃತಸ್ತು ಯಃ ॥ ೬೦ ॥

ಸ ಯಾತಿ ನರಕಂ ಘೋರಂ ಸಪುತ್ರಪಶುಬಾಂಧವಃ ।
ಅಸ್ಮಿನ್ ಲೋಕೇ ಧ್ರುವಂ ತಸ್ಯ ಸ್ಥಾನನಾಶೋ ಭವಿಷ್ಯತಿ ॥ ೬೧ ॥

೫೬-೬೧ ಇಂತಹ ಪ್ರಾಸಾದದಲ್ಲಿರುವ ಸ್ವಾಭಾವಿಕ ಜಲವು ಯಾವಾಗಲೂ ತೀರ್ಥವೇ ಆಗಿರುತ್ತದೆ ಇಲ್ಲಿ ಯಾತ್ರೆಯನ್ನು ನೆರವೇರಿಸುವ ದೇವತೆಗಳು ಇಂದ್ರಾದಿ ಮಹಾತ್ಮರಾದ ಋಷಿಗಳು ಇವರೆಲ್ಲಾ ತ್ರಿಕಾಲದಲ್ಲೂ ಪರಿಶುದ್ಧವಾದ ಜ್ಞಾನವನ್ನು ಹೊಂದುತ್ತಾರೆ ಪುರಾತನರಾದ ರಾಜಋಷಿಗಳೂ ಸರ್ವಗುಣ ಸಮೃದ್ಧಿಯನ್ನೂ ಹೊಂದುತ್ತಾರೆ ಆಕಾಶದಲ್ಲಿ ಸಂಚರಿಸುವ ದೇವತೆಗಳೂ ಇಂದ್ರನಂತೆ ಪರಾಕ್ರಮಿಗಳಾಗುತ್ತಾರೆ ಗಂಧರ್ವರು, ಅಪ್ಸರೆಯರು, ಸದ್ಗುಣವುಳ್ಳ ಪ್ರಾಣಿಗಳೂ ಸಹ ತಮಗೆ ಅಭಿಮತವಾದ ದೇವತಾಮಹೋತ್ಸವವನ್ನು ಸಶರೀರರಾಗಿಯೇ ಹೋಗಿ ಅನುಭವಿಸುತ್ತಾರೆ ಇಂತಹ ಪ್ರಾಸಾದದಲ್ಲಿ ನಡೆಯುವ ದೇವತಾಮಹೋತ್ಸವವನ್ನು ನೋಡಿದ ಮನುಷ್ಯನೂ ಸಹ ಬಹುಮಟ್ಟಿನ ಶುಭಫಲಗಳಿಗೆ ಭಾಗಿಯಾಗುತ್ತಾನೆ ಇಂತಹ ದೇವಾಲಯಗಳಲ್ಲಿ ಯಾವುದೊಂದು ದೇವದ್ರವ್ಯಕ್ಕೂ ಹಿಂಸಾದಿಗಳನ್ನು ಮಾಡಬಾರದು ಇಂತಹ ದೇವಗೃಹಗಳಲ್ಲಿ ಅಧಿಕಾರಿಯಾಗಿರುವವನು ರಾಜನೇ ಆಗಲಿ ಅವನಿಂದ ನೇಮಿಸಲ್ಪಟ್ಟವನೇ ಆಗಲಿ ಅವನು ಸಪರಿವಾರನಾಗಿ ನರಕವನ್ನು ಹೊಂದುತ್ತಾನೆ ಈ ಲೋಕದಲ್ಲಿ ಅವನಿಗೆ ಯಾವ ಸ್ಥಾನವೂ ಇರುವುದಿಲ್ಲ

**ಯೇ ತತ್ರ ಭಕ್ತ್ಯಾ ಮನುಜಾಃ ಸಪಶುದ್ರವ್ಯಸಂಚಯಾಃ ।**
**ನಿತ್ಯಂ ವೃದ್ಧಿಮುಪಾಯಾಂತಿ ದೇವದೇವಪ್ರಸಾದತಃ　　　॥ ೬೨ ॥**

**ದ್ರಷ್ಟವ್ಯಮೇತತ್ತ್ರಿದಿವೇಶವೇಶ್ಮ**
**ಕೃತಂ ತದನ್ಯೇನ ನರೇಂದ್ರಚಂದ್ರ ।**
**ದೃಷ್ಟ್ವಾ ಹಿ ಪಾಪೈಃ ಸಕಲೈರ್ಮನುಷ್ಯೋ**
**ವಿಮುಚ್ಯತೇ ಪುಣ್ಯಮವಾಪ್ನುಯಾಚ್ಚ　　　॥ ೬೩ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ ವಜ್ರಸಂವಾದೇ ಸರ್ವತೋಭದ್ರಪ್ರಾಸಾದಲಕ್ಷಣಂ ನಾಮ ಸಪ್ತಾಶೀತಿತಮೋಽಧ್ಯಾಯಃ**

---

೬೨-೬೩　ಯಾರು ಭಕ್ತರಾಗಿ ಅಲ್ಲಿ ಸೇವಿಸುತ್ತಾರೆಯೋ ಅವರು ದೇವ ದೇವನ ಅನುಗ್ರಹದಿಂದ ಪಶುಪುತ್ರ ದ್ರವ್ಯಾದಿ ಎಲ್ಲಾ ವಿಷಯಗಳಲ್ಲಿಯೂ ನಿತ್ಯವೂ ವೃದ್ಧಿಯನ್ನು ಹೊಂದುತ್ತಾರೆ　ಇಂತಹ ದೇವಗೃಹಗಳು ಮತ್ತೊಬ್ಬನಿಂದ ನಿರ್ಮಿಸ ಪಟ್ಟಿದ್ದಲ್ಲಿ ಅದನ್ನೂ ದರ್ಶನಮಾಡಬೇಕು　ದರ್ಶನಮಾತ್ರದಿಂದ ಮನುಷ್ಯನು ಎಲ್ಲಾ ಪಾಪಗಳಿಂದಲೂ ಮುಕ್ತನಾಗುತ್ತಾನೆ, ಪುಣ್ಯವನ್ನೂ ಹೊಂದುತ್ತಾನೆ

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದದಲ್ಲಿ ಸರ್ವತೋಭದ್ರ ಪ್ರಾಸಾದಲಕ್ಷಣವೆಂಬ ಎಂಭತ್ತೇಳನೆಯ ಅಧ್ಯಾಯ ಮುಗಿದಿದೆ



॥ ಓಂ ॥

॥ ಶ್ರೀ ಹಯಗ್ರೀವಾಯ ನಮಃ ॥

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### ॥ ಅಷ್ಟಾಶೀತಿತಮೋಽಧ್ಯಾಯಃ ॥

### ॥ ಮಾರ್ಕಂಡೇಯ ಉವಾಚ ॥

**ಸಾಮಾನ್ಯಮಥ ವಕ್ಷ್ಯಾಮಿ ಪ್ರಾಸಾದಾನಾಂ ತು ಲಕ್ಷಣಂ ।**
**ಚತುಃಷಷ್ಟಿಪದಂ ಕಾರ್ಯಂ ದೇವತಾಯತನಂ ಸದಾ ॥ ೧ ॥**

**ದ್ವಾರಂ ಚ ಮಧ್ಯಮಂ ತಸ್ಯ ಸಮದಿಕ್ಸ್ಥಂ ಪ್ರಶಸ್ಯತೇ ।**
**ದ್ವಾರಂ ವಿಸ್ತರತಃ ಕಾರ್ಯಂ ಭೂಪಾಲ ದ್ವಿಗುಣೋಚ್ಛ್ರಯಂ ॥ ೨ ॥**

**ಗೃಹಸ್ತಂಭ ಶುಭದ್ವಾರದ್ವಾರದೇವಕುಲದ್ರುಮೈಃ ।**
**ಅವಿದ್ಧಂ ತಚ್ಚ ಕರ್ತವ್ಯಂ ನಾಂಬುಸ್ರಾವಿ ನ ಕುಕ್ಷಿಮತ್ ॥ ೩ ॥**

### ಎಂಭತ್ತೆಂಟನೆಯ ಅಧ್ಯಾಯ.

೧-೪ ಮಾರ್ಕಂಡೇಯರು ಹೇಳುತ್ತಾರೆ —ಪ್ರಾಸಾದಗಳ ಸಾಮಾನ್ಯ ಲಕ್ಷಣಗಳನ್ನು ಇನ್ನು ಮುಂದೆ ಹೇಳುತ್ತೇನೆ ದೇವತಾಗೃಹವನ್ನು ಯಾವಾಗಲೂ ಅರವತ್ತುನಾಲ್ಕು ಹಜ್ಜೆಯ ವಿಸ್ತಾರದಲ್ಲಿ ರಚಿಸಬೇಕು ಆ ಗೃಹದ ಮಧ್ಯವು ದ್ವಾರವು ದಿಕ್ಕಿಗೆ ಸಮವಾಗಿರಬೇಕು (ವಿದಿಕ್ಕಿಗೆ ಅಭಿಮುಖವಾಗಿರಬಾರದು) ದ್ವಾರವನ್ನು ವಿಸ್ತಾರವಾಗಿರುವಂತೆಯೂ ಅಗಲಕ್ಕೆ ಎರಡರಷ್ಟು ಎತ್ತರವಿರುವಂತೆಯೂ ರಚಿಸಬೇಕು ಮತ್ತು ಒಳಗಿರುವ ದೇವಗೃಹದ ಸ್ತಂಭಗಳಿಂದಲೂ ಇತರ ದ್ವಾರಗಳಿಂದಲೂ, ದ್ವಾರದಲ್ಲಿರುವ ಸಣ್ಣದೇವಗೃಹಗಳಿಂದಲೂ ಫಲಪುಷ್ಪವೃಕ್ಷಗಳಿಂದಲೂ ಅಡಚಣೆಯುಂಟಾಗದಿರುವಂತೆ ನಿರ್ಮಿಸಬೇಕು ದ್ವಾರದ ಮೇಲುಭಾಗದಲ್ಲಿ ವಪ್ರದರಚನೆಯನ್ನೂ, ಕುಳ್ಳಾದ ರಚನೆಯನ್ನೂ ಪ್ರಯತ್ನಪೂರ್ವಕವಾಗಿ ತ್ಯಜಿಸ

ವಜ್ರಮಧ್ಯಂ ನತಂ ಚೈವ ದ್ವಾರಂ ಯತ್ನಾದ್ವಿವರ್ಜಯೇತ್ ।
ಮಂಗಲ್ಯಂ ರೂಪಕೋಪೇತಂ ತಚ್ಚ ಕಾರ್ಯಂ ಪ್ರಯತ್ನತಃ ॥ ೪ ॥

ದ್ವಾರಮಾನಾಷ್ಟಭಾಗಾನಾಂ ಪ್ರತಿಮಾಂ ತು ಸಪಿಂಡಿಕಾಂ ।
ದ್ವೌ ಭಾಗೌ ಪ್ರತಿಮಾ ತತ್ರ ತೃತೀಯೋಂಶಶ್ಚ ಪಿಂಡಿಕಾ ॥ ೫ ॥

ಕಟಿರಷ್ಟಮಭಾಗೋನಂ ದ್ವಾರೇ ಕಾರ್ಯಂ ವಿಜಾನತಾ ।
ತೃತೀಯಮಂಶಂ ವಸುಧಾ ತೃತೀಯಾಂಶಃ ಕಟಿರ್ಭವೇತ್ ॥ ೬ ॥

ಮಂಜರೀ ಚ ತೃತೀಯೋಂಶಃ ಪ್ರಾಸಾದಸ್ಯ ಮಹಾಭುಜ ।
ಗರ್ಭಂ ಪಾದೋನವಿಸ್ತೀರ್ಣಂ ತಥಾ ದ್ವಾರಂ ಪ್ರಶಸ್ಯತೇ ॥ ೭ ॥

ಭಿತ್ತಿರ್ಗರ್ಭಾಷ್ಟಭಾಗೋನಾ ತಥಾ ಕಾರ್ಯಾ ವಿಜಾನತಾ ।
ಪ್ರಾಸಾದೋಚ್ಛ್ರಾಯಭಾಗೇನ ಚತುರ್ಥೇನ ಚ ಶಸ್ಯತೇ ॥ ೮ ॥

---

ಬೇಕು ದ್ವಾರದಿಂದ ಜಲಸ್ರಾವವಾಗಲಿ ಕುಕ್ಷಿಯಂತೆ ಮುಂದಕ್ಕೆ ಚಾಚು ವಿಕೆಯಾಗಲಿ ಇರಬಾರದು ದ್ವಾರಗಳು ಬಹುಮಟ್ಟಿಗೆ ಶುಭಕರವಾಗಿಯೂ ರಮ್ಯವಾದ ಚಿತ್ರಗಳಿಂದ ಕೂಡಿಯೂ ಇರುವಂತೆ ಪ್ರಯತ್ನಿಸಿ ರಚಿಸಬೇಕು

೫–೧೧ ದ್ವಾರದ ಎತ್ತರದ ಒಟ್ಟು ಪ್ರಮಾಣದ ಎಂಟನೆಯ ಒಂದು ಭಾಗವನ್ನು ಪಕ್ಕದ ಪ್ರತಿಮೆ ಮತ್ತು ಉರುಟುಗಳಿಗೆ ಉಪಯೋಗಿಸಬೇಕು ಅದರಲ್ಲಿ ಅಗಲಕ್ಕೆ ತಕ್ಕಂತೆ ಮೂರನೇ ಎರಡು ಭಾಗವನ್ನು ಪ್ರತಿಮೆಗೂ ಉಳಿದ ಮೂರನೆಯ ಒಂದು ಭಾಗವನ್ನು ಉರುಟುಗಳಿಗೂ ಉಪಯೋಗಿಸಬೇಕು ಪಕ್ಕದ ಲೋಪಯು ಅಗಲದ ಎಂಟನೇ ಒಂದು ಭಾಗದಲ್ಲಿರಬೇಕು ಉರುಟುಗಳಿಗೆ ಬಿಟ್ಟ ಮೂರನೇ ಒಂದು ಭಾಗಹೊರತು ಉಳಿಯುವ ಪಾರ್ಶ್ವಪ್ರದೇಶವು ಅದರ ಮೂರನೇ ಒಂದು ಭಾಗವಾಗಿರಬೇಕು ಆ ಭಾಗದಲ್ಲಿ ಹೂವಿನಗೊಂಚಲು ಮುಂತಾದುವನ್ನು ನಿರ್ಮಿಸಬೇಕು ಬಾಗಿಲಿನ ಒಳಅಳತೆಯು ಒಟ್ಟು ಅಗಲದ ಮುಕ್ಕಾಲುಭಾಗವಿರಬೇಕು (ಕಾಲುಭಾಗವು ಪಕ್ಕದ ಪಟ್ಟಿಗಳಿಗೆ ಎಂದರ್ಥ) ಇಂತಹ ದ್ವಾರವು ಪ್ರಶಸ್ತವೆನಿಸುತ್ತದೆ ಪ್ರಾಸಾದದ ಗೋಡೆಯು ಒಳಭಾಗದ ಒಟ್ಟು ಅಳತೆಯ ಎಂಟನೇ ಒಂದು ಭಾಗದಷ್ಟು ದಪ್ಪವಿರುವಂತೆ ರಚಿಸಬೇಕು ಪ್ರಾಸಾದದ ಒಟ್ಟು ಎತ್ತರದ

**ವಸುಧಾಸಂಚರೋ ರಾಜನ್ ಕಟ್ಯಂಶದ್ವಿತಯೋನ ತು ।**
**ನಾತ್ಯರ್ಥಂ ಸಂಕಟಂ ಕಾರ್ಯಂ ನಾವಿಸ್ತೀರ್ಣಂ ತಥೈವ ಚ ॥ ೯ ॥**

**ಮೂಲಕ್ರಮಾದ್ಯಥಾಚೋರ್ಧ್ವಂ ತಥಾ ವಿಸ್ತಾರವರ್ಜಿತಃ ।**
**ಸೋಪಾನಂ ಕಾರಯೇದ್ರಾಜನ್ ಪಾರ್ಶ್ವಯೋಃ ಸಿಂಹಭೂಷಣಂ ॥ ೧೦ ॥**

**ನಮುಂಡಂ ನ ಚಶೂಲಾಗ್ರಂ ನಾನತಂ ಕಾರಯೇತ್ತಥಾ ।**
**ಸಮಂ ಮನೋಹರಂ ಕಾರ್ಯಂ ತಥಾ ಮಾಂಗಲ್ಯರೂಪವತ್ ॥ ೧೧ ॥**

**ಸುಧಾಸುಸಿತಶೃಂಗಂ ಚ ವಿಚಿತ್ರಕಟಿಭೂಷಣಂ ।**
**ದ್ವಾರಯೋಃ ಸಪ್ರತೀಹಾರಂ ಸಮಗರ್ಭಗೃಹಂ ಸಮಂ ।**
**ಭದ್ರಪೀಠನಿಭಂ ಸೌಮ್ಯಂ ಶ್ಲಕ್ಷ್ಣಂ ಘಾತವಿವರ್ಜಿತಂ ॥ ೧೨ ॥**

---

ನಾಲ್ಕು ಭಾಗದಷ್ಟು ವಿಸ್ತಾರವು ಪಕ್ಕದ ಕಟಿಪ್ರದೇಶದಿಂದ ಕೂಡಿದ ಭೂಮಿಯಾಗಿರಬೇಕು ಬಹುಮಟ್ಟಿಗೆ ಇಕ್ಕಟ್ಟಾಗಿಯೂ ಇರಬಾರದು ವಿಸ್ತಾರವಾಗಿಯೂ ಇರಬಾರದು ಬುಡದಿಂದ ಮೇಲುಭಾಗದವರಿಗೂ ವಿಸ್ತಾರವನ್ನು ಹೆಚ್ಚಿಸದೇ ಒಂದೇ ಸಮನಾಗಿ ಸೋಪಾನಗಳನ್ನು ರಚಿಸಬೇಕು ಆಸೋಪಾನಗಳೂ ಎರಡು ಕಡೆಗಳಲ್ಲೂ ಸಿಂಹದಿಂದ ಅಲಂಕರಿಸಲ್ಪಟ್ಟಿರಬೇಕು. ಪ್ರಾಸಾದವು ಬೋಳಾಗಿಯೂ ಇರಕೂಡದು ಶೂಲಾಗ್ರವಾಗಿಯೂ ಇರಕೂಡದು ಬಹಳ ಕುಳ್ಳಾಗಿಯೂ ಇರಕೂಡದು ಒಂದೇ ಸಮವಾಗಿಯೂ ರಮ್ಯವಾಗಿಯೂ ಮಂಗಲಕರವಾದ ಸೌಮ್ಯರೂಪದಿಂದ ಕೂಡಿರಬೇಕು

೧೨-೧೩ ಸುಣ್ಣದಿಂದ ಬಹಳ ಬಿಳುಪಾಗಿ ಮಾಡಲ್ಪಟ್ಟ ಶಿಖರಗಳಿಂದಲೂ ವಿಚಿತ್ರವಾದ ಕಟಿಬಂಧದಿಂದಲೂ ಅಲಂಕಾರಹೊಂದಿರಬೇಕು ಬಾಗಿಲುಗಳೆರಡರಲ್ಲೂ ದ್ವಾರಪಾಲಕರಿಂದ ಕೂಡಿದ ಸಮವಾದ ಗರ್ಭಗೃಹಗಳಿರಬೇಕು ನೋಟಕ್ಕೆ ಭದ್ರಾಸನದಂತೆ ರಮ್ಯವಾಗಿಯೂ ನಯವಾಗಿಯೂ ಮುಕ್ಕುಗಳಿಲ್ಲದಂತೆಯೂ ಇರಬೇಕು ಇಂತಹ ದೇವಗೃಹದಲ್ಲಿ ಪ್ರತಿಷ್ಠಿತವಾದ ಪ್ರತಿಮೆಯು ಯಾವಾಗಲೂ ಶುಭಫಲವನ್ನೇ ಕೂಡುತ್ತದೆ ಆಪ್ರತಿಮೆಯಲ್ಲಿ ಯಾವಾಗಲೂ ದೇವತೆಯು

ಏವಂವಿಧೇ ದೇವಗೃಹೇ ನಿವಿಷ್ಟಾ
　　ಶುಭಾವಹಾ ಸ್ಯಾತ್ಪ್ರತಿಮಾ ಸದೈವ ।
ನಿತ್ಯಂ ತಥಾ ಸನ್ನಿಹಿತಾ ನೃವೀರ
　　ತಸ್ಮಾತ್ಪ್ರಯತ್ನಾದಿದಮೇವ ಚಿನ್ತ್ಯಂ　　॥ ೧೩ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಸಾಮಾನ್ಯಪ್ರಸಾದಲಕ್ಷಣೋ
ನಾಮಾಷ್ಟಾಶೀತಿತಮೋಽಧ್ಯಾಯಃ

ಸಾನ್ನಿಧ್ಯವಿದ್ದೇ ಇರುತ್ತದೆ　ಆದುದರಿಂದ ಶ್ರೇಯಸ್ಕರವಾದ ಇಂತಹ ಮಹಾಕಾರ್ಯ
ವನ್ನು ಯಾವಾಗಲೂ ಆಲೋಚಿಸಿ ನಡೆಸುತ್ತಿರಬೇಕು

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಸಾಮಾನ್ಯಪ್ರಾಸಾದಲಕ್ಷಣವೆಂಬ
ಎಂಭತ್ತೆಂಟನೆಯ ಅಧ್ಯಾಯ ಮುಗಿದಿದೆ



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಏಕೋನನವತಿತಮೋಽಧ್ಯಾಯಃ ||

|| ಮಾರ್ಕಂಡೇಯ ಉವಾಚ ||

**ವನಪ್ರದೇಶಂ ಧರ್ಮಜ್ಞ ನಿಬೋಧ ಗದತೋ ಮಮ ।**
**ಶುಭೇ ದಿವಸ ನಕ್ಷತ್ರೇ ಮುಹೂರ್ತೇ ಚಾಭಿಪೂಜಿತೇ ॥ ೧ ॥**

**ದೈವಜ್ಞಂ ಪುರತಃ ಕೃತ್ವಾ ಸ್ಥಪತಿಃ ಪ್ರವಿಶೇದ್ವನಂ ।**
**ತತಸ್ತತ್ರ ಪರೀಕ್ಷೇತ ಚ್ಛಿಂದ್ಯಾದ್ಭಿಂದ್ಯಾದ್ವನಸ್ಪತೀನ್ ॥ ೨ ॥**

**ಸಕೋಟರಾಂ ಲತಾಬದ್ಧಾಂ ಕ್ರಿಮಿಜಗ್ಧಾಂ ವಿವರ್ಜಯೇತ್ ।**
**ವಹ್ನಿನಾ ಚ ತಥಾ ಸ್ಪೃಷ್ಟಾಂ ಪಾತಿತಾಂ ಪವನೇನ ಚ ॥ ೩ ॥**

---

### ಎಂಭತ್ತೊಂಭತ್ತನಯ ಅಧ್ಯಾಯ.

೧–೪ ಮಾರ್ಕಂಡೇಯರು ಹೇಳುತ್ತಾರೆ ಮರ, ಕಲ್ಲು ಇವುಗಳ ಪರೀಕ್ಷೆಗಾಗಿ ವನಪ್ರವೇಶವನ್ನು ಕುರಿತು ಹೇಳುತ್ತೇನೆ ಧರ್ಮಜ್ಞನಾದ ನೀನು ಅದನ್ನೂ ನನ್ನಿಂದ ತಿಳಿದುಕೋ ಒಳ್ಳೆಯ ದಿವಸ ಮತ್ತು ನಕ್ಷತ್ರ ಇವುಗಳಿಂದ ಕೂಡಿದ ಶುಭಮುಹೂರ್ತದಲ್ಲಿ ಜ್ಯೋತಿಷಿಕನನ್ನು ಮುಂದಿಟ್ಟುಕೊಂಡು ಬಡಗಿಯು ವನಕ್ಕೆ ಹೋಗಬೇಕು ಅಲ್ಲಿ ಮರಗಳನ್ನು ಪರೀಕ್ಷಿಸಿ ಅವುಗಳ ಚ್ಛೇದನಾದಿಗಳನ್ನು ನಡೆಸಬೇಕು ಪೊಟ್ಟರೆಗಳುಳ್ಳ ಮತ್ತು ಲತೆಯಿಂದ ಸುತ್ತುವರಿದಿರುವ ಮತ್ತು ಹುಳುಗಳಿಂದ ತಿನ್ನಲ್ಪಟ್ಟಿರುವ ಮರವನ್ನು ತ್ಯಜಿಸಬೇಕು ಹಾಗೆಯೇ ಬೆಂಕಿ ಬಿದ್ದಿರುವ, ಗಾಳಿಯಿಂದ ಉರುಳಿಸಲ್ಪಟ್ಟಿರುವ, ಆನೆಯಿಂದ ಮುರಿಯಲ್ಪಟ್ಟಿರುವ

**ಕುಂಜರೇಣ ತಥಾ ಭಗ್ನಾಂ ಪಕ್ಷಿಣಾಂ ನಿಲಯಾಶ್ಚ ಯೇ ।**
**ತಾಪಸಾನಾಂ ಸಮೀಪೇ ಚ ಸಿಕ್ತಾಶ್ಚ ಘಟವಾರಿಣಾ ॥ ೪ ॥**

**ಸತ್ವಾನಾಮಾಶ್ರಯಾ ಯೇ ಚ ಯೇ ಚ ಕುಬ್ಜಾ ನರಾಧಿಪ ।**
**ಸುಷಿರಾ ಊರ್ಧ್ವಶುಷ್ಕಾಶ್ಚ ಬಾಲವೃದ್ಧಾಸ್ತಥೈವ ಚ ॥ ೫ ॥**

**ಶ್ಮಶಾನಚೈತ್ಯವಲ್ಮೀಕ ದೇವತಾಯತನೋದ್ಭವಾಃ ।**
**ಉದ್ಯಾನಜಾನೇಕವೃಕ್ಷಾನ್ ಸೀಮಾವೃಕ್ಷಾಂಸ್ತಥೈವ ಚ ॥ ೬ ॥**

**ಮಾರ್ಗವೃಕ್ಷಾನ್ಮಹಾರಾಜ ಪ್ರಯತ್ನೇನ ವಿವರ್ಜಯೇತ್ ।**
**ಪಲಾಶಂ ಕೋವಿದಾರಂ ಚ ಶಾಲ್ಮಲಿಂ ಪಿಪ್ಪಲಂ ವಟಂ ॥ ೭ ॥**

**ಆಮ್ರಂ ಚ ಪುಷ್ಪಕಂ ಚೈವ ಕಪಿತ್ಥಂ ಚ ವಿಭೀತಕಂ ।**
**ವರ್ಜಯೇದ್ವೇತಸಂ ಚೈವ ಯೇ ಚಾರಾಮಾಸ್ತಥಾ ದ್ರುಮಾಃ ॥ ೮ ॥**

**ನಂದನಂ ಸ್ಯಂದನಂ ಸಾಲಂ ಶಿಂಶಪಂ ಖದಿರಂ ಧವಂ ।**
**ಕಿಂಶುಕಂ ಪದ್ಮಕಂ ಚೈವ ಹರಿದ್ರಂ ಚೀನಕದ್ರುಮಂ ॥ ೯ ॥**

---

ಮರಗಳನ್ನೂ, ಪಕ್ಷಿಗಳಿಗೆ ಆಶ್ರಯವಾಗಿರುವ ಮತ್ತು ಆಶ್ರಮಗಳ ಸಮೀಪದಲ್ಲಿ ಋಷಿಗಳಿಂದ ನೀರೆರದು ಸಾಕಿರುವ ಮರಗಳನ್ನೂ ಕಡಿಯಬಾರದು

೫–೮ ಪ್ರಾಣಿಗಳಿಗೆ ಆಶ್ರಯವಾಗಿರುವ ಮತ್ತು ಒಳಗಡೆಯಲ್ಲಿ ಟೊಳ್ಳಾಗಿರುವ ಮೇಲುಭಾಗದಲ್ಲಿ ಒಣಗಿರುವ ಮತ್ತು ಎಳೆಯದಾದ ಮತ್ತು ಬಹಳಬಲಿತಿರುವ ಮರಗಳನ್ನೂ ಮತ್ತು ಸ್ಮಶಾನ, ಗೋಪುರ, ಹುತ್ತ, ದೇವಾಲಯ ಇವುಗಳಲ್ಲಿ ಹುಟ್ಟಿರುವ ಮರಗಳನ್ನೂ ಉದ್ಯಾನವೃಕ್ಷಗಳನ್ನೂ ಎಲ್ಲೆಗಟ್ಟಿಗೆ ಸೇರಿರುವ ಮರಗಳನ್ನೂ ದಾರಿಯಲ್ಲಿರುವ ಮರಗಳನ್ನೂ ಪ್ರಯತ್ನಪೂರ್ವಕವಾಗಿ ತ್ಯಜಿಸಬೇಕು ಮತ್ತು ಮುತ್ತುಗ, ಕಂಚುವಾಳ, ಬೂರಗ, ಹಿಪ್ಪೆ, ಆಲ, ಮಾವು, ಪುಷ್ಪಕ ಬೇಲ, ತಾರೆಗಿಡ, ನೀರವಂಜಿ ಇವುಗಳನ್ನೂ ಕೇವಲ ಕೈತೋಟಕ್ಕೆ ಸೇರಿರುವ ಮರಗಳನ್ನೂ ವರ್ಜಿಸಬೇಕು

೯–೧೨ ನಂದಿ, ಸ್ಯಂದನ, ಸರ್ಜಕ, (ಆನೆಬೇಲ) ಅಗರುಗಿಡ, ಕಗ್ಗಲಿ, ಧವ, ಮುತ್ತುಗ, ಪದ್ಮಕ, ಅರಿಶಿನಬೇಲ, ಮತ್ತಿ, ಈಚಲು, ಹಿಪ್ಪೆ, ಅಂಜನ,

**ಅರ್ಜುನಂ ಚ ಕದಂಬಂ ಚ ಮಧುಕಂ ಚಾಂಜನಂ ತಥಾ ।**
**ದೇವವೃಕ್ಷಾಂಶ್ಚ ಜಾತ್ಯಾಂಶ್ಚ ತಥಾ ವೈ ರಕ್ತಚಂದನಂ ॥ ೧೦ ॥**

**ಏತೇಽಪ್ರಶಸ್ತಾ ವಿಜ್ಞೇಯಾ ಯೇ ಚ ಸಾರಾ ಮಹೀರುಹಾಃ ।**
**ಶಸ್ತಾಶಸ್ತಾ ನ ಯೇ ಪ್ರೋಕ್ತಾಃ ತೇ ತು ಮಧ್ಯಫಲಾಃ ಸ್ಮೃತಾಃ ॥ ೧೧ ॥**

**ರಕ್ತಸಾರಾ ನರೇಂದ್ರಾಣಾಂ ಶುಕ್ಲಸಾರಾ ದ್ವಿಜನ್ಮನಾಂ ।**
**ಪೀತಸಾರಾ ವಿಶಾಂ ಶಸ್ತಾಃ ಶೂದ್ರಾಣಾಂ ಕೃಷ್ಣಮಧ್ಯಕಾಃ ॥ ೧೨ ॥**

**ಛೇತ್ತವ್ಯಂ ತು ದ್ರುಮಂ ಗತ್ವಾ ಸಂಧ್ಯಾಕಾಲೇ ತು ಪಶ್ಚಿಮೇ ।**
**ದ್ರುಮಸ್ಯಾಗ್ರೇ ಬಲಿಃ ಕಾರ್ಯೋ ಭೂತಾನಾಂ ತನ್ನಿವಾಸಿನಾಂ ॥ ೧೩ ॥**

**ಕುಲ್ಮಾಷೋಲ್ಲೋಪಿಕಾಭಕ್ಷ್ಯಪುಷ್ಪಧೂಪಾದಿಭಿರ್ನೃಪ ।**
**ಕೃತ್ವಾಚಾಸ್ಯೇ ತತೋ ಮಂತ್ರಮಿದಂ ಯದುಕುಲೋದ್ವಹ ॥ ೧೪ ॥**

---

ದೇವವೃಕ್ಷಗಳು ಉತ್ತಮಜಾತಿಯ ವೃಕ್ಷಗಳು ಕೆಂಪುಚಂದನ, ಇವೂ ಮತ್ತು ಚೇಗುಳ್ಳಮರಗಳೂ ಅಪ್ರಶಸ್ತಗಳು ಎಂದು ತಿಳಿಯಬೇಕು ಇಲ್ಲಿ ಉತ್ಕೃಷ್ಟಗಳೆಂದೂ, ಅಪಕೃಷ್ಟಗಳೆಂದೂ ಯಾವಮರಗಳನ್ನು ಹೇಳಿಲ್ಲವೋ ಅವು ಮಧ್ಯಮ ಫಲಪ್ರದಗಳೆಂದು ತಿಳಿಯಬೇಕು ರಾಜರುಗಳಿಗೆ ಒಳಗೆ ಕೆಂಪಾಗಿರುವ ಮರಗಳೂ ಬ್ರಾಹ್ಮಣರಿಗೆ ಒಳಭಾಗದಲ್ಲಿ ಬಿಳುಪಾಗಿರುವ ಮರಗಳೂ ವೈಶ್ಯರಿಗೆ ಹಳದಿಯಾಗಿರುವ ಮರಗಳೂ ಶೂದ್ರರಿಗ ಕಪ್ಪಾಗಿರುವ ಮರಗಳೂ ಪ್ರಶಸ್ತಗಳು

೧೩-೧೭ ಕಡಿಯಲು ಯೋಗ್ಯವಾದ ಮರವನ್ನು ನಿರ್ಧರಿಸಿ ಸಾಯಂ ಸಂಧ್ಯಾಸಮಯದಲ್ಲಿ ಆಮರದ ಬಳಿಗೆ ಹೋಗಿ ಅದರಲ್ಲಿ ವಾಸಿಸುವ ಭೂತಗಳ ತೃಪ್ತಿಗಾಗಿ ಮರದ ಬುಡದಲ್ಲಿ ತಡಗಣಿಕಾಳು ಮತ್ತು ಹೋಳಿಗೆ ಮೊದಲಾದ ಭಕ್ಷ್ಯಗಳಿಂದಲೂ ಧೂಪ ದೀಪಪುಷ್ಪಾದಿಗಳಿಂದಲೂ ಬಲಿಪ್ರದಾನ ಮಾಡಿ ಪೂಜಿಸಬೇಕು ಹೀಗೆ ಪೂಜೆಮಾಡಿ ಮುಂದೆ ಹೇಳುವ ಮಂತ್ರವನ್ನು ಬಾಯಿನಿಂದ ಉಚ್ಛರಿಸಬೇಕು

ವಸಂತಿ ಯತ್ರ ಭೂತಾನಿ ತೇಭ್ಯಃ ಸ್ವಸ್ತಿ ನಮೋಽಸ್ತು ವಃ ।
ಉಪಹಾರಂ ಗೃಹೀತ್ವೇಮಂ ಕ್ರಿಯತಾಂ ವಾಸಪರ್ಯಯಃ ॥ ೧೫ ॥

ಭವದ್ಭಿಶ್ಚಾಭ್ಯನುಜ್ಞಾತಃ ಪೂಜಿತೈಃ ಪ್ರಮಥೇಶ್ವರಾಃ ।
ದೇವಾಗಾರೇ ನಿಯೋಕ್ಷ್ಯಾಮಿದ್ರುಮಮೇತ ಮಸಂಶಯಂ ॥ ೧೬ ॥

ನ ಚೇದ್ಭವಂತಸ್ತ್ಯಕ್ಷ್ಯಂತಿ ದ್ರುಮಮೇತಂ ತತೋ ಮಮ ।
ಸ್ವಪ್ನೇ ಭವದ್ಭಿರ್ವಕ್ತವ್ಯಂ ಯಾಥಾತಥ್ಯಮನುಗ್ರಹಾತ್ ॥ ೧೭ ॥

ಏವಮುಕ್ತ್ವಾ ತಥಾ ತತ್ರ ಪ್ರಸ್ವಪೇತ್ ಸ್ಥಪತಿರ್ನೃಪ ।
ದೈವಜ್ಞಶ್ಚ ಮಹಾಭಾಗ ರಕ್ಷಿತೌ ಶಸ್ತ್ರಪಾಣಿಭಿಃ ॥ ೧೮ ॥

ತತಃ ಸ್ವಪ್ನಂ ಶುಭಂ ರಾತ್ರೌ ತಯೋರೇಕೋಽಪಿ ಚೇದ್ಯದಿ ।
ಪಶ್ಯೇದಪ್ರಜನ್ನ ವಾ ಪಶ್ಯೇತ್ ಛಿಂದ್ಯಾದ್ವೃಕ್ಷಮಸಂಶಯಂ ॥ ೧೯ ॥

---

ಇಲ್ಲಿ ಯಾವಯಾವ ಭೂತಗಳು ವಾಸವಾಗಿವೆಯೋ ಅವುಗಳಿಗೆಲ್ಲಾ ನಮಸ್ಕಾರಗಳು ನಿಮ್ಮಗಳಿಗೆಲ್ಲಾ ಮಂಗಳವಾಗಲಿ, ನಾನು ಅರ್ಪಿಸಿರುವ ಈ ಉಪಹಾರವನ್ನು ಸ್ವೀಕರಿಸಿ ನಿಮ್ಮ ವಾಸವನ್ನು ಇಲ್ಲಿಂದ ಬದಲಾಯಿಸಿಕೊಳ್ಳಿರಿ ಎಲ್ಲ ಪ್ರಮಥಪತಿಗಳಿರಾ, ಈ ಪೂಜೆಯಿಂದ ಪ್ರಸನ್ನರಾದ ನಿಮ್ಮ ಅನುಗ್ರಹದಿಂದ ಈಮರವನ್ನು ದೇವಾಲಯಕ್ಕೆ ಕೊಂಡೊಯ್ದು ಅಲ್ಲಿಗೆ ವಿನಿಯೋಗಿಸುತ್ತೇನೆ ಇದರಲ್ಲಿ ಸಂಶಯವಿಲ್ಲ ಈ ಮರವನ್ನು ನನಗೋಸ್ಕರ ಬಿಟ್ಟು ಹೋಗಲು ನಿಮಗೆ ಇಷ್ಟವಿಲ್ಲದೆ ಇದ್ದಲ್ಲಿ ಅದಕ್ಕೆ ಕಾರಣವನ್ನು ದಯೆಯಿಟ್ಟು ನೀವು ಸ್ವಪ್ನದಲ್ಲಿ ಬಂದು ನನಗೆ ತಿಳಿಸಬೇಕು

೧೮–೨೨ ಹೀಗೆ ಹೇಳಿ ಬಡಗಿಯೂ, ದೈವಜ್ಞನೂ ಅಲ್ಲಿಯೇ ಆರಾತ್ರಿ ಮಲಗಿರಬೇಕು ಶಸ್ತ್ರಪಾಣಿಗಳಾದ ಭಟರಿಂದ ಅವರಿಗೆ ಆಗ ರಕ್ಷಣೆಯನ್ನು ಉಂಟುಮಾಡಬೇಕು ಅನಂತರ ಆ ರಾತ್ರಿಯಲ್ಲಿ ಅವರಿಬ್ಬರಲ್ಲಿ ಯಾರಿಗಾದರೂ ಶುಭಸ್ವಪ್ನವುಂಟಾದರೂ ಅಥವಾ ಯಾವ ಸ್ವಪ್ನವೂ ಉಂಟಾಗದಿದ್ದರೂ ಸರಿ ಆ ಮರವನ್ನು ಕಡಿಯಬಹುದು ಅಶುಭಕರವಾದ ಸ್ವಪ್ನವು ಕಂಡುಬಂದಲ್ಲಿ

ಸ್ವಪ್ನಂ ವಾಪ್ಯಶುಭಂ ಪಶ್ಯೇನ್ನತಂ ಛಿಂದ್ಯಾತ್ಕಥಂಚನ ।
ಛೇತ್ತವ್ಯಂ ಛೇದಯೇದ್ವೃಕ್ಷಂ ಕಲ್ಯಮುತ್ಥಾಯ ಬುದ್ಧಿಮಾನ್ ॥ ೨೦ ॥

ಮಧ್ವಾಜ್ಯಾಕ್ತೇನ ರಾಜೇಂದ್ರ ತತಃ ಪರಶುನಾ ಶುಚಿಃ ।
ರೇಖಾಂ ಪ್ರದಕ್ಷಿಣಂ ಕೃತ್ವಾ ಪಾತಯೇತ್ಪ್ರಯತಸ್ತತಃ ॥ ೨೧ ॥

ಪೂರ್ವಾಗ್ರಮುತ್ತರಾಗ್ರಂ ವಾ ಪತನೇ ತಸ್ಯ ಶಸ್ಯತೇ ।
ಐಶಾನ್ಯಾಂ ಚ ಮಹಾರಾಜ ದಿಕ್ಷು ಶೇಷಾಸು ಗರ್ಹಿತಂ ॥ ೨೨ ॥

ವಾಮೇ ಪ್ರಭಗ್ನಂ ನ ಗ್ರಾಹ್ಯಂ ಪ್ರಾಣಿಹಿಂಸಾಕರಂ ತಥಾ ।
ಪ್ರಶಸ್ತಂ ಪತಿತಂ ವೃಕ್ಷಂ ಗ್ರಾಹ್ಯಂ ಭವತಿ ಯತ್ನತಃ ॥ ೨೩ ॥

ಅಗ್ರಂ ಮೂಲಂ ಪ್ರಯತ್ನೇನ ಕರ್ತವ್ಯಂ ತಸ್ಯ ಚಿಹ್ನಿತಂ ।
ಅಗ್ರಂ ದೇವಸ್ಯ ಮೂರ್ಧಾನಂ ಪಾದಂ ಮೂಲಂ ತು ಕಾರಯೇತ್ ॥ ೨೪ ॥

ಅರ್ಚಾ ಕೃತಾ ವಿಪರ್ಯಸ್ತಾ ತಿರ್ಯಗ್ವಾ ಮರಣಾವಹಾ ।
ಅಗ್ರಮೂಲವಿಪರ್ಯಾಸಂ ಸ್ತಂಭಾನಾಂ ಚ ವಿವರ್ಜಯೇತ್ ॥ ೨೫ ॥

---

ಮಾತ್ರ ಕಡಿಯಲೇ ಬಾರದು. ಕಡಿಯಲು ಅರ್ಹವಾದ ಮರವನ್ನು ಬೆಳಗ್ಗೆ ಎದ್ದೊಡನೆಯೇ ಕಡಿಯುವುದು ಬುದ್ಧಿವಂತನ ಕೆಲಸ. ಕಡಿಯುವವನೂ ಶುಚಿಯಾಗಿದ್ದು ಜೇನು, ಆಜ್ಯ ಇವುಗಳಿಂದ ಲೇಪಿಸಲ್ಪಟ್ಟ ಕೊಡಲಿಯಿಂದ ಮರವನ್ನು ಕಡಿಯಬೇಕು. ಪ್ರದಕ್ಷಿಣವಾದ ರೇಖೆಯನ್ನು ಮೊದಲು ಹಾಕಿಕೊಂಡು ಪ್ರಯತ್ನಪೂರ್ವಕವಾಗಿ ಸರಿಯಾಗಿ ಕಡಿದುರುಳಿಸಬೇಕು. ಮರವು ಪೂರ್ವ ಅಥವಾ ಉತ್ತರ ದಿಕ್ಕಿಗೆ ಬಿದ್ದಲ್ಲಿ ಪ್ರಶಸ್ತ. ಈಶಾನ್ಯಕ್ಕೂ ಪ್ರಶಸ್ತ. ಉಳಿದ ದಿಕ್ಕುಗಳಲ್ಲಿ ಬಿದ್ದಲ್ಲಿ ಅಪ್ರಶಸ್ತವೆಂದು ತಿಳಿಯಬೇಕು.

೨೩–೨೫. ಎಡಮುಗ್ಗುಲಾಗಿ ಬಿದ್ದ ಮರವೂ, ಬೀಳುವಾಗ ಪ್ರಾಣಿಗಳಿಗೆ ಹಿಂಸೆಯನ್ನುಂಟುಮಾಡಿದ ಮರವೂ ಸಹ ತ್ಯಾಜ್ಯವಾದುದು. ಈ ದೋಷಗಳಿಲ್ಲದೇ ಪ್ರಶಸ್ತವಾಗಿ ಬಿದ್ದ ಮರವನ್ನೇ ಪ್ರಯತ್ನದಿಂದ ಗ್ರಹಿಸಬೇಕು. ಆ ಮರದ ಬುಡ ಮತ್ತು ತುದಿಯ ಭಾಗವನ್ನು ಗುರುತು ಮಾಡಬೇಕು. ಅದರ ಮೇಲುಭಾಗವು ದೇವತಾವಿಗ್ರಹದ ತಲೆಯಾಗಿಯೂ, ಬುಡದ ಭಾಗವು ಆ ವಿಗ್ರಹದ ಪಾದವಾಗಿಯೂ ಆಗುವಂತೆ ವಿಗ್ರಹವನ್ನು ನಿರ್ಮಿಸಬೇಕು. ಹಾಗಿಲ್ಲದೆ ತಲೆಕೆಳಕಾಗಿಯಾಗಲಿ ಅಡ್ಡಡ್ಡಲಾಗಿಯಾಗಲಿ ವಿಗ್ರಹವನ್ನು ರಚಿಸಿದಲ್ಲಿ ಅದು ಮರಣಪ್ರದವಾಗುತ್ತದೆ.

**ಅಗ್ರಮೂಲವಿಪರ್ಯಾಸೇ ಕೃತೇ ವೇಶ್ಮಕ್ಷಯಂ ವ್ರಜೇತ್ ।**
**ಪೂರ್ವಾಗ್ರಾ ಚೋತ್ತರಾಗ್ರಾ ವಾ ದ್ರುಮಾ ಯೋಜ್ಯಾ ಗೃಹೇಷು ಚ ॥೨೬॥**

**ಮಹಾವಂಶೇಷು ವಂಶೇಷು ವಿಪರ್ಯಸ್ತಾ ವಿಗರ್ಹಿತಾಃ ।**
**ದಕ್ಷಿಣಾಗ್ರಾಃ ಪರಾಗ್ರಾವಾ ಗೃಹಸ್ವಾಮಿವಿಪತ್ತಿದಾಃ ॥ ೨೭ ॥**

**ತಸ್ಮಾತ್ಸರ್ವಪ್ರಯತ್ನೇನ ಚಿಹ್ನೈಸ್ತಂ ಕಾರಯೇದ್ರುಮಂ ।**
**ಅಗ್ರೇ ಮೂಲೇ ಚ ಧರ್ಮಜ್ಞ ತತಃ ಸಮ್ಯಕ್ಪ್ರವೇಶಯೇತ್ ॥ ೨೮ ॥**

**ಶಕಟೇನ ಮಹಾರಾಜ ನರೈರ್ವಾಪ್ಯಥ ಗೋವೃಷೈಃ ।**
**ಅಷ್ಟೇ ದಿವಸನಕ್ಷತ್ರೇ ಮುಹೂರ್ತೇ ಚಾಭಿಪೂಜಿತೇ ॥ ೨೯ ॥**

**ಪ್ರವಿಶ್ಯ ಸಮ್ಯಕ್ತಂ ವಿದ್ವಾನ್ಯಥಾಯೋಗಂ ನಿಯೋಜಯೇತ್ ।**
**ಯಥೋದ್ದೇಶಂ ಮಹಾರಾಜ ಸ್ಥಪತಿರ್ಲಕ್ಷಣಾನ್ವಿತಂ ॥ ೩೦ ॥**

ಕಂಬಗಳಿಗಾಗಿ ಮರಗಳನ್ನು ಉಪಯೋಗಿಸುವಾಗಲೂ ತಲೆಕೆಳಕಾಗಿ ನಿಲ್ಲಿಸಬಾರದು ಹಾಗೆ ಮಾಡಿದಲ್ಲಿ ಆ ಮನೆಯೇ ನಾಶಹೊಂದುತ್ತದೆ ಮನೆಗಳಲ್ಲಿಯೂ ಮರಗಳನ್ನು ಉಪಯೋಗಿಸುವಾಗ ಪೂರ್ವಾಗ್ರವಾಗಿಯಾಗಲಿ, ಉತ್ತರಾಗ್ರವಾಗಿಯಾಗಲಿ ಉಪಯೋಗಿಸಬೇಕು ದಪ್ಪನಾದ ಬೊಂಬುಗಳನ್ನು ಉಪಯೋಗಿಸುವಾಗಲೂ ಇಂತಹ ವಿಪರ್ಯಾಸವು ಅಪ್ರಶಸ್ತವಾಗುತ್ತದೆ ಇವುಗಳನ್ನು ದಕ್ಷಿಣಾಗ್ರವಾಗಿಯಾಗಲಿ, ಪಶ್ಚಿಮಾಗ್ರವಾಗಿಯಾಗಲಿ ಉಪಯೋಗಿಸಿದಲ್ಲಿ ಅವು ಗೃಹಸ್ವಾಮಿಗೇ ಕೆಡಕನ್ನುಂಟುಮಾಡುತ್ತವೆ

೨೮–೩೧ ಆದುದರಿಂದ ಸರ್ವ ಪ್ರಯತ್ನದಿಂದಲೂ ಬುಡ ಮತ್ತು ತುದಿಗಳಲ್ಲಿ ಚಿಹ್ನೆ ಮಾಡಿ ಮೇಲುಭಾಗವನ್ನೂ ಕೆಳಭಾಗವನ್ನೂ ನಾವು ಹೇಳಿರುವಂತೆ ಸರಿಯಾದ ಕ್ರಮದಲ್ಲಿ ಜೋಡಿಸಿ ಉಪಯೋಗಿಸಬೇಕು ಇಂತಹ ಮರವನ್ನು ಪ್ರಶಸ್ತವಾದ ದಿನ ಮತ್ತು ನಕ್ಷತ್ರಗಳಲ್ಲಿ ಉತ್ತಮವಾದ ಮುಹೂರ್ತದಲ್ಲಿ ಗಾಡಿಯ ಮೇಲೆಯೋ ಅಥವಾ ಮನುಷ್ಯರಿಂದಲೋ ಎತ್ತುಗಳ ಮೇಲೆಯೋ ತಾಗಿಸಿಕೊಂಡು ಬಂದು ಆಯಾಯ ಉಪಯೋಗಕ್ಕೆ ತಕ್ಕಂತೆ ಸರಿಯಾದ ಕ್ರಮದಲ್ಲಿ ಯೋಜಿಸಬೇಕು ಸ್ತಂಭ ವಿಗ್ರಹ ಮೊದಲಾದ ಉದ್ದೇಶ ಸಿದ್ಧಿಗೆ ತಕ್ಕಂತ ಸರಿಯಾದ ಲಕ್ಷಣಗಳಿಂದ ಕೂಡಿದ ಮರವನ್ನು ಸ್ಥಪತಿಯೇ (ಬಡಗಿ) ಯೋಜಿಸಬೇಕು ಈ ವಿಧಾನಕ್ಕೆ

**ಏವಂ ಹಿ ಕೃತ್ವಾ ವನಸಂಪ್ರವೇಶಂ**
**ಯಃ ಕಾಷ್ಠಮಾನೀಯ ಗೃಹಾಣಿ ಕುರ್ಯಾತ್ ।**
**ವೃದ್ಧಿರ್ಭವೇತ್ತಸ್ಯ ಸದೈವ ರಾಜನ್ಧ**
**ನೇನ ಧಾನ್ಯೇವ ಸುತೈಶ್ಚ ಮುಖ್ಯಾ ॥ ೩೧ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ ವಜ್ರಸಂವಾದೇ ದಾರುಪರೀಕ್ಷಾ ನಾಮ ಏಕೋನ ನವತಿತಮೋಽಧ್ಯಾಯಃ**

ತಕ್ಕಂತೆ ವನವನ್ನು ಪ್ರವೇಶಿಸಿ ಯಾವನು ಕಾಷ್ಠವನ್ನು ಸಂಗ್ರಹಿಸಿ ಮನೆಯನ್ನು ಕಟ್ಟುತ್ತಾನೆಯೋ, ಅಂತಹವನಿಗೆ ಆ ಮನೆಯಲ್ಲಿ ಧನ, ಧಾನ್ಯ, ಸಂತತಿ ಮೊದಲಾದುವುಗಳ ಅಭಿವೃದ್ಧಿಯು ಯಾವಾಗಲೂ ಅತ್ಯುತ್ತಮವಾಗಿ ಲಭಿಸುತ್ತದೆ

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯ ಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದದಲ್ಲಿ ದಾರು ಪರೀಕ್ಷ ಎಂಬ ಎಂಭತ್ತೊಂಭತ್ತನೆಯ ಅಧ್ಯಾಯ ಮುಗಿದಿದೆ.



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ನವತಿತಮೋಽಧ್ಯಾಯಃ ||

**|| ಮಾರ್ಕಂಡೇಯ ಉವಾಚ ||**

**ಪೂರ್ವೋಕ್ತವಿಧಿನಾ ಗತ್ವಾ ಶಿಲಾಂ ವಾಥ ಪರೀಕ್ಷಯೇತ್ ।**
**ಶೈಲಂ ಗತ್ವಾ ಮಹಾರಾಜ ದೈವಜ್ಞಃ ಸ್ಥಪತಿಸ್ತಥಾ || ೧ ||**

**ಶುಕ್ಲಾ ಶಸ್ತಾ ದ್ವಿಜಾತೀನಾಂ ಕ್ಷತ್ರಿಯಾಣಾಂ ಚ ಲೋಹಿತಾ ।**
**ವಿಶಾಂ ಪೀತಾ ಹಿತಾ ಕೃಷ್ಣಾ ಶೂದ್ರಾಣಾಂ ಚ ಹಿತಪ್ರದಾ || ೨ ||**

**ಏಕವರ್ಣಾಂ ಸಮಾಂ ಸ್ನಿಗ್ಧಾಂ ನಿಮಗ್ನಾಂ ಚ ತಥಾ ಕ್ಷಿತೌ ।**
**ಘಾತಾತಿಮಾತ್ರಸ್ಫುಟನಾಂ ದೃಢಾಂ ಮೃದ್ವೀಂ ಮನೋರಮಾಂ || ೩ ||**

---

### ತೊಂಭತ್ತನೆಯ ಅಧ್ಯಾಯ.

೧–೫ ಮಾರ್ಕಂಡೇಯರು ಹೇಳುತ್ತಾರೆ --ಮೇಲೆ ಹೇಳಿರುವ ವಿಧಾನ ದಿಂದ ದೈವಜ್ಞನೂ, ಶಿಲ್ಪಿಯೂ ಸಹ ಬೆಟ್ಟಕ್ಕೆ ಹೋಗಿ ವಿಗ್ರಹಕ್ಕೆ ಯೋಗ್ಯವಾದ ಶಿಲೆಯನ್ನಾದರೂ ಪರೀಕ್ಷಿಸಬೇಕು ಬ್ರಾಹ್ಮಣರಿಗೆ ಬಿಳಿಪಾದ ಶಿಲೆಯೂ, ಕ್ಷತ್ರಿಯರಿಗೆ ಕೆಂಪಾದ ಶಿಲೆಯೂ, ವೈಶ್ಯರಿಗೆ ಹಳದಿಬಣ್ಣದ ಶಿಲೆಯೂ, ಶೂದ್ರರಿಗೆ ಕಪ್ಪು ಬಣ್ಣದ ಶಿಲೆಯೂ ಪ್ರಶಸ್ತವಾಗುತ್ತವೆ ತೆಗೆಯುವ ಕಲ್ಲು ಎಲ್ಲಾ ಭಾಗದಲ್ಲಿಯೂ ಒಂದೇ ವರ್ಣ ಹೊಂದಿರಬೇಕು ಸಮವಾಗಿಯೂ, ನುಣುಪಾಗಿಯೂ ಭೂಮಿಯೊಳಗೆ ಹುದುಗಿಯೂ ಇರಬೇಕು ಹೆಚ್ಚಾದ ಪ್ರಹಾರಮಾತ್ರದಿಂದ ಒಡೆಯತಕ್ಕದ್ದಾಗಿಯೂ, ದೃಢವಾಗಿಯೂ ಕೆಲಸಕ್ಕೆ ತಕ್ಕಷ್ಟು ಮೃದುವಾಗಿಯೂ, ರಮ್ಯ

**ಕೋಮಲಾಂ ಸಿಕತಾಹೀನಾಂ ಪ್ರಿಯಾಂ ದೃಷ್ಟ್ಮನಸೋರಪಿ ।**
**ಸರಿತ್ಸಲಿಲನಿರ್ಧೂತಾಂ ಪವಿತ್ರಾಂ ತು ಜಲೋಷಿತಾಂ ॥ ೪ ॥**

**ದ್ರುಮಚ್ಛಾಯೋಪಗೂಢಾಂ ಚ ತೀರ್ಥಾಶ್ರಯಸಮನ್ವಿತಾಂ ।**
**ಆಯಾಮಪರಿಣಾಹಾಢ್ಯಾಂ ಗ್ರಾಹ್ಯಾಂ ಪ್ರಾಹುರ್ಮನೀಷಿಣಃ ॥ ೫ ॥**

**ಅಗ್ರಾಹ್ಯಾಂ ಜ್ವಲನಾಲೀಢಾಂ ತಪ್ತಾಂ ಭಾಸ್ಕರರಶ್ಮಿಭಿಃ ।**
**ಅನ್ಯಕರ್ಮೋಪಯುಕ್ತಾಂ ಚ ತಥಾ ಕ್ಷಾರಾಂಬುಸಂಯುತಾಂ ॥ ೬ ॥**

**ಅತ್ಯಂತೋಪಹತಾಂ ರೂಕ್ಷಾಮಪುಣ್ಯಜನಸೇವಿತಾಂ ।**
**ಬಿಲೈಃ ಸಂದೂಷಿತಾ ಯಾ ತು ವಿಚಿತ್ರೈರ್ಬಿಂದುಭಿಶ್ಚಿತಾ ॥ ೭ ॥**

**ರೇಖಾಮಂಡಲಸಂಕೀರ್ಣಾಂ ವಿದ್ಧಾಂ ವಿಮಲಸಂಯುತಾಂ ।**
**ವಿಮಲಂ ತ್ರಿವಿಧಂ ಜ್ಞೇಯಂ ಲೋಹಂ ಕಾಂಸ್ಯಂ ಚ ಹೇಮಜಂ ॥ ೮ ॥**

---

ವಾಗಿಯೂ ಇರಬೇಕು ಸುಕುಮಾರವಾಗಿಯೂ ಒಳಭಾಗದಲ್ಲಿ ಮರಳಿಲ್ಲದೆಯೂ, ಮನಸ್ಸಿಗೂ ನೋಟಕ್ಕೂ ಹಿತಕರವಾಗಿಯೂ ನದಿಯ ದಡದಲ್ಲಿದ್ದು ಆ ನೀರಿನಿಂದ ಎರಚಲ್ಪಟ್ಟದ್ದಾಗಿಯೂ, ಶುದ್ಧವಾಗಿಯೂ ಅಥವಾ ನೀರಿನೊಳಗೆ ಮರೆಯಾಗಿಯೂ ಮತ್ತು ಮರದ ನೆರಳಿನಲ್ಲಿ ನೆಲಸಿಯೂ, ದಿವ್ಯ ತೀರ್ಥಕ್ಕೆ ಆಶ್ರಯವಾಗಿರುವ ಸ್ಥಳವನ್ನು ಹೊಂದಿಯೂ, ಉದ್ದೇಶಕ್ಕೆ ತಕ್ಕ ಉದ್ದ, ಸುತ್ತು ಇವುಗಳಿಂದ ಕೂಡಿಯೂ ಇರುವ ಶಿಲೆಯೇ ಗ್ರಾಹ್ಯವೆಂದು ಪಂಡಿತರು ಹೇಳುತ್ತಾರೆ

೬–೯ ಬೆಂಕಿಯಿಂದ ಸುಟ್ಟಿರುವ ಮತ್ತು ಸೂರ್ಯಕಿರಣಗಳಿಂದ ಕಾದಿರುವ ಮತ್ತು ಬೇರೆ ಕೆಲಸಕ್ಕೆ ಉಪಯೋಗಿಸಿ ಉಳಿದಿರುವ ಹಾಗೆಯೇ ಉಪ್ಪುನೀರಿನಲ್ಲಿ ನೆನೆಯಿಸಿರುವ, ಬಹಳ ಘಾತಪಾತಗಳನ್ನು ಹೊಂದಿರುವ ಮತ್ತು ನೋಟಕ್ಕೆ ಭಯಂಕರವಾಗಿ ಕಾಣುವ, ಕಾಡಿನಲ್ಲಿ ಪಾಪಿಷ್ಠರಾದ ಕ್ಷುದ್ರಜನರಿಂದ ಉಪಯೋಗಿಸಲ್ಪಟ್ಟ ಶಿಲೆಗಳನ್ನು ಸ್ವೀಕರಿಸಬಾರದು ಮತ್ತು ಪೊಟ್ಟರೆಗಳಿಂದ ಕೂಡಿಯೂ, ಮೇಲೆ ನಾನಾಬಣ್ಣವಾದ ಚುಕ್ಕಿಗಳಿಂದ ಕೂಡಿಯೂ, ಸುತ್ತೆಳೆಗಳಿಂದ ಕೂಡಿಯೂ ಕೊರೆಯಲ್ಪಟ್ಟಿರುವ ಹಾಗೂ ವಿಮಲಗಳೆಂಬ ಎಳೆಗಳಿಂದ ಕೂಡಿರುವ ಶಿಲೆಯೂ ಗ್ರಾಹ್ಯವಲ್ಲ ವಿಮಲವೆಂಬ ರೇಖೆಗಳು ಇತರ ಲೋಹಸಂಬಂಧದಿಂದಲೂ, ಕಂಚಿನ ಸಂಬಂಧದಿಂದಲೂ, ಚಿನ್ನದಸಂಬಂಧದಿಂದಲೂ ಮೂರು ವಿಧವಾಗುತ್ತವೆ ಲೋಹದ

**ಯಾ ಲೋಹವಿಮುಲೈರ್ಜುಷ್ಟಾ ಸಾ ಜನಕ್ಷಯಕಾರಿಣೀ ।**
**ಕಾಂಸ್ಯಾಭವಿಮಲೋಪೇತಾ ಜನಮಾನವಿನಾಶಿನೀ ॥ ೯ ॥**

**ಹೈಮೇನ ಯುಕ್ತಾ ದುರ್ಭಿಕ್ಷಂ ತಥಾ ಕುರ್ಯಾದವಗ್ರಹಂ ।**
**ಘರ್ಷಣೇ ಚ್ಛೇದನೇ ಚೈವ ಮಂಡಲಂ ಯತ್ರ ದೃಶ್ಯತೇ ॥ ೧೦ ॥**

**ಸಗರ್ಭಾಂ ತಾಂ ವಿಜಾನೀಯಾತ್ ಯತ್ನೇನ ಚ ವಿವರ್ಜಯೇತ್ ।**
**ಮಾಂಜಿಷ್ಠವರ್ಣಸಂಕಾಶೇ ಗರ್ಭೇ ಭವತಿ ದರ್ದುರಃ ॥ ೧೧ ॥**

**ಪೀತಕೇ ಮಂಡಲೇ ಗೋಧಾ ಕೃಷ್ಣೇ ವಿದ್ಯಾದ್ಭುಜಂಗಮಂ ।**
**ಕಪಿಲೇ ಮೂಷಕಂ ವಿದ್ಯಾತ್ಕೃಕಲಾಸಂ ತಥಾರುಣೇ ॥ ೧೨ ॥**

**ಗುಡವರ್ಣೇ ತು ಪಾಷಾಣಂ ಕಾಪೋತೇ ಗೃಹಗೋಧಿಕಾಂ ।**
**ಆಪೋ ನಿಸ್ತ್ರಿಂಶವರ್ಣಾಭೇ ಭಸ್ಮವರ್ಣೇ ತು ವಾಲುಕಾ ॥ ೧೩ ॥**

**ಅತಸ್ತ್ವೇಕತಮೇನಾಪಿ ಯುಕ್ತಾ ಕರ್ತುರ್ವಿಪರ್ಯಯೇ ।**
**ಏವಂ ಗರ್ಭಾಸ್ತು ವಿಜ್ಞೇಯಾ ಬಾಹ್ಯಲಕ್ಷಣಲಕ್ಷಿತಾಃ ॥ ೧೪ ॥**

---

ಎಳೆಗಳಿಂದ ಕೂಡಿದ ಶಿಲೆಯು ಜನಕ್ಷಯಕ್ಕೆ ಕಾರಣವಾಗುತ್ತದೆ. ಕಂಚಿನ ಬಣ್ಣದ ಎಳೆಗಳಿಂದ ಕೂಡಿದ್ದಲ್ಲಿ ಜನಗಳ ಮಾನನಾಶಕವಾಗಿಯೂ, ಚಿನ್ನದ ಎಳೆಗಳಿಂದ ಕೂಡಿದ ಶಿಲೆಯು ದುರ್ಭಿಕ್ಷ ಮತ್ತು ಅನಾವೃಷ್ಟಿಪ್ರದವಾಗಿಯೂ ಆಗುತ್ತವೆ.

೧೦-೧೪ ಕಲ್ಲನ್ನು ಉಜ್ಜುವಾಗಲೂ, ತುಂಡರಿಸುವಾಗಲೂ ಸುತ್ತುಗಳು ಕಂಡು ಬಂದಲ್ಲಿ ಅದರಲ್ಲಿ ಗರ್ಭವಿದೆ ಎಂದು ತಿಳಿಯಬೇಕು. ಅಂತಹ ಶಿಲೆಯನ್ನು ಯತ್ನಪೂರ್ವಕವಾಗಿ ತ್ಯಜಿಸಬೇಕು. ಮಂಜಿಷ್ಠೆಯ ವರ್ಣವಂತಿರುವ ಆ ಸುತ್ತಿನಲ್ಲಿ ಒಳಗೆ ಕಪ್ಪೆ ಇದೆ ಎಂದೂ, ಹಳದಿಯ ಸುತ್ತಿನಲ್ಲಿ ಉಡ ಇದೆ ಎಂದೂ, ಕಪ್ಪಾದ ಸುತ್ತುಗಳಲ್ಲಿ ಸರ್ಪವಿದೆ ಎಂದೂ, ಬೂದು ಬಣ್ಣದಲ್ಲಿ ಇಲಿ ಇದೆ ಎಂದೂ, ಕೆಂಪಾದ ಸುತ್ತಿನಲ್ಲಿ ಹೆಂಟೆಗೊದ್ದ (ಓತಿ) ಇದೆ ಎಂದೂ, ಬೆಲ್ಲದ ಬಣ್ಣವಿದ್ದಲ್ಲಿ ಬೇರೆ ಕಲ್ಲು ಇದೆ ಎಂದೂ, ಕಪೋತವರ್ಣವಿದ್ದಲ್ಲಿ ಹಲ್ಲಿ ಇದೆ ಎಂದೂ, ಕತ್ತಿಯಂತ ಕಪ್ಪಾಗಿದ್ದಲ್ಲಿ ನೀರು ಇದೆ ಎಂತಲೂ, ಬೂದಿಯ ಬಣ್ಣವಿದ್ದಲ್ಲಿ ಮರಳು ಇದೆ ಎಂದೂ ತಿಳಿಯಬೇಕು. ಇಂತಹ ಯಾವ ಗರ್ಭವಿದ್ದರೂ ಕರ್ತೃವಿಗೆ ಅನಿಷ್ಟವಾಗುತ್ತದೆ. ಈ ವಿಧವಾದ ಬಾಹ್ಯಲಕ್ಷಣಗಳಿಂದ ಶಿಲೆಯಲ್ಲಿರುವ ಗರ್ಭವನ್ನು ತಿಳಿಯಬೇಕು.

ಬಾಹ್ಯತೋ ಲಕ್ಷಣಂ ನಾಸ್ತಿ ತೇಷಾಂ ಲೇಪಾನಿ ದಾಪಯೇತ್ ।
ಬ್ರಾಹ್ಮೀಂ ಮಾಹೇಶ್ವರೀಂ ಶಾಕ್ರೀಂ ವೈಷ್ಣವೀಂ ಶ್ಲಕ್ಷ್ಣಪೇಷಿತಾಂ ॥ ೧೫ ॥

ಅಜಾಸ್ತನ್ಯೇನ ಸಂಯೋಜ್ಯ ಶಿಲಾಲೇಪಂ ತು ದಾಪಯೇತ್ ।
ಅಹೋರಾತ್ರೇ ಗತೇ ಯತ್ರ ಶಿಲಾಲೇಪೋ ನ ಜಾಯತೇ ॥ ೧೬ ॥

ಸಗರ್ಭಾಂ ತಾಂ ವಿಜಾನೀಯಾತ್ಪ್ರಯತ್ನೇನ ವಿವರ್ಜಯೇತ್ ।
ಕಾಸೀಸಂ ಪೀತಕಾಸೀಸಂ ಗವ್ಯಕ್ಷೀರೇಣ ಪೇಷಯೇತ್ ॥ ೧೭ ॥

ಪಾಷಾಣಂ ಲೇಪಿತಂ ತೇನ ಬಹುವರ್ಣಂ ಯದಾ ಭವೇತ್ ।
ಸಾ ಶಿಲಾ ನ ಪ್ರಶಸ್ತಾ ಸ್ಯಾತ್ ಪ್ರಾಣಿಗರ್ಭಾ ತು ಸಾ ಸ್ಮೃತಾ ॥ ೧೮ ॥

ಮುಸ್ತಕಂ ಕರವೀರಂ ಚ ಕುಷ್ಠಂ ತಾಲೀಶಪತ್ರಕಂ ।
ಸ್ತ್ರೀಸ್ತನ್ಯಪಿಷ್ಟೈರೇತೈಸ್ತು ಪಾಷಾಣಂ ಲೇಪಯೇದ್ಬುಧಃ ॥ ೧೯ ॥

---

೧೫-೧೮ ಯಾವ ಶಿಲೆಗಳ ಗರ್ಭಗಳನ್ನು ಬಾಹ್ಯಲಕ್ಷಣಗಳಿಂದ ತಿಳಿಯುಲಾಗುವುದಿಲ್ಲವೋ ಅಂತಹ ಶಿಲೆಗಳ ಗರ್ಭ ಪರೀಕ್ಷೆಗಾಗಿ ಲೇಪಗಳನ್ನು ಹಾಕಿಸಿ ನೋಡಿ ತಿಳಿಯಬೇಕು ಹೊನಗೊನ್ನೆ, ಯುವತಿಕ್ತಾ ಶಾಕ್ರೀ, ತವಕ್ಷೀರ ಇವುಗಳನ್ನು ಚನ್ನಾಗಿ ಅರೆದು ಆಡಿನ ಹಾಲಿನಲ್ಲಿ ಸೇರಿಸಿ ಶಿಲೆಯನ್ನು ಲೇಪಿಸಬೇಕು ಒಂದು ದಿನ ಪೂರ್ತಿಕಳೆದ ನಂತರ ಯಾವ ಸ್ಥಳದಲ್ಲಿ ಶಿಲೆಯು ಲೇಪವೇ ಇಲ್ಲದೇ ಹೋಗುತ್ತದೆಯೋ ಅಂತಹ ಕಲ್ಲನ್ನು ಸಗರ್ಭವೆಂದು ತಿಳಿದು ತ್ಯಜಿಸಬೇಕು ಕಾಸೀಸ ಪೀತಕಾಸೀಸವೆಂಬ ಔಷಧಗಳನ್ನು ಹಸುವಿನ ಹಾಲಿನಿಂದ ಅರೆದು ಶಿಲೆಗೆ ಲೇಪಿಸಬೇಕು ಒಂದು ದಿನ ಕಳೆದ ನಂತರ ಅದರ ಬಣ್ಣವು ಬಹಳ ಹೆಚ್ಚಾಗಿ ತೋರಿಬಂದಲ್ಲಿ ಆ ಶಿಲೆಯು ಪ್ರಶಸ್ತವಲ್ಲ ಅದು ಪ್ರಾಣಿಗರ್ಭವೆಂದು ತಿಳಿಯಬೇಕು

೧೯-೨೧ ಕೊನ್ನಾರಿ, ಗನ್ನೇರಳೆ, ಚಂಗಲುಕೋಷ್ಠ, ತಾಳೀಶಪತ್ರೆ ಇವುಗಳನ್ನು ಸ್ತ್ರೀಸ್ತನ್ಯದಲ್ಲಿ ಅರೆದು ಶಿಲಗೆ ಲೇಪಿಸಿದಲ್ಲಿ ಯಾವ ಶಿಲೆಯು ಸಿಮುಸಿಮಾ ಎಂದು ಹೊಗೆಯಾಡುತ್ತದೆಯೋ ಅದರಲ್ಲಿ ಕಾಲಕೂಟವೆಂಬ ವಿಷವಿದೆಯೆಂದು

**ಷಭಿರ್ಲೇಪೀತಮುಶ್ಮಾನಂ ಯದಾ ಸಿಮಿಸಿಮಾಯತೇ ।**
**ಕಾಲಕೂಟಂ ವಿಷಂ ತತ್ರ ನ ತಂ ಹಸ್ತೇನ ಸಂಸ್ಪೃಶೇತ್ 　　　॥ ೨೦ ॥**

**ಶ್ವೇತಶ್ಚ ಪದ್ಮವರ್ಣಶ್ಚ ಕುಸುಮೋಷಣಸನ್ನಿಭಃ ।**
**ಪಾಂಡುರೋ ಮುದ್ಗವರ್ಣಶ್ಚ ಕಾಪೋತೋ ಭೃಂಗಸನ್ನಿಭಃ 　　　॥ ೨೧ ॥**

**ಜ್ಞೇಯಾಃ ಪ್ರಶಸ್ತಾಃ ಪಾಷಾಣಾಃ ಅಷ್ಟಾವೇತೇ ನ ಸಂಶಯಃ ।**
**ಕೃಷ್ಣವರ್ಣಾ ಶಿಲಾ ಯಾ ತು ಶುಕ್ಲಾ ಹೀರಕಸಂಯುತಾ 　　　॥ ೨೨ ॥**

**ಸಾ ಶಿಲಾ ಶ್ರೀಕರೀ ಜ್ಞೇಯಾ ಪುತ್ರಪೌತ್ರವಿವರ್ಧನೀ ।**
**ಸಿತವರ್ಣಾ ತು ಯಾ ಕೃಷ್ಣೈಃ ಹೀರಕೈ ಶಬಲೀಕೃತಾ 　　　॥ ೨೩ ॥**

**ಬಹುದೋಷಕರೀ ಸಾ ತು ಕೃಷ್ಣಾ ವಾ ರಕ್ತಹೀರಕೈಃ ।**
**ಸರ್ವವರ್ಣೇಷು ಶುಕ್ಲೇಷು ಪ್ರಶಸ್ತಂ ಹೀರಕಂ ವಿದುಃ 　　　॥ ೨೪ ॥**

ತಿಳಿಯಬೇಕು ಅದನ್ನು ಕೈಯಿಂದ ಮುಟ್ಟಲೂ ಕೂಡದು ಶಿಲೆಗಳನ್ನು ಆರಿಸುವಾಗ ಬಿಳುಪಾದ ಮತ್ತು ಪದ್ಮವರ್ಣದ ಹೂವಿನ ಒಳಭಾಗದ ಬಣ್ಣದಂತಿರುವ ಕೆಂಪು ಮಿಶ್ರವಾದ ಬಿಳಿಯ ಬಣ್ಣದ, ಹೆಸರಿನ ಬಣ್ಣದ ಕಪೋತದ ಬಣ್ಣದ ದುಂಬಿಯ ಬಣ್ಣದ ಎಂಟು ವಿಧವಾದ ಈ ಶಿಲೆಗಳೇ ಪ್ರಶಸ್ತಗಳೆಂದು ಹೇಳಲ್ಪಟ್ಟಿದೆ

೨೨-೨೪ ಕಪ್ಪಾದ ಶಿಲೆಯೂ, ಎಳೆಗಳಿಂದ ಕೂಡಿದ ಬಿಳಿಯ ಕಲ್ಲೂ ಸಹ ಭಾಗ್ಯಪ್ರದ ಮತ್ತು ಪುತ್ರಪೌತ್ರಾದಿ ವೃದ್ಧಿಕರವೆಂದು ತಿಳಿಯಬೇಕು ಯಾವ ಶಿಲೆಯು ಬಿಳುಪಾಗಿದ್ದು ಕಪ್ಪಾದ ಎಳೆಗಳಿಂದ ನಾನಾಬಣ್ಣವಾಗಿರುವುದೋ ಅದು ಬಹುಮಟ್ಟಿಗೂ ದೋಷದೂಷಿತ, ಹಾಗೆಯೇ ಕಪ್ಪಾದ ಶಿಲೆಯು ಕೆಂಪು ಎಳೆಗಳಿಂದ ಕೂಡಿದ್ದರೂ ದುಷ್ಟವಾಗುತ್ತದೆ ಬಿಳುಪಿಗೆ ನೇರಿರುವ ಎಲ್ಲಾ ಶಿಲೆಗಳಲ್ಲಿಯೂ ಎಳೆಗಳಿದ್ದಲ್ಲಿ ಪ್ರಶಸ್ತವೆಂದು ಹೇಳುತ್ತಾರೆ ಇತರ ಎಲ್ಲಾ ವರ್ಣದ ಕಲ್ಲುಗಳಿಗೂ ಇತರ ವರ್ಣ ಸಂಬಂಧವು ನಿಂದ್ಯವಾಗುತ್ತದೆ

**ಸರ್ವೇಷಾಮೇವ ವರ್ಣಾನಾಮನ್ಯವರ್ಣಂ ವಿಗರ್ಹಿತಂ ।**
**ಬ್ರಾಹ್ಮೀಂ ಶಿಲಾಂ ದಿನೇ ಗತ್ವಾ ಶೋಭನೇ ಧೂಪಯೇದ್ಬುಧಃ ॥ ೨೫ ॥**

**ಕ್ಷೀರೇಣ ನೃಪ ಗವ್ಯೇನ ಸಕಷಾಯೈಸ್ತಥಾ ಜಲೈಃ ।**
**ಆಚ್ಛಾದ್ಯ ಕುಸುಮೈರ್ದರ್ಭೈಃ ಪ್ರಾಗ್ವತ್ಕುರ್ಯಾತ್ತಥಾ ಬಲಿಂ ॥ ೨೬ ॥**

**ಸ್ವಪ್ನಾರ್ಥಂ ಚಸ್ವಪೇತ್ತತ್ರ ದೈವಜ್ಞಃ ಸ್ಥಪತಿಸ್ತಥಾ ।**
**ಪ್ರಾಗ್ವದ್ದೃಷ್ಟೇ ಶುಭೇ ಸ್ವಪ್ನೇ ಶಿಲಾ ನೇಯಾ ತು ಸಾ ಭವೇತ್ ॥ ೨೭ ॥**

**ಅದೃಷ್ಟೇ ತು ತಥಾ ಸ್ವಪ್ನೇ ನ ದುಷ್ಟೇ ಶೋಭನಂ ಭವೇತ್ ।**
**ಪೂಜನಂ ತು ದ್ವಿತೀಯೇಽಹ್ನಿ ಕೃತ್ವಾ ಭಾಂಡಗಣಸ್ಯ ತು ॥ ೨೮ ॥**

**ಚ್ಛೇದಕಸ್ಯ ತತಃ ಕೃತ್ವಾ ಸಂವಾಹ್ಯಂ ತಂ ಪ್ರವೇಶಯೇತ್ ।**
**ಪ್ರಾಗ್ವದೇವ ಮಹೀಪಾಲ ಯಥಾ ವೃಕ್ಷೇಷು ಕೀರ್ತಿತಂ ॥ ೨೯ ॥**

**ಶಿಲಾನಾಂ ಗರ್ಭವಿಜ್ಞಾನಂ ಯದುಕ್ತಂ ನೃಪಸತ್ತಮ ।**
**ತದೇವ ಸರ್ವಂ ಜಾನೀಹಿ ದ್ರುಮಾಣಾಮಪಿ ಯತ್ನತಃ ॥ ೩೦ ॥**

---

೨೫-೩೦ ಶುಭದಿನದಲ್ಲಿ ಹಗಲಿನಲ್ಲಿ ಬ್ರಹ್ಮಜಾತಿಗೆ ಸೇರಿದ ಶಿಲೆಯ ಹತ್ತಿರಕ್ಕೆ ಹೋಗಿ ಹಸುವಿನ ಹಾಲಿನಿಂದಲೂ, ಕಷಾಯ ಮಿಶ್ರವಾದ ಜಲದಿಂದಲೂ ತೊಳೆದು ಧೂಪದಿಂದ ಸತ್ಕರಿಸಿ ಹೂವುಗಳಿಂದಲೂ ದರ್ಭಗಳಿಂದಲೂ ಆ ಶಿಲೆಯನ್ನು ಆಚ್ಛಾದಿಸಿ ಹಿಂದೆ ನಾವು ಹೇಳಿರುವ ವಿಧಿಯಂತೆ ಅಲ್ಲಿ ಬಲಿ ಹರಣಮಾಡಬೇಕು ಸ್ವಪ್ನದ ನಿರೀಕ್ಷಣೆಯಿಂದ ಸ್ಥಪತಿಯೊಡನೆ ದೈವಜ್ಞನೂ ಅಲ್ಲಿ ಮಲಗಬೇಕು ಹಿಂದೆ ಹೇಳಿದಂತೆ ಶುಭಸ್ವಪ್ನವಾದಲ್ಲಿ ಆ ಶಿಲೆಯನ್ನು ಒಯ್ಯಬೇಕು ಸ್ವಪ್ನವಾಗದಿದ್ದರೂ ಒಯ್ಯಬಹುದು ಅಶುಭಸ್ವಪ್ನವಾದಲ್ಲಿ ಮಾತ್ರ ಒಯ್ಯಕೂಡದು ಅದಕ್ಕೆ ಮಾರನೆಯ ದಿನವೂ ಪೂಜೆಮಾಡಿ ಅಲ್ಲಿರುವ ವೈಹಾಯಸ ಗಣಗಳಿಗೂ ಪೂಜೆಮಾಡಿ ಶಿಲಾಚ್ಛೇದಕನನ್ನೂ ಸತ್ಕರಿಸಿ ಅದನ್ನು ಅಪೇಕ್ಷಿತ ಸ್ಥಳಕ್ಕೆ ಸಾಗಿಸ ಸಾಗಿಸಬೇಕು ಶಿಲೆಗಳಿಗೆ ಹೇಳಿರುವ ಗರ್ಭ ವಿಷಯ ಪರೀಕ್ಷಾಜ್ಞಾನವೇ ಮರಗಳ ವಿಷಯದಲ್ಲಿಯೂ ಉಪಯೋಗಿಸಲು ಅರ್ಹವಾಗಿರುತ್ತೆ, ಆದ್ದರಿಂದ ವೃಕ್ಷಗಳ ಗರ್ಭಪರೀಕ್ಷೆಯನ್ನೂ ಇದರಿಂದಲೇ ತಿಳಿ ಈ ವಿಧಾನದಿಂದ ಸರಿಯಾಗಿ ಸ್ವೀಕರಿಸ

**ಅನೇನ ಸಮ್ಯಗ್ವಿಧಿನಾ ಗೃಹೀತಾ**
**ಶಿಲಾ ಭವೇತ್ಸರ್ವಸುಖಾವಹಾ ಸಾ ।**
**ತಸ್ಮಾತ್ಪ್ರಯತ್ನೇನ ಯಥೋಕ್ತಮೇ-**
**ತದ್ವನಪ್ರದೇಶೇ ಸಕಲಂ ಹಿ ಕುರ್ಯಾತ್ ॥ ೩೧ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ**
**ವಜ್ರಸಂವಾದೇ ಶಿಲಾಪರೀಕ್ಷಾ ನಾಮ**
**ನವತಿತಮೋಽಧ್ಯಾಯಃ**

ಲ್ಪಟ್ಟ ಶಿಲೆಯು ಎಲ್ಲರಿಗೂ ಸುಖಕರವಾಗಿ ಪರಿಣಮಿಸುತ್ತದೆ ಆದುದರಿಂದ ಶಿಲೆಯ ಗ್ರಹಣ ವಿಷಯದಲ್ಲಿಯೂ ವನಪ್ರದೇಶಕ್ಕೆ ಹೋಗಿ ನಾವು ಹೇಳಿರುವ ಎಲ್ಲಾ ವಿಧಿ ನಿಯಮಗಳನ್ನೂ ಪ್ರಯತ್ನಪೂರ್ವಕವಾಗಿ ಆಚರಿಸಬೇಕು

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯ ಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಶಿಲಾಪರೀಕ್ಷ ಎಂಬ ತೊಂಭತ್ತನೆಯ
ಅಧ್ಯಾಯವು ಮುಗಿದಿದ



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಏಕನವತಿತಮೋಽಧ್ಯಾಯಃ ||

|| ಮಾರ್ಕಂಡೇಯ ಉವಾಚ ||

**ತತಃಪರಂ ಪ್ರವಕ್ಷ್ಯಾಮಿ ಪಕ್ವೇಷ್ಟನಿಚಯಂ ತವ |**
**ಬ್ರಾಹ್ಮಣಾನಾಂ ಶುಭಾ ಶ್ವೇತಾ ಕ್ಷತ್ರಿಯಾಣಾಂ ತು ಲೋಹಿತಾ || ೧ ||**

**ಮೃತ್ಪೀತಾ ವೈಶ್ಯಜಾತೀನಾಂ ಕೃಷ್ಣಾ ಚೈವಾನ್ತ್ಯಜನ್ಮನಾಂ |**
**ಯಸ್ಯ ವರ್ಣಸ್ಯ ಯಾ ಶಸ್ತಾ ತಾಂ ಮೃದಂ ಗ್ರಾಹಯೇದ್ಬುಧಃ || ೨ ||**

**ಅಸಂಕೀರ್ಣಾಚ್ಛುಭಾದ್ದೇಶಾದ್ಗೃಹೀತ್ವಾ ಶೋಷಯೇನ್ಮೃದಂ |**
**ಶೋಷಿತಾಂ ತಾಂ ವಿಮೃದ್ನೀಯಾತ್ಸಶೈವಾಲೇನ ವಾಮ್ಭಸಾ || ೩ ||**

---

### ತೊಂಭತ್ತೊಂದನೆಯ ಅಧ್ಯಾಯ

೧-೪ ಮಾರ್ಕಂಡೇಯರು ಹೇಳುತ್ತಾರೆ — ಇನ್ನು ಮುಂದೆ ಆಲಯ ಪ್ರಾಸಾದಾದಿ ನಿರ್ಮಾಣಕ್ಕೆ ಉಪಯೋಗಿಸುವ ಸುಟ್ಟ ಇಟ್ಟಿಗೆಯ ಸಂಗ್ರಹಕ್ರಮ ವನ್ನು ನಿನಗೆ ಹೇಳುತ್ತೇನೆ — ಇಟ್ಟಿಗೆಗೆ ಬೇಕಾದ ಮೃತ್ತಿಕೆಯು ಬ್ರಾಹ್ಮಣರಿಗೆ ಬಿಳುಪಾಗಿಯೂ, ಕ್ಷತ್ರಿಯರಿಗೆ ಕೆಂಪಾಗಿಯೂ ವೈಶ್ಯರಿಗೆ ಹಳದಿಯಾಗಿಯೂ, ಶೂದ್ರರಿಗೆ ಕಪ್ಪಾಗಿಯೂ ಇದ್ದಲ್ಲಿ ಪ್ರಶಸ್ತ. ಆದ್ದರಿಂದ ಆಯಾಯ ವರ್ಣದವರು ತಮಗೆ ಪ್ರಶಸ್ತವಾದ ಮೃತ್ತಿಕೆಯನ್ನೇ ಗ್ರಹಿಸಬೇಕು ಪರಸ್ಪರವರ್ಣಸಾಂಕರ್ಯ ವಿಲ್ಲದ ಶುದ್ಧವಾದ ಸ್ಥಳದಿಂದ ಮೃತ್ತಿಕೆಯನ್ನು ಸಂಗ್ರಹಿಸಿ ಅದನ್ನು ಚೆನ್ನಾಗಿ ಒಣಗಿಸಬೇಕು ಹೀಗೆ ಒಣಗಿದ ಮೃತ್ತಿಕೆಯನ್ನು ಪಾಚಿಯೊಡಗೂಡಿರುವ

ಹಸ್ತದೀರ್ಘೇಣ ಯಂತ್ರೇಣ ತದರ್ಧವಿಸ್ತೃತೇನ ಚ
ತದರ್ಧಮುಚ್ಛ್ರಿತೇನಾಥ ಕರ್ತವ್ಯಾ ವೇಷ್ಟಕಾ ಮತಾಃ ॥ ೪ ॥

ಆತಪೇ ತಾಸ್ತಥಾ ಶುಷ್ಕಾ ವಿಪಚೇನ್ನೃಪಸತ್ತಮ ।
ಕಾಷ್ಠೈರಸಾರೈರ್ಭೂರ್ಸಾಲ ಗೋಕರೀಷ್ಯೈಃ ತೃಣೈಸ್ತಥಾ ॥ ೫ ॥

ಮೃದುನಾ ನೃಪ ಪಾಕೇನ ನ ಚಾತ್ಯರ್ಥಂ ಪಚೇಚ್ಚತಾಃ ।
ಅಪಕ್ವಾಶ್ಚ ನ ಸಂಗ್ರಾಹ್ಯಾ ನ ವಿಲೀನಾಃ ಕಥಂ ಚ ನ ॥ ೬ ॥

ತಾಸಾಮತ್ಯರ್ಥಪಕ್ವಾನಾಂ ಭಂಗೋ ಭವತಿ ರೂಪಕೇ ।
ಭವನ್ತ್ಯಸಾರಾಶ್ಚಾಪಕ್ವಾಃ ವಿಲೀನಾಃ ಕರ್ಮನಾಶನಾಃ ॥ ೭ ॥

ಇಷ್ಟಕಾನಿಚಯೇ ವಹ್ನಿಂ ಯೋ ನರಃ ಸಂಪ್ರಯಚ್ಛತಿ ।
ಸೋಮವಿಕ್ರಯಿಣಾ ತುಲ್ಯಃ ಸ ತು ಪಾಪಃ ಪ್ರಕೀರ್ತಿತಃ ॥ ೮ ॥

---

ನೀರಿನೊಡನೆ ಚೆನ್ನಾಗಿ ಮರ್ಧಿಸಿ ಕಲಸಬೇಕು ಕಲಸಿದ ಮೃತ್ತಿಕೆಯನ್ನು ಹಸ್ತ ಪರಿಣಾಮದ ಉದ್ದವೂ, ಅದರ ಅರ್ಧ ಅಗಲವೂ, ಅಗಲದ ಅರ್ಧ ಎತ್ತರವೂ ಇರುವ ಯಂತ್ರದಿಂದ ಬೇಕಾದಷ್ಟು ಇಟ್ಟಿಗೆಯನ್ನು ಮಾಡಿಕೊಳ್ಳಬೇಕು

೫-೮ ಅವನ್ನು ಬಿಸಿಲಿನಲ್ಲಿಯೂ ಸರಿಯಾಗಿ ಪಾಕಬರುವಂತೆ ಒಣಗಿಸಬೇಕು ಅನಂತರ ಅವುಗಳನ್ನು ಗೂಡಿನಲ್ಲಿ ಒಟ್ಟುಗೂಡಿಸಿ ಬೆಂಡಾಗಿರುವ ಸಾಧಾರಣ ಸೌದೆಗಳಿಂದಲೂ ಹಸುವಿನ ಬೆರಣಿ, ಹುಲ್ಲು ಮೊದಲಾದವುದಳಿಂದಲೂ ಕಡಿಮೆ ಯಾದ ಶಾಖದಿಂದ ಪಕ್ವವಾಗುವಂತೆ ಸುಡಬೇಕು ಬಹಳ ಶಾಖದಿಂದ ಸುಡಬಾರದು ಬಹಳ ಹೆಚ್ಚಾಗಿ ಪಕ್ವವಾಗಿರುವ ಇಟ್ಟಿಗೆಗಳಿಂದ ಕಟ್ಟಡವು ಭಗ್ನವಾಗುತ್ತದೆ ಅಪಕ್ವವಾದ ಇಟ್ಟಿಗೆಗಳಿಂದ ಕಟ್ಟಡವು ದುರ್ಬಲವಾಗುತ್ತದೆ ಕರಗಿಹೋದ ಇಟ್ಟಿಗೆಗಳಿಂದ ಮಾಡಿದ ಕಾರ್ಯವೇ ನಾಶವಾಗುತ್ತದೆ. ಇಟ್ಟಿಗೆಗಳ ಗೂಡಿಗೆ ಯಾವನು ಬೆಂಕಿಯನ್ನಿಡುತ್ತಾನೋ ಅವನು ಸೋಮವಿಕ್ರಯಿಗೆ ಸಮಾನವಾದ ಪಾತಕವನ್ನು ಹೊಂದುತ್ತಾನೆ

ತಸ್ಮಾಚ್ಛುದ್ಧೇನ ಮೂಲೇನ ತತ್ರಾಗ್ನಿಂ ದಾಪಯೇನ್ನರಃ ।
ವರ್ತಮಾನಮುಖಃ ಸತ್ಯಂ ಸಂವಿಭಜ್ಯ ಪ್ರಯತ್ನತಃ ॥ ೯ ॥

ಪಕ್ವಾಸ್ತು ಶೀತಲೀ ಭೂತಾಃ ಸ್ವಾನುರೂಪೈಸ್ತ್ವರೂಪಕೈಃ ।
ಸಂಯುಕ್ತಂಯೋಜಿತಾ ಯೋಜ್ಯಾ ಯಥಾಸ್ಥಾನೇ ನರಾಧಿಪ ॥ ೧೦ ॥

ಇಷ್ಟಕಾಸಂಚಯೇನ್ನೈವ ಮೇಕೈಕಂ ರೂಪಕಂ ಬುಧಃ ।
ದರ್ಶಯೇತ್ತು ಸುಯುಕ್ತೇನ ಯಥಾಸ್ಥಾನಮರಿಂದಮ ॥ ೧೧ ॥

ಏವಂ ರೂಪಕವಿನ್ಯಾಸಂ ಶಿಲಾಸ್ವಪಿ ವಿಧೀಯತೇ ।
ಏವಂ ಸುಯುಕ್ತ್ಯಾ ಕುರ್ವನ್ತಿ ಕಾಷ್ಠಸಂಘಾತಕಂ ತಥಾ ॥ ೧೨ ॥

ಕಾಷ್ಠಾನಾಮಾಯಸಂ ಬಂಧಂ ಸಮ್ಯಕ್ಕಾರ್ಯಂ ವಿಜಾನತಾ ।
ಇಷ್ಟಕಾನಾಮಪಕ್ವಾನಾಂ ಪಂಕಬಂಧೋ ವಿಧೀಯತೇ ॥ ೧೩ ॥

---

೯-೧೨ ಆದುದರಿಂದ ಶುದ್ಧಹೃದಯನಾಗಿಯೂ, ಸತ್ಯಪ್ರಿಯನಾಗಿಯೂ ಇರುವ ಯೋಗ್ಯನಾದವನನ್ನು ಹುಡುಕಿ ಅವನಿಂದಲೇ ಗೂಡಿಗೆ ಅಗ್ನಿಯನ್ನು ಹಾಕಿಸಬೇಕು ಹೀಗೆ ಪಕ್ವವಾಗಿ ತಣ್ಣಗಾದ ಇಟ್ಟಿಗೆಗಳನ್ನು ಕಟ್ಟಡಕ್ಕೆ ಅನುಗುಣವಾದ ಸನ್ನಿವೇಶದಲ್ಲಿ ಸರಿಯಾಗಿ ಸ್ಥಾನಕ್ಕೆ ತಕ್ಕಂತೆ ಯೋಜಿಸಿ ಯಾವ ಆಕಾರವೂ ಇಲ್ಲದೆ ಇದ್ದ ಇಟ್ಟಿಗೆಗಳಲ್ಲಿ ಆಯಾಯ ಆಕಾರವನ್ನು ಉಂಟುಮಾಡಬೇಕು ಈ ರೀತಿ ಇಟ್ಟಿಗೆಗಳ ಯೋಜನೆಯಿಂದ ಒಂದೊಂದಾಗಿಯೇ ಆಯಾಯ ಸ್ಥಾನಕ್ಕೆ ತಕ್ಕಂತೆ ಸೇರಿಸಿ ಆಯಾಯ ಆಕಾರಗಳನ್ನು ತೋರ್ಪಡಿಸಬೇಕು ಈ ರೀತಿಯಾದ ವಿನ್ಯಾಸವು ಇಟ್ಟಿಗೆಯಂತಿರುವ ಕಲ್ಲುಗಳಿಗೂ ಸಮಾನ, ಇಟ್ಟಿಗೆಗಳ ಗೃಹಗಳಲ್ಲಿ ಮರಗಳನ್ನೂ ಯುಕ್ತಿಯಿಂದ ತೋರಿಸಬೇಕು,

೧೩-೧೪ ಮರಗಳನ್ನು ಮನೆಗಳಲ್ಲಿ ಜೋಡಿಸುವಾಗ ಕಬ್ಬಿಣದ ಕೀಲು ಬಂಧದಿಂದ ಚನ್ನಾಗಿ ಸೇರಿಸಬೇಕು ಚನ್ನಾಗಿ ಪಕ್ವವಾಗದಿರುವ ಇಟ್ಟಿಗೆಗಳನ್ನು ಕೆಸರುಮಣ್ಣಿನಿಂದ ಕಟ್ಟಬೇಕು. ಪಕ್ವವಾಗಿರುವ ಇಟ್ಟಿಗೆಗಳನ್ನೂ, ಕಲ್ಲುಗಳನ್ನೂ

**ಇಷ್ಟಕಾನಾಂ ತು ಪಕ್ವಾನಾಂ ಶಿಲಾನಾಂ ಚ ನರಾಧಿಪ ।**
**ಬಂಧಃ ಕಾರ್ಯಃ ಪ್ರಯತ್ನೇನ ವಜ್ರಲೇಪಕೃತಃ ಶುಭಃ　　॥ ೧೪ ॥**

**ಪಕ್ವೇಷ್ಟಕಾನಾಂ ರಚನಾ ಮಯೋಕ್ತಾ**
**ಸುಧಾನ್ವಿತಾ ಸೈವ ಭವೇನ್ನರೇಂದ್ರ ।**
**ಸುಧಾ ಶಿಲಾನಾಂ ತ್ರಿದಶಾಧಿವಾಸೇ**
**ಸುಧಾಶಿಲಾ ನೈವ ಗೃಹೇಷು ದೇಯಾ　　॥ ೧೫ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ ವಜ್ರಸಂವಾದೇ ಇಷ್ಟಕಾಪರೀಕ್ಷಾ ನಾಮ ಏಕನವತಿತಮೋಽಧ್ಯಾಯಃ**

---

ಸಹ ವಜ್ರಲೇಪವೆಂಬ ವಿಧಾನದಿಂದ ದೃಢವಾಗಿರುವಂತೆ ಪ್ರಯತ್ನಪೂರ್ವಕವಾಗಿ ಕಟ್ಟಬೇಕು. ನಾನು ಹೇಳಿರುವ ಪಕ್ವವಾದ ಇಟ್ಟಿಗೆಗಳನ್ನು ಸುಣ್ಣದಿಂದಲೂ ಕಟ್ಟಬಹುದು. ಆದರೆ ಶಿಲೆಯ ಬಂಧವು ಸುಣ್ಣದಿಂದಲೇ ನೆರವೇರಿಸಿದಲ್ಲಿ ಅದನ್ನು ದೇವಾಲಯಕ್ಕಾಗಿಯೇ ಉಪಯೋಗಿಸಬೇಕು. ಗಾರೆಯಿಂದ ಕಟ್ಟಿದ ಶಿಲಾಗೃಹಗಳನ್ನು ಮನುಷ್ಯರಿಗಾಗಿ ನಿರ್ಮಿಸಬಾರದು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದದಲ್ಲಿ ಇಟ್ಟಿಗೆಗಳ ಪರೀಕ್ಷಣವೆಂಬ ತೊಂಭತ್ತೊಂದನೆಯ ಅಧ್ಯಾಯ ಮುಗಿದಿದೆ.

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ದ್ವಿನವತಿತಮೋಽಧ್ಯಾಯಃ ||

**|| ಮಾರ್ಕಂಡೇಯ ಉವಾಚ ||**

**ಅತಃ ಪರಂ ಪ್ರವಕ್ಷ್ಯಾಮಿ ವಜ್ರಲೇಪವಿಧಿಂ ತವ ।**
**ತಿಂದುಕಾಂಶ್ಚ ಕಪಿತ್ಥಾಂಶ್ಚ ಆಮಾನ್ಸಂಹೃತ್ಯಯತ್ನತಃ || ೧ ||**

**ಶಾಲ್ಮಲೀನಾಂ ತಥಾ ಪುಷ್ಪಂ ಸಲ್ಲಕೀ ಬೀಜಮೇವ ಚ ।**
**ಧನುಷಶ್ಚ ತಥಾ ವಲ್ಕಂ ವಚಾಂ ಚ ಮನುಜೇಶ್ವರ || ೨ ||**

**ಏತೇಷಾಂ ಸಮವೇತಾನಾಂ ಸಮಾನಾಂ ಮನುಜೋತ್ತಮ ।**
**ತೋಯಮಷ್ಟಗುಣಂ ಕ್ವಾಥಮಷ್ಟಭಾಗಾವಶೇಷಿತಂ || ೩ ||**

---

### ತೊಂಭತ್ತೆರಡನೆಯ ಅಧ್ಯಾಯ.

೧-೫ ಮಾರ್ಕಂಡೇಯರು ಹೇಳುತ್ತಾರೆ,--ಇನ್ನು ಮುಂದ ಈ ಬಂಧಕ್ಕ ಸಾಧಕವಾದ ವಜ್ರಲೇಪದ ವಿಧಾನವನ್ನು ಹೇಳುತ್ತೇನೆ ಅಪಕ್ವವಾದ ತೂಬರ ಕಾಯಿ, ಬೇಲದಕಾಯಿ ಇವುಗಳನ್ನು ಸಂಗ್ರಹಿಸಿ ಇವುಗಳನ್ನೂ ಮತ್ತು ಬೂರಗದ ಹೂವು, ಸರ್ಜಬೀಜ, (ಆನೆಬೇಲದ ಬೀಜ) ಧನ್ವನವೃಕ್ಷದ ಚಕ್ಕೆ, ಬಜೆ, ಇವು ಗಳನ್ನೂ ಸಮಪರಿಮಾಣದಲ್ಲಿ ಸೇರಿಸಿ ಒಟ್ಟು ಪರಿಮಾಣದ ಎಂಟರಷ್ಟು ನೀರಿನಲ್ಲಿ ನೆನಸಿ, ಕುದಿಸಿ ಎಂಟನೇ ಒಂದು ಭಾಗಕ್ಕೆ ಇಳಿಸಿಕೊಳ್ಳಬೇಕು ಆನಂತರ ಅದರಲ್ಲಿ ಹಾಕಬೇಕಾದ ಪದಾರ್ಥಗಳನ್ನೂ ಹೇಳುತ್ತೇನೆ. ಸಲ್ಲಕಿಯ ಎಲೆಗಳು,

ತತಸ್ತತ್ರ ಕ್ಷಿಪೇದ್ದ್ರವ್ಯಂ ಶೃಣು ತಚ್ಚ ಸಮಾಸತಃ ।
ಸಲ್ಲಕೀನಾಂ ತು ವಿನ್ಯಾಸಂ ವತ್ಸಕಸ್ಯ ಚ ಗುಗ್ಗುಲಂ ॥ ೪ ॥

ಭಲ್ಲಾತಕಾನಿ ಬಿಲ್ವಾನಿ ಕುಮ್ಮರುಂ ಸರ್ಜಮೇವ ಚ ।
ಅತಸೀಂ ವಸುತಪ್ತೋಯಂ ವಜ್ರಲೇಪಃ ಪ್ರಕೀರ್ತಿತಃ ॥ ೫ ॥

ಲಾಕ್ಷಾಂ ಚ ಕುಂದುರುಂ ಚೈವ ಗೃಹಧೂಮಂ ತಥೈವ ಚ ।
ಕಪಿತ್ಥಬಿಲ್ವಮಧ್ಯಾನಿ ತಥಾ ನಾಗಫಲಂ ನೃಪ ॥ ೬ ॥

ಬಲಾಂ ಚ ಮಧುಕಂ ಚೈವ ಕಿಂಚಾಪಂ ಮದನಂ ತಥಾ ।
ಮಂಜಿಷ್ಠಾಸಲ್ಲಕಂ ಸರ್ಜಂ ವಜ್ರಲೇಪಃ ಪ್ರಕೀರ್ತಿತಃ ॥ ೭ ॥

ವಿಷಾಣಾನಿ ಗವಾಂ ರಾಜನ್ಮಹಿಷಾಣಾಂ ತಥೈವ ಚ ।
ಅಜಾನಾಂ ಚ ತಥಾ ಚರ್ಮ ಮಾಹಿಷ್ಯಂ ಗವ್ಯಮೇವ ಚ ॥ ೮ ॥

---

ಶ್ರೀವಾಸವೃಕ್ಷದ ಹಾಲುಮಡ್ಡಿ, ಗುಗ್ಗುಳ ಗೇರುಬೀಜ, ಬಿಲ್ವಪತ್ರೆ ಕಾಯಿಗಳು, ದೇವದಾರು ಮರದ ಹಾಲುಮಡ್ಡಿ, ಆನೆಬೇಲದ ಬೀಜ, ಅಗಸಬೀಜ ಇವುಗಳನ್ನೂ ಪುಡಿಮಾಡಿ, ಸೇರಿಸಿ ಈ ರೀತಿ ಮಾಡಿದ ಈ ವಜ್ರಲೇಪಕ್ಕೆ ವಸುತಪ್ತವೆಂದು ಹೆಸರು

೬-೭ ಅರಗು, ದೇವದಾರು ಮರದ ಹಾಲುಮಡ್ಡಿ, ಶ್ಯಾಮಾ ಎಂಬ ಗೃಹ ಧೂಪ (ಇಲ್ಲಣ), ಬೇಲದ ಮತ್ತು ಬಿಲ್ವದಕಾಯಿನ ತಿರುಳು, ನಾಗಕೇಸರ ಮರದ ಕಾಯಿ, ಬಜೆ, ಹಿಪ್ಪೆಯಕಾಯಿ, ಮಂಗಾರಗಿಡದ ಕಾಯಿ, ಮಂಜಿಷ್ಠೆ, ಸಲ್ಲಕೀ ಗಿಡದ ಕಾಯಿ, ಸರ್ಜದ ಕಾಯಿ ಇವುಗಳಿಂದ ಮೇಲೆ ಹೇಳಿದ ಕ್ರಮದಿಂದಲೂ ವಜ್ರಲೇಪವನ್ನು ಮಾಡಬಹುದು

೮-೧೧ ದನಗಳ ಮತ್ತು ಎಮ್ಮೆಗಳ ಕೊಂಬುಗಳು, ಆಡು, ಹಸು, ಎಮ್ಮೆ, ಇವುಗಳ ಚರ್ಮಗಳು, ರಸ, ಬೇವು, ಬೇಲ ಇವುಗಳೂ ವಜ್ರಲೇಪಕ್ಕೆ ಸಾಧಕ

ರಸನಿಂಬಕಪಿತ್ಥಾನಿ ವಜ್ರಲೇಪಃ ಪ್ರಕೀರ್ತಿತಃ ।
ಅಷ್ಟೌ ಭಾಗಾಸ್ತು ನಾಗಸ್ಯ ಕಾಂಸ್ಯಭಾಗದ್ವಯಂ ತಥಾ ॥ ೯ ॥

ರೀತಿಭಾಗಂ ಚ ಕಥಿತೋ ವಜ್ರಲೇಪಸ್ತಥೈವ ಚ ।
ಸುಧಾಪಕ್ವಾ ತತಃಕ್ಲಿನ್ನಾ ಗವ್ಯಚರ್ಮಸಮನ್ವಿತಾ ॥ ೧೦ ॥

ಖರರೋಮಯುತಾ ರಾಜನ್ವಜ್ರಲೇಸ್ತಥೈವ ಚ ।
ತೇಷಾಮೇಕೈಕಸಂಯುಕ್ತಾಃ ಕಾರ್ಯಾಃ ಶೈಲಗೃಹಾ ನೃಪ ॥ ೧೧ ॥

ಪಕ್ವೇಷ್ಟಕಗತಾಶ್ಚೈವ ಸ್ಥಾಯಿನೋ ಮನುಜೋತ್ತಮ ।
ವಜ್ರಲೇಪಯುತಾಹ್ಯೇತೇ ಭವನ್ತ್ಯಪಿ ದೃಢಾಸ್ತಥಾ ॥ ೧೨ ॥

ತಿಷ್ಠನ್ತಿ ಸುಮಹಾರಾಜ ಸಂವತ್ಸರ ಶತಾನ್ಯಪಿ ।
ಸಹಸ್ರಾಣಿ ಚ ಧರ್ಮಜ್ಞ ಚಾಯುತಾನ್ಯರ್ಬುಧಾನಿ ಚ ॥ ೧೩ ॥

ಸುಧಾವರ್ಣೇನ ಸರ್ವತ್ರ ಲೇಪಂ ದದ್ಯಾತ್ತಥಾ ಬಹಿಃ ।
ತತಶ್ಚ ತಾಂ ಸುಧಾಂ ದದ್ಯಾಚ್ಛೋಭಾರ್ಥಮರಿಮರ್ದನ ॥ ೧೪ ॥

---

ಗಳಾಗುತ್ತವೆ ಸೀಸದ ಎಂಟುಭಾಗ. ಎರಡುಭಾಗದಷ್ಟು ಕಂಚು, ಅದರಷ್ಟೆ ಹಿತ್ತಾಳೆ ಇವೂ ವಜ್ರಲೇಪಕ್ಕೆ ಸಾಧಕಗಳಾಗುತ್ತವೆ ಸುಣ್ಣದಲ್ಲಿ ನೆನಸಿ ಅದ ರಲ್ಲಿಯೇ ಪಕ್ವವಾದ ಹಸುವಿನ ಚರ್ಮ ಇದು ಕತ್ತೆಯ ರೋಮದಿಂದ ಕೂಡಿದಲ್ಲಿ ಇಂತಹ ಸುಣ್ಣವೂ ವಜ್ರಲೇಪವೆನಿಸುತ್ತದೆ ಇಂತಹ ವಜ್ರಲೇಪಗಳಲ್ಲಿ ಯಾವು ದಾದರೊಂದು ಲೋಪದಿಂದ ಶಿಲಾಗೃಹಗಳನ್ನು ನಿರ್ಮಿಸಬೇಕು

೧೨-೧೪ ಪಕ್ವವಾದ ಇಟ್ಟಿಗೆಗಳಿಂದ ಕಟ್ಟಿದ ಕಟ್ಟಡಗಳೂ ಸ್ಥಿರವಾಗಿರುತ್ತವೆ ಅದರಲ್ಲಿಯೂ ವಜ್ರಲೇಪದಿಂದ ಕೂಡಿದ ಇಂತಹ ಕಟ್ಟಡಗಳು ಅವಕ್ಕಿಂತಲೂ ಬಹಳ ಗಟ್ಟಿಯಾಗಿ ದೃಢವಾಗಿ ಇರುತ್ತವೆ ಇವು ನೂರಾರು ವರ್ಷ, ಸಾವಿರ, ಹತ್ತುಸಾವಿರ ವರ್ಷ ಪರ್ಯಂತರವೂ ಇರುತ್ತವೆ. ಹೊರಗಡೆಯಲ್ಲಿ ಸುಣ್ಣದ ಬಣ್ಣವಿರುವ ವಜ್ರಲೇಪವನ್ನು ಎಲ್ಲಾ ಭಾಗಕ್ಕೂ ಕೊಡಬೇಕು ಅದರ ಮೇಲೆ ಕೇವಲ

**ವಜ್ರಲೇಪವಿಧಾನಂ ತು ಪ್ರೋಕ್ತಂ ಸಮ್ಯಕ್ತಯಾ ತವ ।**
**ದೇವಾಯತನಮುಖ್ಯೇಷು ತಥಾ ಚ ಭವನೇಷು ಚ ॥ ೧೫ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ**
**ವಜ್ರಸಂವಾದೇ ವಜ್ರಲೇಪನಿರೂಪಣಂ ನಾಮ**
**ದ್ವಿನವತಿತಮೋಽಧ್ಯಾಯಃ**

---

ಅಂದಕ್ಕಾಗಿ ಸುಣ್ಣವನ್ನು ಹಚ್ಚಬೇಕು ಮುಖ್ಯವಾಗಿ ದೇವಾಲಯಗಳಲ್ಲಿಯೂ ಇತರ ಭವನಗಳಲ್ಲಿಯೂ ಮಾಡಬೇಕಾದ ವಜ್ರಲೇಪವಿಧಾನವನ್ನು ಈ ರೀತಿ ನಿನಗೆ ವಿಶದವಾಗಿ ಹೇಳಿರುತ್ತೇನೆ

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರ ಸಂವಾದದಲ್ಲಿ ವಜ್ರಲೇಪನಿರೂಪಣವೆಂಬ ತೊಂಭತ್ತೆರಡನೆಯ
ಅಧ್ಯಾಯ ಮುಗಿದಿದೆ



॥ ಓಂ ॥

॥ ಶ್ರೀ ಹಯಗ್ರೀವಾಯ ನಮಃ ॥

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### ॥ ತ್ರಿನವತಿತಮೋಽಧ್ಯಾಯಃ ॥

॥ ಮಾರ್ಕಂಡೇಯ ಉವಾಚ ॥

ಕೃತೇ ತು ದೇವಾಯತನವಿಧಾನಂ ನಾಭವತ್ಕ್ಷಿತೌ ।
ಕೇವಲಂ ಹಿ ತದಾಹ್ಯಾಸೀತ್ಪ್ರತ್ಯಕ್ಷೇಣ ನರಾಧಿಪ ॥ ೧ ॥

ಪ್ರತ್ಯಕ್ಷೇಣಾಪಿ ದೃಶ್ಯನ್ತೇ ತ್ರೇತಾದ್ವಾಪರಯೋರ್ಜನಾಃ ।
ದೇವಾನಾಂ ಪ್ರತಿಮಾಃ ಕೃತ್ವಾ ಪೂಜಯನ್ತಿ ಯಥಾವಿಧಿ ॥ ೨ ।

ಗೃಹೇ ಪ್ರತಿಷ್ಠಾ ತತ್ರಾಪಿ ತ್ರೇತಾಯಾಂ ತು ಪ್ರವರ್ತಿತಾ ।
ದ್ವಾಪರೇ ಚಾಪ್ಯರಣ್ಯೇಷು ಋಷಿಭಿಸ್ತು ತತಃ ಕೃತಾ । ೩ ॥

---

### ತೊಂಭತ್ತಮೂರನೆಯ ಅಧ್ಯಾಯ.

೧-೪ ಮಾರ್ಕಂಡೇಯರು ಹೇಳುತ್ತಾರೆ.—ಕೃತಯುಗದಲ್ಲಿ ದೇವಾಲಯದ ನಿರ್ಮಾಣವೇ ಭೂಮಂಡಲದಲ್ಲಿರಲಿಲ್ಲ, ಆಗ ದೇವತೆಗಳನ್ನು ಕೇವಲ ಪ್ರತ್ಯಕ್ಷ ದಿಂದಲೇ ತಿಳಿಯಲು, ಅನುಭವಿಸಲು ಅವಕಾಶವಿತ್ತು ಅನಂತರ ತ್ರೇತಾದ್ವಾಪರ ಯುಗಗಳಲ್ಲಿ ಅಂತಹ ದೇವತೆಗಳನ್ನು ಪ್ರತ್ಯಕ್ಷದಿಂದ ತಿಳಿಯಲೂ ಅವಕಾಶವಿತ್ತು ಅಂತಹ ದೇವತೆಗಳ ಪ್ರತಿಮೆಗಳನ್ನು ಪೂಜಿಸುತ್ತಲೂ ಯಥಾವಿಧಿಯಾಗಿ ಸತ್ಕರಿಸು ತ್ತಲೂ ಇದ್ದರು ಆಲಯಗಳಲ್ಲಿ ಪೂಜಿಸುವ ಪದ್ಧತಿಯೂ, ಪ್ರತಿಷ್ಠಾದಿಪದ್ಧತಿಯೂ ತ್ರೇತಾಯುಗದಲ್ಲಿಯೇ ಪ್ರಚಾರಕ್ಕೆ ಬಂದಿತು ದ್ವಾಪರಯುಗದಲ್ಲಿ ಅಂತಹ

ತೇಷಾಂ ಸಂಪೂಜನಂ ನಿತ್ಯಂ ಸಿದ್ಧ್ಯೈಸ್ತು ಕ್ರಿಯತೇ ನೃಪ ।
ಪ್ರತಿಷ್ಠಾಮಾತ್ರಕರಣಾನ್ನಿರ್ವೃತಾ ಋಷಯಸ್ತು ತೇ　　॥ ೪ ॥

ಕಲೌ ಪ್ರವೃತ್ತಃ ಸರ್ವೋಽಯಂ ಪ್ರತಿಷ್ಠಾಕರಣೋ ಜನಃ ।
ಜ್ಞಾನಂ ಪರಂ ಕೃತಯುಗೇ ತ್ರೇತಾಯಾಂ ಚ ತಪಃ ಪರಂ　　॥ ೫ ॥

ದ್ವಾಪರೇ ತು ತಥಾ ಜ್ಞೇಯಂ ಪ್ರತಿಷ್ಠಾ ತು ಕಲೌ ಯುಗೇ ।
ದೇವತಾವೇಶ್ಮಪೂರ್ವಾಣಿ ನಗರಾಣಿ ಕಲೌ ಯುಗೇ　　॥ ೬ ॥

ಕರ್ತವ್ಯಾನಿ ಮಹೀಪಾಲೈಃ ಸ್ವರ್ಗಲೋಕಮಭೀಪ್ಸುಭಿಃ ।
ರಾಜಾ ತು ಸರ್ವೋ ನಗರಂ ನ ಕುರ್ಯಾನ್ನೃಪಸತ್ತಮ　　॥ ೭ ॥

ಯೋ ನ ರಾಜಾ ಹತೋ ಯುದ್ಧೇ ಸ ಪುರಂ ಕರ್ತುಮರ್ಹತಿ ।
ರೂಪಕಂ ಚ [1]ಸುನಾಮಾಖ್ಯಂ ಕುರ್ಯಾದ್ರಾಜಾ ತಥಾಪ್ಯಸೌ　　॥ ೮ ॥

---

ಪ್ರತಿಷ್ಠೆಗಳನ್ನು ಮಹರ್ಷಿಗಳು ತಾವು ವಾಸಿಸುವ ಅರಣ್ಯಗಳಲ್ಲಿ ಮಾಡತೊಡಗಿದರು ಅಂತಹ ಪ್ರತಿಮೆಗಳ ಪೂಜಾದಿಗಳನ್ನು ಸಿದ್ಧರೇ ನಿತ್ಯವೂ ಮಾಡುತ್ತಿದ್ದರು

೪-೮　ಋಷಿಗಳು ಅಂತಹ ಪ್ರತಿಷ್ಠಾಮಾತ್ರದಿಂದಲೇ (ಪೂಜಾದಿಗಳನ್ನು ನಡಸದೇ ಇದ್ದರೂ) ಕೃತಕೃತ್ಯರಾದರು　ಅನಂತರ ಪ್ರತಿಷ್ಠಾಪೂರ್ವಕವಾದ ದೇವ ಪೂಜಾದಿ ವಿಧಿಗಳೆಲ್ಲವೂ ಕಲಿಯುಗದಲ್ಲಿ ಜನರಲ್ಲಿ ಪ್ರಚಾರಕ್ಕೆ ಬಂದುವು　ಕೃತ ಯುಗದಲ್ಲಿ ಜ್ಞಾನವು ಹೆಚ್ಚಾಗಿದ್ದಿತು　ತ್ರೇತಾಯುಗದಲ್ಲಿ ತಪಸ್ಸೇ ಹೆಚ್ಚಾಗಿದ್ದಿತು ದ್ವಾಪರದಲ್ಲಿಯೂ, ಕಲಿಯುಗದಲ್ಲಿಯೂ ಪ್ರತಿಷ್ಠಾವಿಧಿಯೇ ಹೆಚ್ಚಾಗಿ ಪ್ರಚಾರಕ್ಕೆ ಬಂದಿದೆ　ಸ್ವರ್ಗವೆಂಬ ಪುರುಷಾರ್ಥವನ್ನು ಅಪೇಕ್ಷಿಸುವ ರಾಜರುಗಳು ಕಲಿಯುಗ ದಲ್ಲಿ ನಗರಗಳನ್ನು ನಿರ್ಮಿಸಬೇಕು　ಹಾಗೆ ನಿರ್ಮಿಸುವಾಗ ಮೊದಲು ದೇವಾಲಯ ಗಳನ್ನು ಕಟ್ಟಿಯೇ ನಗರಗಳನ್ನು ಕಟ್ಟಬೇಕು　ಎಲ್ಲಾ ರಾಜರೂ ನಗರವನ್ನು ನಿರ್ಮಾಣಮಾಡಲು ಅರ್ಹರಾಗುವುದಿಲ್ಲ　ಯಾವ ರಾಜನು ಯುದ್ಧದಲ್ಲಿ ಶತ್ರು ಗಳಿಂದ ಕೊಲ್ಲಲ್ಪಡದೆ ಶತ್ರುವಿಜಯದಿಂದ ಜಯಶಾಲಿಯಾಗುವನೋ ಅಂತಹ ಶೂರನೇ ನಗರ ನಿರ್ಮಾಣಕ್ಕೆ ಅಧಿಕಾರಿಯಾಗುತ್ತಾನೆ　ಇಂತಹ ರಾಜನು ಒಳ್ಳೆಯ ಹೆಸರಿನಿಂದ ಕೂಡಿದ ಸ್ಮಾರಕನಗರವನ್ನು ನಿರ್ಮಿಸಬೇಕು

---

1 ಇಲ್ಲಿ ಸ್ವನಾಮಾಖ್ಯಂ ಎಂದು ಪಾಠವಿರಬಹುದೆಂದು ತೋರುತ್ತದೆ

ದುರ್ಗಂ ಸರ್ವೇಣ ಕರ್ತವ್ಯಂ ರಾಜ್ಞಾ ಭೂಪತಿಸತ್ತಮ ।
ಭೂಮಿದಾನಾದಿಭಿರ್ಯಸ್ತು ಕುರ್ಯಾತ್ಸುವಿಹಿತಂ ಮುದಾ ॥ ೯ ॥

ಪ್ರತಿಷ್ಠಾಂ ಸಕಲಾಂ ಕುರ್ಯಾದನ್ಯಥಾ ಪಾಪಭಾಗ್ಭವೇತ್ ।
ತತ್ಕೃತಾಯಾಂ ಸುರಾರ್ಚಾಯಾಮನಿಷ್ಟಂ ಸ್ಯಾತ್ಕಲೌಯುಗೇ ॥ ೧೦ ॥

ಕೃತಂ ತು ತದನಿಷ್ಟಂ ಸ್ಯಾಜ್ಜನ್ಮಾಂತರಶತೇಷ್ವಪಿ ।
ಕೃತತ್ರೇತಾದ್ವಾಪರೇಷು ಪ್ರತಿಷ್ಠಾಕರಣಾತ್ಫಲಂ ॥ ೧೧ ॥

ಯಸ್ಮಾತ್ತ್ರೇಷು ಕೃತಾಮರ್ಚಾಂ ಸಿದ್ಧಾಃ ಸಂಪೂಜಯಂತ್ಯಲಂ ।
ಕಲೌ ಕೃತಾಯಾಮರ್ಚಾಯಾಂ ಸಿದ್ಧಪೂಜಾ ನ ವಿದ್ಯತೇ ॥ ೧೨ ॥

ತಸ್ಮಾತ್ಸುವಿಹಿತಾಂ ಕುರ್ಯಾದ್ಭೂಮಿದಾನಾದಿಭಿಃ ಕಲೌ ।
ಯೇನ ರಾಜ್ಞಾ ಹತೋ ರಾಜಾ ನಾನ್ಯೋ ಯುಧಿ ಭವೇತ್ಕಲೌ ॥ ೧೩ ॥

---

೯–೧೨ ದುರ್ಗಸ್ಥಾನಗಳನ್ನು ಮಾತ್ರ ಎಲ್ಲಾ ರಾಜರೂ ನಿರ್ಮಿಸಬಹುದು. ದೇವತಾಪ್ರತಿಷ್ಠೆಯನ್ನು ಮಾಡುವ ಅರ್ಹತೆಯುಳ್ಳ ದೊರೆಯು ಭೂಮಿದಾನಾದಿಗಳಿಂದ ಪೂಜಾದಿಗಳಿಗೆ ಸರ್ವ ವಿಧವಾದ ಅನುಕೂಲ್ಯವನ್ನು ಉಂಟುಮಾಡಿಯೇ ಆಲಯ ನಿರ್ಮಾಣಪೂರ್ವಕವಾದ ಪ್ರತಿಷ್ಠಾವಿಧಿಯನ್ನು ಸಮಗ್ರ ವಿಧಿಪೂರ್ವಕ ನಡೆಸಬೇಕು ಹಾಗಿಲ್ಲದೆ ಪ್ರತಿಷ್ಠಾ ಮಾತ್ರದಿಂದ ಅವನು ಪಾಪ ಭಾಗಿಯೇ ಆಗುತ್ತಾನೆ ಅವನು ಪ್ರತಿಷ್ಠಾ ಮಾತ್ರದಿಂದ ನಿರ್ಮಿಸಿದ ದೇವತಾ ವಿಗ್ರಹವು ಕಲಿಯುಗದಲ್ಲಿ ಅನಿಷ್ಟ ಫಲವನ್ನೇ ಕೊಡುತ್ತದೆ ಆ ಅನಿಷ್ಟ ಫಲವು ದೊರೆಗೆ ಜನ್ಮ ಜನ್ಮಾಂತರಗಳಲ್ಲಿಯೂ ಅನುವರ್ತಿಸುತ್ತದೆ ಕೃತ, ತ್ರೇತಾ, ದ್ವಾಪರ ಯುಗಗಳಲ್ಲಿ ಪ್ರತಿಷ್ಠಿತ ದೇವತಾ ವಿಗ್ರಹಗಳನ್ನು ಸಿದ್ಧರು ಪೂಜಿಸುತ್ತಿದ್ದುದರಿಂದ ಇತರರು ಮಾಡಿದ ಪ್ರತಿಷ್ಠಾ ಮಾತ್ರವೇ ಫಲಕಾರಿಯಾಗುತ್ತಿತ್ತು ಕಲಿಯುಗದಲ್ಲಿ ಪ್ರತಿಷ್ಠಿಸಿದ ದೇವತಾ ವಿಗ್ರಹಗಳಿಗೆ ಸಿದ್ಧರ ಪೂಜೆಯು ಲಭಿಸುವುದಿಲ್ಲ ಆದುದರಿಂದ ಕಲಿಯುಗದಲ್ಲಿ ರಾಜರು ಮಾಡುವ ದೇವತಾ ವಿಗ್ರಹ ಪ್ರತಿಷ್ಠೆಗಳನ್ನು ಭೂಮಿದಾನಾದಿ ಪೂಜಾ ಸೌಕರ್ಯಪೂರ್ವಕವಾಗಿಯೇ ಮಾಡಬೇಕು

೧೩–೧೬. ರಾಜನಾದ ಯಾವನೊಬ್ಬನು ತಾನು ರಾಜನಾಗಿದ್ದು ರಾಜನಾಗಿರುವ ಮತ್ತೊಬ್ಬನನ್ನು ಯುದ್ಧದಲ್ಲಿ ಕೊಲ್ಲುತ್ತಾನೆಯೋ ಅಂತಹ ವಿಜಯ

**ಪ್ರತಿಷ್ಠಾ ತೇನ ಕರ್ತವ್ಯಾ ನಗರೇ ಪೂರ್ವನಿರ್ಮಿತೇ ।**
**ಅನುಜ್ಞಾಂ ನೃಪತೇಃ ಪ್ರಾಪ್ಯ ಕುರ್ಯಾದನ್ಯೋಽಪಿ ಯಾದವ　　|| ೧೪ ||**

**ಸ್ಥಿರಾಂ ಪ್ರತಿಷ್ಠಾಂ ಗೃಹ್ಯಾಯಾಂ ನೃಪಾನುಜ್ಞಾ ನ ಕಾರಣಂ ।**
**ಪರಪ್ರಣೀತಾಂ ಯಸ್ತ್ವರ್ಚಾಂ ಸಕುರ್ಯಾತ್ಪುನರೇವ ತು　　|| ೧೫ ||**

**ವಿಧಾನಂ ಭೂಮಿದಾನಾದ್ಯಂ ಕುರ್ಯಾತ್ತತ್ರ ನ ಶಕ್ತಿತಃ ।**
**ದ್ವಿಗುಣಂ ಫಲಮಾಪ್ನೋತಿ ಕುಲಂ ಚಾಪಿ ಸಮುದ್ಧರೇತ್　　|| ೧೬ ||**

**ಕೃತ್ವಾ ಸುವಿಹಿತಾಮರ್ಚಾಂ ಪ್ರತಿಷ್ಠಾಪ್ಯ ಯಥಾವಿಧಿ ।**
**ಇಷ್ಟಾಪೂರ್ತೇನ ಧರ್ಮೇಣ ನರೋ ಯುಜ್ಯತ್ಯಸಂಶಯಂ　　|| ೧೭ ||**

**ರಾಜಸೂಯಾಶ್ವಮೇಧಾನಾಂ ಫಲೇನ ಚ ನರಾಧಿಪ ।**
**ಕೃತೇ ತ್ರೇತಾಯುಗೇ ರಾಜನ್ ದ್ವಾಪರೇ ಚ ಸುರೋತ್ತಮಾಃ　　|| ೧೮ ||**

---

ಶಾಲಿಯಾದ ರಾಜನು ಮೊದಲು ರಾಜನಾಗಿದ್ದವನಿಂದ ನಿರ್ಮಿತವಾಗಿದ್ದ ನಗರದಲ್ಲಿ ದೇವತಾ ಪ್ರತಿಷ್ಠೆಯನ್ನು ನೆರವೇರಿಸಬೇಕು ಹೀಗೆ ರಾಜ ವಿಜಯಿಯಾಗದಿರುವ ಮತ್ತಾರೂ ಕಲಿಯುಗದಲ್ಲಿ ನಗರದಲ್ಲಿ ಪ್ರತಿಷ್ಠೆಯನ್ನು ಮಾಡಬಾರದು ಅವನ ಅಪ್ಪಣೆಯನ್ನು ಹೊಂದಿ ಮತ್ತೊಬ್ಬರೂ ಸ್ಥಿರವಾದ ಪ್ರತಿಷ್ಠೆಯನ್ನು ಮಾಡಬಹುದು ಮನೆಗಳಲ್ಲಿ ಮಾಡಬಹುದಾದ ದೇವತಾ ಪ್ರತಿಷ್ಠೆಗೆ ರಾಜನ ಅಪ್ಪಣೆಯನ್ನು ಹೊಂದಬೇಕಾಗಿಲ್ಲ ಇಂತಹ ಸಂದರ್ಭದಲ್ಲಿ ಯಾವನು ಮತ್ತೊಬ್ಬನಿಂದ ನಿರ್ಮಿಸಲ್ಪಟ್ಟಿದ್ದ ದೇವಗೃಹ ಪ್ರತಿಮಾದಿಗಳಿಗೆ ಪುನಃ ಪ್ರತಿಷ್ಠೆಯನ್ನು ಮಾಡುತ್ತಾನೆಯೋ ಅಂತಹವನು ಭೂಮಿದಾನಾದಿ ವಿಧಾನಗಳನ್ನು ಯಥಾಶಕ್ತಿ ಮಾಡಬೇಕೆಂದ ಅವಶ್ಯಕತ ಇಲ್ಲ ಈ ವಿಧವಾಗಿ ಪುನಃ ಪ್ರತಿಷ್ಠಾದಿಗಳನ್ನು ನೆರವೇರಿಸಿದವನಿಗೆ ಫಲವೂ ದ್ವಿಗುಣವಾಗಿ ಲಭಿಸುತ್ತದೆ ಅವನ ವಂಶವೂ ಪಾಪಕೂಪದಿಂದ ಉದ್ಧೃತವಾಗುತ್ತವೆ

೧೭-೨೦ ದೇವತೆಯ ಸುಂದರವಾದ ವಿಗ್ರಹವನ್ನು ಮಾಡಿಸಿ ಯಥಾವಿಧಿಯಾಗಿ ಪ್ರತಿಷ್ಠೆಯನ್ನು ನೆರವೇರಿಸಿದ ಮಹಾಪುರುಷನು ಯಾಗವೇ ಮೊದಲಾದ ಶ್ರೌತಕರ್ಮಗಳಿಂದಲೂ, ವಾಪೀಕೂಪಾದಿ ದೃಷ್ಟೋಪಕಾರಗಳಿಂದಲೂ ಉಂಟಾಗಬಹುದಾದ ಪುಣ್ಯವಿಶೇಷವನ್ನು ಹೊಂದುತ್ತಾನ ರಾಜಸೂಯ, ಅಶ್ವಮೇಧ ಮುಂತಾದ ಮಹಾಯಾಗಗಳ ಫಲವನ್ನೂ ಹೊಂದುತ್ತಾನೆ ಎಲ್ಲೈ ಧೊರೆಯೇ

ಆಗಚ್ಛಂತಿ ನೃಲೋಕೇಽಸ್ಮಿನ್ ಸಶರೀರಾ ದಿವೌಕಸಃ ।
ನಾಗಚ್ಛಂತಿ ಕಲೌ ಯಸ್ಮಾತ್ಸಶರೀರಾಃ ಕಥಂಚ ನ ॥ ೧೯ ॥

ಆಗಚ್ಛಂತಿ ಪ್ರತಿಷ್ಠಾಸು ದ್ವಿಜೈರಾವಾಹಿತಾಸ್ತತಃ ।
ತಸ್ಮಾತ್ಕಲೌ ಪ್ರಯತ್ನೇನ ಪ್ರತಿಷ್ಠಾಂ ಕಾರಯೇದ್ಬುಧಃ ॥ ೨೦ ॥

ಅರ್ಚಾಸ್ಥೈಸ್ತ್ರಿದಶೈರ್ಲೋಕಃ ಕಲೌ ಸರ್ವೋ ಹಿ ಪಾಲ್ಯತೇ ।
ಅರ್ಚಾಗತಾಶ್ಚ ಗೃಹ್ಣನ್ತಿ ಕೃತದೇವಪ್ರತಿಷ್ಠಿತಾಃ ॥ ೨೧ ॥

ತಸ್ಮಾತ್ಕಲೌ ಪ್ರಯತ್ನೇನ ಪ್ರತಿಷ್ಠಾಕರಣಂ ಹಿತಂ ।
ಯತ್ನಾತ್ಸುವಿಹಿತಂ ಕುರ್ಯಾದ್ಭೂಮಿದಾನಾದಿಭಿಸ್ಸದಾ ॥ ೨೨ ॥

ಇಷ್ಟ್ವಾ ಯಜ್ಞೈರ್ಯಥಾ ಯಾನ್ತಿ ಮಾನವಾಸ್ತ್ರಿದಿವಾಲಯಂ ।
ತಥೈವ ರಾಜನ್ ಗಚ್ಛನ್ತಿ ಕೃತದೇವಪ್ರತಿಷ್ಠಕಾಃ ॥ ೨೩ ॥

ಕೃತ, ತ್ರೇತ, ದ್ವಾಪರ ಯುಗಗಳಲ್ಲಿ ಸುರಶ್ರೇಷ್ಠರಾದ ದೇವತೆಗಳು ತಮ್ಮ ದಿವ್ಯ ಶರೀರದಿಂದಲೇ ಮನುಷ್ಯಲೋಕಕ್ಕ ಬರುತ್ತಿದ್ದರು ಕಲಿಯುಗದಲ್ಲಿ ಅವರು ಸಶರೀರವಾಗಿ ಭೂಲೋಕಕ್ಕೆ ಬರುವ ಸಂಭವವಿಲ್ಲ ಪ್ರತಿಷ್ಠಾದಿ ಸಂಸ್ಕಾರಗಳಿಂದ ಬ್ರಾಹ್ಮಣರಿಂದ ಆವಾಹನೆ ಮಾಡಲ್ಪಟ್ಟು ಅದೃಶ್ಯವಾದ ತಮ್ಮ ಶರೀರದಿಂದ ಇಲ್ಲಿಗ ಬಂದು ಪ್ರತಿಮೆಯಲ್ಲಿ ಸಾನಿಧ್ಯ ಹೊಂದುತ್ತಾರೆ ಆದುದರಿಂದ ವಿವೇಕಿಯಾದವನು ಕಲಿಯುಗದಲ್ಲಿ ದೇವತಾ ಪ್ರತಿಷ್ಠೆಯನ್ನು ಯಥಾವಿಧಿಯಾಗಿ ಮಾಡಿಸಲೇಬೇಕು

೨೧–೨೩ ಕಲಿಯುಗದಲ್ಲಿ ವಿಗ್ರಹಗಳಲ್ಲಿ ಸಾನ್ನಿಧ್ಯ ಹೊಂದಿರುವ ದೇವತೆಗಳಿಂದಲೇ ಲೋಕರಕ್ಷಣೆಯುಂಟಾಗುತ್ತದೆ ಪ್ರತಿಷ್ಠೆಯಿಂದ ಸಾನ್ನಿಧ್ಯಹೊಂದಿರುವ ದೇವತೆಗಳೇ ವಿಗ್ರಹದಲ್ಲಿದ್ದುಕೊಂಡು ಎಲ್ಲಾ ವಿಧವಾದ ಪೂಜೋಪಚಾರಗಳನ್ನು ಸ್ವೀಕರಿಸುತ್ತಾರೆ ಆದುದರಿಂದ ಪ್ರಯತ್ನಪೂರ್ವಕವಾಗಿಯಾದರೂ ಪ್ರತಿಷ್ಠಾ ವಿಧಾನವು ಕಲಿಯುಗದಲ್ಲಿ ಹಿತಕರವಾಗುತ್ತದೆ ಆದುದರಿಂದ ಭೂಮಿದಾನಾದಿಗಳಿಂದ ಅಂತಹ ಪ್ರತಿಷ್ಠಾದಿಗಳನ್ನು ಪ್ರಯತ್ನಪಟ್ಟಾದರೂ ಸರಿಯಾಗಿ ನಡೆಸಬೇಕು ಯಜ್ಞಾದಿಗಳನ್ನು ಮಾಡಿದ ಮನುಷ್ಯರು ಹೇಗೆ ಸ್ವರ್ಗವನ್ನು ಹೊಂದುತ್ತಾರೆಯೋ ಹಾಗೆಯೇ ದೇವಪ್ರತಿಷ್ಠೆಯನ್ನು ಮಾಡಿದವರೂ ಸ್ವರ್ಗಸುಖಕ್ಕೆ ಭಾಗಿಗಳಾಗುತ್ತಾರ

ತಸ್ಮಾತ್ಕಲೌ ಪ್ರತಿಷ್ಠಾನಂ ಕರ್ತವ್ಯಂ ಭೂರಿದಕ್ಷಿಣಂ ।
ಯತ್ನಾತ್ಸುವಿಹಿತಂ ಕೃತ್ವಾ ಭೂಮಿದಾನಾದಿಭಿಃ ಶುಭಾ ॥ ೨೪ ॥

ದುರ್ಗೇ ಪ್ರತಿಷ್ಠಾ ಕರ್ತವ್ಯಾ ನಗರೇ ಚ ತಥಾ ಶುಭೇ ।
ನಿತ್ಯಮಾಪಣವೀಥ್ಯಗ್ರೇ ನಾನ್ಯತ್ರೇತಿ ನರಾಧಿಪ ॥ ೨೫ ॥

ಗ್ರಾಮೇ ವಾ ಯದಿವಾ ಘೋಷೇ ನಾಸ್ತಿ ಯತ್ರಾಪಣಂ ನೃಪ ।
ತತ್ರೋದ್ಯಾನೇ ಬಹಿಃ ಕಾರ್ಯಾ ಗ್ರಾಮಮಧ್ಯೇನ ಕಾರಯೇತ್ ॥ ೨೬ ॥

ನದೀತೀರೇಷು ಕರ್ತವ್ಯಾ ವನೇಷೂಪವನೇಷು ಚ ।
ಸರಸಾಂ ಚೈವತೀರೇಷು ಗಿರೀಣಾಂ ಶಿಖರೇಷು ಚ ॥ ೨೭ ॥

ಉಪತ್ಯಕಾಸು ರಮ್ಯಾಸು ಗುಹಾಸು ಚ ವಿಶೇಷತಃ ।
ಏತೇಷು ಯಾಂತಿ ಸಾನ್ನಿಧ್ಯಂ ಸ್ಥಾನೇಷು ತ್ರಿದಿವೌಕಸಃ ॥ ೨೮ ॥

ಆದುದರಿಂದ ಕಲಿಯುಗದಲ್ಲಿ ಮಹಾದಕ್ಷಿಣೆಯೊಡಗೂಡಿ ಪ್ರತಿಷ್ಠಾವಿಧಿಯನ್ನು ನೆರವೇರಿಸಲೇ ಬೇಕು ಭೂಮಿದಾನಾದಿಗಳನ್ನು ಪ್ರಯತ್ನದಿಂದ ನಡೆಸಿ ಪರ್ವತಾದಿ ದುರ್ಗಪ್ರದೇಶ ಹಾಗಯೇ ಸರಿಯಾದ ನಗರ ಇಂತಹ ಶುಭಸ್ಥಳಗಳಲ್ಲಿ ದೇವತಾ ಪ್ರತಿಷ್ಠೆಯನ್ನು ಯಥಾವಿಧಿಯಾಗಿ ನಡೆಸಬೇಕು ನಗರದಲ್ಲಿ ಮುಂಭಾಗದಲ್ಲೇ ಪ್ರತಿಷ್ಠಿಸಬೇಕು ಕಡೆಯಲ್ಲಿ ಪ್ರಶಸ್ತವಲ್ಲ

೨೬-೩೦ ಗ್ರಾಮಗಳಲ್ಲಿಯೂ, ಸಣ್ಣ ಹಳ್ಳಿಗಳಲ್ಲಿಯೂ ಅಂಗಡಿಗಳೇ ಎಲ್ಲಿ ಇಲ್ಲದಿರುವವೋ ಅಂತಹ ಸ್ಥಳಗಳಲ್ಲಿ, ಊರಿನ ಹೊರಗಿನ ಉದ್ಯಾನದಲ್ಲಿ ದೇವತಾ ಗೃಹವನ್ನು ನಿರ್ಮಿಸಿ ಪ್ರತಿಷ್ಠಿಸಬೇಕು ಗ್ರಾಮದಲ್ಲಿ ರಚಿಸಬಾರದು, ನದಿಗಳ ತೀರ ಗಳಲ್ಲಿಯೂ, ವನಗಳಲ್ಲಿಯೂ, ಉದ್ಯಾನಗಳಲ್ಲಿಯೂ, ಸರೋವರದ ತೀರದಲ್ಲಿಯೂ, ಪರ್ವತಗಳ ಶಿಖರದಲ್ಲಿಯೂ, ಪರ್ವತಗಳ ರಮ್ಯವಾದ ತಪ್ಪಲು ಪ್ರದೇಶಗಳಲ್ಲಿಯೂ, ವಿಶೇಷವಾಗಿ ಗುಹೆಗಳಲ್ಲಿಯೂ ಇಂತಹ ಸ್ಥಾನಗಳಲ್ಲಿ ದೇವತೆಗಳು ಸಾನ್ನಿಧ್ಯ ಹೊಂದುತ್ತಾರೆ ಜಲಾಶಯವಿಲ್ಲದ ದೇಶಗಳಲ್ಲಿ ದೇವತೆಗಳು ಯಾವಾಗಲೂ

**ಜಲಾಶಯವಿಹೀನೇಷು ದೇಶೇಷು ಮನುಜೋತ್ತಮ ।**
**ಸಾನ್ನಿಧ್ಯಂ ನೈವ ಕುರ್ವಂತಿ ಕದಾಚಿತ್ತ್ರಿದಿವೌಕಸಃ ॥ ೨೯ ॥**

**ತಥಾ ಸುರಗೃಹಂ ಕಾರ್ಯಂ ಯಥಾ ವಾಮೇ ಜಲಾಶಯಂ ।**
**ಪುರಸ್ತಾದ್ವಾ ಭವೇತ್ತಸ್ಯ ನಾನ್ಯಥಾ ಮನುಜಾಧಿಪ ॥ ೩೦ ॥**

**ಸಮುನ್ನಾತ್ತತ್ತ ಜಲಂ ಶಸ್ತಂ ದ್ವೀಪೇ ದೇವಗೃಹೇ ಕೃತೇ ।**
**ಯತ್ರ ದೇವಗೃಹಂ ಕಾರ್ಯಂ ತತ್ರ ಭೂಮಿಂ ಪರೀಕ್ಷಯೇತ್ ॥ ೩೧ ॥**

**ಶ್ವೇತಾ ರಕ್ತಾ ತಥಾ ಪೀತಾ ಕೃಷ್ಣಾ ವರ್ಣಕ್ರಮಾನ್ವಿತಾ ।**
**ಕುಶಾಭಿಶ್ಚ ಶರೈಃ ಕಾಶೈಃ ದೂರ್ವಾಭಿಶ್ಚ ತಥಾ ಯುತಾ ॥ ೩೨ ॥**

**ಮಧುರಾ ಚ ಕಷಾಯಾ ಚ ತಥಾ ತು ಲವಣಾ ಚ ಯಾ ।**
**ವರ್ಣಕ್ರಮಾದ್ಧಿತಾ ಭೂಮಿಃ ಸರ್ವೇಷಾಂ ಶೃಣ್ವತಃ ಪರಂ ॥ ೩೩ ॥**

ಸಾನ್ನಿಧ್ಯ ಹೊಂದುವುದೇ ಇಲ್ಲ ದೇವಾಲಯಕ್ಕೆ ಎಡಭಾಗದಲ್ಲಿಯಾಗಲಿ ಮುಂಭಾಗದಲ್ಲಿಯಾಗಲಿ ಜಲಾಶಯವಿರುವಂತೆಯೇ ಆಲಯವನ್ನು ನಿರ್ಮಿಸಬೇಕು ಬೇರೆ ರೀತಿಯಲ್ಲಿರಬಾರದು

೩೧–೩೩ ಎಲ್ಲಾ ಕಡೆಗಳಲ್ಲಿಯೂ ನೀರಿರುವ ದ್ವೀಪದಲ್ಲಿ ದೇವಗೃಹ ನಿರ್ಮಾಣವು ಪ್ರಶಸ್ತವಾದ್ದು ಎಲ್ಲಿ ದೇವ ಗೃಹವನ್ನು ನಿರ್ಮಿಸಬೇಕಾಗುವುದೋ ಅಲ್ಲಿ ಭೂಮಿಯನ್ನು ಪರೀಕ್ಷಿಸಬೇಕು ಬ್ರಾಹ್ಮಣಾದಿ ವರ್ಣಕ್ರಮದಂತೆ ಬಿಳುಪಾಗಿಯೂ ಕೆಂಪಾಗಿಯೂ, ಹೊಂಬಣ್ಣವಾಗಿಯೂ, ಕಪ್ಪಾಗಿಯೂ ಇರುವ ಭೂಮಿಯು ಪ್ರಶಸ್ತವಾಗುತ್ತದೆ ಹಾಗೆಯೇ ಆ ಭೂಮಿಗಳು ದರ್ಭೆಯಿಂದಲೂ, ಜೊಂಡಿನಿಂದಲೂ, ಕಾಶದ ಹೂವುಗಳಿಂದಲೂ, ಗರಿಕೆಯಿಂದಲೂ ವರ್ಣಕ್ರಮಕ್ಕೆ ತಕ್ಕಂತೆ ಕೂಡಿರಬೇಕು ಹಾಗೆಯೇ ವರ್ಣಕ್ರಮಕ್ಕೆ ತಕ್ಕಂತೆ ಮಧುರರಸದಿಂದಲೂ, ಕಷಾಯರಸದಿಂದಲೂ ಕೊನೆಯ ಎರಡು ವರ್ಣಕ್ಕೆ ಲವಣರಸದಿಂದಲೂ ಕೂಡಿದ್ದಲ್ಲಿ ಪ್ರಶಸ್ತವೆನಿಸುತ್ತದೆ ಮುಳ್ಳುಗಿಡಗಳಿಂದಲೂ ಕಲ್ಲು ಮತ್ತು ಹೆಂಟೆಗಳಿಂದ ಕೂಡಿಯೂ, ಸ್ವಚ್ಛವಾಗಿಲ್ಲದೆಯೂ, ನಿಮ್ನೋನ್ನತವಾಗಿಯೂ, ನಡೆಯಲು ಕಷ್ಟಕರವಾಗಿಯೂ,

**ಕಂಟಕಿದ್ರುಮಸಂಕೀರ್ಣಾ ಶರ್ಕರಾಲೋಷ್ಟಸಂಯುತಾ ।**
**ಅಶುಭ್ರಾ ವಿಷಮಾ ದುರ್ಗಾ ಸವಲ್ಮೀಕಾ ತಥಾ ಚ ಯಾ** ॥ ೩೪ ॥

**ಮೂಷಿಕಾವಾಸಬಹುಲಾ ಪಿಪೀಲಕಗಣಾನ್ವಿತಾ ।**
**ನಿತ್ಯಂ ಚ ಶಕಟಚ್ಛಿನ್ನಾ ಪ್ಲುತಾ ಯಾ ಚ ಪುರೋದಕೈಃ** ॥ ೩೫ ॥

**ಅಘಾತಸೂನಾ ಭೂಮಿಶ್ಚ ಬಂಧನಾಗಾರಸಂಯುತಾ ।**
**ವಸತಿರ್ಯತ್ರ ದಗ್ಧಾ ಚ ವಿದ್ಯುತಾ ವಹ್ನಿನಾಪಿ ವಾ** ॥ ೩೬ ॥

**ವಸತಾಂ ದೃಷ್ಟಿದೋಷಾ ಚ ಕೂರ್ಮಪೃಷ್ಠಾ ತಥೈವ ಚ ।**
**ತ್ರಿಕೋಣಾ ಸ್ರಗ್ವಿಹೀನಾ ಚ ಶೂರ್ಪಾಕಾರಾ ತಥಾ ಚ ಯಾ** ॥ ೩೭ ॥

**ದಕ್ಷಿಣೇನ ತಥಾ ನಿಮ್ನಾ ನಿಮ್ನಾ ಪೃಷ್ಠತಏವ ಚ ।**
**ಪುರಾಂಬುಗ್ರಾಹಿಣೀ ಯಾ ಚ ಸುಶಿರಾ ಚ ತಥಾ ನೃಪ** ॥ ೩೮ ॥

---

ಹುತ್ತದಿಂದ ಕೂಡಿಯೂ, ಇಲಿಯ ಬಿಲಗಳಿಂದ ತುಂಬಿಯೂ, ಇರುವೆ ಗೂಡುಗಳಿಂದ ಸಿಬಿಡವಾಗಿಯೂ, ಯಾವಾಗಲೂ ಗಾಡಿಯ ಸಂಚಾರದಿಂದ ಒಡೆದುಹೋಗಿಯೂ, ನಗರದ ನೀರಿನಿಂದ (ಗ್ರಾಮುಸಾರ) ಕೂಡಿಯೂ, ಕಟುಕರ (ಪ್ರಾಣಿವಧಕ್ಕಾಗಿಮಾಡಿರುವ) ಪ್ರದೇಶದಲ್ಲಿಯೂ, ಕಾರಾಗಾರಸಮೀಪದಲ್ಲಿಯೂ, ಮತ್ತು—

೩೬–೪೦ ಯಾವ ಸ್ಥಳದಲ್ಲಿ ಮನೆಗಳು ಸಿಡಿಲಿನಿಂದಾಗಲಿ, ಬೆಂಕಿಯಿಂದಾಗಲಿ ಸುಟ್ಟುಹೋಗಿರುವುವೋ ಅಂತಹ ಸ್ಥಲದಲ್ಲಿಯೂ ಮತ್ತು ವಾಸಿಸುವವರ ದೃಷ್ಟಿಯಿಂದ ದೂಷಿತವಾಗಿರುವ ಸ್ಥಳದಲ್ಲಿಯೂ, ಆಮೆಯ ಬೆನ್ನಿನಂತೆ ಉಬ್ಬಾಗಿರುವ ಸ್ಥಳದಲ್ಲಿಯೂ ಆಲಯವನ್ನು ಕಟ್ಟಕೂಡದು ಮತ್ತು ತ್ರಿಕೋಣವಾದ ಸ್ಥಳವನ್ನೂ, ಹೂವಿನ ಗಿಡಗಳಿಲ್ಲದಿರುವ ಸ್ಥಳವನ್ನೂ ಮೊರದಂತೆ ಆಕಾರ ಹೊಂದಿರುವ ಸ್ಥಳವನ್ನೂ ತ್ಯಜಿಸಬೇಕು ಮತ್ತು ಯಾವ ಭೂಮಿಯು ದಕ್ಷಿಣ ದಿಕ್ಕಿಗೆ ಇಳುಜಾರಾಗಿರುತ್ತದೆಯೋ ಮತ್ತು ಹಿಂಭಾಗದಲ್ಲಿಯೂ ಹಾಗೆಯೇ ಇರುತ್ತದೆಯೋ ಅಂತಹ ಭೂಮಿಯೂ, ಊರಿನ ನೀರನ್ನು ಗ್ರಹಿಸುವ ಭೂಮಿಯೂ ಶೀತಲವಾದ ಭೂಮಿಯೂ, ಅಗೆದ ಸ್ಥಳವು ಆ ಮಣ್ಣಿನಿಂದಲೇ ತುಂಬಿಹೋಗಿ ಒಳ್ಳೆಯ ಮಣ್ಣನ್ನು ಪುನಃ ತುಂಬಲು ಅವಕಾಶವಿಲ್ಲದಿರುವ ಸ್ಥಳಗಳಲ್ಲಿಯೂ, ಅಗೆದ ಹಳ್ಳದಲ್ಲಿ ದೀಪವನ್ನೋ ಅಥವಾ ಹೂವಿನಮಾಲಿಕೆಯನ್ನೋ ಇಟ್ಟಲ್ಲಿ ಆ ದೀಪವು ಎಲ್ಲಿ ನಂದಿ

**ಖಾತಂ ಚ ಸುಮೃದಾ ಯತ್ರ ಪೂರ್ಯತೇ ನಪುನಸ್ತಥಾ ।**
**ಖಾತೇ ಯತ್ರ ಕೃತಂ ದೀಪಂ ಪ್ರಮ್ಲಾನಿಮುಪಗಚ್ಛತಿ ॥ ೩೯ ॥**

**ಮಾಲ್ಯಂ ಚ ಮ್ಲಾಯತೇ ಖಾತೇ ತಾಂ ಭೂಮಿಂ ಪರಿವರ್ಜಯೇತ್ ।**
**ಖಾತೇ ತೋಯೇನ ಪೂರ್ಣೇ ಚ ಯತ್ರ ತೋಯಂ ನ ತಿಷ್ಠತಿ ॥ ೪೦ ॥**

**ತಾಂ ಭೂಮಿಂ ವರ್ಜಯೇದ್ಯತ್ನಾದ್ದುರ್ಗನ್ಧಾ ಚ ತಥಾಪಿ ಯಾ ।**
**ಪ್ರಾದುದಕ್ಪ್ರವಣಾ ಶಸ್ತಾ ಸ್ನಿಗ್ಧಾ ಚ ಸುದೃಢಾ ತಥಾ ॥ ೪೧ ॥**

**ಖಾತೇಽಧಿಕಾ ಚ ಮೃದ್ಯತ್ರ ಪೂರ್ಯಮಾಣೇ ಭವೇನ್ನೃಪ ।**
**ದೀಪೋ ನ ಮ್ಲಾಯತೇ ಯತ್ರ ನ್ಯಸ್ತಂ ಚ ಕುಸುಮಂ ತಥಾ ॥ ೪೨ ॥**

**ತೋಯಂ ಸಂತಿಷ್ಠತೇ ಖಾತೇ ಯತ್ರ ಕಾಲಾನ್ತರಂ ಬಹುಃ ।**
**ಸಾ ಪ್ರಶಸ್ತಾ ಮಹೀ ಜ್ಞೇಯಾ ಸುಗಂಧಾ ಸುಸ್ವನಾ ತಥಾ ॥ ೪೩ ॥**

**ಭುವಃ ಪರೀಕ್ಷಣಂ ಕುರ್ಯಾದ್ದಿವಸೇಽತಿಶುಭೇ ತಥಾ ।**
**ಭುವಃ ಪರೀಕ್ಷಣೇ ಯತ್ರ ಮಂಗಲ್ಯದ್ರವ್ಯದರ್ಶನಂ ॥ ೪೪ ॥**

---

ಹೋಗುವುದೋ ಮತ್ತು ಮಾಲಿಕೆಯು ಬಾಡಿಹೋಗುವುದೋ ಮತ್ತು ಅಗೆದ ಹಳ್ಳದಲ್ಲಿ ನೀರನ್ನು ತುಂಬಿದಲ್ಲಿ ಆ ನೀರು ಒಡನೆಯೇ ಬತ್ತಿಹೋದಲ್ಲಿಯೂ ಮತ್ತು ದುರ್ಗಂಧವಿರುವ ಭೂಮಿಯಲ್ಲಿಯೂ ಸಹ ಆಲಯವನ್ನು ನಿರ್ಮಿಸಬಾರದು

೪೧–೪೪ ಪೂರ್ವ ಮತ್ತು ಉತ್ತರ ದಿಕ್ಕಿಗೆ ತಗ್ಗಾಗಿರುವ ಭೂಮಿಯೂ, ಜಿಡ್ಡಿನಿಂದ ಕೂಡಿಯೂ, ದೃಢವಾಗಿಯೂ ಇರುವ ಭೂಮಿಯು ಪ್ರಶಸ್ತವಾದ್ದು ಅಗೆದ ಮಣ್ಣನ್ನು ಅದೇ ಹಳ್ಳದಲ್ಲಿ ತುಂಬಿದಲ್ಲಿ ಮಣ್ಣು ಎಲ್ಲಿ ಹೆಚ್ಚಾಗಿ ಉಳಿದು ಹೋಗುವುದೋ, ಅಗೆದ ಸ್ಥಳದಲ್ಲಿಟ್ಟ ದೀಪವೂ ಹೂವೂ ಬಾಡಿಹೋಗುವುದಿಲ್ಲವೋ ಅಗೆದ ಸ್ಥಳದಲ್ಲಿ ನೀರೂ ಬಹುಕಾಲ ಹಾಗೆಯೇ ನಿಲ್ಲುತ್ತದೆಯೋ ಅಂತಹ ಭೂಮಿಯೂ ಸುಗಂಧವುಳ್ಳ ಒಳ್ಳೆಯ ಧ್ವನಿಯುಳ್ಳ ಭೂಮಿಯೂ ಪ್ರಶಸ್ತ ಭೂಮಿಯ ಪರೀಕ್ಷೆಯನ್ನು ಶುಭದಿವಸದಲ್ಲಿ ಮಾಡಬೇಕು ಭೂಮಿಯನ್ನು ಪರೀಕ್ಷಿಸುವ ಪ್ರಾರಂಭದಲ್ಲಿಯೇ ಮಂಗಲಕರವಾದ ವಸ್ತುಗಳ ದರ್ಶನವೂ ಮಂಗಲಶಬ್ದಶ್ರವಣವೂ

ಶ್ರವಣಂ ವಾ ತಥೈವ ಸ್ಯಾತ್ಸಾಶುಭಾ ಸ್ಯಾದ್ವಸುಂಧರಾ ।
ನ ತಾಂ ರಾಜನ್ ಪರೀಕ್ಷೇತ ಪ್ರಶಸ್ತಾ ಸಾ ಪ್ರಕೀರ್ತಿತಾ ॥ ೪೫ ॥

ಅಮಂಗಲ್ಯಂ ತಥಾ ದೃಷ್ಟ್ವಾ ಶ್ರುತ್ವಾ ವಾ ನೃಪಸತ್ತಮ ।
ಭುವಃ ಪರೀಕ್ಷಣಂ ತತ್ರ ನ ಕಾರ್ಯಮಶುಭಾ ಹಿ ಸಾ ॥ ೪೬ ॥

ಶುಭಾ ಮಹೀ ಯತ್ರ ಭವೇನ್ನೃವೀರ
ಕಾರ್ಯಾಪ್ರತಿಷ್ಠಾ ಭವತೀಹ ತತ್ರ ।
ಕೃತಾ ಭವೇತ್ತತ್ರ ನರೇಂದ್ರಚಂದ್ರ
ಹಿತಾಯ ಕರ್ತುಃ ಸ್ವವಿವೃದ್ಧಯೇ ಚ ॥ ೪೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಭೂಮಿಪರೀಕ್ಷಾ ನಾಮ
ತ್ರಿನವತಿತಮೋಽಧ್ಯಾಯಃ

ಉಂಟಾದಲ್ಲಿ ಅಂತಹ ಭೂಮಿಯು ಪ್ರಶಸ್ತವೆಂದೇ ತಿಳಿಯಬೇಕು ಅದನ್ನು ಯಾವ ವಿಧದಲ್ಲಿಯೂ ಪರೀಕ್ಷಿಸಬಾರದು

೪೬-೪೭ ಅಮಂಗಲಕರವಾದ ವಸ್ತುಗಳ ದರ್ಶನ ಮತ್ತು ಅಮಂಗಲ ಶಬ್ದದ ಶ್ರವಣ ಇವುಗಳು ಪರೀಕ್ಷಾಕಾಲದಲ್ಲಿಯೇ ಉಂಟಾದಲ್ಲಿ ಅಂತಹ ಭೂಮಿಯ ಪರೀಕ್ಷಣವನ್ನೇ ನಿಲ್ಲಿಸಬೇಕು ಅದು ಅಪ್ರಶಸ್ತವೆಂದೇ ತಿಳಿಯಬೇಕು ಎಲ್ಲಿ ದೊರೆಯೇ, ಈ ರೀತಿಯಾದ ಪರೀಕ್ಷೆಗಳಿಂದ ಭೂಮಿಯು ಪ್ರಶಸ್ತವೆಂದು ತಿಳಿದು ಬರುವ ಸ್ಥಳದಲ್ಲಿಯೇ ಪ್ರತಿಷ್ಠೆಯನ್ನು ನೆರವೇರಿಸಬೇಕು ಹಾಗೆ ಮಾಡಿದ ದೇವತಾ ಪ್ರತಿಷ್ಠೆಯೇ ಕರ್ತೃವಿನ ಹಿತಕ್ಕೂ ಬಹು ವಿಧವಾದ ಅಭ್ಯುದಯಕ್ಕೂ ಕಾರಣವಾಗುತ್ತದ

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಭೂಮಿಪರೀಕ್ಷ ಎಂಬ ತೊಂಭತ್ತಮೂರನೆಯ
ಅಧ್ಯಾಯ ಮುಗಿದಿದ



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಚತುರ್ನವತಿತಮೋಽಧ್ಯಾಯಃ ||

|| ಮಾರ್ಕಂಡೇಯ ಉವಾಚ ||

**ಶುಭಾಂ ಪರೀಕ್ಷ್ಯ ವಸುಧಾಂ ತತ್ರ ಕುರ್ಯಾತ್ಸುರಾಲಯಂ |**
**ಆದೌ ತಾಂ ಶೋಧಯೇದ್ವಿದ್ವಾನ್ ದಿವಸೇ ಗುಣಸಂಯುತೇ || ೧ ||**

**ತತ್ರ ದೇಶಂ ಶುಭಂ ವಿದ್ವಾನ್ ಗೋಮಯೇನೋಪಲೇಪಯೇತ್ |**
**ತತಃ ಸಂಪೂಜಯೇತ್ತತ್ರ ದೇವದೇವಂ ವಿನಾಯಕಂ || ೨ ||**

**ತಥಾ ಚ ವಿಶ್ವಕರ್ಮಾಣಂ ಭಾಂಡಂ ತದುಪಯೋಗಿ ಚ |**
**ಪಲಲೋಲ್ಲೂಪಿಕಾಭಕ್ಷ್ಯ ಕುಲ್ಮಾಷೋದನಪರ್ಪಟೈಃ || ೩ ||**

---

### ತೊಂಭತ್ತನಾಲ್ಕನೆಯ ಅಧ್ಯಾಯ.

೧-೪ ಪ್ರಶಸ್ತವಾದ ಭೂಮಿಯನ್ನು ಪರೀಕ್ಷಿಸಿ ನೋಡಿ ಅಲ್ಲಿಯೇ ದೇವಾಲಯವನ್ನು ನಿರ್ಮಿಸಬೇಕು ಮೊದಲು ಶುಭದಿನದಲ್ಲಿ ಆ ಸ್ಥಲವನ್ನು ಶೋಧಿಸಬೇಕು ಅಲ್ಲಿ ಪ್ರಶಸ್ತವಾದ ಒಂದು ಸ್ಥಳದಲ್ಲಿ ಸಗಣಿಯಿಂದ ಸಾರಿಸಿ ಶುದ್ಧಿಮಾಡಬೇಕು ಅಲ್ಲಿ ದೇವತಾಶ್ರೇಷ್ಠನಾದ ವಿನಾಯಕನನ್ನು ಚೆನ್ನಾಗಿ ಪೂಜಿಸಬೇಕು ವಿಶ್ವಕರ್ಮನನ್ನೂ ಆಲಯ ನಿರ್ಮಾಣಕ್ಕೆ ಉಪಕರಣಗಳಾದ ಭಾಂಡಗಳನ್ನೂ ಅಲ್ಲಿಟ್ಟು ಪೂಜಿಸಬೇಕು. ಮಾಂಸ, ಹಪ್ಪಳ, ಭಕ್ಷ್ಯ, ಹಲಸಂದೆ ಕಾಳಿನೊಡನೆ ಪಕ್ವವಾದ ಅನ್ನ, ಪೂರಿ, ಮತ್ತು ಪಾಯಸ ಇವುಗಳಿಂದಲೂ

**ಪರಮಾನ್ನೇನ ಮೋಧ್ಯೈಶ್ಚ ಪುಷ್ಪಧೂಪಾನುಲೇಪನೈಃ ।**
**ಪೂಜಯಿತ್ವಾ ಚ ದೈವಜ್ಞಂ ಸಾತ್ವತಂ ಸ್ಥಪತಿಂ ತಥಾ ॥ ೪ ॥**

**ಭುವಃ ಸಂಶೋಧನಂ ಕುರ್ಯಾರ್ಯಥಾವತ್ಪೃಥಿವೀಪತಿಃ ।**
**ತಾವತ್ಸಂಶೋಧಯೇದ್ಭೂಮಿಂ ನಿಜಾ ಯಾವತ್ಪ್ರದೃಶ್ಯತೇ ॥ ೫ ॥**

**ತಥಾ ಸಂಶೋಧಯೇದ್ವಿದ್ವಾನ್ ಯಾವತ್ಸ್ಯಾಚ್ಛಲ್ಯವರ್ಜಿತಾ ।**
**ತತಸ್ತು ಪೂರಯೇತ್ಪಶ್ಚಾತ್ ದೃಢಂ ಮೃತ್ತಿಕಯಾ ಪುನಃ ॥ ೬ ॥**

**ತದ್ವರ್ಣಯಾ ತಯಾ ಶಸ್ತಾ ಯಸ್ಯ ವರ್ಣಸ್ಯ ಕೀರ್ತಿತಾ ।**
**ಅಶಲ್ಯಯಾ ಮೃತ್ತಿಕಯಾ ಪೂರಯೇತ್ಸುದೃಢಂ ಪುನಃ ॥ ೭ ॥**

**ಕೃತ್ವಾ ತು ಪೂರಿತಂ ದೇಶಂ ಸುದೃಢಂ ಸುಸಮಂ ತತಃ ।**
**ಸುಸೂಕ್ಷ್ಮಶಲ್ಯಜ್ಞಾನಾರ್ಥಂ ಕುರ್ಯಾಚ್ಛಲ್ಯಪರೀಕ್ಷಣಂ ॥ ೮ ॥**

ಶುದ್ಧವಾದ ಪುಷ್ಪ, ಧೂಪ, ಗಂಧಾದಿಗಳಿಂದಲೂ ಜ್ಯೋತಿಷಿಕ, ಆಗಮಿಕ, ಸ್ಥಪತಿ ಇವರನ್ನೂ ಪೂಜಿಸಿ ಸತ್ಕರಿಸಬೇಕು ಅನಂತರ ದೊರೆಯಾದವನು ಯಥಾವಿಧಿಯಾಗಿ ಭೂಮಿಯ ಸಂಶೋಧನವನ್ನು ನಡೆಸಬೇಕು

೫-೯ ಭೂಮಿಯ ಸ್ವಾಭಾವಿಕವಾದ ಘಟ್ಟಿಯಾದ ಭಾಗವು ಸಿಕ್ಕುವವರೆಗೂ ಶೋಧಿಸಬೇಕು ಆ ಶೋಧನೆಯು ಮುಂದೆ ನಾವು ಹೇಳುವ ಶಲ್ಯಗಳಾವುವೂ ಇಲ್ಲದಿರುವಂತೆ ಇರಬೇಕು ಅನಂತರ ಆ ಹಳ್ಳವನ್ನು ಪುನಃ ಮಟ್ಟಿನಿಂದ ಮುಚ್ಚಬೇಕು ಮುಚ್ಚುವ ಮಣ್ಣೂ ಸಹ ಯಾವ ವರ್ಣಕ್ಕೆ ಯಾವ ವರ್ಣದ ಮಣ್ಣು ಪ್ರಶಸ್ತವೆಂದು ಹೇಳಲಾಗಿದೆಯೋ ಅಂತಹ ವರ್ಣದ ಮಣ್ಣೇ ಆಗಿರಬೇಕು ಅಂತಹ ಮಣ್ಣೂ ಸಹ ಶಲ್ಯವರ್ಜಿತವಾಗಿರಬೇಕು ಚೆನ್ನಾಗಿಯೂ ಮುಚ್ಚಬೇಕು ಮುಚ್ಚಿದ ಮೇಲೆಯೂ ಎಲ್ಲಾ ಕಡೆಯಲ್ಲಿಯೂ ದೃಢವಾಗಿರುವಂತೆ ಮರ್ದಿಸಬೇಕು ಅಂತಹ ಮಣ್ಣಿನಲ್ಲಿಯೂ ಬಹಳ ಸೂಕ್ಷ್ಮವಾದ ಶಲ್ಯಗಳೇನಾದರೂ ಇದ್ದಲ್ಲಿ ಬುದ್ಧಿಬಲದಿಂದ ಶಲ್ಯಪರೀಕ್ಷೆಯನ್ನೂ ಮಾಡಬೇಕು ಆ ಶಲ್ಯ ಪರೀಕ್ಷಾಕ್ರಮವನ್ನು ಮುಂದೆ ನಾವು ಹೇಳುತ್ತೇವೆ ಹಾಗೇನಾದರೂ ಶಲ್ಯಗಳಿದ್ದಲ್ಲಿ ಅವನ್ನು ಪ್ರಯತ್ನ

ಯಥಾ ವಕ್ಷ್ಯಾಮ್ಯಹಂ ರಾಜನ್ ತಥಾ ಯತ್ನೇನ ಬುದ್ಧಿಮಾನ್ ।
ಯದಿಸ್ಯಾಚ್ಛಲ್ಯಸಂಯುಕ್ತಾ ಶಲ್ಯಮುದ್ಧೃತ್ಯ ಯತ್ನತಃ ॥ ೯ ॥

ಪುನಃ ಸಂಪೂರಯೇದ್ವಿದ್ವಾನ್ ಯತ್ನಾಚ್ಛುಭ್ರಮೃದಾ ನೃಪ ।
ಏವಂ ಸಂಶೋಧ್ಯ ಭೂಮಿಂ ತು ಕುಂಭಂ ಸಂಸ್ಥಾಪಯೇತ್ತತಃ ॥ ೧೦ ॥

ಶಿಲಾನ್ಯಾಸಂ ತು ಕುರ್ವೀತ ತತ್ರೈವಾಹ್ನಿ ಚತುರ್ದಿಶಂ ।
ಪಕ್ವೇಷ್ಟಾರಚಿತೇ ಕಾರ್ಯಾಸ್ತಾ ಏವ ತು ಚತುರ್ದಿಶಂ ॥ ೧೧ ॥

ಮೃನ್ಮಯೇ ಚೇಷ್ಟಕಾನ್ಯಾಸಂ ಕರ್ತವ್ಯಂ ನ ಚದಾರುಣಾ ।
ಶುಭೇ ದಿವಸನಕ್ಷತ್ರೇ ಮುಹೂರ್ತೇಚಾಭಿಪೂಜಿತೇ ॥ ೧೨ ॥

ಕುಂಭಾಕಾರಾಂ ಶಿಲಾಂ ಕುರ್ಯಾಚ್ಛೈಲದೇವಗೃಹೇ ಶುಭೇ ।
ಅನ್ಯತ್ರ ತಾಮ್ರಕಲಶಂ ಸುದೃಢಂ ಯತ್ರ ಸಂಯುತಂ ॥ ೧೩ ॥

---

ಪೂರ್ವಕವಾಗಿ ತೆಗೆದು ಶುದ್ಧವಾದ ಮಣ್ಣಿನಿಂದ ಆ ಸ್ಥಳವನ್ನೂ ತುಂಬಿ ಚನ್ನಾಗಿ ಭದ್ರಪಡಿಸಬೇಕು

೧೦-೧೩ ಈ ರೀತಿ ಭೂಮಿಯನ್ನು ಶೋಧಿಸಿ ಅಲ್ಲಿ ಕುಂಭವನ್ನು ಸ್ಥಾಪಿಸಬೇಕು ಆ ದಿನವೇ ಎಲ್ಲೆಗಟ್ಟಿಗೆ ಸೇರಿದ ನಾಲ್ಕು ದಿಕ್ಕುಗಳಲ್ಲಿಯೂ ಶಿಲಾನ್ಯಾಸವನ್ನು ಮಾಡಬೇಕು ಪಕ್ವವಾದ ಇಟ್ಟಿಗೆಗಳಿಂದಲೇ ಆಲಯದ ರಚನೆ ಮಾಡುವ ಸಂಭವವಿದ್ದಲ್ಲಿ ನಾಲ್ಕು ದಿಕ್ಕುಗಳಲ್ಲಿಯೂ ಇಟ್ಟಿಗೆಗಳನ್ನೇ ನ್ಯಾಸದಲ್ಲಿ ಉಪಯೋಗಿಸಬೇಕು ಮಣ್ಣಿನಲ್ಲಿ ರಚಿಸುವ ಸಂದರ್ಭದಲ್ಲಿಯೂ ಇಟ್ಟಿಗೆಗಳಿಂದಲೇ ನ್ಯಾಸಮಾಡಬೇಕು ಮರದಿಂದ ಮಾಡಕೂಡದು ಶುಭವಾದ ನಕ್ಷತ್ರದಿಂದ ಕೂಡಿದ ಒಳ್ಳೆಯ ದಿವಸದಲ್ಲಿ ಒಳ್ಳೆಯ ಮುಹೂರ್ತದಲ್ಲಿ ಕುಂಭಾಕಾರವುಳ್ಳ ಶಿಲೆಯನ್ನು ನಿರ್ಮಿಸಬೇಕು ಇದು ಬೆಟ್ಟದ ಮೇಲೆ ರಚಿಸುವುದಕ್ಕೆ ಮಾತ್ರ ಇತರ ಕಡೆಗಳಲ್ಲಿ ದೃಢವಾದ ತಾಮ್ರಕಲಶವನ್ನೇ ಸಿದ್ಧಗೊಳಿಸಬೇಕು ಸಮವಾಗಿರುವ ಆ ಪ್ರದೇಶದಲ್ಲಿ ಅರವತ್ತು ನಾಲ್ಕು ಹೆಜ್ಜೆಗಳ ಪರಿಮಾಣದಲ್ಲಿ ಒಂದು ಮಂಡವನ್ನು ರಚಿಸಿ ಆ ಮಂಡಲ

ಚತುಃಷಷ್ಟಿಪದಂ ಕೃತ್ವಾ ಸಮೇ ಸ್ಥಾನೇ ತು ಮಂಡಲಂ ।
ಕೃತ್ವಾ ತು ದೇವತಾನ್ಯಾಸಂ ತತ್ರ ಮಂಡಲಕೇ ದ್ವಿಜ　　　　|| ೧೪ ||

ಸರ್ವೇಷಾಂ ವಾಸ್ತುವಿದ್ಯೋಕ್ತದೈವತಾನಾಂ ಯಥಾವಿಧಿ ।
ಶ್ರಿಯಾಃ ಸಂಪೂಜನಂ ಕೃತ್ವಾ ವಾಸುದೇವಸ್ಯ ಚಾಪ್ಯಥ　　　　|| ೧೫ ||

ಪೂಜನಂ ಮಂಡಲೇ ಕಾರ್ಯಂ ವಾಸುದೇವಗಣಸ್ಯ ಚ ।
ವಿನಾಯಕಸ್ಯ ದೇವಸ್ಯ ವಿಶ್ವಕರ್ಮಣ ಏವ ಚ　　　　|| ೧೬ ||

ಭಾಂಡಾನಾಂ ಚ ಮಹಾರಾಜ ತಥಾ ತದುಪಯೋಗಿನಾಂ ।
ಗನ್ಧಾರ್ಘ್ಯಪುಷ್ಪನೈವೇದ್ಯಧೂಪದೀಪೈರ್ಯಥಾವಿಧಿ　　　　|| ೧೭ ||

ಓಂಕಾರಪೂತಮಾಜ್ಯಂ ಚ ಜುಹುಯಾಚ್ಛ್ರೀಧರಸ್ಯ ಚ ।
ಶ್ರಿಯಾಃ ಕೃತ್ವಾ ತತೋ ಹೋಮಂ ಬ್ರಹ್ಮಣಃ ಕಾರಯೇತ್ತದಾ　　|| ೧೮ ||

ಬ್ರಹ್ಮಾಣಂ ಪುರತಃ ಕೃತ್ವಾ ವಾಸುದೇವಗಣಸ್ಯ ಚ ।
ಮಧ್ಯೇ ಕೃತ್ವಾ ತತಃ ಕುಂಭಂ ಶಿಲಾನ್ಯಾಸಂ ತು ಕಾರಯೇತ್　　|| ೧೯ ||

ಐಶಾನೇ ತು ತತಃ ಕೋಣೇ ಶಿಲಾಂ ಪೂರ್ವಂ ಪ್ರತಿಷ್ಠಿತಾಂ ।
ಪ್ರದಕ್ಷಿಣಂ ತತೋ ರಾಜನ್ ಶಿಲಾನ್ಯಾಸೋ ವಿಧೀಯತೇ　　　　|| ೨೦ ||

---

ದಲ್ಲಿ ವಾಸ್ತುವಿಧಿಯಲ್ಲಿ ವಿವರಿಸಿರುವ ಎಲ್ಲಾ ದೇವತೆಗಳಿಗೂ ಯಥಾವಿಧಿಯಾಗಿ ನ್ಯಾಸವನ್ನು ಮಾಡಬೇಕು ಮೊದಲು ಲಕ್ಷ್ಮೀದೇವಿಯನ್ನೂ ಅನಂತರ ವಾಸುದೇವನನ್ನೂ ಪೂಜಿಸಬೇಕು

೧೬-೨೦ ಈ ಮಂಡಲವನ್ನು ಮಾಡುವಾಗ ದೇವನ ಪರಿವಾರಗಳಿಗೂ, ವಿನಾಯಕನಿಗೂ, ವಿಶ್ವಕರ್ಮನಿಗೂ ಕಾರ್ಯೋಪಯೋಗಿಗಳಾದ ಭಾಂಡಗಳಿಗೂ ಗಂಧಪುಷ್ಪ ಧೂಪದೀಪ ನೈವೇದ್ಯಗಳಿಂದ ಯಥಾವಿಧಿಯಾಗಿ ಪೂಜೆಯನ್ನು ನಡೆಸಬೇಕು ಶ್ರೀಧರಮೂರ್ತಿಯನ್ನುದ್ದೇಶಿಸಿ ಓಂಕಾರದಿಂದ ಪವಿತ್ರವಾದ ಆಜ್ಯವನ್ನು ಹೋಮಮಾಡಬೇಕು ಲಕ್ಷ್ಮಿಯನ್ನೂ, ಬ್ರಹ್ಮನನ್ನೂ ಉದ್ದೇಶಿಸಿ ಹೋಮ ಮಾಡಬೇಕು ಬ್ರಹ್ಮನನ್ನು ಮುಂಭಾಗದಲ್ಲಿಟ್ಟು ವಾಸುದೇವನ ಗಣದ ಮಧ್ಯದಲ್ಲಿ ಕುಂಭವನ್ನು ಇಟ್ಟು ಅನಂತರ ಮೇಲೆ ಹೇಳಿರುವ ಶಿಲಾನ್ಯಾಸವನ್ನು ನೆರವೇರಿಸಬೇಕು ಈಶಾನ್ಯ ಮೂಲೆಯಲ್ಲಿ ಮೊದಲು ಪ್ರತಿಷ್ಠಿತವಾಗಿರುವ ಶಿಲೆಯನ್ನು ಮೊದಲು ಮಾಡಿಕೊಂಡು ಪ್ರದಕ್ಷಿಣವಾಗಿ ಇತರ ಶಿಲೆಗಳ ನ್ಯಾಸವನ್ನು ನಡೆಸಬೇಕು

ಸೂತ್ರನ್ಯಾಸಂ ತು ಕುರ್ವೀತ ತಸ್ಮಿನ್ನೇವ ತಥಾಹನಿ ।
ಯಥಾ ನಿವೇಶಂ ಕರ್ತವ್ಯಂ ಪ್ರಾಸಾದಸ್ಯ ಸುನಿಶ್ಚಿತಂ ॥ ೨೧ ॥

ಕೃತ್ವಾ ತು ಸೂತ್ರವಿನ್ಯಾಸಂ ನಾಧಿಕಂ ತಂ ತು ಕಾರಯೇತ್ ।
ನೂನಂ ಮನುಷ್ಯಶಾರ್ದೂಲ ಕರ್ತುರ್ದೋಷಕರಾವುಭೌ ॥ ೨೨ ॥

ಕುಂಭಸ್ಯ ಚ ಶಿಲಾನಾಂ ಚ ತತಃ ಸ್ನಾನಂ ವಿಧೀಯತೇ ।
ವಟಾಶ್ವತ್ಥಕಷಾಯೇಣ ಸರ್ವೌಷಧಿಜಲೈಸ್ತತಃ ॥ ೨೩ ॥

ತತೋ ನುಲೇಪನಂ ಕುರ್ಯಾಚ್ಚಂದನೇನ ಸುಗಂಧಿನಾ ।
ಆಚ್ಛಾದನಂ ತತಃ ಕಾರ್ಯಂ ವಾಸೋಭಿಃ ಕುಸುಮೈಸ್ತಥಾ ॥ ೨೪ ॥

ಧೂಪಂ ದೀಪಂ ಸುನೈವೇದ್ಯಂ ತೇಷಾಂ ನಾಮ್ನಾ ನಿವೇದಯೇತ್ ।
ದಕ್ಷಿಣಾಭಿಃ ದ್ವಿಜೇಂದ್ರಾಣಾಂ ತತಃ ಪೂಜಾ ವಿಧೀಯತೇ ॥ ೨೫ ॥

ಕಾಲವಿತ್ ಸ್ಥಪತಿಃ ಪೂಜ್ಯೋ ತತೋ ರಾಮ ವಿಜಾನತಾ ।
ತತಃ ಕರ್ತಾ ಜಪೇನ್ಮಂತ್ರಂ ಸ್ಥಪತಿರ್ವಾಥಕಾಲವಿತ್ ॥ ೨೬ ॥

---

೨೧–೨೫ ರಚಿಸಬೇಕಾಗಿರುವ ಪ್ರಾಸಾದದ ಸನ್ನಿವೇಶದ ನಿಶ್ಚಯಕ್ಕೆ ಅನುಗುಣವಾಗಿ ಸೂತ್ರನ್ಯಾಸವನ್ನೂ ಅದೇ ದಿನದಲ್ಲಿ ಮಾಡಬೇಕು ಸೂತ್ರದ ವಿನ್ಯಾಸವು ಜರುಗಿದನಂತರ ಪುನಃ ಹೆಚ್ಚಾಗಿಯಾಗಲಿ ಕಡಿಮೆಯಾಗಿ ಆಗಲಿ ಅದನ್ನು ಬದಲಾಯಿಸಕೂಡದು ಎರಡೂ ಕರ್ತೃವಿಗೆ ದೋಷದಾಯಕಗಳಾಗುತ್ತವೆ. ಅನಂತರ ಪ್ರತಿಷ್ಠಿತಗಳಾಗಿರುವ ಕುಂಭ ಮತ್ತು ಶಿಲೆಗಳಿಗೆ ಆಲ ಅಶ್ವತ್ಥ ಇವುಗಳ ಕಷಾಯ ದಿಂದಲೂ ಓಷಧಿಜಲಗಳಿಂದಲೂ ಸ್ನಾನಮಾಡಿಸಬೇಕು ಅನಂತರ ಸುವಾಸನೆಯುಳ್ಳ ಚಂದನದಿಂದ ಲೇಪಮಾಡಿ ನೂತನ-ವಸ್ತ್ರಗಳಿಂದಲೂ, ಹೂವುಗಳಿಂದಲೂ ಅವು ಗಳನ್ನು ಆಚ್ಛಾದಿಸಬೇಕು ಧೂಪದೀಪನೈವೇದ್ಯಾದಿಗಳನ್ನು ಅವುಗಳ ನಾಮಮಂತ್ರ ದಿಂದಲೇ ಸಮರ್ಪಿಸಬೇಕು. ಅನಂತರ ದಕ್ಷಿಣಾದಿಗಳಿಂದ ಬ್ರಾಹ್ಮಣರ ಪೂಜೆ ಯನ್ನು ನಡೆಸಬೇಕು

೨೬–೩೦ ಈ ಸಮಯದಲ್ಲಿ ಕಾಲಜ್ಞನಾದ ಜ್ಯೋತಿಷಿಕನನ್ನೂ ಸ್ಥಪತಿ ಯನ್ನೂ ವಿವೇಕಿಯಾದವನು ಪೂಜಿಸಬೇಕು ಅನಂತರ ಕರ್ತೃವಾಗಲಿ, ಸ್ಥಪತಿ

[1]ನಂದೇ ನಂದಯ ವಾಸಿಷ್ಠೇ ವಸುಭಿಃ ಪ್ರಜಯಾ ಸಹ ।
ಜಯೇ ಭಾರ್ಗವದಾಯಾದೇ ಪ್ರಜಾಭ್ಯೋ ಜಯಮಾವಹ ॥ ೨೭ ॥

ಪೂರ್ಣೇಽಂಗಿರಸದಾಯಾದೇ ಪೂರ್ಣಕಾಮಂ ಕುರುಷ್ವ ಮಾಂ ।
ಭದ್ರೇ ಕಶ್ಯಪದಾಯಾದೇ ಕುರು ಭದ್ರಾಂ ಗತಿಂ ಮಮ ॥ ೨೮ ॥

ಸರ್ವಬೀಜಸಮಾಯುಕ್ತೇ ಸರ್ವರತ್ನೌಷಧೈರ್ವೃತೇ ।
ರುಚಿರೇ ನನ್ದಿತೇ ನನ್ದೇ ವಾಸಿಷ್ಠೇ ರಮ್ಯತಾಮಿಹ ॥ ೨೯ ॥

ಪ್ರಜಾಪತೀ ಸುತೇ ದೇವೀ ಚತುರಸ್ರೇ ಮಹೀಮಯೇ ।
ಸುಭಗೇ ಸುವ್ರತೇ ಭದ್ರೇ ಇಹ ಕಾಶ್ಯಪಿ ರಮ್ಯತಾಂ ॥ ೩೦ ॥

ಅವ್ಯಂಗೇ ಚಾಕ್ಷತೇ ಪೂರ್ಣೇ ಮುನೇರಂಗಿರಸಃ ಸುತೇ ।
ಇಷ್ಟಕೇ ತ್ವಂ ಪ್ರಯಚ್ಛೇಷ್ಟಂ ಪ್ರತಿಷ್ಠಾಂ ಕಾಮಯಾಮ್ಯಹಂ ॥ ೩೧ ॥

ದೇಶಸ್ವಾಮಿ ಪುರಸ್ವಾಮಿ ಪಶುಸ್ವಾಮಿ ಪರಿಗ್ರಹೇ ।
ಮನುಷ್ಯ ಪಶುಹಸ್ತ್ಯಶ್ವ ಧನವೃದ್ಧಿಕರೀ ಭವ ॥ ೩೨ ॥

ಯಾಗಲಿ, ಜ್ಯೋತಿಷಿಕನಾಗಲಿ ಈ ಮಂತ್ರಗಳನ್ನು ಜಪಿಸಬೇಕು ಎಲ್ವೈ ಆನಂದಮಯಿಯಾದ ವಾಸಿಷ್ಠದೇವಿಯೇ ಈ ದ್ರವ್ಯಗಳಿಂದಲೂ ನೀನು ಸಂತುಷ್ಟಳಾಗು ಎಲ್ವೈ ಭಾರ್ಗವದಾಯಾದಿನಿಯಾದ ಜಯಾದೇವಿಯೇ ಪ್ರಜೆಗಳಿಗೆ ಜಯವನ್ನುಂಟುಮಾಡು ಅಂಗಿರಸದಾಯಾದಿನಿಯಾದ ಪೂರ್ಣಾದೇವಿಯೇ ನನ್ನನ್ನು ಸಫಲಮನೋರಥನನ್ನಾಗಿ ಮಾಡು ಕಶ್ಯದಾಯಾದಿನಿಯಾದ ಭದ್ರಾದೇವಿಯೇ ನನಗೆ ಮಂಗಳಕರವಾದ ಗತಿಯನ್ನುಂಟುಮಾಡು ಸರ್ವಬೀಜಗಳಿಂದಲೂ ಸರ್ವರತ್ನ ಮತ್ತು ಓಷಧಿಗಳಿಂದಲೂ ಕೂಡಿರುವ ವಸಿಷ್ಠಾದೇವಿಯೇ ರಮ್ಯಳಾಗಿಯೂ, ಆನಂದಮಯಳಾಗಿಯೂ ಇರುವ ನೀನು ಈ ಕಾರ್ಯವನ್ನು ಪ್ರೀತಿಸು ಪ್ರಜಾಪತಿಯ ಪುತ್ರಿಯಾಗಿಯೂ, ಚತುಃಸಾಗರವ್ಯಾಪ್ತಳಾಗಿಯೂ, ಭೂಮಿರೂಪಿಣಿಯಾಗಿಯೂ, ಸೌಭಾಗ್ಯಶಾಲಿನಿಯಾಗಿಯೂ ಇರುವ ಕಾಶ್ಯಪಿದೇವಿಯೇ ಇಲ್ಲಿ ನೀನು ಕ್ರೀಡಿಸು

೩೧–೩೪ ಅಕ್ಷತಳಾಗಿಯೂ, ಪೂರ್ಣಳಾಗಿಯೂ, ಅಂಗೀರಸಮುನಿಯ ಪುತ್ರಿಯಾಗಿಯೂ ಇರುವ ಅವ್ಯಂಗಸಂಜ್ಞೆಯುಳ್ಳ ಇಷ್ಟಕಾದೇವಿಯೇ ಪ್ರತಿಷ್ಠೆಯನ್ನು ಕೈಗೊಳ್ಳುವನನಗೆ ಇಷ್ಟಪ್ರಾಪ್ತಿಯುಂಟಾಗುವಂತೆ ಮಾಡು ದೇಶಪ್ರಭುಗಳಿಂದಲೂ

1 ಇವು ಪೌರಾಣಿಕ ಮಂತ್ರಗಳು ಇವುಗಳ ಅರ್ಥವನ್ನೂ ಸಂಗ್ರಹವಾಗಿ ವಿವರಿಸಲಾಗಿದೆ

ಅನೇನೈವ ವಿಧಾನೇನ ಕಾರ್ಯಾ ಭೂಮಿಃ ಸಮಕ್ರಿಯಾ ।
ದ್ವಾರನ್ಯಾಸೋ ಮಹಾರಾಜ ದ್ವಾರೋಚ್ಛ್ರಯಸ್ತಥೈವ ಚ ॥ ೩೩ ॥

ಸ್ತಂಭೋಚ್ಛ್ರಯಂ ತಥಾ ವಂಶವಿನ್ಯಾಸಂ ಚ ಯದೂತ್ತಮ ।
ತಥಾಮಲಕಸಾರಸ್ಯ ಚಿಹ್ನಸ್ಯ ತು ಸಮುಚ್ಛ್ರಯಂ ॥ ೩೪ ॥

ಆಯುಧಂ ವಾಹನಂ ಚಿಹ್ನಂ ಯಸ್ಯ ದೇವಸ್ಯ ಯದ್ಭವೇತ್ ।
ತಸ್ಮಾದೇಕತಮಂ ಚಿಹ್ನಂ ಕಾರ್ಯಂ ಚಾಮಲಸಾರಕೇ ॥ ೩೫ ॥

ಸುಧಾಸಿತೇ ಸಮಾಪ್ತೇ ತು ಚಿತ್ರಕರ್ಮ ವಿಧೀಯತೇ ।
ಕಟಿಃ ಸುಚಿತ್ರಿತಾ ಕಾರ್ಯಾ ಪೃಷ್ಠಂ ಕಾರ್ಯಂ ಸುಧಾಸಿತಂ ॥ ೩೬ ॥

ಚಿತ್ರಲಕ್ಷಣವತ್ಕಾರ್ಯಂ ಸರ್ವಕಾಮಸಮೃದ್ಧಿದಂ ।
ಆಶ್ಚರ್ಯಾಣಿ ತಥಾನ್ಯಾನಿ ತತ್ರ ಯತ್ನಾನ್ನಿವೇಶಯೇತ್ ॥ ೩೭ ॥

ಪಶುಪ್ರಭುಗಳಿಂದಲೂ ನೀನು ಆಶ್ರಯಣಾರ್ಹಳಾಗಿದ್ದೀಯ ಮನುಷ್ಯರಿಗೂ, ಪಶುಗಳಿಗೂ, ಆನೆಕುದುರೆ, ಧನಮುಂತಾದುವುಗಳಿಗೂ ಅಭಿವೃದ್ಧಿಕಾರಿಣಿಯಾಗು ಈ ಮಂತ್ರಗಳ ಉಚ್ಚಾರಣದಿಂದಲೇ ಭೂಮಿಯನ್ನು ಸಮಮಾಡಬೇಕು ದ್ವಾರಗಳನ್ನು ಏರ್ಪಡಿಸುವ ಮತ್ತು ದ್ವಾರಗಳನ್ನು ನಿಲ್ಲಿಸುವ ಸ್ತಂಭವನ್ನು ಪ್ರತಿಷ್ಠಿಸುವ ಮತ್ತು ಬಿದಿರುಗಳನ್ನು ವಿನ್ಯಾಸಮಾಡುವಾಗಲೂ ಈ ವಿಧಿಯನ್ನೇ ಅನುಸರಿಸಬೇಕು ಹಾಗೆಯೇ ಮೇಲಿನ ಶಿಖರ ಮತ್ತು ಚಿಹ್ನೆಗಳನ್ನು ಉದ್ಧರಿಸಿ ಪ್ರತಿಷ್ಠಿಸುವಾಗಲೂ ಇದೇ ನಿಯಮವನ್ನು ಅನುಸರಿಸಬೇಕು

೩೫–೩೭ ಆಯುಧ ವಾಹನ, ಚಿಹ್ನ ಇವುಗಳು ಯಾವ ದೇವತೆಗೆ ಯಾವುವೆಂದು ಹೇಳಲಾಗಿದೆಯೋ ಅವುಗಳಲ್ಲಿ ಆ ದೇವತೆಗೆ ಹೇಳಿರುವ ಒಂದು ಚಿಹ್ನೆಯನ್ನು ಮೇಲಿನ ಶಿಖರದಲ್ಲಿ ಮಾಡಬೇಕು ಸುಣ್ಣ ಹಚ್ಚುವ ಕಾರ್ಯವು ಮುಗಿದ ನಂತರ ಚಿತ್ರಕಾರ್ಯಕ್ಕೆ ಪ್ರಾರಂಭಿಸಬೇಕು ಕಟಿಪ್ರದೇಶವನ್ನು ಒಳ್ಳೆಯ ಚಿತ್ರದಿಂದ ಅಲಂಕರಿಸಬೇಕು ಹಿಂಭಾಗವನ್ನೆಲ್ಲಾ ಸುಣ್ಣದಿಂದ ಬಿಳುಪಾಗಿರುವಂತೆ ಮಾಡಬೇಕು ಇವೆಲ್ಲವನ್ನೂ ಚಿತ್ರಲಕ್ಷಣಕ್ಕೆ ತಕ್ಕಂತೆ ಮಾಡಿದಲ್ಲಿ ಎಲ್ಲಾ ಇಷ್ಟಸಿದ್ಧಿಗೂ ಇದು ಕಾರಣವಾಗುತ್ತದೆ ಆಶ್ಚರ್ಯಕರವಾದ ಇತರ ಚಿತ್ರಗಳನ್ನೂ ಪ್ರಯತ್ನಪೂರ್ವಕವಾಗಿ ಇವರಲ್ಲಿ ರಚಿಸಬೇಕು

ಚಿಹ್ನಂ ವಿಷ್ಣುಗೃಹೇ ತತ್ರ ಗರುಡಂ ವಾಪಿ ಕಾರಯೇತ್ ।
ದುರ್ಗಾಗೃಹೇ ತಥಾ ಸಿಹ್ಮಂ ತ್ರಿಶೂಲಂ ಹರವೇಶ್ಮನಿ ॥ ೩೮ ॥

ಪದ್ಮಂ ಲಕ್ಷ್ಮೀಗೃಹೇ ಚಿಹ್ನಂ ಹಂಸಸ್ಯಾದ್ಬ್ರಹ್ಮಣೋ ಗೃಹೇ ।
ಮಕರಂ ಕಾಮದೇವಸ್ಯ ತಾಲಂ ಸಂಕರ್ಷಣಸ್ಯ ತು ॥ ೩೯ ॥

ಅರ್ಧಚಂದ್ರಸ್ಥಿತಸ್ಸಿಹ್ಮ ಆದಿತ್ಯಸ್ಯ ಗೃಹೇ ಭವೇತ್ ।
ವೃತ್ತಮಂಡಲಮಧ್ಯಸ್ಥಂ ಗೃಹಂ ಚಂದ್ರಮಸೋ ಭವೇತ್ ॥ ೪೦ ॥

ವಜ್ರಂ ಶಕ್ರಸ್ಯ ಕುರ್ವೀತ ದಂಡಂ ವೈವಸ್ವತಸ್ಯ ಚ ।
ವರುಣಸ್ಯ ತಥಾ ಪಾಶಂ ಗದಾಂ ಚ ಧನದಸ್ಯ ವೈ ॥ ೪೧ ॥

ಸ್ಕಂದಸ್ಯ ಶಕ್ತಿಃ ಕರ್ತವ್ಯಾ ಗಣಾಧ್ಯಕ್ಷಸ್ಯ ಪಾರ್ಥಿವ ।
ಕರ್ತವ್ಯಂ ಪರಶೋಶ್ಚಿಹ್ನಂ ವಹ್ನೇರ್ಜ್ವಾಲಾ ವಿಧೀಯತೇ ॥ ೪೨ ॥

ವಾಯೋರಮ್ಬರಭಂಗಂ ತು ಉಷ್ಟ್ರಂ ನಿರ್ಋತಯೇ ತಥಾ ।
ಅನ್ಯೇಷಾಮಪಿ ದೇವಾನಾಂ ಚಿಹ್ನಂ ಸ್ಯಾದಾಯುಧಂ ಸ್ವಕಂ ॥ ೪೩ ॥

---

೩೮–೪೩  ವಿಷ್ಣುಗೃಹದಲ್ಲಿ ಗರುಡಚಿಹ್ನೆಯನ್ನೂ, ದುರ್ಗಾಗೃಹದಲ್ಲಿ ಸಿಂಹ ಚಿಹ್ನೆಯನ್ನೂ, ಹರನ ಗೃಹದಲ್ಲಿ ತ್ರಿಶೂಲವನ್ನೂ, ಲಕ್ಷ್ಮಿಯ ಗೃಹದಲ್ಲಿ ಪದ್ಮವನ್ನೂ ಬ್ರಹ್ಮನ ಗೃಹದಲ್ಲಿ ಹಂಸವನ್ನೂ, ಮನ್ಮಥನ ಗೃಹದಲ್ಲಿ ಮಕರವನ್ನೂ, ಸಂಕರ್ಷಣನ ಗೃಹದಲ್ಲಿ ತಾಲವೃಕ್ಷವನ್ನೂ, ಸೂರ್ಯನ ಗೃಹದಲ್ಲಿ ಅರ್ಧಚಂದ್ರನ ಮೇಲಿರುವ ಸಿಂಹವನ್ನೂ, ಚಂದ್ರನ ಗೃಹದಲ್ಲಿ ದುಂಡಾದ ಮಂಡಲ ಮಧ್ಯದಲ್ಲಿರುವ ಗೃಹವನ್ನೂ, ಇಂದ್ರನ ಗೃಹದಲ್ಲಿ ವಜ್ರಾಯುಧವನ್ನೂ, ಯಮನ ಗೃಹದಲ್ಲಿ ದಂಡವನ್ನೂ, ವರುಣ ಗೃಹದಲ್ಲಿ ಪಾಶವನ್ನೂ, ಕುಬೇರನ ಗೃಹದಲ್ಲಿ ಗದೆಯನ್ನೂ, ಸ್ಕಂದನ ಗೃಹದಲ್ಲಿ ಶಕ್ತಿಯನ್ನೂ, ಗಣಾಧ್ಯಕ್ಷರ ಗೃಹದಲ್ಲಿ ಕೊಡಲಿಯ ಚಿಹ್ನೆಯನ್ನೂ, ಅಗ್ನಿಗೆ ಜ್ವಾಲಾ ಚಿಹ್ನೆಯನ್ನೂ ಏರ್ಪಡಿಸಬೇಕು  ವಾಯುವಿಗೆ ಆಕಾಶದಲ್ಲಿರುವ ಮೋಡಗಳ ಭಂಗವನ್ನೂ, ನಿರ್ಋತಿಗೆ ಒಂಟೆಯನ್ನೂ ಚಿಹ್ನಿಸಬೇಕು  ಇತರ ದೇವತೆಗಳಿಗೂ ಅವರವರ ಆಯುಧಗಳೇ ಚಿಹ್ನೆಗಳಾಗುತ್ತವೆ

ತತೋ ಧ್ವಜಸ್ಯ ವಿನ್ಯಾಸಃ ಕರ್ತವ್ಯಃ ಪೃಥಿವೀಪತೇ ।
ಅಸುರಾ ವಾಸಮಿಚ್ಛನ್ತಿ ಧ್ವಜಹೀನೇ ಸುರಾಲಯೇ || ೪೪ ||

ಧ್ವಜೇನ ಸಕಲಂ ಪಾಪಂ ಧ್ವಜದಸ್ಯ ವಿನಶ್ಯತಿ ।
ತಸ್ಮಾತ್ಸರ್ವಪ್ರಯತ್ನೇನ ದದ್ಯಾದ್ದೇವಗೃಹೇ ಧ್ವಜಂ || ೪೫ ||

ಏವಂ ಕೃತೇ ದೇವಗೃಹೇ ನರೇನ್ದ್ರ
ವೃದ್ಧಿಃ ಸದಾ ಸ್ಯಾನ್ನಹಿ ಸಂಶಯೋತ್ರ ।
ತಸ್ಮಾತ್ಪ್ರಯತ್ನೇನ ವಿಧಾನಯುಕ್ತಂ
ದೇವಾಲಯಂ ಕಾರ್ಯಮದೀನಸತ್ತ್ವ || ೪೬ ||

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಬ್ರಹ್ಮಶಿಲ್ಪಧ್ವಜವಿಧಿರ್ನಾಮ
ಚತುರ್ನವತಿತಮೋಽಧ್ಯಾಯಃ

---

೪೪–೪೬ ಎಲೈ ದೊರೆಯೇ ಧ್ವಜವಿನ್ಯಾಸವನ್ನು ನಂತರ ಮಾಡಬೇಕು ಧ್ವಜವಿಲ್ಲದಿರುವ ದೇವಾಲಯಗಳಲ್ಲಿ ರಾಕ್ಷಸರು ವಾಸಮಾಡಲು ಅಪೇಕ್ಷಿಸುತ್ತಾರೆ ಧ್ವಜವನ್ನು ನಿರ್ಮಿಸಿದವನ ಪಾಪವೆಲ್ಲವೂ ಆ ಧ್ವಜದಿಂದಲೇ ನಾಶವಾಗುತ್ತದೆ. ಆದುದರಿಂದ ಸರ್ವಪ್ರಯತ್ನದಿಂದಲೂ ದೇವಾಲಯದಲ್ಲಿ ಧ್ವಜವನ್ನು ನಿರ್ಮಿಸಲೇ ಬೇಕು ಈ ರೀತಿ ದೇವಗೃಹವನ್ನು ನಿರ್ಮಿಸಿದ್ದೇ ಆದರೆ ಅವನಿಗೆ ಯಾವಾಗಲೂ ಅಭಿವೃದ್ಧಿಯೇ ಉಂಟಾಗುತ್ತದೆ ಇದರಲ್ಲಿ ಸಂದೇಹವೇ ಇಲ್ಲ ಆದುದರಿಂದ ದೇವಾಲಯವನ್ನು ಪ್ರಯತ್ನಪಟ್ಟು ಯಥಾವಿಧಿಯಾಗಿಯೇ ನೆರವೇರಿಸಬೇಕು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಬ್ರಹ್ಮಶಿಲ್ಪಧ್ವಜವಿಧಿ ಎಂಬ
ತೊಂಭತ್ತನಾಲ್ಕನೆಯ ಅಧ್ಯಾಯ ಮುಗಿದಿದೆ



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಪಂಚನವತಿತಮೋಽಧ್ಯಾಯಃ ||

ಗದ್ಯ || ಏವಂ ವಾದಿನಂ ಶ್ರೀಭಗವನ್ತಮಮಲತಪಸಮತಿಯಶಸಂ ಚಿರಂ ಜೀವಿನಂ ಶ್ರೀಮಾರ್ಕಂಡೇಯಂ ರಾಜಾ ವಜ್ರಃ ಪಪ್ರಚ್ಛ । ಭಗವನ್ ಅಷ್ಟಶಲ್ಯಜ್ಞಾನಂ ಕಥಂ ಭವತಿ । ತಮುವಾಚ ಶ್ರೀಭಗವಾನ್ ಮಾರ್ಕಂಡೇಯಃ ||

ಗದ್ಯ|| ಕದಾಚಿತ್ಕಿಮಪಿ ಮಹದದ್ಭೂತಂ ತ್ರೈಲೋಕ್ಯನಾಶಾಯರ್ಥಿತಮ ಭವತ್ । ತದ್ಭೂತಂ ಸಸಂಭ್ರಮ್ಯೈಸ್ತ್ರಿದಶೈರ್ನಿಗೃಹ್ಯ ವೇಗೇನಾಧೋ- ಮುಖಂ ನ್ಯಸ್ತಂ । ತಸ್ಯ ಚೋತ್ಥಾನಭೀತಾ ದೇವಾ ಅಜ್ಗೇಷೂಪ- ವಿಷ್ಟಾಃ || ತಸ್ಯ ಪರ್ಜನ್ಯಾದ್ಯಾಃ ಕ್ರಮೇಣ ದಕ್ಷಿಣೇಜ್ಗ ಭಾಗೇ ।

---

### ತೊಂಭತ್ತೈದನೆಯ ಅಧ್ಯಾಯ.

ಹೀಗೆ ಹೇಳುತ್ತಿರುವ ಮಹಾಮಹಿಮಶಾಲಿಯಾಗಿಯೂ ಮತ್ತು ಮಹಾ ತಪಸ್ವಿಯಾಗಿಯೂ, ಯಶಸ್ವಿಯಾಗಿಯೂ, ಚಿರಂಜೀವಿಯಾಗಿಯೂ ಇರುವ ಮಾರ್ಕಂಡೇಯರನ್ನು ಕುರಿತು, ಧೀರೆಯಾದ ವಜ್ರನು ಪ್ರಶ್ನೆಮಾಡುತ್ತಾನೆ — ಪೂಜ್ಯನೇ, ಅಷ್ಟಶಲ್ಯಜ್ಞಾನವನ್ನು ಹೊಂದುವ ಬಗೆ ಹೇಗೆ? ಇದಕ್ಕೆ ಉತ್ತರವಾಗಿ ಮಾರ್ಕಂಡೇಯರು ಹೇಳುತ್ತಾರೆ

ಒಂದಾನೊಂದು ಕಾಲದಲ್ಲಿ ಅಚಿಂತ್ಯವಾದ ಒಂದು ಮಹಾ ಭೂತವು ಮೂರು ಲೋಕಗಳನ್ನೂ ನಾಶಮಾಡಲು ಪ್ರಾರ್ಥಿಸಿ ಕಾರ್ಯೋನ್ಮುಖವಾಯಿತು ಆಗ ದೇವತೆಗಳು ಭಯದಿಂದಲೂ ಕೂಡಿ ಆ ಭೂತವನ್ನು ನಿಗ್ರಹಿಸಿ ವೇಗದಿಂದ ಅದನ್ನು ತಲೆಕೆಳಕಾಗಿ ಮಾಡಿದರು ಹಾಗೆ ಅಧೋಮುಖವಾಗಿ ಮಲಗಿದ ಆ ಭೂತವು

**ವೃತ್ಯ್ಕ್ರಮೇಣ ನಾಗಾದ್ಯಾ ವಾಮೇ । ಪರ್ಜನ್ಯಹುತಾಶನೌ ಶಿರಸಿ । ಕರಗ್ರಹೌ ವದನೇ ದೃಶೋಶ್ಚ ಯಜ್ಞಕಾಮೌ । ಸ್ತನಯೋರ್ಮಹೇಂದ್ರಾದಿತೀ । ಶ್ರವಣಯೋರಪ್ಯದಿತೀ । ಉರಃಸ್ಥಲೇ ಅಂಸಯೋಶ್ಚ ಸತ್ಯಭೃಶಾಂತರಿಕ್ಷಪವನಾಃ । ಭುಜೇ ಚಂದ್ರಭಲ್ಲಾಟಮುಖ್ಯಾ ನಾಗರಾಜಾನಃ ॥ ದ್ವಿತೀಯೇ ಭುಜೇ ಸಾವಿತ್ರಸವಿತಾರೌ । ಕರೇ ರುದ್ರವ್ಯಾಧೀ । ದ್ವಿತೀಯೇ ಕರೇ ಅರ್ಯಮಾಪೃಥಿವೀಧರಶ್ಚ । ಕರಸ್ಯ ಕಕ್ಷ್ಯಯೋಃ ಪುಷ್ಪವಿತಥ ಬೃಹಕ್ಷತಾಃ ಪಾರ್ಶ್ವೇ ಶೋಷಶೋಕೌ ಯಕ್ಷಾಶ್ಚ ದ್ವಿತೀಯೇಪಾರ್ಶ್ವೇ । ಹೃದಿ ಬ್ರಹ್ಮಾ ವಿವಸ್ವಾನ್ ಮಿತ್ರಶ್ಚ ಜಠರೇ ಜಯೇಂದ್ರೌ ಮೇಢ್ರೇ । ವೃಷಣಯೋಶ್ಚ ಯಮವರುಣೌ । ಸ್ಫಿಜಿವೃಷಾಸುರೌ । ಊರ್ವ್ವೋಃ ಗನ್ಧರ್ವಪುಷ್ಪದಂತೌ । ಜಾನ್ವೋಃ ಮೃಗಗ್ರೀವೌ । ಜಙ್ಘಯೋಃ ಪಿತೃದೌವಾರಿಕೌ ಚರಣ-**

---

ಪುನಃ ಮೇಲಕ್ಕೆ ಏಳಬಹುದೆಂಬ ಭೀತಿಯಿಂದ ದೇವತೆಗಳೆಲ್ಲರೂ ಆದರ ದೇಹವ ಮೇಲೆ ಅವಯುವ ವಿಭಾಗದಿಂದ ಅದುಮಿಕ್ಕೊಂಡು ಕುಳಿತರು ಪರ್ಜನ್ಯರೇ ಮೊದಲಾದ ದೇವತೆಗಳು ಅದರ ಬಲಭಾಗದ ಅವಯುವಗಳಲ್ಲಿ ಕುಳಿತರು ಎಡಭಾಗದ ಅವಯುವಗಳಲ್ಲಿ ನಾಗಾದಿಗಳು ಕ್ರಮಪರಿವೃತ್ತಿಯಿಂದ ಕುಳಿತರು ಪರ್ಜನ್ಯ, ಅಗ್ನಿ, ಇವರು ತಲೆಯ ಮೇಲೂ, ಕರ, ಗ್ರಹ ಇವರು ಮುಖಭಾಗದ ಮೇಲೆಯೂ, ಯಜ್ಞ, ಕಾಮ ಇವರು ಕಣ್ಣಿನ ಭಾಗದಲ್ಲಿಯೂ,ಮಹೇಂದ್ರ ಅದಿತಿ ಇವರು ಸ್ತನಗಳ ಭಾಗವದಲ್ಲಿಯೂ, ರವಿ, ಅದಿತಿಗಳು ಕಿವಿಯ ಭಾಗದಲ್ಲಿಯೂ, ಸತ್ಯ, ಭೃಶ ಅಂತರಿಕ್ಷ, ವಾಯು ಇವರುಗಳು ಎದೆಯ ಭಾಗದಲ್ಲಿಯೂ, ಚಂದ್ರ, ಭಲ್ಲಾಟ ಪ್ರಭೃತಿ, ನಾಗರಾಜರು ಭುಜದಲ್ಲಿಯೂ, ಸಾವಿತ್ರ, ಸವಿತಾ ಎಂಬ ದೇವತೆಗಳು ಮತ್ತೊಂದು ಭುಜದ ಮೇಲೆಯೂ, ಒಂದು ಕೈಯ್ಯಿನ ಮೇಲೆ ರುದ್ರವ್ಯಾಧಿಗಳೂ, ಮತ್ತೊಂದು ಕೈಯ್ಯಿನ ಮೇಲೆ ಅರ್ಯಮಾ, ಪೃಥಿವೀಧರರೂ ಕೈಗಳ ಬುಡದಲ್ಲಿ ಪುಷ್ಪ, ವಿತಥ, ಬೃಹಕ್ಷತರೂ, ಒಂದು ಪಾರ್ಶ್ವದಲ್ಲಿ ಶೋಷಶೋಕಗಳೂ, ಮತ್ತೊಂದು ಪಾರ್ಶ್ವದಲ್ಲಿ ಯಕ್ಷರೂ, ಹೃದಯದಲ್ಲಿ ಬ್ರಹ್ಮನೂ, ಜಠರದಲ್ಲಿ ವಿವಸ್ವಾನ್ ಮತ್ತು ಮಿತ್ರರು, ಮೇಢ್ರದಲ್ಲಿ ಜಯ ಮತ್ತು ಇಂದ್ರರೂ, ವೃಷಣದಲ್ಲಿ ಯಮ ಮತ್ತು ವರುಣರೂ, ಪಿರ್‍ರಿಗಳ ಎತ್ತರವಾದ ಸ್ಥಳಗಳಲ್ಲಿ ವೃಷಾಸುರರೂ, ತೊಡೆಗಳ ಮೇಲೆ ಗಂಧರ್ವ ಮತ್ತು ಪುಷ್ಪದಂತರೂ, ಮಂಡಿಗಳ ಮೇಲೆ ಮೃಗಗ್ರೀವರೂ, ಮೊಣಕಾಲು ಮತ್ತು ಪಾದಗಳ ಮೇಲೆ ಪಿತೃಗಳ ದೌವಾರಿಕರೂ ಸಹ ಆಕ್ರಮಿಸಿ ಕುಳಿತರು

**ಯೋಃ ॥ ಏವಮಯ ನ್ಮೈಶಾನೀದಿಕ್ ಶಿರಃ ನೈರ್ಋತೀ ದಿಕ್ಪಾದೌ ವಾಸ್ತುಪುರುಷಃ ॥**

**ತತ್ರ ಯತ್ತ್ವಾಙ್ಗಂ ಸ್ಪೃಶ ಪ್ರಷ್ಟಾ ಪ್ರಯಚ್ಛತಿ ತತ್ರೈವ ವಾಸ್ತ್ವಂಗೇ ಶಲ್ಯಂ ವಿದ್ಯಾತ್ । ಅಥವಾ ಯತ್ರೈವಾಙ್ಗೇ ಗೃಹಪತೇಃ ಭೂಯೋ ಭೂಯೋ ರುಗ್ಭವತಿ । ಅಥ ವಾಸ್ತುದೇವತಾನೇಕೈಕಾಮುದ್ದಿಶ್ಯ-ಘೃತಂ ಜುಹುಯಾತ್ । ಯದ್ವಾಜ್ಯೇ ಹೂಯಮಾನೇ ಅಗ್ನಿಲಕ್ಷಣ ಮಶುಭಂ ಭವೇತ್ತದ್ದೇವದೇಶೇವಾ। ಅಥೈತದ್ದೇವತಾಭಾಗೇ ಸುಖೇನ ಶಲ್ಯಜ್ಞಾನಮಹಂ ಚತುಷ್ಷಷ್ಟಿಪದವಿಭಾಗೇನ ವಕ್ಷ್ಯಾಮಿ—**

ಹೀಗೆ ಆಕ್ರಮಿಸಲ್ಪಟ್ಟ ಈ ವಾಸ್ತು ಪುರುಷನಿಗೆ ಈಶಾನ್ಯದಿಕ್ಕೇ ಶಿರಸ್ಸು, ನೈಋತ್ಯ ದಿಕ್ಕೇ ಪಾದಗಳು

ಈ ಸಂದರ್ಭದಲ್ಲಿ ಶಲ್ಯ ಜ್ಞಾನಾಪೇಕ್ಷಿಯಾದ ಗೃಹಪತಿಯು ಶಿಲ್ಪಜ್ಞನಲ್ಲಿ ಹೋಗಿ ಪ್ರಶ್ನೆಮಾಡುವಾಗ ಶಿಲ್ಪಜ್ಞನಾದವನು ನಿನ್ನ ಯಾವುದಾದರೊಂದು ಅಂಗ ವನ್ನು ಸ್ಪರ್ಶಮಾಡು ಎಂದು ಹೇಳಿದಾಗ ಗೃಹಪತಿಯು ಯಾವ ಅಂಗವನ್ನು ಸ್ಪರ್ಶ ಮಾಡಿಕೊಳ್ಳುತ್ತಾನೆಯೋ ವಾಸ್ತುಪುರುಷನ ಆ ಅಂಗದಲ್ಲಿಯೇ ಶಲ್ಯವಿದ ಎಂದು ತಿಳಿಯಬೇಕು ಅಥವಾ ಗೃಹಪತಿಗೆ ಯಾವ ಅವಯವದಲ್ಲಿ ಆಗಾಗ ನೋವು ಉಂಟಾಗುತ್ತಿದೆಯೋ ವಾಸ್ತುಪುರುಷನ ಆ ಅವಯವದಲ್ಲಿಯೇ ಶಲ್ಯವಿದೆ ಎಂದೂ ತಿಳಿಯಬಹುದು ವಾಸ್ತುದೇವತೆಗಳನ್ನು ಒಂದೊಂದನ್ನಾಗಿ ಉದ್ದೇಶಿಸಿ ಘೃತ ವನ್ನು ಹೋಮಮಾಡಬೇಕು ಯಾವ ದೇವತೆಯನ್ನುದ್ದೇಶಿಸಿ ಆಜ್ಯಹೋಮ ಮಾಡಲಾದುತ್ತಿದೆಯೋ ಆ ಹೋಮ ಕಾಲದಲ್ಲಿ ಅಗ್ನಿಯಲ್ಲಿ ಅಶುಭಲಕ್ಷಣವು ಕಂಡು ಬಂದಲ್ಲಿ ಆ ದೇವತೆಗೆ ಆಶ್ರಯವಾದ ವಾಸ್ತುಪುರುಷನ ಅಂಗದಲ್ಲಿಯೇ ಶಲ್ಯವಿದೆ ಎಂದು ತಿಳಿಯಬಹುದು ಇನ್ನು ಮುಂದೆ ವಾಸ್ತುದೇವತೆಯ ದೇಹ ಭಾಗದಲ್ಲಿಯೇ ಅರವತ್ತನಾಲ್ಕು ಪದವಿನ್ಯಾಸ ಭಾಗಗಳ ವಿಭಾಗದಿಂದ ಸುಖವಾಗಿ ಶಲ್ಯಜ್ಞಾನಹೊಂದುವ ರೀತಿಯನ್ನು ಹೇಳುತ್ತೇನೆ

ಗದ್ಯ || ತತ್ರ ಬಹಿಃ ಪೂರ್ವೇಣಾರ್ಧಪದೇಶ್ವರಃ ಪರ್ಜನ್ಯಃ । ಅಧ್ಯರ್ಧಪದೇಶ್ವರಃ ಪರ್ಜನ್ಯಃ । ಅಧ್ಯರ್ಧಪದೇಶ್ವರಕರಗ್ರಹಃ । ಮಹೇನ್ದ್ರರವಿಸತ್ಯಭೃಶಾಃ ಯಥಾಕ್ರಮಂ ದ್ವಿದ್ವಿಗ್ರಹೇಶಾಃ ಅನ್ತರಿಕ್ಷೋಧ್ಯರ್ಧಪದೇಶಃ । ಪವನೋಽರ್ಧಪದೇಶಶ್ಚ । ದಕ್ಷಿಣೇನ ಪೂಷಾರ್ಧಪದೇಶಃ ವಿತಥೋಽಧ್ಯರ್ಧಪದೇಶಃ । ಬೃಹತ್ಕ್ಷತಯಮಭೃಂಗಗನ್ಧರ್ವಾ ದ್ವಿಪದೇಶಾಃ । ಕೋಶೋಽಧ್ಯರ್ಧಪದೇಶಃ । ಶೇಷೋಽರ್ಧಪದೇಶಶ್ಚಾತ್ರ ದಿಙ್ನಾಗರಾಜೇನಾರ್ಧಪದೇಶಾಃ । ಮುಖ್ಯೋಽರ್ಧಪದೇಶಃ । ಭಲ್ಲಾಟಚನ್ದ್ರಾದಿತಯೋ ದ್ವಿಪದೇಶಾಃ । ನಾಗೋಽಧ್ಯರ್ಧಪದೇಶಃ ತದಾಶನೋಽರ್ಧಪದೇಶಶ್ಚ ತದಂತರಃ ಪೂರ್ವೇಣಾರ್ಧಪದನಾಥಃ ।

---

ವಾಸ್ತು ಪುರುಷನ ದೇಹರೂಪವಾದ ಚಚ್ಚೌಕವಾಗಿರುವ ಭೂಮಿಯಲ್ಲಿ ಅರವತ್ತ ನಾಲ್ಕು ಮನೆಗಳನ್ನು ಮಾಡಬೇಕು ಮಧ್ಯದ ನಾಲ್ಕು ಮನೆಗಳಿಗೆ ಬ್ರಹ್ಮನೇ ಅಧಿಪತಿ ನಾಲ್ಕು ಮೂಲೆಗಳಿಂದಲೂ ಬ್ರಹ್ಮನ ಗೃಹದ ವರೆಗೆ ಮೂಲೆಯಾಗಿ ರೇಖೆಗಳನ್ನು (ನಾಲ್ಕು) ಹಾಕಿದಲ್ಲಿ ಆ ಮನೆಗಳು ಅರ್ಧಪದವಾಗುತ್ತವೆ. ಪೂರ್ಣವಾದ ಮನೆಗೆ ಪದವೆಂದು ಹೆಸರು ಈ ಮನೆಗಳಿಗೆ ಅಧಿಪತಿಗಳಾದ ದೇವತೆಗಳನ್ನು ನಿರ್ದೇಶಮಾಡುತ್ತಾರೆ ಆಯಾಯ ದೇವತೆಯ ಹೋಮಕಾಲದಲ್ಲಿ ಹಿಂದೆ ಹೇಳಿರುವಂತೆ ಅಗ್ನಿಯಲ್ಲಿ ಅಶುಭಲಕ್ಷಣವು ಕಂಡುಬಂದಲ್ಲಿ ಆಯಾಯ ದೇವತೆಗೆ ಆಶ್ರಯವಾಗಿರುವ ಭೂಭಾಗದಲ್ಲಿ ಶಲ್ಯವಿದೆ ಎಂದು ತಿಳಿಯಬೇಕು ಈ ರೀತಿಯಾದ ಚಕ್ರದಲ್ಲಿ ಹೊರಭಾಗದಲ್ಲಿ ಪೂರ್ವದಿಕ್ಕಿನಲ್ಲಿ ಅರ್ಧಪದಕ್ಕೆ ಅಧಿಪತಿಯು ಪರ್ಜನ್ಯ, ಅರ್ಧಾಧಿಕವಾದ ಒಂದು ಪದಕ್ಕೂ ಪರ್ಜನ್ಯನೇ ಅಧಿಪತಿ, ಅರ್ಧಾಧಿಕವಾದ ಮತ್ತೊಂದು ಪದಕ್ಕೆ ಕರಗ್ರಹನೆಂಬದೇವತೆ, ಮಹೇಂದ್ರ, ರವಿ, ಸತ್ಯ, ಭೃಶರೆಂಬ ದೇವತೆಗಳು ಕ್ರಮವಾಗಿ ಎರಡೆರಡು ಪದಗಳಿಗೆ ಅಧಿಪತಿಗಳು, ಅಂತರಿಕ್ಷನು ಅರ್ಧಾಧಿಕ ಪದಕ್ಕೆ ಅಧಿಪತಿ, ಪವನನು ಅರ್ಧಪದೇಶ ದಕ್ಷಿಣ ಭಾಗದಲ್ಲಿ ಪೂಷಾ ಎಂಬ ದೇವತೆಯು ಅರ್ಧಪದಕ್ಕೆ ಅಧಿಪತಿ, ವಿತಥನೆಂಬ ದೇವತೆಯು ಅರ್ಧಾಧಿಕ ಪದಕ್ಕೆ ಅಧಿಪತಿ, ಬೃಹಕ್ಷತ, ಯಮ, ಭೃಂಗ, ಗಂಧರ್ವರು ಎರಡೆರಡು ಪದಗಳಿಗೆ ಅಧಿಪತಿಯಾಗಿರುತ್ತಾರೆ ಕೋಶನು ಅರ್ಧಾಧಿಕ ಪದಕ್ಕೆ ಅಧಿಪತಿ. ಶೇಷನೂ ಅರ್ಧಪದಕ್ಕೆ ಅಧಿಪತಿ ಇಲ್ಲಿ ದಿಕ್ಕು, ನಾಗರಾಜ, ಸೂರ್ಯ ಇವರು ಅರ್ಧಪದ

**ಯಕ್ಷೋದ್ವಿಪದನಾಥೋऽರ್ಯಮಾ ಅರ್ಧಪದನಾಥಃ । ಸಾವಿತ್ರೋ ದಕ್ಷಿಣತೋऽರ್ಧಪದನಾಥಃ । ಸವಿತಾ ದ್ವಿಪದನಾಥೋ ಮಿತ್ರಃ ಅರ್ಧಪದನಾಥೋ ರುದ್ರಃ । ಉದಗರ್ಧಪದನಾಥೋ ವ್ಯಾಧಿಃ । ದ್ವಿಪದನಾಥೋ ಮಹೇಶ್ವರಃ । ಅರ್ಧಪದನಾಥಃ ಕಾಮಃ । ಮಧ್ಯೇ ಚತುಷ್ಪದೇಶ್ವರೋ ಬ್ರಹ್ಮಾ । ಏವಂ ಬಹಿಃ ದ್ವಾತ್ರಿಂಶದ್ದೇವತಾಃ । ಅನ್ತಸ್ತ್ರಯೋದಶ । ಏವಂ ಪಂಚಚತ್ವಾರಿಂಶತ್ ।**

**[1]ತತ್ರ ಪ್ರಶ್ನಕಾಲೇ ಯಸ್ಯ ನಾಮ ಶ್ರೂಯತೇ ರುತಂ ವಾ ತದಸ್ತಿ ವಿದ್ಯಾತ್ ಪೃಚ್ಛಕವಚನ ಪ್ರಥಮಾಕ್ಷರಾದ್ವಾ ಅಕಾರಾದಿವರ್ಗೇ ವಾಜಿನರಾಃ ಶ್ವಗೋಮಾಯುಮೇಷರಾಸಭಾಜಂ । ವಸ್ತುತೋ**

ಗಳಿಗೆ ಅಧಿಪತಿಗಳು ಮುಖ್ಯನೆಂಬ ದೇವತೆಯು ಅರ್ಧಪದಕ್ಕ ಅಧಿಪತಿ ಭಲ್ಲಾಟ, ಚಂದ್ರ, ಅದಿತಿ ಇವರು ಎರಡೆರಡು ಪದಗಳಿಗೆ ಅಧಿಪತಿಗಳು ನಾಗನು ಅರ್ಧಾಧಿಕ ಪದಕ್ಕೆ ಅಧಿಪತಿ ನಾಗಾಶನನು ಅರ್ಧಪದಕ್ಕ ಅಧಿಪತಿ, ತದಂತರನು ಪೂರ್ವಭಾಗದ ಅರ್ಧಪದಕ್ಕೆ ಅಧಿಪತಿ ಯಕ್ಷನು ಎರಡೆರಡು ಪದಗಳಿಗೆ ಅಧಿಪತಿ ಅರ್ಯಮನು ಅರ್ಧಪದಕ್ಕೆ ಅಧಿಪತಿ ಸಾವಿತ್ರನು ದಕ್ಷಿಣಭಾಗದಲ್ಲಿ ಅರ್ಧಪದಕ್ಕ ಅಧಿಪತಿ. ಸವಿತಾ ಎಂಬ ದೇವತೆಯು ದ್ವಿಪದಗಳಿಗೆ ಅಧಿಪತಿ ಮಿತ್ರನೂ ರುದ್ರನೂ ಅರ್ಧಪದಾಧಿಪತಿಗಳು. ಉತ್ತರಭಾಗದಲ್ಲಿ ಅರ್ಧಪದಕ್ಕೆ ವ್ಯಾಧಿಯೇ ಅಧಿಪತಿ ಮಹೇಶ್ವರನು ಎರಡು ಪದಗಳಿಗೆ ಅಧಿಪತಿ ಕಾಮನು ಅರ್ಧಪದಾಧಿಪತಿ, ಮಧ್ಯದಲ್ಲಿರುವ ನಾಲ್ಕುಪದಗಳಿಗೂ ಬ್ರಹ್ಮನೇ ಅಧಿಪತಿ ಈ ರೀತಿ ಹೊರ ಭಾಗದಲ್ಲಿ ಮೂವತ್ತೆರಡು ದೇವತೆಗಳು, ಒಳಭಾಗದಲ್ಲಿ ಹದಿಮೂರು, ಒಟ್ಟು ನಲವತ್ತೈದು.

[2] ಇನ್ನು ಮುಂದೆ ಪ್ರಶ್ನಕ್ರಮದಿಂದ ಶಲ್ಯವಿಜ್ಞಾನವನ್ನು ಹೇಳುತ್ತಾರೆ — ಪ್ರಶ್ನಕಾಲದಲ್ಲಿ ಕುದುರೆ, ಮನುಷ್ಯ, ನಾಯಿ, ಕುರಿ, ಕತ್ತೆ, ಮೇಕೆ ಇವುಗಳ ಧ್ವನಿಯು ಕೇಳಿ ಬಂದಲ್ಲಿ ಕೇಳತಕ್ಕವನ ಮಾತಿನ ಮೊನಲನೇ ಅಕ್ಷರದಿಂದಾಗಲಿ, ಅಕಾರಾದಿ ವರ್ಗದಲ್ಲಿಯಾಗಲಿ ಆ ಅಕ್ಷರದಿಂದ ಮೊದಲಾದ ಮೇಲೆ ಹೇಳಿರುವ ಪ್ರಾಣಿಗಳ ಶಲ್ಯವಿದೆ ಎಂದು ತಿಳಿಯಬೇಕು ವಸ್ತುಸ್ಥಿತಿಯಲ್ಲಿ ಒಂಭತ್ತು ಭಾಗ

1 ಬೃಹತ್ಸಂಹಿತೆಯಲ್ಲಿ ಈ ದೇವತೆಗಳ ವಿನ್ಯಾಸವು ಸ್ವಲ್ಪ ಸ್ವಲ್ಪಕ್ಕೆ ವ್ಯತ್ಯಾಸ ಹೊಂದಿದೆ

2 ಈ ಗ್ರಂಥ ಭಾಗದಲ್ಲಿ ಅಶುದ್ಧಿಯು ಹೆಚ್ಚಾಗಿ ಕಂಡುಬರುತ್ತಿದೆ ಇತರ ಗ್ರಂಥಗಳ ಸಂವಾದದಿಂದ ಇದನ್ನು ಸರಿಪಡಿಸಿಕೊಳ್ಳಬೇಕು

**ನವಧಾ ವಿಭಕ್ತಸ್ಯ ಮಧ್ಯೇವಕಾರಃ ಅಕತನ ಏವಂ ಸಗ ಇತ್ಯೇತೇ ಕ್ರಮೇಣ ಪ್ರಾಚ್ಯಾದಿಷುವರ್ಣಾಃ । ವರ್ಣಪ್ರಥಮಶ್ರವಣಾದ್ವಾಸ್ತುನಿ ತದ್ದಿಶಿಶಲ್ಯಂ ।**

**ಲಗ್ನಾಚ್ಛೂನ್ಯೇಷು ಕೇಂದ್ರೇಷು ನಿಃಶಲ್ಯಂ ದೃಢಂ ಭವತಿ । ಪಾಪಯುಕ್ತೇಷು ಸಶಲ್ಯಂ ಚ, ಕೇಂದ್ರೇ ರಾಶಿವಶಾದಿಗ್ಭವತಿ, ಬಲಿನಿಗ್ರಹೇ ಅಸ್ಥಿಶಲ್ಯಂ–ಬಲಹೀನೆ ಶರ್ಕರಾಙ್ಗಾರಕಾಷ್ಠತುಷಭಸ್ಮಾದಿ । ತತ್ರ ಸರ್ವೇಷ್ವಸ್ಥಿಷು ಕರ್ತುರ್ಮರಣಂ ಭವತಿ ಶರ್ಕರಾ ತುಷಕೇ-ಶಾಙ್ಗಾರ ಭಸ್ಮ ಶಲ್ಯೇಷು ಶೋಕಾನರ್ಥ ವ್ಯಾಧಿಮರಣಚೌರೋಪ-ದ್ರವಾಃ । ಸ ಶಲ್ಯೇ ಚ ದೇವತಾಯತನೇ ದೇವತಾಸನ್ನಿಧಾನಂ ನ ಭವತಿ ತಸ್ಮಾತ್ಸರ್ವಪ್ರಯತ್ನೇನ ನಿಃಶಲ್ಯಂ ವಾಸ್ತುದೇವತಾಯತನಂ ಕುರ್ಯಾತ್ ।**

---

ನಾಗಿ ವಿಭಾಗಿಸಲ್ಪಟ್ಟ ಚಕ್ರದಲ್ಲಿ ಮಧ್ಯದಲ್ಲಿ ವಕಾರವನ್ನೂ ಅ, ಕ, ನ, ತ, ಸ, ಗ, ಎಂಬ ಅಕ್ಷರಗಳನ್ನೂ ಆ ಚಕ್ರದ ಪೂರ್ವಾದಿ ಕೋಣಗಳಲ್ಲಿ ಬರೆಯಬೇಕು ವರ್ಣದ ಪ್ರಥಮಾಕ್ಷರ ಗ್ರಹಣದಿಂದ ಆ ದಿಕ್ಕಿನಲ್ಲಿ ವಾಸ್ತುಶಲ್ಯವಿದೆ ಎಂದೂ ತಿಳಿಯಬೇಕು

ಲಗ್ನಕ್ಕಿಂತ ಕೇಂದ್ರಗಳು ಶೂನ್ಯವಾಗಿದ್ದಲ್ಲಿ ನಿಃಶಲ್ಯವೆಂಬುದನ್ನು ದೃಢವಾಗಿ ತಿಳಿಯಬಹುದು ಪಾಪಗ್ರಹಗಳಿಂದ ಕೂಡಿದ್ದಲ್ಲಿ ಸಶಲ್ಯವೆಂದು ತಿಳಿಯಬೇಕು ಕೇಂದ್ರಗಳಲ್ಲಿ ಆಯಾಯ ರಾಶಿಯ ಮೂಲಕ ದಿಕ್ಕನ್ನು ನಿರ್ಣಯಿಸಬೇಕು ಪ್ರಬಲ ಗ್ರಹಗಳು ನಿಗ್ರಹಹೊಂದಿದ್ದಲ್ಲಿ ಅಸ್ಥಿಶಲ್ಯವೆಂದೂ, ಬಲಹೀನವಾಗಿದ್ದಲ್ಲಿ ಕಲ್ಲುಗಳು, ಕೊಳ್ಳಿಗಳು, ಹೊಟ್ಟು, ಭಸ್ಮ ಮುಂತಾದ ಶಲ್ಯಗಳಿವೆ ಎಂದೂ ತಿಳಿಯಬೇಕು ಎಲ್ಲಾದಿಕ್ಕುಗಳಲ್ಲಿಯೂ ಅಸ್ಥಿಶಲ್ಯಗಳಿದ್ದಲ್ಲಿ ಕರ್ತೃವಿಗೆ ಮರಣವೇ ಉಂಟಾಗುತ್ತದ ಹೊಟ್ಟು, ಕೂದಲು, ಕೊಳ್ಳಿ, ಭಸ್ಮ ಮುಂತಾದ ಶಲ್ಯವಿದ್ದಲ್ಲಿ ದುಃಖ, ಅನರ್ಥ, ರೋಗ, ಮರಣ ಚೋರಬಾಧೆಗಳುಂಟಾಗುತ್ತವೆ. ದೇವಾಲಯವು ಶಲ್ಯದಿಂದ ಕೂಡಿದ್ದಲ್ಲಿ ದೇವತಾ ಸಾನ್ನಿಧ್ಯವೇ ಅಲ್ಲಿ ಉಂಟಾಗುವುದಿಲ್ಲ ಆದುದರಿಂದ ಸರ್ವ ಪ್ರಯತ್ನದಿಂದಲೂ ದೇವಾಲಯವನ್ನು ವಾಸ್ತು ಶಲ್ಯವಿಲ್ಲದಿರುವಂತೆ ನಿರ್ಮಿಸಬೇಕು

ದೇವತಾಯತನ ದಕ್ಷಿಣಭಾಗೇ ದೇವತಾಕೋಶಭವನಂ । ತಸ್ಯಾಗ್ನೇಯೇ ಮಹಾನಸಂ । ದಕ್ಷಿಣೇನ ಸ್ನಾನಭವನಂ । ನೈಋತೇ ಕುಪ್ಯಗೃಹಂ । ಪಶ್ಚಿಮೇನ ತೋಯಗೃಹಂ । ವಾಯವ್ಯೇನ ಭಾಂಡಗೃಹಂ । ಉದಕ್ಪ್ರೇಕ್ಷ್ಯಾಗಾರಂ ಐಶಾನೇನೇಜ್ಯಾಗೃಹಂ । ಪ್ರಾಕ್ಸರ್ವಕರ್ಮಕಾರಗೃಹಮಿತಿ । ಏತಾನ್ಯಪಿ ಶಲ್ಯವರ್ಜಿತಾನಿ ಕುರ್ಯಾತ್ । ಸರ್ವತ್ರ ದ್ರವಿಣಶಲ್ಯೇನ ವೃದ್ಧಿರ್ಭವತಿ । ತದ್ವಿಜ್ಞಾನಂ ಭವತಿ ।

॥ ಭವತಿ ಚಾತ್ರ ॥

ಊರ್ಧ್ವಸ್ಥೇ ಕೇನ್ದ್ರಗೇ ಸೌಮ್ಯೇ ಶಲ್ಯಂ ದ್ರವಿಣಸಂಜ್ಞಿತಂ ।
ದಿಕ್ತ್ವತ್ರಾಪ್ಯವಗಂತವ್ಯಾ ಕೇನ್ದ್ರರಾಶಿವಶೇನ ಚ ॥ ೧ ॥

ಊಷ್ಮಾ ಪ್ರದೃಶ್ಯತೇ ಯತ್ರ ಚ್ಛತ್ರಾಕಾರಃ ಕ್ವಚಿತ್ ಕ್ಷಿತೌ ।
ತತ್ರ ವಿತ್ತಂ ವಿಜಾನೀಯಾತ್ಸುಷಿರಂ ಯದಿ ಭೂತಲಂ ॥ ೨ ॥

---

ದೇವಾಲಯದ ದಕ್ಷಿಣಭಾಗದಲ್ಲಿ ದೇವತೆಯ ಬೊಕ್ಕಸದ ಮನೆ, ಅದರ ಆಗ್ನೇಯ ದಿಕ್ಕಿನಲ್ಲಿ ದೇವಾಲಯದ ಅಡುಗೆಮನೆ, ದಕ್ಷಿಣದಲ್ಲಿ ಸ್ನಾನದಮನೆ, ನೈರುತ್ಯದಿಕ್ಕಿನಲ್ಲಿ ಚಿನ್ನಬೆಳ್ಳಿಗಳ ಸಂಗ್ರಹಾಲಯ, ಪಶ್ಚಿಮ ದಿಕ್ಕಿನಲ್ಲಿ ನೀರಿನಮನೆ, ವಾಯುವ್ಯ ದಿಕ್ಕಿನಲ್ಲಿ ಪಾತ್ರೆಗಳನ್ನು ಸಂಗ್ರಹಿಸುವ ಮನೆ, ಉತ್ತರದಿಕ್ಕಿನಲ್ಲಿ ಪ್ರೇಕ್ಷಕರ ಮನೆ, ಈಶಾನ್ಯದಿಕ್ಕಿನಲ್ಲಿ ಹೋಮಗೃಹ, ಪೂರ್ವದಿಕ್ಕಿನಲ್ಲಿ ಬಂಡಿಕಾರರೇ ಮೊದಲಾದ ಕೆಲಸದವರ ಮನೆ ಈ ಮನೆಗಳನ್ನೂ ಸಹ ಶಲ್ಯವಿಲ್ಲದಿರುವಂತೆಯೇ ಪರೀಕ್ಷಿಸಿ ರಚಿಸಬೇಕು ಎಲ್ಲಾ ಕಡೆಯಲ್ಲಿಯೂ ದ್ರವಿಣಶಲ್ಯದಿಂದ ವೃದ್ಧಿಯೇ ಉಂಟಾಗುತ್ತದೆ ಅಂತಹ ದ್ರವಿಣಶಲ್ಯವನ್ನು ತಿಳಿಯುವ ಕ್ರಮವೂ ಈರೀತಿ ಇದೆ—

೧–೪ ಈ ವಿಷಯದಲ್ಲಿ ಸೌಮ್ಯಗ್ರಹವು ಊರ್ಧ್ವಕೇಂದ್ರದಲ್ಲಿದ್ದಲ್ಲಿ ದ್ರವಿಣ ಶಲ್ಯವಿದೆ ಎಂದು ತಿಳಿಯಬೇಕು ಇಲ್ಲಿಯೂ ಕೇಂದ್ರರಾಶಿಯ ಕ್ರಮದಿಂದ ದಿಕ್ಕನ್ನು ನಿರ್ಣಯಿಸಬೇಕು ಯಾವ ಭೂಮಿಯ ಪ್ರದೇಶದಲ್ಲಿ ಛತ್ರಾಕಾರವಾದ ಹಬೆಯು ತೋರಿಬರುತ್ತದೆಯೋ ಅಂತಹ ಸರಂಧ್ರವಾದ ಭೂಮಿಯಲ್ಲಿ ಧನವಿದೆ ಎಂದು

ನೀಲಾಭಿಃ ಶ್ವೇತಪಕ್ಷಾಭಿರ್ಮಕ್ಷಿಕಾಭಿಃ ಸಮನ್ವಿತಾ ।
ದುರ್ಗನ್ಧಾ ಚ ತಥಾ ಭೂಮಿಃ ತತ್ರಾಧಸ್ತಾದ್ಧನಂ ಭವೇತ್ ॥ ೩ ॥

ಏಕನಾಲಸಮುತ್ಥೇ ದ್ವೇ ದೃಶ್ಯೇತೇ ಯತ್ರ ಪುಷ್ಕರೇ ।
ಭೂಯೋ ಭೂಯಶ್ಚ ತತ್ರಾಧಃ ಕಥಯನ್ತಿ ಧನಂ ಬಹು ॥ ೪ ॥

ಅಕ್ಷೀರಾಃ ಕ್ಷೀರಿಣೋ ವೃಕ್ಷಾಃ ತನ್ತುಭಿರ್ಯದಿವೇಷ್ಟಿತಾಃ ।
ಅಕಂಟಕಾಃ ಕಂಟಕಿನಸ್ತತ್ರಾಪಿ ದ್ರವಿಣಂ ವದೇತ್ ॥ ೫ ॥

ದ್ರುಮೋ ಭವತಿ ವಂದಾಕಂ ಯತ್ರ ಚಾನ್ಯಂ ನರಾಧಿಪ ।
ತತ್ರಾಪಿ ದ್ರವಿಣಂ ವಾಚ್ಯಂ ಶ್ವೇತಂ ಯತ್ರ ಚ ಕಿಂಶುಕಂ ॥ ೬ ॥

ಹಿಮಾಮ್ಬುಸೀ ನ ಧ್ರಿಯತೇ ನ ಪ್ರರೋಹನ್ತಿ ಪಾದಪಾಃ ।
ಅಕಾಲೇ ಪುಷ್ಪದಾ ವೃಕ್ಷಾಸ್ತತ್ರಾಧೋಧನಮಾದಿಶೇತ್ ॥ ೭ ॥

---

ತಿಳಿಯಬೇಕು ಬಿಳಿಯ ರೆಕ್ಕೆಗಳುಳ್ಳ ಕಪ್ಪಾದ ನೊಣಗಳು ಎಲ್ಲಿ ಮುತ್ತಿಕೊಂಡಿರುವುವೋ ಭೂಮಿಯೂ ದುರ್ಗಂಧವಾಗಿರುತ್ತದೆಯೋ ಅದರ ಕೆಳಗೆ ಧನವಿದೆ ಎಂದು ತಿಳಿಯಬೇಕು ಎಲ್ಲಿ ಒಂದೇ ಒಂದು ತೊಟ್ಟಿನಲ್ಲಿ ಎರಡು ಕಮಲದ ಮೊಗ್ಗುಗಳು ಬಿಟ್ಟಿರುತ್ತವೆಯೋ, ಪುನಃ ಪುನಃ ಬಿಡುತ್ತಲೇ ಇರುತ್ತವೆಯೋ ಅಲ್ಲಿಯೂ ಕೆಳಭಾಗದಲ್ಲಿ ಹೆಚ್ಚಾಗಿ ಧನವಿದೆ ಎಂದೂ ಹೇಳುತ್ತಾರೆ

೫–೮ ಹಾಲಿಲ್ಲದ ಮರದ ಜಾತಿಗಳು ಹಾಲಿನಿಂದ ಕೂಡಿ ತಂತುಗಳಿಂದ ಕೂಡಿದ್ದಲ್ಲಿಯೂ ಮುಳ್ಳಿಲ್ಲದಿರುವ ಮರದ ಜಾತಿಗಳು ಮುಳ್ಳಿನಿಂದ ಕೂಡಿದ್ದಲ್ಲಿಯೂ ಆ ಪ್ರದೇಶದಲ್ಲಿ ಧನವಿದೆ ಎಂದು ಹೇಳಬೇಕು ಮರದಲ್ಲಿ ಬೇರೆಜಾತಿಯ ಶಾಖೆಯು (ಬಂದಿರಿಕೆ) ಹುಟ್ಟಿಕೊಂಡಿದ್ದಲ್ಲಿಯೂ ಮುತ್ತಗದ ಮರವು ಬಿಳಿಯ ಹೂವನ್ನು ಬಿಟ್ಟಿದ್ದರೂ ಆ ಸ್ಥಳದಲ್ಲಿ ಧನವಿದೆ ಎಂದು ಹೇಳಬೇಕು ಎಲ್ಲಿ ಹಿಮವೂ, ಜಲವೂ ನಿಲ್ಲವುದೇ ಇಲ್ಲವೋ ಹೊಸದಾಗಿ ಯಾವ ಗಿಡಗಳೂ ಬೆಳೆಯುದಿಲ್ಲವೋ ಮತ್ತು ಯಾವ ಸ್ಥಳದಲ್ಲಿ ಅಕಾಲದಲ್ಲಿ ಹೂವುಕಾಯಿಗಳು ಮರಗಳಲ್ಲಿ ಕಾಣಬರುತ್ತವೆಯೋ

**ಶಾಙ್ಗಕೋ ನ್ಮೈಥುನಂ ಯತ್ರ ಭುಜಗಶ್ಚಿತ್ರಮಸ್ತಕಃ ।**
**ದೃಶ್ಯತೇ ಯತ್ರ ರಾಜೇನ್ದ್ರ ತತ್ರಾಧೋ ಧನಮಾದಿಶೇತ್ ॥ ೮ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ**
**ವಜ್ರಸಂವಾದೇ ಪ್ರತಿಷ್ಠಾಕಲ್ಪಶಲ್ಯೋದ್ಧಾರೋ ನಾಮ**
**ಪಂಚನವತಿತಮೋಽಧ್ಯಾಯಃ**

---

ಅಲ್ಲಿಯೂ ಕೆಳಭಾಗದಲ್ಲಿ ಧನವಿದೆ ಎಂದು ಹೇಳಬೇಕು ಮತ್ತು ವಿಚಿತ್ರವಾದ ತಲೆಯುಳ್ಳ ಸರ್ಪವಿಶೇಷವು ಎಲ್ಲಿ ಒಂದುಗೂಡಿ ಕಂಡು ಬರುತ್ತದೆಯೋ ಅಲ್ಲಿಯೂ ಕೆಳಗೆ ಧನವಿದೆ ಎಂದು ಹೇಳಬೇಕು

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಪ್ರತಿಷ್ಠಾಕಲ್ಪಶಲ್ಯೋದ್ಧಾರವೆಂಬ
ತೊಂಭತ್ತೈದನೆಯ ಅಧ್ಯಾಯ ಮುಗಿದಿದೆ



